# ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು

## -ಒಂದು ಸಾಂಸ್ಕೃತಿಕ ಅಧ್ಯಯನ

[ಪಿಎಚ್.ಡಿ. ಮಹಾ ಪ್ರಬಂಧ]


ಕೆ.ಬಿ.ಶಿವತಾರಕ್.ಎಂ.ಎ.,

ರೀಡರ್ ಹಾಗೂ ಮುಖ್ಯಸ್ಥರು, ಇತಿಹಾಸ,

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ,

ಸ್ಯೆಂಟ್ ಮೇರಿಸ್ ಸಿರಿಯನ್ ಕಾಲೇಜು.

ಬ್ರಹ್ಮಾವರ- ೫೭೬ ೨೧೩



ಮಾರ್ಗದರ್ಶಕರು

ಪ್ರೊ.ಅ.ಸುಂದರ

ನಿರ್ದೇಶಕರು, ಸ್ನಾತಕೋತ್ತರ ಕೇಂದ್ರ,

ಕರ್ನಾಟಕ ವಿಶ್ವವಿದ್ಯಾಲಯ. ಬಿಜಾಪುರ- ೫೮೬೧೦೧








ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೧೯೯೮

# ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು

## - ಒಂದು ಸಾಂಸ್ಕೃತಿಕ ಅಧ್ಯಯನ

[ಪಿಎಚ್.ಡಿ. ಮಹಾ ಪ್ರಬಂಧ]


ಕೆ.ಬಿ.ಶಿವತಾರಕ್.ಎಂ.ಎ.,

ಡಿಪ್ಲೊಮಾ ಇನ್ ಎಪಿಗ್ರಫಿ.

ರೀಡರ್ ಹಾಗೂ ಮುಖ್ಯಸ್ಥರು, ಇತಿಹಾಸ,

ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ,

ಸೈಂಟ್ ಮೇರಿಸ್ ಸಿರಿಯನ್ ಕಾಲೇಜು.

ಬ್ರಹ್ಮಾವರ- ೫೭೬೨೧೩





ಮಾರ್ಗದರ್ಶಕರು

ಪ್ರೊ.ಅ.ಸುಂದರ

ನಿರ್ದೇಶಕರು, ಸ್ನಾತಕೋತ್ತರ ಕೇಂದ್ರ,

ಕರ್ನಾಟಕ ವಿಶ್ವವಿದ್ಯಾಲಯ. ಬಿಜಾಪುರ- ೫೮೬೧೦೧






ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೧೯೯೯

117

# ದೃಢೀಕರಣ ಪತ್ರ

ಶ್ರೀ.ಕೆ.ಬಿ.ಶಿವತಾರಕ್ ರವರು ತಮ್ಮ ಸ್ವಂತ ಪರಿಶೋಧನಾ ಪರಿಶ್ರಮದಿಂದ **ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು-ಒಂದು ಸಾಂಸ್ಕೃತಿಕ ಅಧ್ಯಯನ** ಎಂಬ ಮಹಾ ಪ್ರಬಂಧವನ್ನು ತಮ್ಮ ಪುರಾತತ್ವ ಸರ್ವೇಕ್ಷಣೆ-ಯನ್ನಾಧರಿಸಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ-ಹಂಪಿಗೆ ನನ್ನ ಮಾರ್ಗದರ್ಶನದಲ್ಲಿ ಸಲ್ಲಿಸಿದ್ದಾರೆ. ಇವರು ಈ ಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಯಾವುದೇ ವಿಶ್ವ ವಿದ್ಯಾಲಯಕ್ಕೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂಬುದನ್ನು ಈ ಮೂಲಕ ದೃಢೀಕರಿಸುತ್ತೇನೆ.

ಅ. ಸುಂದರ

ಪ್ರೊ.ಅ.ಸುಂದರ
(ನಿರ್ದೇಶಕರು)
ಸ್ನಾತಕೋತ್ತರ ಕೇಂದ್ರ
ಬಿಜಾಪುರ.

# ಪ್ರಮಾಣ ಪತ್ರ

ಈ ಕೆಳಗೆ ಸಹಿ ಮಾಡಿದ ನಾನು ಈ ಮೂಲಕ ಘೋಷಿಸುವುದೇನೆಂದರೆ, ***ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು- ಒಂದು ಸಾಂಸ್ಕೃತಿಕ ಅಧ್ಯಯನ*** ಎಂಬ ಮಹಾ ಪ್ರಬಂಧವನ್ನು ನನ್ನ ಸ್ವಪರಿಶ್ರಮದಿಂದ ಮತ್ತು ಕ್ಷೇತ್ರ ಪರಿಶೋಧನೆಯ ಟಿಪ್ಪಣಿ ಹಾಗು ಸಂಗ್ರಹಿಸಿದ ಪುರಾತತ್ವ ಕುರುಹುಗಳ ಆಧಾರದ ಮೇರೆಗೆ, ಪ್ರೊ.ಅ.ಸುಂದರ ಅವರ ಮಾರ್ಗದರ್ಶನದಲ್ಲಿ ಸಿದ್ಧಗೊಳಿಸಿರುವೆನು. ಈ ಮಹಾ ಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಬೇರಾವುದೇ ಪದವಿಗಾಗಿ ಈ ವಿಶ್ವವಿದ್ಯಾಲಯಕ್ಕಾಗಲೀ ಅಥವಾ ಬೇರಾವುದೇ ವಿಶ್ವವಿದ್ಯಾಲಯಕ್ಕಾಗಲಿ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

K. B. Shivatarak

ಕೆ.ಬಿ.ಶಿವತಾರಕ್

# ಕೃತಜ್ಞತೆಗಳು

ಮಹಾ ಪ್ರಬಂಧ "*ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು -ಒಂದು ಸಾಂಸ್ಕೃತಿಕ ಅಧ್ಯಯನ*"ದ ಸಂಶೋಧನಾ ಕಾರ್ಯವನ್ನು ೧೯೯೦-೯೯ ರಲ್ಲಿ ಕೈಗೊಂಡು ಡಾ.ಅ.ಸುಂದರ (ನಿವೃತ್ತ) ಮುಖ್ಯಸ್ಥರು, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಈಗ ನಿರ್ದೇಶಕರು ಸ್ನಾತಕೋತ್ತರ ಕೇಂದ್ರ, ಕರ್ನಾಟಕ ವಿಶ್ವವಿದ್ಯಾಲಯ, ಬಿಜಾಪುರ ಇವರ ಮಾರ್ಗದರ್ಶನ, ಸಹಾಯ ಹಾಗೂ ಪ್ರೋತ್ಸಾಹದಿಂದಾಗಿ ಈ ಸಂಶೋಧನಾ ಕಾರ್ಯವು ಮಹಾಪ್ರಬಂಧವಾಗಿ ರೂಪುಗೊಂಡಿದೆ. ಹಲವು ಸಂಸ್ಥೆಗಳು ಹಾಗು ಜನತೆ ನೀಡಿದ ಸಹಾಯ ಮತ್ತು ಪ್ರೊತ್ಸಾಹಗಳಿಗೆ ಈ ಮೂಲಕ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಮೊದಲನೆಯದಾಗಿ ಪ್ರೊ.ಅ.ಸುಂದರ, ನಿರ್ದೇಶಕರು ಸ್ನಾತಕೋತ್ತರ ಕೇಂದ್ರ, ಬಿಜಾಪುರ ಇವರು ನನ್ನನ್ನು ಸಂಶೋಧನಾ ವಿಧ್ಯಾರ್ಥಿಯನ್ನಾಗಿ ತೆಗೆದುಕೊಂಡು, ತಮ್ಮ ದಿನನಿತ್ಯದ ಆಡಳಿತ ಕಾರ್ಯ ಮತ್ತು ಸಂಶೋಧನಾ ಕಾರ್ಯಗಳ ನಡುವೆಯೂ ಸಮಯಮಾಡಿಕೊಂಡು ನನಗೆ ಸೂಕ್ತ ಸಲಹೆ, ಮಾರ್ಗದರ್ಶನವನಿತ್ತ ಇವರಿಗೆ ನನ್ನ ಹೃದಯದಂತರಾಳದಿಂದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಈ ಪ್ರಬಂಧದ ರಚನೆಯ ಪ್ರತಿ ಹಂತದಲ್ಲಿ ಸೂಕ್ತ ಸಲಹೆ ಸಹಕಾರಗಳನ್ನಿತ್ತ ಶ್ರೀ.ಎಂ.ಪಿ.ವಿಶ್ವೇಶ್ವರ(ಅಸಿಸ್ಟೆಂಟ್ ಆರ್ಕಿಯಾಲಜಿಸ್ಟ್, ಐಹೊಳೆ ಮ್ಯೂಸಿಯಂ) ಇವರಿಗೆ ಮತ್ತು ಅವರ ಕುಟುಂಬದವರಿಗೆ ನನ್ನ ಕೃತಜ್ಞತೆಗಳು.

ಮಹಾ ಪ್ರಬಂಧಕ್ಕೆ ಬೇಕಾದ ಎಲ್ಲಾ ರೇಖಾ ಚಿತ್ರಗಳನ್ನು ಸಿದ್ಧಗೊಳಿಸಿ ಪ್ರಮುಖ ಕ್ಷೇತ್ರಕಾರ್ಯದಲ್ಲಿ ಜೊತೆಗಿದ್ದು ನೆಲೆಗಳ ವಿವರಣೆಯನ್ನಲ್ಲದೆ ಛಾಯಚಿತ್ರಗಳನ್ನು ಸಿದ್ಧಗೊಳಸಲು ಸಹಕರಿಸಿದ ಶ್ರೀ.ಟಿ.ಎಂ.ಕೇಶವ(ಎ.ಎಸ್.ಐ. ಬೆಂಗಳೂರು) ಮತ್ತು ಅವರ ಕುಟುಂಬದವರನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಸಂಶೋಧನೆಗೆ ಪ್ರೇರಕರಾದ ದಿವಂಗತ ಡಾ.ಬಿ.ವಸಂತ ಶೆಟ್ಟಿಯವರು, ಎಸ್.ಎಂ.ಎಸ್ ಕಾಲೇಜು ಬ್ರಹ್ಮಾವರದ ನಮ್ಮ ಪ್ರಾಂಶುಪಾಲರಾದ ಕೆ.ನಾರಾಯಣನ್, ಸಹೋದ್ಯೋಗಿ ಮಿತ್ರರು, ಸಿಬ್ಬಂದಿ ವರ್ಗದವರೆಲ್ಲರಿಗೂ ಹಾಗೂ ಕರಡು ಪ್ರತಿಯನ್ನು ತಿದ್ದಲು ಸಹಾಯ ಮಾಡಿದ ಎಂ.ಎಲ್.ಚೆನ್ನಕೃಷ್ಣಯ್ಯ, ಕೆ.ಗಣಪತಿ ಭಟ್ ಮತ್ತು ಡೇನಿಯಲ್ ಮೊಂತೆರೊ ಇವರೆಲ್ಲರಿಗೂ ನನ್ನ ಕೃತಜ್ಞತೆಗಳು.

ಮಹಾ ಪ್ರಬಂಧಕ್ಕೆ ಬೇಕಾದ ಎಲ್ಲಾ ಸಹಾಯ ನೀಡಿದ ಡಾ.ಶ್ರೀನಿವಾಸ.ವಿ.ಪಾಡಿಗಾರ ಮತ್ತು ನನ್ನ ಕೋರಿಕೆಯಂತೆ ಭೂ ವಿಜ್ಞಾನದ ಮಾಹಿತಿಯ ವರದಿಯನ್ನು ಸಿದ್ಧಗೊಳಿಸಿಕೊಟ್ಟ ಪ್ರೊ.ಟಿ.ಸಿ.ದೇವರಾಜ್‌ರವರಿಗೆ ನಾನು ಸದಾ ಕೃತಜ್ಞ.

ಡಾ.ಪರಮಶಿವಮೂರ್ತಿ, ಡಾ.ದೇವರಕೊಂಡರೆಡ್ಡಿ ಡಾ.ಎನ್.ಎ.ಮಧ್ಯಸ್ಥ, ಸಿ.ಎಂ.ವಿ.ಶಂಕರಮೂರ್ತಿ, ಶ್ರೀಕಾಂತ್ ಬಡಿಗೇರಿ, ಮೇಘರಾಜ್, ಮಲ್ಲಿಕಾರ್ಜುನ, ಚಂದ್ರಕಾಂತ್, ಹರೀಶ್‌ಕುಮಾರ್, ಚೇತನ್ ಮತ್ತು ಶಿಶಿರ.ಕೆ.ಎಸ್ ಇವರುಗಳು ಒದಗಿಸಿದ ಸಹಾಯಕ್ಕೆ ಕೃತಜ್ಞತೆಗಳು.

ಡಾ.ಬಿ.ನಂಜುಂಡಸ್ವಾಮಿ, ಡಾ.ಡಿ.ಸಿ.ಯೋಗಿಶ್, ಟಿ.ಕೆ.ನಂಜುಂಡಪ್ಪ ನಿಡುಗಲ್ಲಿನ ಕಾಳೇಶ್ವರ, ಬೂದಿಬೆಟ್ಟದ ಮಾಸ್ಟರ್ ಸಿದ್ದಪ್ಪ, ಸಿದ್ದೇಶ್ವರ, ಅರುಣ್ ಕುಮಾರ್, ಡಾ.ಗಣಪತಿ ಗೌಡ, ಕವಿತಾ, ಕೆ.ವಿ.ರಾವ್, ಸೋಮಶೇಖರ ಜೋಶಿ ಇವರೆಲ್ಲರಲ್ಲದೆ ತುಮಕೂರು ಜಿಲ್ಲೆಯ ಸಮಸ್ತ ಜನತೆಗೆ, ಹಾಗು ಸಹಕರಿಸಿದ ಎಲ್ಲರಿಗೂ ನಾನು ಚಿರಋಣಿಯಾಗಿದ್ದೇನೆ.

ಎಸ್.ಎಂ.ಎಸ್ ಕಾಲೇಜಿನ ಗ್ರಂಥಾಲಯ(ಬ್ರಹ್ಮಾವರ), ಮಿಥಿಕ್ ಸೊಸೈಟಿ(ಬೆಂಗಳೂರು)ಯ ಗ್ರಂಥಾಲ-ಯ, ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಕನ್ನಡ ರೀಸರ್ಚ್ ಇನ್‌ಸ್ಟಿಟ್ಯೂಟ್(ಧಾರವಾಡ)ನ ಗ್ರಂಥಾಲಯಗಳು, ಭಾರ-ತೀಯ ಪುರಾತತ್ವ ಸರ್ವೇಕ್ಷಣಾಲಯ(ಬೆಂಗಳೂರು) ಮತ್ತು ಸ್ನಾತಕೋತ್ತರ ಕೇಂದ್ರ(ಬಿಜಾಪುರ)ದ ಗ್ರಂಥಾಲಯಗಳ ಅಧಿ-ಕಾರಿಗಳು ಮತ್ತು ಸಿಬ್ಬಂದಿ ವರ್ಗದವರೆಲ್ಲರ ಸಹಕಾರಕ್ಕೆ ನನ್ನ ಕೃತಜ್ಞತೆಗಳು.

ಆಲ್ ಇಂಡಿಯ ಕ್ರಿಶ್ಚಿಯನ್ ಅಸೋಸಿಯೇಶನ್ ಫರ್ ಹೈಯರ್ ಎಜುಕೇಶನ್, ನ್ಯೂಡೆಲ್ಲಿ (All India Association for Higher Education, New Delhi) ಇವರು ಮಹಾ ಪ್ರಬಂಧದ ರಚನೆಗೆ ಭಾಗಶಃ ಆರ್ಥಿಕ ನೆರವು ಕೊಟ್ಟು ಸಹಾಯ ಮಾಡಿರುವ ಇವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನನ್ನ ಪೂಜ್ಯ ತಂದೆಯವರಾದ ಕೆ.ಎಲ್.ಬಸವರಾಜು, ಅತ್ತೆ ಮಾವನವರಾದ ಜಯಮ್ಮ, ಬಿ.ರುದ್ರಪ್ಪ, ಹಾಗೂ ಅವರ ಮಗ ಬಿ.ಆರ್.ಮಂಜುನಾಥ, ಅಣ್ಣ ಅತ್ತಿಗೆಯರಾದ ಪ್ರೊ.ಕೆ.ಬಿ.ಷಡಾಕ್ಷರಪ್ಪ, ಎಸ್.ಸರೋಜ ಮತ್ತು ಅವರ ಮಕ್ಕಳಿಗೆ ನನ್ನ ಅಭಿನಂದನೆಗಳು.

ನನ್ನ ಶ್ರೀಮತಿ ಬಿ.ಆರ್.ಭ್ರಮರಾಂಬ ಮಕ್ಕಳಾದ ಕೆ.ಎಸ್.ಪ್ರಣತಿ(೧೭), ಕೆ.ಎಸ್.ಗಂಗೋತ್ರಿ(೧೩) ಮತ್ತು ಕೆ.ಎಸ್.ಭುವನೇಶ್ವರಿ(೧೧) ಇವರ ಸಹಕಾರ ಹಾಗು ತಾಳ್ಮೆಯಿಂದಾಗಿ ಈ ಕಾರ್ಯವನ್ನು ಕೈಗೆತ್ತಿಕೊಂಡು ಪೂರ್ಣಗೊಳಿ-ಸಲು ಸಾಧ್ಯವಾಗಿದೆ.

**ಕೆ.ಬಿ.ಶಿವತಾರಕ್**

# ಸಂಕೇತಾಕ್ಷರಗಳು

| | |
|---|---|
| ಇಂ.ಆ.ರಿ. | ಇಂಡಿಯನ್ ಆರ್ಕಿಯಾಲಜಿ ಎ ರಿವ್ಯೂ |
| ಎ.ಇಂ. | ಏನ್ಷಿಯೆಂಟ್ ಇಂಡಿಯಾ |
| ಕ್ರಿ.ಪೂ. | ಕ್ರಿಸ್ತ ಪೂರ್ವ |
| ಕ್ರಿ.ಶ. | ಕ್ರಿಸ್ತ ಶಕ |
| ಮಿ.ಮೀ. | ಮಿಲಿಮೀಟರ್ |
| ವಿ.ವಿ. | ವಿಶ್ವವಿದ್ಯಾಲಯ |
| ಶೇ. | ಶೇಕಡ |
| ಸು. | ಸುಮಾರು |
| ಸಂ. | ಸಂಪಾದಕರು |
| ಸಂ.ಸಂ. | ಸಂಪುಟ ಸಂಪಾದಕರು |
| ಸೆಂ.ಮೀ. | ಸೆಂಟಿಮೀಟರ್ |
| A.I. | Ancient India |
| A.R.A.S.I. | Annual Report of the Archaeological Survey of India |
| A.R.A.S.M.C. | Annual Report of the Archaeological Institute Department, Southern Circle Madras & Coorg |
| A.R.M.A.D. | Annual Report of the Mysore Archaeoligical Department |
| A.S.I. | Archaeological Survey of India |
| B.D.C.R.I. | Bulletin of the Deccan College Research Institue |
| D.A & M. | Directorate of Archaeolgy and Museums in Karnataka |
| I.A. | Indian Antiquary |
| I.A.R. | Indian Archaeology - A Review |
| I.S.P.Q.S. | Indian Society for Prehistoric & Quarternary Studies |
| J.A.S.B. | Journal of the Asiatic Society of Bengal |
| J.B.O.R.S. | Journal of Bihar & Orissa Research Society |
| J.R.A.I. | Journal of Royal Anthropological Institute. |
| J.R.A.S. | Journal of the Royal Asiatic Society |
| K.R.I.K.U. | Kannada Research Institute, Karnataka University |
| P.A.S.B. | Proceedings of the Asiatic Society of Bengal |
| P.G. & R.I. | Post Graduate & Research Institute |
| Q.J.M.S. | Quarterly Journal of the Mythic Society |
| R.A.I.P.P. | Recent Advances in Indo - Pacific Prehistory |
| T.A.P.S. | Transaction of the American Philosophical Soceity, Pheladelphia. |

# ಪರಿವಿಡಿ

ಅಧ್ಯಾಯ ಒಂದು

# ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು
# ಒಂದು ಸಾಂಸ್ಕೃತಿಕ ಅಧ್ಯಯನ

**ಪೀಠಿಕೆ**

ತುಮಕೂರು ಜಿಲ್ಲೆಯ ಪುರಾತತ್ವ ಕುರುಹುಗಳು - ಒಂದು ಸಾಂಸ್ಕೃತಿಕ ಅಧ್ಯಯನ, ಈ ವಿಷಯವನ್ನು ಮಹಾ ಪ್ರಬಂಧಕ್ಕೆ ಆರಿಸಿಕೊಳ್ಳಲು ಕೆಲವು ವಿಶಿಷ್ಟ ಕಾರಣಗಳಿವೆ. ಕರ್ನಾಟಕದ ಮಧ್ಯ ಮೈದಾನದ ಪ್ರದೇಶವಾದ ಈ ಜಿಲ್ಲೆಯಲ್ಲಿ ಕೃಷ್ಣಾ-ತುಂಗಭದ್ರಾಗಳಂತೆ ಪ್ರಮುಖ ಜೀವ ನದಿಗಳು ಯಾವುದೂ ಇಲ್ಲ. ಕೃಷ್ಣಾ ಮತ್ತು ಕಾವೇರಿಯ ಮಳೆಗಾಲದ ಉಪ ನದಿಗಳಾದ ಪೆನ್ನಾರ್ ಮತ್ತು ಶಿಂಷಾ ಮೇಲ್ದಂಡೆ ಪ್ರದೇಶವೇ ಈ ಜಿಲ್ಲೆಯ ಭೂಭಾಗವಾಗಿದೆ. ಈ ಜಿಲ್ಲಾ ಪ್ರದೇಶವು ಲೋಹಗಳಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಹಾಗು ಕಲ್ಲುಗಳಲ್ಲಿ ಕಗ್ಗಲ್ಲನ್ನು ಹೊರತುಪಡಿಸಿ ಇನ್ಯಾವುದೇ ಬೆಲೆಬಾಳುವ ವೈವಿಧ್ಯಮಯ ಭೂ ಸಂಪತ್ತಿನಿಂದೇನೂ ಕೂಡಿಲ್ಲ, ಹಾಗೂ ಇಂತಹ ಪರಿಸರವು ಶಿಲಾಯುಗದ ಮಾನವನ ಅಸ್ತಿತ್ವಕ್ಕೆ ಹಾಗೂ ಆತನ ಜೀವನ ಕ್ರಮಕ್ಕೆ ಅನುಕೂಲಕರವಾಗಿತ್ತೆ? ಹಾಗಿದ್ದಲ್ಲಿ ಅದಕ್ಕೆ ಸಂಬಂಧಿಸಿದ ಪುರಾವೆಗಳು ದೊರಕಬಹುದೇ? ಪ್ರಾಗೈತಿಹಾಸಿಕ ಕಾಲದಲ್ಲಿ ಇಲ್ಲಿಯ ಜನಜೀವನ ಎಷ್ಟರ ಮಟ್ಟಿಗೆ ಇದ್ದಿರಬಹುದು? ಇಂತಹ ಹಲವಾರು ಪ್ರಶ್ನೆಗಳು ಸಹಜವಾಗಿ ಏಳುತ್ತವೆ.

ಈ ಜಿಲ್ಲೆಯು ಬಹುಮಟ್ಟಿಗೆ ಅಲ್ಲಲ್ಲಿ ಗುಡ್ಡಬೆಟ್ಟಗಳಿಂದ ಕೂಡಿದ ಬಯಲು ಪ್ರದೇಶ. ಮಳೆ ತೀರಾ ಕಡಿಮೆ. ಅಲ್ಲಲ್ಲಿ ವಿರಳವಾಗಿ ಗಿಡ ಮರಗಳಿದ್ದು, ವಿಶಿಷ್ಟವಾದ ಸಸ್ಯ ಸಂಪತ್ತಾಗಲೀ, ಹೆಸರಿಸಬಹುದಾದಂತಹ ನಿತ್ಯಹರಿದ್ವರ್ಣದ ಅರಣ್ಯಗಳಾಗಲೀ ಇಲ್ಲ.

ಈ ಪ್ರದೇಶದ ಸುತ್ತಮುತ್ತಲಿನ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ಕರ್ನಾಟಕದ ಕೋಲಾರ ಮತ್ತು ಚಿತ್ರದುರ್ಗ ಜಿಲ್ಲೆಗಳು ಪರಿಸರದ ದೃಷ್ಟಿಯಿಂದ ತುಮಕೂರು ಜಿಲ್ಲೆಯ ಪರಿಸರಕ್ಕಿಂತ ಹೆಚ್ಚೇನೂ ಭಿನ್ನವಾಗಿಲ್ಲ, ಹಾಗಿದ್ದರೂ ಆ ಪ್ರದೇಶಗಳಲ್ಲಿ ಗಣನೀಯ ಪ್ರಮಾಣದಲ್ಲಿ ಪ್ರಾಗೈತಿಹಾಸಿಕ ಕಾಲದ ಮಾನವ ಜೀವನದ ಸ್ಪಷ್ಟವಾದ ಕುರುಹುಗಳು ದೊರತಿವೆ. ಈ ಪ್ರದೇಶದ ವಾಯುವ್ಯಕ್ಕಿರುವ ಚಿತ್ರದುರ್ಗ ಜಿಲ್ಲೆಯಲ್ಲಿ ಹಲವಾರು ಮಾನವನ ಪ್ರಾಗಿತಿಹಾಸ ಕಾಲದ ಪ್ರಾಚ್ಯಾವಶೇಷಗಳು ದೊರತಿವೆ (ವೀಲರ್.ಆರ್.ಇ.ಎಂ:೧೯೪೮;೧೮೦-೩೧೦).

ಈ ಜಿಲ್ಲೆಯ ನೈಋತ್ಯ ಹಾಗೂ ಪಶ್ಚಿಮದ ದಿಕ್ಕಿನಲ್ಲಿರುವ ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲಾ ಪ್ರದೇಶಗಳ ಪರಿಸರವು ಗಣನೀಯವಾಗಿ ಭಿನ್ನವಾಗಿದ್ದು ಮಲೆನಾಡಿನ ಭಾಗಗಳಾಗಿವೆ. ಪಶ್ಚಿಮದಕಡೆಗೆ ಹೋದ ಹಾಗೆಲ್ಲಾ ಸ್ವಲ್ಪ ಹೆಚ್ಚು ಕಡಿಮೆ ನಿತ್ಯ ಹರಿದ್ವರ್ಣದ ಕಾಡುಗಳೇ ಇವೆ. ಇಂತಹ ಮಲೆನಾಡು ಪ್ರದೇಶದಲ್ಲಿ ಇತಿಹಾಸ ಆರಂಭ ಕಾಲದವರೆಗಿನ ಎಲ್ಲಾ ಸಾಂಸ್ಕೃತಿಕ ಹಂತಗಳ ಪ್ರಾಚ್ಯಾವಶೇಷ ಮತ್ತು ನೆಲೆಗಳು ಶೋಧವಾಗಿವೆ.

ಮೇಲೆ ಹೇಳಿದ ಸ್ಥಳಗಳಲ್ಲದೆ ದಕ್ಷಿಣದಲ್ಲಿ ಕಾವೇರಿ ನದೀ ಜಲನಯನ ಪ್ರದೇಶ, ಉತ್ತರದಲ್ಲಿ ಕೃಷ್ಣಾ ಮತ್ತು ತುಂಗಭದ್ರಾ ನದೀ ಜಲಾನಯನ ಪ್ರದೇಶಗಳಲ್ಲಿಯ ಪ್ರಾಗೈತಿಹಾಸಿಕ ಸಂಸ್ಕೃತಿಗಳು ತಮ್ಮದೇ ಆದ ವಿಶಿಷ್ಟ ಲಕ್ಷಣಗಳಿಂದ ಕೂಡಿದ್ದು ಕರ್ನಾಟಕದ ಪ್ರಾಗಿತಿಹಾಸದ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ ಸ್ಥಾನ ಪಡೆದಿವೆ. ಈ ಪ್ರಕ್ರಿಯೆಯಲ್ಲಿ ತುಮಕೂರು ಜಿಲ್ಲಾ ಪ್ರದೇಶವೂ ಕೂಡ ಭೌಗೋಳಿಕ ದೃಷ್ಟಿಯಿಂದ ನೋಡಿದರೆ ಮಹತ್ವದ ಸ್ಥಾನ ಗಳಿಸಿರುವುದನ್ನೂ ಮತ್ತು ಪಾತ್ರವಹಿಸಿರುವುದನ್ನು ಊಹಿಸಬಹುದು. ಉದಾಹರಣೆಗೆ ಕಾವೇರಿ ಮೇಲ್ದಂಡೆ ಪ್ರದೇಶದಲ್ಲಿ ಆದಿ ಹಳೆಶಿಲಾಯುಗದ ನೆಲೆ ಹಾಗೂ ಉಪಕರಣಗಳು ಇಲ್ಲಿಯತನಕ ದೊರೆತಿಲ್ಲ. ಇದರಂತೆಯೇ ಹಾಸನ ಜಿಲ್ಲೆಯ ಹೇಮಾವತಿ ನದೀ ಪ್ರದೇಶದಲ್ಲಿ ಬಹುಮಟ್ಟಿಗೆ ಮಧ್ಯ ಹಳೆಶಿಲಾಯುಗದ ಪ್ರಾಗೈತಿಹಾಸಿಕ ಕುರುಹುಗಳು ಕಂಡು ಬಂದಿವೆ. ಚಿಕ್ಕಮಗಳೂರು ಮತ್ತು ಶಿವಮೊಗ್ಗ ಪ್ರದೇಶದ ತುಂಗಾ ಮತ್ತು ಭಧ್ರಾ ನದೀ ಬಯಲುಗಳಲ್ಲಿ ಆದಿ ಹಳೆಶಿಲಾಯುಗದ ನೆಲೆಗಳು ಸ್ಪಷ್ಟವಾದ ಪ್ರಮಾಣದಲ್ಲಿ ಇವೆ. ಕಾವೇರಿ ನದೀ ಪ್ರದೇಶದಲ್ಲಿ ಆಗಲೇ ವಿಕಸಿತವಾದ ನೂತನ ಶಿಲಾಯುಗದ ಸಂಸ್ಕೃತಿಯು ಇದ್ದರೆ ತುಂಗಾ-ಭದ್ರಾ ನದೀ ಪ್ರದೇಶದಲ್ಲಿ ಶಿಲಾ-ತಾಮ್ರ ಹಂತದಲ್ಲಿಯ ನೂತನ ಶಿಲಾಯುಗದ ಸಂಸ್ಕೃತಿಯು ವಿಶೇಷವಾಗಿರುವುದನ್ನು ನೋಡಬಹುದು. ಈ ಎರಡೂ ಪ್ರದೇಶಗಳ ಮಧ್ಯ ಪ್ರದೇಶವಾದ ತುಮಕೂರು ಜಿಲ್ಲಾ ಪ್ರದೇಶದಲ್ಲಿ ಯಾವ ರೀತಿಯ ಶಿಲಾಯುಗ ಸಂಸ್ಕೃತಿ ಇದ್ದಿತೆಂಬುದು ತಿಳಿದು ಬಂದಿಲ್ಲ.

ಈ ನಿಟ್ಟಿನಲ್ಲಿ ಈಗಿನ ಕರ್ನಾಟಕ ಪ್ರದೇಶದ ಕಡಲ ತೀರದ ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳು ಮತ್ತು ತುಮಕೂರು ಜಿಲ್ಲೆಯನ್ನು ಬಿಟ್ಟರೆ ಕರ್ನಾಟಕದ ಉದ್ದಗಲದ ಎಲ್ಲೆಡೆಗಳಲ್ಲಿ ಪ್ರಾಗಿತಿಹಾಸ ಕಾಲದ ಸಾಂಸ್ಕೃತಿಕ ನೆಲೆಗಳು ಶೋಧವಾಗಿ ತಕ್ಕಮಟ್ಟಿಗೆ ವೈಜ್ಞಾನಿಕವಾಗಿ ಅಧ್ಯಯನಗಳೂ ನಡೆದಿವೆ. ಇಡೀ ಕರ್ನಾಟಕ ಪ್ರದೇಶದ ಪ್ರಾಗಿತಿಹಾಸ ಕಾಲದ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಸ್ವಲ್ಪಮಟ್ಟಿಗೆ ಸ್ಥೂಲವಾಗಿಯಾದರೂ ತಿಳಿಯಬೇಕಾದಲ್ಲಿ, ತುಮಕೂರು ಜಿಲ್ಲಾ ಪ್ರದೇಶದ ಅಧ್ಯಯನವು ತುಂಬಾ ಅವಶ್ಯವಾಗಿದೆ. ಇದಕ್ಕೂ ಮೊದಲು ಇಂತಹ ಅಧ್ಯಯನಕ್ಕೆ ಉತ್ತೇಜಕವಾಗಿ ೧೯೨೪ರಲ್ಲಿ ಪಿ.ಸಂಪತ್ ಐಯ್ಯಂಗಾರ್ ಎಂಬ ಭೂಗರ್ಭ ವಿಜ್ಞಾನಿ ಆದಿ ಹಳೆಶಿಲಾಯುಗದ ಆಯುಧಗಳನ್ನು ಶೋಧಿಸಿದ್ದು

(ಸಂಪತ್ ಐಯ್ಯಂಗಾರ್:೧೯೨೪) ಆದರ ವಿಸ್ತ್ರತ ಅಧ್ಯಯನವನ್ನು ಐವತ್ತರ ದಶಕದಲ್ಲಿ ಎಂ.ಶೇಷಾದ್ರಿಯವರು ಮಾಡಿ-ರುವರು (ಶೇಷಾದ್ರಿ.ಎಂ:೧೯೫೬). ಇದಕ್ಕೂ ಪೂರ್ವದಲ್ಲಿ ಹಿಂದಿನ ಮೈಸೂರು ಸಂಸ್ಥಾನದ ಪುರಾತತ್ವ ಮತ್ತು ವಸ್ತು ಸಂಗ್ರ-ಹಾಲಯ ಇಲಾಖೆಯ ನಿರ್ದೇಶಕ ಬಿ.ಎಲ್.ರೈಸ್ ರವರು ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಗೋರಿಗಳ ನೆಲಿ-ಯೊಂದನ್ನು ಶೋಧಿಸಿದರು (ಸುಂದರ.ಎ(ಸಂ):೧೯೮೯;XXI). ಈ ಎಲ್ಲಾ ಅನ್ವೇಷಣೆಗಳಿಂದ ದೊರೆಕಿದ ಮಾಹಿತಿಯಿಂ-ದಾಗಿ ಈ ಪ್ರದೇಶದಲ್ಲಿಯ ಸಾಂಸ್ಕೃತಿಕ ನೆಲೆಗಳ ವಿವಿಧ ಸಂಸ್ಕೃತಿಗಳ ವೈಶಿಷ್ಟ್ಯವನ್ನು ತಿಳಿದುಕೊಳ್ಳಲು ಮತ್ತು ಕರ್ನಾಟಕದ ಪ್ರಾಗಿತಿಹಾಸದ ಮೇಲೆ ಹೆಚ್ಚಿನ ಮಾಹಿತಿಯನ್ನು ಕ್ರೋಡೀಕರಿಸಲು ಈ ಪ್ರದೇಶವನ್ನು ಅಧ್ಯಯನಕ್ಕೋಸ್ಕರ ಆರಿಸಿಕೊಂಡು ಕೆಳಗೆ ತಿಳಿಸಿರುವಂತೆ ಸಂಶೋಧನೆ ಮತ್ತು ಅಧ್ಯಯನವನ್ನು ಪ್ರಾರಂಭಿಸಲಾಯಿತು.

೧) ಸಂಶೋಧನೆಗೆ ಆಯ್ದು ಕೊಂಡ ಪ್ರದೇಶದಲ್ಲಿ ಇದುವರೆಗೆ ನಡೆದ ಪ್ರಾಗಿತಿಹಾಸ ವಿಷಯಕ್ಕೆ ಸಂಬಧಿಸಿದ ಅಧ್ಯಯನಗಳನ್ನು ಪಟ್ಟೀಕರಿಸುವುದು ಮತ್ತು ಪರಿಶೀಲಿಸುವುದು.

೨) ತುಮಕೂರು ಜಿಲ್ಲಾ ಪ್ರದೇಶದ ಪರಿಸರಾಧ್ಯಯನ.

೩) ಈ ಪ್ರದೇಶದಲ್ಲಿ ಈವರೆಗೆ ಶೋಧವಾದ ನೆಲೆಗಳನ್ನು ಕೇಂದ್ರವಾಗಿಟ್ಟುಕೊಂಡು ವ್ಯಾಪಕವಾದ ಗ್ರಾಮ-ಗ್ರಾಮಾಂತರ ಸರ್ವೇಕ್ಷಣೆಯಿಂದ ಹಳ್ಳಿ ಹಳ್ಳಿಗಳಲ್ಲಿಯ ಪ್ರಾಗಿತಿಹಾಸ, ಪೂರ್ವಭಾವಿ ಇತಿಹಾಸ ಮತ್ತು ಇತಿಹಾಸ ಆರಂಭ ಕಾಲದ ಅವಶೇಷಗಳ ಶೋಧನೆ ಮತ್ತು ಅಧ್ಯಯನ.

೪) ಪ್ರತಿಯೊಂದು ನೆಲೆಯ ಬಗ್ಗೆ ಅದರ ಪರಿಸರವನ್ನು ಅನುಲಕ್ಷಿಸಿ ಆಯಾ ನೆಲೆಗಳ ಬಗ್ಗೆ ವಿಶದವಾದ ಟಿಪ್ಪಣಿಗಳನ್ನು ಸ್ಥಳೀಯರ ಸಹಾಯದಿಂದ ಮತ್ತು ಸಾಧ್ಯವಾದಷ್ಟು ಮಟ್ಟಿಗೆ ಪ್ರಾತಿನಿಧಿಕ ಪುರಾತತ್ವ ಅವಶೇಷಗಳನ್ನು ಸಂಗ್ರಹಿಸುವುದು.

೫) ಅವಶ್ಯವಿದ್ದೆಡೆಯಲ್ಲೆಲ್ಲಾ ರೇಖಾಚಿತ್ರ, ಛಾಯಾ ಚಿತ್ರಗಳನ್ನು ಸಿದ್ಧ ಪಡಿಸಿಕೊಳ್ಳುವುದು.

II ಹೀಗೆ ಸಂಗ್ರಹಿಸಿದ ಪುರಾತತ್ವ ಅವಶೇಷಗಳನ್ನು ಟಿಪ್ಪಣಿಗಳ, ಛಾಯಾ ಚಿತ್ರಗಳ, ರೇಖಾ ಚಿತ್ರಗಳ ಸಹಾಯದಿಂದ ಹಾಗೂ ಇತರ ನೆಲೆಗಳ ತದ್ರೂಪದ ಅವಶೇಷಗಳೊಡನೆ ಹೋಲಿಕೆಯಿಂದ, ವಿಶ್ಲೇಷಿಸಿ ಅಧ್ಯಯನ ಮಾಡುವುದು.

III ಆಯ್ದ ಚಿತ್ರಗಳೊಡನೆ ಕೂಲಂಕಷವಾದ ವಿಶ್ಲೇಷಣೆಯಿಂದ ಬಂದ ಫಲಿತಾಂಶಗಳನ್ನು ಗುರುತಿಸಿ ಸಮನ್ವಯ ಮಾಡುವುದು. ಹೀಗೆ ನಡೆಸಿದ ಅಧ್ಯಯನವನ್ನು ಆಧರಿಸಿ ಒಂದು ವೈಜ್ಞಾನಿಕ ಹಾಗೂ ಅರ್ಥಪೂರ್ಣ ನಿರೂಪಣೆಯನ್ನು ಸಿದ್ಧಪಡಿಸುವುದು.

# ಕರ್ನಾಟಕ -ತುಮಕೂರು ಜಿಲ್ಲಾ ಪ್ರದೇಶ



ಅಧ್ಯಾಯ ಎರಡು

# ಕರ್ನಾಟಕದ ಪ್ರಾಗಿತಿಹಾಸದ ಪೂರ್ವಾಧ್ಯಯನ

## (ತುಮಕೂರು ಜಿಲ್ಲಾ ಪ್ರದೇಶದ ಸುತ್ತಮುತ್ತ)

ಕರ್ನಾಟಕದ ಪ್ರಾಗಿತಿಹಾಸದ ಅಧ್ಯಯನದ ಚರಿತ್ರೆಯಲ್ಲಿ ಪ್ರಿಮ್‌ರೋಸ್‌ರವರು ೧೮೪೨ರಲ್ಲಿ ಲಿಂಗಸು-ಗೂರು (ರಾಯಚೂರು ಜಿಲ್ಲೆ) ಪ್ರದೇಶದಲ್ಲಿ ಆಕಸ್ಮಿಕವಾಗಿ ಸಂಶೋಧಿಸಿದ ಶಿಲಾ ಉಪಕರಣಗಳೇ ಪ್ರಪ್ರಥಮ. ಹೀಗೆ ಆರಂಭವಾದ ಶೋಧವು, ಕರ್ನಲ್ ಮೆಕೆಂಜಿ.ಜೆ.ಎಸ್.ಇ (೧೮೭೩) ಮತ್ತು ರಾಬರ್ಟ ಬ್ರೂಸ್ ಫೂಟ್ (೧೯೧೬) ರವ-ರಿಂದ ಮತ್ತಷ್ಟು ಮುಂದುವರಿದು ಪ್ರಾಗಿತಿಹಾಸ ಸಂಸ್ಕೃತಿಯ ನೆಲೆಗಳ ಶೋಧನೆ ಮತ್ತು ಅಧ್ಯಯನದಿಂದ ಈ ಕ್ಷೇತ್ರದಲ್ಲಿ ಗಣನೀಯ ಪ್ರಗತಿ ಸಾಧ್ಯವಾಯಿತು. ಅನಂತರ "ಭಾರತೀಯ ಪ್ರಾಗೈತಿಹಾಸಿಕ ಸಂಶೋಧನೆ ಮತ್ತು ಅಧ್ಯಯನಗಳ ಪಿತಾಮಹ" ರೆನಿಸಿಕೊಂಡ ರಾಬರ್ಟ್ ಬ್ರೂಸ್ ಫೂಟ್‌ರವರು ೧೮೬೩ರಿಂದ ೧೯೦೪ರ ತಮ್ಮ ಶೋಧನಾ ಕಾಲದಲ್ಲಿ ಪ್ರಾಕ್ ಚಾರಿತ್ರಿಕ, ಪೂರ್ವಭಾವಿ ಇತಿಹಾಸ ಮತ್ತು ಇತಿಹಾಸ ಆರಂಭ ಕಾಲದ ಒಟ್ಟು ೪೫೯ ನೆಲೆಗಳನ್ನು ಶೋಧಿಸಿರುವರು. ಕರ್ನಾಟಕದಲ್ಲಿ ಪ್ರಮುಖವಾದ ಆದಿ ಹಳೆಶಿಲಾಯುಗದ ನೆಲೆಗಳೆಂದರೆ ಚಿಕ್ಕಮಗಳೂರು ಜಿಲ್ಲೆಯ ನಿಡುಘಟ್ಟ, ಲಿಂಗದಹಳ್ಳಿ (ಸಕ್ರೆಪಟ್ಣ  ತಾಲ್ಲೂಕು) ಮತ್ತು ಕಡೂರು (ಕಡೂರು ತಾಲ್ಲೂಕು), ಬಳ್ಳಾರಿ ಜಿಲ್ಲೆಯ ಹಳಕುಂದಿ (ಬಳ್ಳಾರಿ ತಾಲ್ಲೂಕು), ಚಿತ್ರದುರ್ಗ  ಜಿಲ್ಲೆಯ ತಾಳ್ಯ (ಹೊಳಲ್ಕೆರೆ ತಾಲ್ಲೂಕು) ಮತ್ತು  ಶಿವಮೊಗ್ಗ ಜಿಲ್ಲೆಯ ನ್ಯಾಮತಿ (ಶಿವಮೊಗ್ಗ ತಾಲ್ಲೂಕು), ಕರೇಕೊಪ್ಪ, (ತೀರ್ಥಹಳ್ಳಿ ತಾಲ್ಲೂಕು), ಖ್ಯಾಡ್ ಮತ್ತು ಧನಕ್ ಶಿರೂರ್ (೧೯೦೬;೧೮). ಇವರು ಶೋಧಿಸಿದ ನೂತನ ಶಿಲಾಯುಗದ ನೆಲೆಗಳಾದ ಸಂಗನಕಲ್ಲು (೧೯೦೬;೮) ಮತ್ತು ತಿ.ನರಸೀಪುರ (೧೯೦೬;೬೯) ಅತಿಮಹತ್ವದ ನೆಲೆಗಳಾಗಿವೆ. ಈ ಎರಡೂ ನೆಲೆಗಳಲ್ಲಿ ಉತ್ಖನನ ನಡೆದಿದ್ದು (ಕ್ರಮವಾಗಿ ಸುಬ್ಬಾರಾವ್.ಬಿ:೧೯೪೮ ಮತ್ತು ಶೇಷಾದ್ರಿ.ಎಂ:೧೯೭೧) ನೂತನ ಶಿಲಾ ಸಂಸ್ಕೃತಿಯ ಬಗ್ಗೆ ವಿವರವಾದ ಮಾಹಿತಿಯನ್ನು ಪಡೆದುಕೊಳ್ಳಲು ಸಹಾಯಕವಾಗಿವೆ.

ಬೆಂಗಳೂರು ಸೆಂಟ್ರಲ್ ಕಾಲೇಜಿನ ಸಂಪತ್  ಐಯ್ಯಂಗಾರ್ ಮತ್ತು ರಾಮರಾವ್ ರವರು ಬೆಳಕಿಗೆ ತಂದ ಕಿಬ್ಬನಹಳ್ಳಿ  ಮತ್ತು ಬಿಳಿಗೆರೆ (ಸಂಪತ್ ಐಯ್ಯಂಗಾರ್:೧೯೨೪) ತುಮಕೂರು ಜಿಲ್ಲೆಯ ಮಹತ್ವದ ಶಿಲಾಯುಗದ ನೆಲೆಗ-ಳಾಗಿವೆ. ಇದೇ ಅಲ್ಲದೆ ಶ್ರೀಪಾದರಾವ್(೧೯೩೦ ಮತ್ತು ೧೯೩೨), ಆಲ್ಚಿನ್.ಬಿ(೧೯೫೨;೨೬೮-೭೧), ಮತ್ತು ಶೇಷಾ-ದ್ರಿ.ಎಂ(೧೯೫೬) ರವರುಗಳು ಈ ಪ್ರದೇಶದಲ್ಲಿ ಮತ್ತಷ್ಟು ಶೋಧನೆ ಮತ್ತು ಅಧ್ಯಯನ ನಡೆಸಿರುವರು.

ಆರ್.ವಿ.ಜೋಶಿ(೧೯೫೫)ಯವರು ಮಲಪ್ರಭಾ ಮತ್ತು ಘಟಪ್ರಭಾ ನದೀ ಕೊಳ್ಳಗಳಲ್ಲಿ ಕೈಗೊಂಡ ವೈಜ್ಞಾನಿಕ ಅನ್ವೇಷಣೆಗಳಿಂದ ಹಲವು ನೆಲೆಗಳನ್ನು ಶೋಧನೆ ಮಾಡಿ ಪ್ಲೀಸ್ಟೋಸೀನ್‌ಯುಗದ ವಿಶೇಷ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟರು. ಆರ್.ಎಸ್.ಪಪ್ಪು(೧೯೭೪)ರವರು ಶೋರಾಪುರ ಪ್ರದೇಶದ ಸರ್ವೇಕ್ಷಣೆ ಕೈಗೊಂಡು ಕೆಲವು ಮಹತ್ವದ ನೆಲೆಗಳನ್ನು ಶೋಧಿಸಿದರು. ಕೆ.ಪದ್ದಯ್ಯ (೧೯೭೩) ಭೀಮಾ-ಕೃಷ್ಣಾ ನದೀಪಾತ್ರದ ಸರ್ವೇಕ್ಷಣೆಯನ್ನು ನಡೆಸಿರುವರು. ಇತ್ತೀಚಿನ ಇವರ ಸರ್ವೇಕ್ಷಣೆ ಮತ್ತು ಉತ್ಖನನಗಳಿಂದ ಹುಣಸಗಿ(೧೯೮೨) ನದೀಪಾತ್ರದಲ್ಲಿನ ಮಾನವನ ಜೀವನಕ್ರಮ ಮತ್ತು ಉಪಕರಣಗಳ ನಿರ್ಮಾಣಗಳ ವ್ಯವಸ್ಥಿತ ರೀತಿಯ ಬಗ್ಗೆ ತಿಳಿಯಲು ಸಹಾಯಕವಾಗಿದೆ. ಎಸ್.ನಾಗರಾಜು (೧೯೭೧)ರವರು ಕೈಗೊಂಡ ಗುಲ್ಬರ್ಗ ಜಿಲ್ಲೆಯ ಅಮರ್ಜಾ ನದೀ ಪ್ರದೇಶದ ಸರ್ವೇಕ್ಷಣೆ ಹಲವು ನೆಲೆಗಳ ಶೋಧಕ್ಕೆ ಕಾರಣವಾಗಿದೆ.

ಬೀದರ್ ಜಿಲ್ಲೆಯ ಮಾಂಜ್ರಾ ಮತ್ತು ಕಾರಂಜಾ ನದೀಪಾತ್ರಗಳ ಸರ್ವೇಕ್ಷಣೆಯನ್ನು ರು.ಮ.ಷಡಕ್ಷರಯ್ಯ (೧೯೯೫)ನವರು ಕೈಗೊಂಡು ಮಧ್ಯ ಹಳೆಶಿಲಾಯುಗದಿಂದ ಈ ಪ್ರದೇಶದಲ್ಲಿ ಜನಜೀವನ ಆರಂಭವಾಗಿದೆ ಎಂದು ತಿಳಿಸಿಕೊಟ್ಟಿದ್ದಾರೆ.

ಬೆಳಗಾವಿ, ಧಾರವಾಡ ಮತ್ತು ಬಿಜಾಪುರ ಜಿಲ್ಲಾ ಪ್ರದೇಶದಲ್ಲಿ ಪುರಾತತ್ವ ಸರ್ವೇಕ್ಷಣಾ ಕಾರ್ಯವನ್ನು ೧೯೫೭-೧೯೭೦ ರಲ್ಲಿ ಅ.ಸುಂದರ ಮತ್ತು ಎಂ.ಎಸ್.ನಾಗರಾಜರಾವ್ ರವರು ನಡೆಸಿದರು. ಭೀಮಾ ನದೀಪಾತ್ರವನ್ನು ಅ.ಸುಂದರ(೧೯೬೮:೧-೨೩)ಅವರೂ, ತುಂಗಭದ್ರಾ ನದೀಪಾತ್ರವನ್ನು ಎಂ.ಎಸ್.ನಾಗರಾಜರಾವ್ (೧೯೬೩;೧೫೪ -೧೬೪, ೧೯೬೪;೫೫-೬೭, ೧೯೬೫, ೧೯೭೧, ೧೯೮೧;೨೫-೩೨) ರವರು ಸರ್ವೇಕ್ಷಿಸಿ ಈ ಪ್ರದೇಶಗಳಲ್ಲಿಯೂ ಹಲವು ಸಾಂಸ್ಕೃತಿಕ ಹಂತಗಳಿರುವುದನ್ನು ಗುರುತಿಸಿರುವರು. ಅ.ಸುಂದರ ಅವರು ಇದೇ ಪ್ರದೇಶವನ್ನು ತಮ್ಮ ಹೆಚ್ಚಿನ ಅಧ್ಯಯನಕ್ಕಾಗಿ ಆಯ್ದುಕೊಂಡು ಉತ್ತರ ಕರ್ನಾಟಕದ ಬೃಹತ್ ಶಿಲಾ ಸಂಸ್ಕೃತಿಯ ವಿಭಿನ್ನ ಮಾದರಿಯ ಕಲ್ಗೋರಿಗಳ ಕುರಿತು ಮಹಾ ಪ್ರಬಂಧವನ್ನು ರಚಿಸಿರುವರು(೧೯೭೫). ಎಂ.ಎಸ್.ನಾಗರಾಜರಾವ್ ರವರು ತಾವು ಸರ್ವೇಕ್ಷಿಸಿದ ಪ್ರದೇಶಗಳ ತಾಮ್ರ ಶಿಲಾ ಸಂಸ್ಕೃತಿಗಳನ್ನು ಕುರಿತು ಮಹಾ ಪ್ರಬಂಧ ರಚಿಸಿರುವರು (೧೯೬೬). ಬೆಳಗಾವಿ ಜಿಲ್ಲಾ ಪ್ರದೇಶದ ನೂತನ ಶಿಲಾಯುಗದ ಸಂಸ್ಕೃತಿಯ ವಿವರಣೆಯನ್ನು ಎಚ್.ಎಸ್.ಕಾಂಳೆ(೧೯೯೬)ರವರು ತಿಳಿಸಿರುವರು.

ಬಳ್ಳಾರಿ ಜಿಲ್ಲೆ ನಿಟ್ಟೂರು (ಸಿರಗುಪ್ಪ ತಾಲ್ಲೂಕು) ತುಂಗಭದ್ರಾ ನದೀಪಾತ್ರದ ಒಂದು ಪ್ರಮುಖ ನೆಲೆ. ಇಲ್ಲಿ ದೊರೆತ ಶಿಲಾ ಉಪಕರಣಗಳು ನದೀ ದಂಡೆಯ ಪದರಗಳಲ್ಲಿ ದೊರೆತಿರುವುದೇ ಅಲ್ಲದೆ, ಪಶುವಿನ ಪಳೆಯುಳಿಕೆಯು (ಬಾಸ್ ನೊಮಾಡಿಕಸ್, Bos nomadicus)ದೊರೆತಿರುವುದರಿಂದ ಶಿಲಾಯುಗದ ಸಮಯದ ಪ್ರಾಣಿವರ್ಗದ ವಿವರ-ವನ್ನು ಪಡೆದುಕೊಳ್ಳಲು ಉಪಯುಕ್ತ ಮಾಹಿತಿ ದೊರೆತಂತಾಗಿದೆ. ಇದನ್ನು ಶೋಧಿಸಿದವರು ಜಡ್.ಡಿ. ಅನ್ಸಾರಿ (೧೯೭೦:೧-೭). ನೂತನ ಶಿಲಾಯುಗದ ನೆಲೆಗಳಾದ ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮) ತೆಕ್ಕಲಕೋಟೆ (ನಾಗರಾಜರಾವ್.ಎಂ.ಎಸ್:೧೯೬೫)ಉತ್ಖನನಗಳು ಈ ಸಂಸ್ಕೃತಿಯ ಮೇಲೆ ಸಾಕಷ್ಟು ಬೆಳಕು ಬೀರಿವೆ. ನೂತನ ಶಿಲಾ-ಯುಗದ ಸಂಸ್ಕೃತಿಗೆ ಸೇರಿದ್ದೆಂದು ಹೇಳುವ ಬೂದಿದಿಬ್ಬ (ash mound) ಗಳ ಉತ್ಖನನಗಳೂ ನಡೆದಿದ್ದು ಕೆಲವು ಉಪ-ಯುಕ್ತ ಮಾಹಿತಿಗಳು ಲಬ್ಧವಾಗಿವೆ. ಇವುಗಳಲ್ಲಿ ಉತ್ನೂರು (ರಾಯಚೂರು ಜಿಲ್ಲೆ) ಉತ್ಖನನ (ಅಲ್ಚಿನ್.ಎಫ್.ಆರ್ :೧೯೬೧), ಕುಪ್ಪಗಲ್ (ಬಳ್ಳಾರಿ ಜಿಲ್ಲೆ) ಉತ್ಖನನ (ಮಜುಂದಾರ್ ಜಿ.ಜಿ:೧೯೬೬)ಗಳು ಪ್ರಮುಖವಾದವುಗಳು.

ಚಿತ್ರದುರ್ಗ ಜಿಲ್ಲಾ ಪ್ರದೇಶದ ಚಂದ್ರವಳ್ಳಿ ಉತ್ಖನನ(ಕೃಷ್ಣ.ಎಂ.ಎಚ್:೧೯೩೧, ವೀಲರ್.ಆರ್.ಇ.ಎಮ್ :೧೯೪೮;೨೭೦-೩೧೦ ಮತ್ತು ಇಂ.ಆ.ರಿ:೧೯೭೭-೮;೨೭-೨೯) ಮತ್ತು ಬ್ರಹ್ಮಗಿರಿ (ವೀಲರ್:೧೯೪೮; ೧೮೦-೨೭೦) ಉತ್ಖನನಗಳು ದಕ್ಷಿಣ ಕರ್ನಾಟಕದ ವಿವಿಧ ಸಂಸ್ಕೃತಿಗಳ ನಿರ್ದಿಷ್ಟ ಕಾಲಮಾನದ ವಿವರಗಳನ್ನು ತಿಳಿಸಿವೆ. ಹಿಂದೆ ಶೋಧಿ-ಸಲಾದ ಹಲವು ನೆಲೆಗಳ ಜೊತೆಗೆ ಇತ್ತೀಚೆಗೆ ಕೆಲವು ನೆಲೆಗಳನ್ನು ಬೆಳಕಿಗೆ ತರಲಾಗಿದೆ. ಚಿತ್ರದುರ್ಗ ತಾಲ್ಲೂಕು ತುರುವನೂರು ಹೋಬಳಿ ಚಿಪ್ಪಿನಕೆರೆ ಸಮೀಪದ ಬೃಹತ್ ಶಿಲಾಯುಗದ ವಸತಿ ನೆಲೆ ಮತ್ತು ರೇಖಾ ಚಿತ್ರಗಳಿರುವ ಇತಿಹಾಸ ಆರಂಭಕಾ-ಲದ ಮಡಕೆ ಚೂರುಗಳನ್ನು ಎಸ್.ವೈ.ಸೋಮಶೇಖರ್ (ಇತಿಹಾಸದರ್ಶನ-೧೧:೧೯೯೬;೩೨-೩೩) ರವರು ಶೋಧಿಸಿರು-ವರು. ಅದೇ ರೀತಿ ಚಿನ್ನಹಗರಿ (ಜನ್ನಿಗೇಹಳ್ಳಿ)ನದೀಪಾತ್ರದುದ್ದಕ್ಕೂ ಸರ್ವೇಕ್ಷಣೆ ನೆಡೆಸಿ ಹಲವು ಪುರಾತತ್ವ ಅವಶೇಷಗಳಾದ ನೂತನ ಶಿಲಾಯುಗದ ನಿವೇಶನ, ಬೃಹತ್ ಶಿಲಾಸಂಸ್ಕೃತಿಯ ಅವಶೇಷ ಹಾಗೂ ಶಾತವಾಹನರ ವಸತಿ ನೆಲೆಗಳಿರುವು-ದನ್ನು ವಿರೂಪಾಕ್ಷಿ (ಇತಿಹಾಸದರ್ಶನ-೧೨:೧೯೯೭;೨೦-೨೭) ಯವರು ಶೋಧಿಸಿರುವರು.

ನೆರೆಯ ಆಂಧ್ರ ಪ್ರದೇಶದ ಅನಂತಪುರ ಜಿಲ್ಲಾ ಪ್ರದೇಶದ ಸರ್ವೇಕ್ಷಣೆಯನ್ನು ವಿ.ರಾಮಿರೆಡ್ಡಿ (೧೯೭೮) ಯವರು ಕೈಗೊಂಡು ೧೪ ಸೂಕ್ಷ್ಮ ಶಿಲಾಯುಗದ ನೆಲೆಗಳು, ೩೫ ನೂತನ ಶಿಲಾಯುಗದ ನೆಲೆಗಳು ಮತ್ತು ೧೭ ಬೂದಿದಿಬ್ಬಗಳನ್ನು ಶೋಧಿಸಿರುವರು. ಒಂದು ಕಬ್ಬಿಣದ ಕುಲುಮೆ ಪ್ರದೇಶ ಕೂಡ ದೊರೆತಿದೆ. ಇವರು ಪಾಲ್ವಾಯ(ಕಲ್ಯಾಣದುರ್ಗ ತಾಲ್ಲೂಕು, ಅನಂತಪುರ ಜಿಲ್ಲೆ)ನಲ್ಲಿ ಕೈಗೊಂಡ ಬೂದಿದಿಬ್ಬದ ಉತ್ಖನನ ಗಮನಾರ್ಹವಾದುದು

(೧೯೭೬). ಮುರಳಿ.ಎಂ ರವರು ಇದೇ ಪ್ರದೇಶದ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳ ಬಗ್ಗೆ ಕೂಲಂಕಷ ಅಧ್ಯಯನ ಕೈಗೊಂಡಿರುವರು (೧೯೯೩).

ಕೋಲಾರಜಿಲ್ಲೆ ಬನಹಳ್ಳಿ(ಮಾಲೂರು ತಾಲ್ಲೂಕು)ಉತ್ಖನನದಿಂದ (ಇಂ.ಆ.ರಿ:೧೯೮೩-೮೪;೪೨-೪೬, ೧೯೮೫-೮೬;೪೩-೪೪, ೧೯೮೬-೮೭;೪೨-೪೫ ಮತ್ತು ಅ. ಸುಂದರ (ಸಂ):೧೯೯೦;೬೭-೮೦) ದಕ್ಷಿಣ ಕರ್ನಾಟಕದ ನೂತನ ಶಿಲಾಯುಗ ಸಂಸ್ಕೃತಿ ಮತ್ತು ಬೃಹತ್ ಶಿಲಾಯುಗದ ನೆಲೆಯ ಬಗ್ಗೆ ಮಾಹಿತಿ ದೊರೆಯುತ್ತದೆ. ಸೂಕ್ಷ್ಮ ಶಿಲಾ-ಯುಗ, ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ನೆಲೆ ಮತ್ತು ಗೋರಿಗಳನ್ನು ಶೋಧಿಸಲಾಗಿದೆ (ಕೃಷ್ಣಮೂರ್ತಿ.ಸಿ:೧೯೭೧;೪-೧೨). ಹೀಗಾಗಿ ಪೆನ್ನಾರ್ ನದಿಯ ಪಾತ್ರದಲ್ಲಿ ಹಲವಾರು ನೆಲೆಗಳಿರುವ ಬಗ್ಗೆ ತಿಳಿಯುತ್ತದೆ.

ನೆರೆಯ ತಮಿಳುನಾಡು ಪ್ರದೇಶದ ಧರ್ಮಪುರಿ, ಉತ್ತರ ಆರ್ಕಾಟ್ ಜಿಲ್ಲಾ ಪ್ರದೇಶದ ಪ್ರಾಗಿತಿಹಾಸದ ಅಧ್ಯಯನವನ್ನು ಬಿ. ನರಸಿಂಹಯ್ಯ(೧೯೮೦) ನವರು ಕೈಗೊಂಡು ಆ ಪ್ರದೇಶದ ವಿವಿಧ ಸಾಂಸ್ಕೃತಿಕ ಹಂತಗಳ ಬಗ್ಗೆ ತಿಳಿ-ಸಿರುವರು.

ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲ್ಲೂಕು ಜಡಿಗೇನಹಳ್ಳಿ ಉತ್ಖನನ (ಶೇಷಾದ್ರಿ ಎಂ:೧೯೬೦)ಬೃಹತ್ ಶಿಲಾ ಸಂಸ್ಕೃತಿಯ ಒಂದು ಅಪರೂಪದ ನೆಲೆಯಾಗಿದ್ದು ಇಲ್ಲಿ ದೊರೆತಿರುವ ಆಯತಕಾರದ ಸುಟ್ಟ ಮಣ್ಣಿನ ಕಾಲುಳ್ಳ ಅಸ್ಥಿ-ಪೆಟ್ಟಿಗೆ (Sarcophagus)ಯ ಮಾದರಿಯಿಂದ ಒಂದು ವಿಶಿಷ್ಟ ಶವಸಂಸ್ಕಾರ ಪದ್ಧತಿಯ ವಿವರಣೆ ತಿಳಿಯುತ್ತದೆ .ಈ ಹಿಂದೆ ದೊರೆತ ಸೂಕ್ಷ್ಮ ಶಿಲಾಯುಧ, ಬೃಹತ್ ಶಿಲಾಗೋರಿ ಮತ್ತು ಇತಿಹಾಸ ಆರಂಭಕಾಲದ ಅವಶೇಷಗಳ ಜೊತೆಗೆ ಇತ್ತೀಚಿನ ದಿನಗಳಲ್ಲಿ ಹಲವು ಹವ್ಯಾಸಿ ಸಂಶೋಧಕರು ಪುರಾತತ್ವ ಅವಶೇಷಗಳನ್ನು ಶೋಧಿಸಿ ಅಧ್ಯಯನ ನಡೆಸಿರುವರು. ಕನಕಪುರ ತಾಲ್ಲೂಕು ಮರಳವಾಡಿ ಹೋಬಳಿ ಗುತ್ತಲಹುಣಸೆಯಲ್ಲಿ ೪೫ ಶಿಲಾಯುಗದ ಸಮಾಧಿ ಎರಡು ನಿಲವುಗಲ್ಲುಗಳು ಇರುವುದು ತಿಳಿದುಬಂದಿದೆ(ಲೋಕೇಶ್.ಎಂ:ಇತಿಹಾಸ ದರ್ಶನ-೧೨:೧೯೯೭;೧೬-೧೭)ರಾಮನಗರ ತಾಲ್ಲೂಕು ಕೂನ-ಮುದ್ದನಹಳ್ಳಿ ಮತ್ತು ಅರೇಹಳ್ಳಿಗಳಲ್ಲಿ ಬೃಹತ್ ಶಿಲಾಯುಗದ ಗೋರಿಗಳಿರುವುದು ತಿಳಿಯುತ್ತದೆ (ಜಯರಾಮಯ್ಯ.ಜೆ.ಟಿ :ಇತಿಹಾಸ ದರ್ಶನ-೧೨:೧೯೯೭;೧೯-೨.೨). ಆನೇಕಲ್ ತಾಲ್ಲೂಕು ಮೇಲೂರು ದಿಣ್ಣೆ ಮತ್ತು ಕಾಳನಾಯಕನಹಳ್ಳಿಗಳಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ದೊರೆತಿವೆ. ಹಾಳಾಗಿರುವ ಒಂದು ಶಿಲಾಗೋರಿಯಲ್ಲಿ ಮೂಳೆ , ಕಬ್ಬಿಣದ ಕೊಡಲಿ ಮತ್ತು ಮಡಕೆಗಳ ಜೊತೆಗೆ ಎರಡು ಮಣ್ಣಿನ ಗೊಂಬೆಗಳು ದೊರೆತಿವೆ (ಡಿ.ಸ್ಮಿತಾರೆಡ್ಡಿ:ಇತಿಹಾಸದರ್ಶನ-೧೧ :೧೯೯೬;೨೩-೨೫).

ಕಾವೇರಿ ನದೀಪಾತ್ರದಲ್ಲಿಯೂ ಹಲವಾರು ಸಾಂಸ್ಕೃತಿಕ ನೆಲೆಗಳು ದೊರೆತಿದ್ದು ತಿ.ನರಸೀಪುರ (ಶೇಷಾದ್ರಿ:೧೯೭೧) ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪), ತಲಕಾಡು (೧೯೯೧) ಉತ್ಖನನಗಳು ಶಿಲಾಯುಗ ಸಂಸ್ಕೃತಿಯ ಮತ್ತು ಇತಿಹಾಸ ಆರಂಭ ಕಾಲದ ವಿವರಣೆಗಳನ್ನು ನೀಡಿದೆ. ಕೊಪ್ಪ(ಪಿರಿಯಾಪಟ್ಟ ತಾಲ್ಲೂಕು) ಉತ್ಖನನ (೧೯೭೭;೧೨೪) ಬೃಹತ್ ಶಿಲಾ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲಿದೆ. ಮೈಸೂರು ಜಿಲ್ಲಾ ಪ್ರದೇಶದಲ್ಲಿ ಸಿ. ಕೃಷ್ಣಮೂರ್ತಿ(೧೯೭೧;೪-೧೨)ಯವರು ಪುರಾತತ್ವ ಸರ್ವೇಕ್ಷಣೆ ಕೈಗೊಂಡು ಹಲವಾರು ನೆಲೆಗಳನ್ನು ಗುರುತಿಸಿರುವರು.

ಕೊಡಗು ಜಿಲ್ಲಾ ಪ್ರದೇಶದ ಸರ್ವೇಕ್ಷಣೆಯನ್ನು ಕೆ.ಕೆ.ಸುಬ್ಬಯ್ಯ(೧೯೭೮)ನವರು ನಡೆಸಿ ಶಿಲಾ ಸಂಸ್ಕೃತಿಯ ನೆಲೆಗಳು ಮತ್ತು ಹಲವು ಗೋರಿಗಳ ಬಗ್ಗೆ ತಿಳಿಸಿರುವರು. ಹೆಗ್ಗಡದೇವನಕೋಟೆ ಮತ್ತು ಕೂಡಿಗೆ ನೆಲೆಗಳ ಜೊತೆಗೆ ಇನ್ನೂ ಹಲವಾರು ನೆಲೆಗಳು ಶೋಧವಾಗಿವೆ. ಇತ್ತೀಚೆಗೆ ಹೆಗ್ಗಡೆಹಳ್ಳಿಯ ಉತ್ಖನನ (೧೯೯೭)ಈ ಪ್ರದೇಶದ ಬೃಹತ್ ಶಿಲಾ ಸಂಸ್ಕೃತಿಯ ವಿವರಣೆಯನ್ನು ತಿಳಿಸುತ್ತದೆ.

ಕಡಲ ತಡಿಯ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಪರಿಸರದ ವಿವರಣೆಯನ್ನು ಪಿ.ರಾ-ಜೇಂದ್ರನ್(೧೯೮೯) ತಿಳಿಸಿರುವರು. ಜೊತೆಗೆ ದಕ್ಷಿಣ ಕನ್ನಡ ಜಿಲ್ಲೆಯ ಉಪ್ಪಿನಂಗಡಿ ಮತ್ತು ಮಣಿ ಗಳಲ್ಲಿ ಅಂತ್ಯ ಹಳೆ ಶಿಲಾಯುಗ ಮತ್ತು ಸೂಕ್ಷ್ಮಶಿಲಾಯುಗದ ಅವಶೇಷಗಳನ್ನು ನೇತ್ರಾವತಿ ನದಿಯ ದಂಡೆಯ ಮೇಲೆ ಗುರುತಿಸಲಾಗಿದೆ. (೧೯೮೩;೧೩೩-೭). ಬಿ.ವಸಂತ ಶೆಟ್ಟಿಯವರ ಹಲವು ನೂತನ ಶಿಲಾಯುಧಗಳ ಶೋಧನೆ ತುಳುನಾಡಿನ ಪ್ರಾಗಿತಿಹಾಸದ ಮೇಲೆ ಹೊಸಬೆಳಕು ಚೆಲ್ಲಿದೆ(೧೯೯೧;೭೧೪-೧೯). ಗಾವಳಿ(ಕುಂದಾಪುರ ತಾಲ್ಲೂಕು)ಯ ಕೊರೆದ ಚಿತ್ರಗಳು ಒಂದು ಮಹತ್ವದ ಶೋಧವಾಗಿದೆ(ವಸಂತ ಶೆಟ್ಟಿ.ಬಿ:೧೯೮೩;೧೫-೧೮). ಉತ್ತರ ಕನ್ನಡ ಜಿಲ್ಲೆಯಲ್ಲಿ ಶೋಧವಾದ ನೂತನ ಶಿಲಾ-ಯುಗದ ಕೊಡಲಿ (ಭಟ್‌ಸೂರಿ:೧೯೮೦;೮೧-೮೪) ಹಾಗೂ ಪ್ರಾಗಿತಿಹಾಸದ ಕೊರೆದ ಚಿತ್ರಗಳೂ ಬೆಳಕಿಗೆ ಬಂದಿವೆ (ಎಚ್.ಆರ್.ರಘುನಾಥ ಭಟ್:೧೯೯೭).

ಮಲೆನಾಡು ಪ್ರದೇಶದ ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ವೈಜ್ಞಾನಿಕ ಸರ್ವೇಕ್ಷಣೆಯನ್ನು ಕೆ.ಪಿ.ಪೂಣಚ್ಚ(೧೯೯೦)ರವರು ಕೈಗೊಂಡು ಈ ಪ್ರದೇಶದ ಸಮಗ್ರ ಪ್ರಾಗಿತಿಹಾಸದ ಚಿತ್ರಣವನ್ನು ನೀಡಿರುವರು. ತುಂಗ-ಭದ್ರಾ, ವೇದಾವತೀ ಮತ್ತು ಹೇಮಾವತೀ ನದಿಗಳ ಪಾತ್ರದಲ್ಲಿ ಆದಿ ಹಳೆಶಿಲಾಯುಗ ಸಂಸ್ಕೃತಿಯಿಂದ ಇತಿಹಾಸ ಆರಂಭ ಕಾಲದವರೆಗಿನ ಹಲವು ನೆಲೆಗಳನ್ನು ಗುರುತಿಸಿ ಅವರ ಮಹಾ ಪ್ರಬಂಧದಲ್ಲಿ ವಿವರಣೆ ನೀಡಿರುವರು.

ಅಧ್ಯಾಯ ಮೂರು

# ತುಮಕೂರು ಜಿಲ್ಲಾ ಪ್ರದೇಶದ ಪ್ರಾಗಿತಿಹಾಸ

## (೧೮೯೨ ರಿಂದ ೧೯೮೫)

ತುಮಕೂರು ಜಿಲ್ಲಾ ಪ್ರದೇಶದ ಪುರಾತತ್ವ ಅಧ್ಯಯನ ಇದುವರೆಗೆ, ಮೂರ್ತಿಶಿಲ್ಪ ಮತ್ತು ವಾಸ್ತುಶಿಲ್ಪಗಳ ಅಧ್ಯಯನಕ್ಕೇ ಸೀಮಿತವಾಗಿದ್ದು, ಹೆಚ್ಚಾಗಿ ಅವುಗಳ ಬಗ್ಗೆಯೇ ಅಧ್ಯಯನ ನಡೆಸಲಾಗಿದೆ. ಪ್ರಾಗೈತಿಹಾಸಿಕ ಅಧ್ಯಯನ ದೃಷ್ಟಿಯಿಂದ ಗಮನಾರ್ಹ ಶೋಧಗಳು ನಡೆಯದಿದ್ದರೂ ಆಗಾಗ ಆಕಸ್ಮಿಕವಾಗಿ ದೊರೆತ ಉಪಕರಣಗಳು ಮತ್ತು ಅವಶೇ-ಷಗಳನ್ನಷ್ಟೇ ಅಧ್ಯಯನ ಮಾಡಲಾಗಿದೆ. ಹೀಗೆ ದೊರೆತ ಪ್ರಾಗೈತಿಹಾಸಿಕ ಅವಶೇಷಗಳನ್ನು ಹಾಗೂ ನೆಲೆಗಳನ್ನು ಪರಿಶೀಲಿ-ಸೋಣ.

ಈ ಮೊದಲು ಬೆಳಕಿಗೆ ಬಂದಿದ್ದ ಏಕೈಕ ಶಿಲಾಯುಗದ ಅವಳಿ ನೆಲೆ ಎಂದರೆ ಕಿಬ್ಬನಹಳ್ಳಿ ಮತ್ತು ಬಿಳಿಗೆರೆ (ತಿಪಟೂರು ತಾಲ್ಲೂಕು). ಈ ನೆಲೆಗಳನ್ನು ಬೆಂಗಳೂರು ಸೆಂಟ್ರಲ್ ಕಾಲೇಜಿನ ಭೂಗರ್ಭ ವಿಜ್ಞಾನಿಗಳಾದ ಪಿ. ಸಂಪತ್ ಐಯ್ಯಂಗಾರ್(೧೯೨೪) ಮತ್ತು ಬಿ.ರಾಮರಾವ್‌ರವರು ಶೋದಿಸಿರುವರು. ಈ ನೆಲೆಯ ಪ್ರಾಮುಖ್ಯತೆಯ ವಿವರಣೆಯನ್ನು ನೀಡಿ, ಸಂಗ್ರಹಿಸಿದ ಹಲವು ಉಪಕರಣಗಳ ಮಹತ್ವವನ್ನು ಪ್ರಕಟಿಸಿರುವರು. ಇದೇ ನೆಲೆಯನ್ನು ಪುನಃ ಪರಿಶೀಲಿಸಿ ದೊರೆತ ವಿವಿಧ ಉಪಕರಣಗಳ ವೈಜ್ಞಾನಿಕ ಅಧ್ಯಯನವನ್ನು ಕೆ.ಶ್ರೀಪಾದರಾವ್(೧೯೬೨;೧೦೬-೧೮), ಬಿ.ಅಲ್ಚಿನ್ (೧೯೫೨ :೨೬೮-೭೧) ಮತ್ತು ಎಂ.ಶೇಷಾದ್ರಿಯವರು (೧೯೫೬)ಕೈಗೊಂಡರು. ಇದರಿಂದ ಪ್ರಪ್ರಥಮ ಬಾರಿಗೆ ಪ್ರಾಗಿತಿಹಾಸದ ಅನೇಕ ಅಂಶಗಳನ್ನು ತಿಳಿಯಲು ಸಹಾಯಕವಾಯಿತು.

ಭೂಗರ್ಭ ವಿಜ್ಞಾನಿ ಸಾಂಬಶಿವಐಯ್ಯರ್ ರವರು ಸೂಕ್ಷ್ಮ ಶಿಲಾಯುಗದ ಆಯುಧಗಳನ್ನು ಹೊಳಕಲ್ಲು ಬೆಟ್ಟದಲ್ಲಿ ಸಂಗ್ರಹಿಸಿರುವರು. ಅದೇ ರೀತಿ ಕಿನ್ಸಿಯಡ್.ಲೀ, ಯವರು ಮೀನಾಕ್ಷಯ್ಯ ಎಸ್ಟೇಟ್ ಪ್ರದೇಶದಲ್ಲಿ ಸೂಕ್ಷ್ಮ ಶಿಲಾ-ಯುಧಗಳನ್ನು ಶೋಧಿಸಿದರು. ಈ ಎರಡೂ ನೆಲೆಗಳ ಸಂಗ್ರಹವನ್ನು ರಾಬರ್ಟ್ ಬ್ರೂಸ್ ಫೂಟ್ ರವರು ಅಧ್ಯಯಿಸಿ ಅವು-ಗಳ ವಿವರಣೆಯನ್ನು ಪ್ರಕಟಿಸಿರುವರು (ಫೂಟ್.ಆರ್.ಬಿ:೧೯೧೬).

ಅಲ್ಚಿನ್‌ರವರು ಕಿಬ್ಬನಹಳ್ಳಿ ಪ್ರದೇಶದಲ್ಲಿ ಹೆಚ್ಚಿನ ಅಧ್ಯಯನ ನಡೆಸುತ್ತಿರುವಾಗ ಆ ನೆಲೆಯಲ್ಲಿ ಸೂಕ್ಷ್ಮಶಿ-ಲಾಯುಗದ ಸಂಸ್ಕೃತಿಯ ಅವಶೇಷಗಳಿರುವುದನ್ನು ಗುರುತಿಸಿ ದೊರೆತ ಉಪಕರಣಗಳ ಪ್ರಾಮುಖ್ಯತೆಯನ್ನು ತಿಳಿಯಪಡಿಸಿ ದ್ದರಿಂದ ಕಿಬ್ಬನಹಳ್ಳಿಯು ಇಡೀ ಕರ್ನಾಟಕದ ಪ್ರಾಗೈತಿಹಾಸಿಕ ದೃಷ್ಟಿಯಿಂದ ಒಂದು ಗಮನಾರ್ಹ ನೆಲೆಯಾಗಿದೆ(೧೯೫೨).

ನೂತನ ಶಿಲಾಯುಗದ ಎರಡು ಬೂದಿ ದಿಬ್ಬಗಳು ಪಾವಗಡ ತಾಲ್ಲೂಕು ನಾಗಲಾಪುರ ಮತ್ತು ಕೊಲಮಿಪಾ-ಳ್ಯಂಗಳಲ್ಲಿ ಇರುವುದನ್ನು ವಿ.ರಾಮರೆಡ್ಡಿಯವರು ತಮ್ಮ ಅಧ್ಯಯನದಲ್ಲಿ ಉಲ್ಲೇಖಿಸಿರುವರು (೧೯೭೮). ಆದರೆ ಕೊಲಮಿ-ಪಾಳ್ಯಂ ಬೂದಿದಿಬ್ಬವು ಆಂಧ್ರ ಪ್ರದೇಶದ ಕಲ್ಯಾಣದುರ್ಗ ತಾಲ್ಲೂಕಿನಲ್ಲಿದೆ.

ಯಲ್ಲಪ್ಪನಾಯಕನ ಹೊಸಕೋಟೆ(ಪಾವಗಡ ತಾಲ್ಲೂಕು)ಯ ಬೆಟ್ಟದ ಮೇಲಿರುವ ದೇವಾಲಯದಲ್ಲಿ ಸಂಗ್ರ-ಹಿಸಿಡಲಾಗಿದ್ದ ನೂತನ ಶಿಲಾಯುಧಗಳ ಬಗ್ಗೆ ಶ್ರೀವತ್ಸ ಎಸ್.ವಟಿ ಯವರು ವರದಿ ಮಾಡಿರುವರು.

ಐ.ಕೆ.ಶರ್ಮರವರು ತಮ್ಮ ಸರ್ವೇಕ್ಷಣೆಯ ಸಮಯದಲ್ಲಿ ಜಲಗಾರದಿಬ್ಬ (ತುಮಕೂರು ತಾಲ್ಲೂಕು), ಗಂಗ್ಡಾ-ಹಳ್ಳಿ, ಬೂದ್ದಿಣ್ಣೆ ಮತ್ತು ಹೇರೂರು (ಕುಣಿಗಲ್ ತಾಲ್ಲೂಕು)ಗಳ ಬೂದಿ ಮಣ್ಣಿನಲ್ಲಿ ನೂತನ ಶಿಲಾಯುಧಗಳನ್ನು ಸಂಗ್ರಹಿಸಿ-ರುವ ಬಗ್ಗೆ ವರದಿ ಮಾಡಿರುವರು (ಇಂ.ಆ.ರಿ:೧೯೮೦-೮೧:೯೧-೯೨ ಮತ್ತು ೧೧೯-೧೨೩).

ಬಿ.ಎಲ್.ರೈಸ್‌ರವರು ಬೆಳ್ಳಿಬಟ್ಟಲಹಳ್ಳಿಯಲ್ಲಿ ಹಾಳು ಮಾಡಲಾದ ಬೃಹತ್ ಶಿಲಾಗೋರಿಗಳ ಬಗೆಗೆ ಮೈಸೂರು ಪುರಾತತ್ವ ವಾರ್ಷಿಕಾಂಕ (೧೮೯೨-೯೩)ದಲ್ಲಿ ಉಲ್ಲೇಖಿಸಿರುವರು (ಅ.ಸುಂದರ(ಸಂ)೧೯೮೫:XXI). ಹೆಚ್.ಕೆ.ಸ್ಲೇಟರ್ (೧೯೦೬:೭೨)ಎಂಬ ಭೂಗರ್ಭ ವಿಜ್ಞಾನಿ ಕೀರಳಕಟ್ಟೆ (ತಿಪಟೂರು ತಾಲ್ಲೂಕು)ಪ್ರದೇಶದಲ್ಲಿ ಬೃಹತ್ ಶಿಲಾಸಂಸ್ಕೃತಿಯ ಗೋರಿಗಳ ವಿವರಣೆ ನೀಡಿರುವರು. ಹಿರೇಗುಂಡುಗಲ್ (ತುಮಕೂರು ತಾಲ್ಲೂಕು)ಪ್ರದೇಶದಲ್ಲಿ ದೊರೆತ ಬೃಹತ್ ಶಿಲಾಸಂಸ್ಕೃತಿಯ ಮಡಕೆಗಳ ಬಗೆಗೆ ಕೆ.ವಿ.ರಾವ್ (ಇಂ.ಆ.ರಿ:೧೯೭೮-೭೯:೯೭) ರವರು ವರದಿ ಮಾಡಿರುವರು. ವಿ.ಆರ್.ಚಲುವರಾಜನ್ (೧೯೭೫)ರವರು ಬಸವನಬೆಟ್ಟ, ಕಣಿಕಲಬಂಡೆ, ತಪ್ಪಗಾನದೊಡ್ಡಿ ಮತ್ತು ಪಳವಳ್ಳಿಗಳಲ್ಲಿ ಬೃಹತ್ ಶಿಲಾಯುಗದ ವೃತ್ತಾಕಾರದ ಗೋರಿಗಳಿರುವ ಬಗ್ಗೆ ತಮ್ಮ ಕಿರು ಹೊತ್ತಿಗೆ ಪಾವಗಡ ತಾಲ್ಲೂಕು ದರ್ಶನದಲ್ಲಿ ಹೇಳಿದ್ದಾರೆ.

ಹೊಳಕಲ್ಲುಬೆಟ್ಟ (ಶಿರಾ ತಾಲ್ಲೂಕು)ದಲ್ಲಿ ಇತಿಹಾಸ ಆರಂಭ ಕಾಲದ ಹಲವಾರು ಅವಶೇಷಗಳನ್ನು ಸಾಂಬ-ಶಿವಐಯ್ಯರ್ ಸಂಗ್ರಹಿಸಿ ಕೊಟ್ಟಿದನ್ನು ಫೂಟ್‌ರವರು (೧೯೧೬) ಕೂಲಂಕಷವಾಗಿ ಅಧ್ಯಯನ ನಡೆಸಿರುವರು. ಇದೇ ಸ್ಥಳ-ದಲ್ಲಿ ದೊರೆತ ಮತ್ತಷ್ಟು ಅವಶೇಷಗಳ ಬಗೆಗೆ ವಿವರಣೆಯನ್ನು ಎಂ.ಶೇಷಾದ್ರಿ (೧೯೬೧:೮-೧೪) ಯವರು ನೀಡಿರುವರು.

ಇತ್ತೀಚೆಗೆ ಎರಡು ನಿಲುಸುಗಲ್ಲುಗಳನ್ನು ಪರಮಶಿವಮೂರ್ತಿ(೧೯೯೪:೭೬-೭೮)ಯವರು ತುಮಕೂರು ತಾಲ್ಲೂಕು ಚಿನಗ ಗ್ರಾಮದಲ್ಲಿರುವ ಬಗ್ಗೆ ವರದಿ ಮಾಡಿರುವರು.

ಒಟ್ಟಾರೆ ಇದುವರೆಗಿನ ಅಧ್ಯಯನದಿಂದ ಬೆಳಕಿಗೆ ಬಂದಿರುವ ಅವಶೇಷಗಳನ್ನು ಕೋಷ್ಟಕ ೩.೧ ರಲ್ಲಿ ನೀಡಲಾಗಿದೆ.

**ತುಮಕೂರು ಜಿಲ್ಲಾ ಪ್ರದೇಶದ ಪ್ರಾಗಿತಿಹಾಸ**

ಕೋಷ್ಟಕ ಸಂಖ್ಯೆ ೩.೧

| ಕ್ರಮ ಸಂಖ್ಯೆ | ಸ್ಥಳ | ತಾಲ್ಲೂಕು | ಆದಿ ಹಳೆ ಶಿಲಾಯುಗ | ಮಧ್ಯ ಹಳೆ ಶಿಲಾಯುಗ | ಅಂತ್ಯ ಹಳೆ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಬೂದಿದಿಬ್ಬ | ಬೃಹತ್ ಶಿಲಾಯುಗ | ಇತಿಹಾಸ ಆರಂಭಕಾಲ |
|---|---|---|---|---|---|---|---|---|---|---|
| ೧. | ಕಣಿಕಲಬಂಡೆ | ಪಾವಗಡ | | | | | | | ✓ | |
| ೨. | ಕಿಬ್ಬನಹಳ್ಳಿ ಮತ್ತು ಬಿಳಿಗಿರಿ | ತಿಪಟೂರು | ✓ | ✓ | ✓ | ✓ | | | | |
| ೩. | ಕೀರಳಕಟ್ಟೆ | ತಿಪಟೂರು | | | | | | | ✓ | |
| ೪. | ಗಂಗ್ಲಾಹಳ್ಳಿ | ಕುಣಿಗಲ್ | | | | | ✓ | | | |
| ೫. | ಜಲಗಾರದಿಬ್ಬ | ತುಮಕೂರು | | | | | ✓ | | | |
| ೬. | ತಪ್ಪಗಾನದೊಡ್ಡಿ | ಪಾವಗಡ | | | | | | | ✓ | |
| ೭. | ನಾಗಲಾಪುರ | ಪಾವಗಡ | | | | | | ✓ | | |
| ೮. | ಪಳವಳ್ಳಿ | ಪಾವಗಡ | | | | | | | ✓ | |
| ೯. | ಬಸವನಬೆಟ್ಟ | ಪಾವಗಡ | | | | | | | ✓ | |
| ೧೦. | ಬೂದಿಕ್ಷೆ | ಕುಣಿಗಲ್ | | | | | ✓ | | | |
| ೧೧. | ಬೆಳ್ಳಿಬಟ್ಟಲಹಳ್ಳಿ | ತುಮಕೂರು | | | | | | | ✓ | |
| ೧೨. | ಮೀನಾಕ್ಷಯ್ಯ ಎಸ್ಟೇಟ್ | ತುಮಕೂರು | | | | ✓ | | | | |
| ೧೩. | ಯಲ್ಲಪ್ಪನಾಯಕನಹೊಸಕೋಟೆ | ಪಾವಗಡ | | | | | ✓ | | | |
| ೧೪. | ಹಿರೇಗುಂಡಗಲ್ಲು | ತುಮಕೂರು | | | | | | | ✓ | |
| ೧೫. | ಹೇರೂರು | ಕುಣಿಗಲ್ | | | | | ✓ | | | ✓ |
| ೧೬. | ಹೊಳಕಲ್‌ಬೆಟ್ಟ | ಶಿರಾ | | | | ✓ | | | | ✓ |
| | | ಒಟ್ಟು | ೧ | ೧ | ೧ | ೩ | ೫ | ೧ | ೭ | ೨ |

ಅಲ್ಪ ಪ್ರಮಾಣದ ಈ ಅಧ್ಯಯನಗಳಿಂದ ಎರಡು ಅಂಶಗಳು ಸ್ಪಷ್ಟವಾಗುತ್ತದೆ. ಮೊದಲನೆಯದಾಗಿ ಈ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ನೆಲೆಗಳ ಅಸ್ತಿತ್ವ ಇಷ್ಟೊಂದು ವಿರಳವಾಗಿರಲು ಸಾಧ್ಯವಿಲ್ಲ. ಇಂತಹ ನಿವೇಶನಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇರುವ ಸಾಧ್ಯತೆಯನ್ನು ಸೂಚಿಸುತ್ತವೆ. ಎರಡನೆಯದಾಗಿ ಈ ಪ್ರದೇಶವು ಯಾವುದೇ ರೀತಿಯ ಪ್ರಾಗೈತಿಹಾಸಿಕ ಸಂಸ್ಕೃತಿಗಳ ವೈಜ್ಞಾನಿಕ ಅಧ್ಯಯನಕ್ಕೆ ಒಳಪಟ್ಟಿಲ್ಲವೆಂಬುದು ತಿಳಿದು ಬರುತ್ತದೆ. ಜೊತೆಗೆ ತುಮಕೂರು ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಡೆದಿರುವ ವೈಜ್ಞಾನಿಕ ಅಧ್ಯಯನಗಳು ಈ ಪ್ರದೇಶದಲ್ಲಿಯೂ ಆ ಸಂಸ್ಕೃತಿಗಳು ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದಿರಬೇಕೆಂಬುದನ್ನೂ ಸೂಚಿಸುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದ ಭೌಗೋಳಿಕ ಲಕ್ಷಣವನ್ನು ಮೊದಲು ಅವಲೋಕಿಸೋಣ. ಡಾ.ಟಿ.ಸಿ.ದೇವರಾಜು ರವರು ದೊರಕಿಸಿರುವ ತುಮಕೂರು ಜಿಲ್ಲೆಯ ಭೂವಿಜ್ಞಾನದ ವರದಿಯನ್ನು ಅನುಬಂಧ ೧ ರಲ್ಲಿ ಕೊಡಲಾಗಿದೆ.

# ತುಮಕೂರು ಜಿಲ್ಲೆಯ ಭೂವಿಜ್ಞಾನದ ಭೂನಕ್ಷೆ

(ಭಾರತೀಯ ಭೂ ವಿಜ್ಞಾನ ಸರ್ವೇಕ್ಷಣಾಲಯವು ೧೯೮೨ ರಲ್ಲಿ ಸಿದ್ಧಗೊಳಿಸಿದ ಭೂನಕ್ಷೆಯನ್ವಯದಂತೆ ಸಿದ್ಧಗೊಳಿಸಿದೆ)



## ಭೌಗೋಳಿಕ ಲಕ್ಷಣ

ಪ್ರಸ್ತುತ ಅಧ್ಯಯನದ ಕ್ಷೇತ್ರವಾದ ತುಮಕೂರು ಜಿಲ್ಲಾ ಪ್ರದೇಶವು ಕರ್ನಾಟಕ ರಾಜ್ಯದ ಬಯಲು ಸೀಮೆಯ ಹಾಗೂ ಹಳೆ ಮೈಸೂರು ಪ್ರಾಂತ್ಯದ ಒಂದು ಜಿಲ್ಲೆ. ಇತಿಹಾಸಾಧ್ಯಯನಗಳ ದೃಷ್ಟಿಯಿಂದ ದಕ್ಷಿಣ ಕರ್ನಾಟಕದ ಒಟ್ಟು ಜಿಲ್ಲೆ-ಗಳ ನಡುವಣ ಕೇಂದ್ರ ಸ್ಥಳದಲ್ಲಿರುವ ಇದರ ಪ್ರಾಕೃತಿಕ ಸಂಪತ್ತು ಸ್ವಲ್ಪಮಟ್ಟಿಗೆ ವಿಶಿಷ್ಟವಾಗಿದೆ. ಅಲ್ಲಲ್ಲಿ ಇರುವ ಬೆಟ್ಟ ಗುಡ್ಡಗ-ಳು, ಎತ್ತರವಾದ ಸಮತಲ ಪ್ರದೇಶ, ವಿರಳ ಅರಣ್ಯ ಪ್ರದೇಶ ಮತ್ತು ನೆಡುತೋಪುಗಳನ್ನೊಳಗೊಂಡು ತನ್ನದೇ ಆದ ವೈವಿ-ಧ್ಯಮಯ ಪ್ರಾಕೃತಿಕ ಲಕ್ಷಣ ರೂಪುಗೊಳ್ಳಲು ಕಾರಣವಾಗಿದೆ.

ಉತ್ತರ ಅಕ್ಷಾಂಶ ೧೨೦° ೪೫' ರಿಂದ ೧೪°೨೦' ಮತ್ತು ಪೂರ್ವ ರೇಖಾಂಶ ೭೬° ೨೦' ರಿಂದ ೭೭° ೩೧' ರ ನಡುವೆ ನೆಲೆಗೊಂಡಿರುವ ಈ ಜಿಲ್ಲೆಯ ಒಟ್ಟು ವಿಸ್ತೀರ್ಣ ೧೦, ೫೫೦. ೯ ಚದರ ಕಿ. ಮೀ.ಗಳು. ಉತ್ತರ-ದಕ್ಷಿಣ-ವಾಗಿ ಅತಿ ಹೆಚ್ಚು ಉದ್ದ ಭಾಗವು ೧೬೪.೧೧ ಕಿ.ಮೀ. ಮತ್ತು ಪೂರ್ವ-ಪಶ್ಚಿಮವಾಗಿ ಪರಮಾವಧಿ ಅಗಲ ೧೦೭.೮ ಕಿ.ಮೀ.ಇದೆ(ಅಭಿಶಂಕರ್(ಸಂ): ೧೯೬೯;೧).

ಈ ಪ್ರದೇಶವು ಉತ್ತರ ಮತ್ತು ಈಶಾನ್ಯದಲ್ಲಿ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ, ವಾಯುವ್ಯದಲ್ಲಿ ಚಿತ್ರ-ದುರ್ಗ ಜಿಲ್ಲೆ, ಪಶ್ಚಿಮದಲ್ಲಿ ಚಿಕ್ಕಮಗಳೂರು ಜಿಲ್ಲೆ, ನೈಋತ್ಯದಲ್ಲಿ ಹಾಸನ ಜಿಲ್ಲೆ, ದಕ್ಷಿಣದಲ್ಲಿ ಮಂಡ್ಯ ಜಿಲ್ಲೆ, ಆಗ್ನೇಯದಲ್ಲಿ ಬೆಂಗಳೂರು ಜಿಲ್ಲೆ ಮತ್ತು ಪೂರ್ವದಲ್ಲಿ ಕೋಲಾರ ಜಿಲ್ಲೆಗಳಿಂದ ಆವೃತವಾಗಿದೆ.

ಉತ್ತರ ಭಾಗದಲ್ಲಿ ತುಂಗಾಭದ್ರಾ ನದಿಯ ಉಪನದಿಯಾದ ಪೆನ್ನಾರ್ ಅಥವಾ ಉತ್ತರ ಪಿನಾಕಿನೀ, ದಕ್ಷಿ-ಣದ ತುದಿಯಲ್ಲಿ ಕಾವೇರೀ ನದಿಯ ಉಪನದಿಯಾದ ಶಿಂಷಾ ನದಿಯು ಹರಿಯುತ್ತಿದ್ದು, ನಡುವಿನ ಈ ಪ್ರದೇಶವು ಹಲವು ಮಾದರಿಯ ಭೂಲಕ್ಷಣ, ಭೂಗರ್ಭ ಸಂಪತ್ತು, ಅರಣ್ಯ ಮತ್ತು ಪ್ರಾಣಿ ಸಂಪತ್ತು, ನೀರಿನ ಆಸರೆ, ಇವುಗಳನ್ನನುಸರಿಸಿದ ವಿಶಿಷ್ಟ ಜೀವ ಸಂಕುಲಗಳನ್ನು ಹೊಂದಿದೆ. ಇಂತಹ ಪ್ರಾಕೃತಿಕ ಪರಿಸರಕ್ಕೆ ಹೊಂದಿಕೊಂಡು ಕಾಲಮಾನದುದ್ದಕ್ಕೂ ಮಾನವನು ತನ್ನ ಸುಸಂಸ್ಕೃತ ಜೀವನವನ್ನು ರೂಪಿಸಿಕೊಂಡಿರುವುದನ್ನು ಕಾಣಬಹುದು. ಮಾನವನ ಉಳಿವಿಗೆ ಈ ಪ್ರಕೃತಿ ಸಂಪತ್ತು ಹೇಗೆ ಅವಶ್ಯವಿದ್ದಿತು, ಹಾಗು ಅವುಗಳನ್ನು ಹೇಗೆ ತನ್ನ ಅವಶ್ಯಕತೆಯಂತೆ ಬಳಸಿಕೊಂಡನೆಂಬುದನ್ನು ಅವಲೋಕಿಸೋಣ.

## ಮೇಲ್ಮೈಲಕ್ಷಣ

ತುಮಕೂರು ಜಿಲ್ಲಾ ಭೂ ಭಾಗವು ವೈವಿಧ್ಯಮಯ ಪ್ರಾಕೃತಿಕ ಸಂಪತ್ತನ್ನು ಹೊಂದಿದೆ. ಅವುಗಳಲ್ಲಿ ನೈಸರ್ಗಿಕ ಸಂಪತ್ತು ಅಮೂಲ್ಯವಾದುದು ಎಂದು ಹೇಳಬಹುದು. ಈ ಪ್ರದೇಶದ ಭೂ ಸಂಪತ್ತಿನಲ್ಲಿ ಸಹಜವಾಗಿ ದೊರೆಯುವ ವಿವಿಧ ಮಾದರಿಯ ಕಲ್ಲು ಮತ್ತು ಮಣ್ಣುಗಳು, ಇಲ್ಲಿರುವ ಹಲವು ಬೆಟ್ಟಗುಡ್ಡಗಳು, ಈ ಪ್ರದೇಶದಲ್ಲಿ ಹರಿಯುವ ಹಲವಾರು ನದಿ-ಗಳು ಮತ್ತು ತೊರೆಗಳು ಅತಿ ಪ್ರಮುಖವಾದವುಗಳಾಗಿವೆ.

**ಭೂ ಸಂಪತ್ತು**: ಜಿಲ್ಲೆಯ ದಕ್ಷಿಣ ಹಾಗು ಪಶ್ಚಿಮ ಭಾಗ ಕೆಂಪು ಮಣ್ಣನ್ನು ಒಳಗೊಂಡಿದ್ದರೆ, ಪೂರ್ವ ವಲಯವು ಮರಳು ಮಿಶ್ರಿತ ಕೆಂಪು ಮಣ್ಣನ್ನು ಹೊಂದಿದೆ. ಶಿರಾ ಮತ್ತು ಪಾವಗಡ ತಾಲ್ಲೂಕುಗಳ ಉತ್ತರ ಭಾಗವು ಕಪ್ಪು ಬಣ್ಣದ ಎರೆ ಜಾತಿಯ ಮಣ್ಣನ್ನು ಹೊಂದಿ ಕೃಷಿಗೆ ಉಪಯುಕ್ತವಾಗಿದೆ. ಚಿಕ್ಕನಾಯಕನಹಳ್ಳಿ ಮತ್ತು ತುರುವೇಕೆರೆ ತಾಲ್ಲೂಕುಗಳು ಕ್ವಾರ್ಟ್ಸ್‌ಕಲ್ಲಿನ ಹರಳುಗಳಿಂದೊಳಗೊಂಡ ಭೂಮಿಯನ್ನು ಹೊಂದಿದ್ದು, ಇಲ್ಲಿನ ಶಿಲಾಖಂಡಗಳು ಚಿತ್ರದುರ್ಗ ಹಾಗು ಧಾರವಾಡ ಜಿಲ್ಲೆಯಲ್ಲಿನ ಬಂಡೆಗಲ್ಲಿನ ಗುಂಪಿಗೆ ಸೇರಿದ್ದಾಗಿವೆ. ಇವು ಪ್ರಾಚೀನ ಅಗ್ನಿಶಿಲೆಯ ಗುಂಪಿಗೆ ಸೇರಿದುದೆಂದು ತಿಳಿದು ಬರುತ್ತದೆ. ಈ ಪದರ ಶಿಲೆಗಳಲ್ಲಿ ಅನೇಕ ಬಗೆಯ ಸಮ್ಮಿಶ್ರ ಲೋಹ ಪದರಗಳಿವೆ ಎಂದು ಸಮೀಕ್ಷಿಸಲಾಗಿದೆ.

ಚಿಕ್ಕನಾಯಕನಹಳ್ಳಿಯ ಪೂರ್ವಕ್ಕೆ ವ್ಯಾಪಿಸಿರುವ ಬೆಟ್ಟಗಳ ಸಾಲಿನಲ್ಲಿರುವ ಕಲ್ಲು ವಿಶಿಷ್ಟ ಜಾತಿಯದ್ದಾಗಿದೆ. ಈ ಕಲ್ಲಿನಲ್ಲಿ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರುಯುಕ್ತವಾಗಿರುವುದನ್ನು ಕಾಣಬಹುದು. ಇನ್ನೊಂದು ಶಿಲಾಶ್ರೇಣಿಯ ಪದರವು ಮೃದುವಾದ ಕಲ್ಲನ್ನು ಹೊಂದಿ ಬಳಪದ ಕಲ್ಲು ಮತ್ತು ಸ್ಲೇಟು ಕಲ್ಲಿನ ಜಾತಿಗೆ ಸೇರಿದವುಗಳಾಗಿವೆ. ಇದೇ ಜಾತಿಯ ಒಂದು ಪದರವು ಬಾಣಸಂದ್ರದ ಸಮೀಪದಲ್ಲಿ ಹರಡಿರುವುದನ್ನು ಗುರುತಿಸಲಾಗಿದೆ. ಇದೇ ಶಿಲಾಪದರವು ಕೆಲವು ಸ್ಥಳಗಳಲ್ಲಿ ಬಿಳಿ ಬಣ್ಣದ ಮಣ್ಣನ್ನು ಹೊಂದಿದೆ. ಈ ಬಿಳಿ ಮಣ್ಣು, ಭೂಗರ್ಭದ ಶಾಖದಿಂದಾಗಿ ವಿಭೂತಿ ಜಾತಿಯ ಮಣ್ಣಾಗಿರುವುದನ್ನು ತುಮಕೂರು ತಾಲ್ಲೂಕಿನ ಹೊನ್ನುಡಿಕೆ ಮತ್ತು ಮುಳುಕುಂಟೆ ಪ್ರದೇಶದಲ್ಲಿ ಕಾಣಬಹುದಾಗಿದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಪ್ರದೇಶದಲ್ಲಿ ಸುಣ್ಣಕಲ್ಲಾಗಿರುವುದನ್ನು ನೋಡಬಹುದಾಗಿದೆ. ಖನಿಜ ಮಿಶ್ರಿತ ಕಂದು ಬಣ್ಣದ ಕಲ್ಲುಗಳನ್ನು ಬೆಳ್ಳಾರ, ಬುಕ್ಕಾಪಟ್ಟ ಮತ್ತು ಮಾನಂಗಿಗಳಲ್ಲಿ ಕಾಣಬಹುದು. ತಿಪಟೂರು ಮತ್ತು ಗುಬ್ಬಿ ತಾಲ್ಲೂಕು ಪ್ರದೇಶಗಳಲ್ಲಿ ಸುಣ್ಣಕಲ್ಲು ಮತ್ತು ಜೇಡಿ ಮಣ್ಣು ವಿಸ್ತಾರವಾಗಿ ಹರಡಿದ್ದು ಸಿಮೆಂಟ್ ತಯಾರಿಕೆಗೆ ಒಳ್ಳೆಯ ಕಚ್ಚಾ ವಸ್ತುವಾಗಿ ಉಪಯೋಗಿಸಲಾಗುತ್ತಿದೆ.

ತುರುವೇಕೆರೆ ತಾಲ್ಲೂಕು ಪ್ರದೇಶದಲ್ಲಿ ಸುಮಾರು ತೊಂಬತ್ತು ಮೀಟರ್ ಅಗಲ ಮತ್ತು ಎಂಟು ಮೀಟರ್ ಉದ್ದ ಪ್ರದೇಶದಲ್ಲಿ ಹರಡಿರುವ ಕರೀಕಲ್ಲು ಜಿಲ್ಲೆಯ ಒಂದು ವಿಶಿಷ್ಟ ಜಾತಿಯ ಕಲ್ಲಾಗಿದೆ. ಬೆಣಚು ಜಾತಿಯ ಕಪ್ಪು ಬಣ್ಣದ ಗಡುಸು ಶಿಲಾಕಣಗಳನ್ನು ಈ ಕರೀಕಲ್ಲು ಹೊಂದಿದೆ. ಭೂಮಿಯ ಮೇಲ್ಮೈಯಲ್ಲಿರುವ ಇಂತಹ ಕಲ್ಲು ಗಾಳಿ ಮತ್ತು ಮಳೆಗೆ ಸಿಲುಕಿ ಲೋಹಾಂಶವನ್ನು ಕಳೆದುಕೊಂಡು ಸವಕಲಾಗಿರುವುದನ್ನು ಕಾಣಬಹುದಾಗಿದೆ. ಆದರೆ ಭೂಗರ್ಭದಲ್ಲಿರುವ ಇದೇಕಲ್ಲು ಕೆತ್ತನೆಗೆ ಬಹು ಉಪಯುಕ್ತವೆಂದು ತಿಳಿದು ಬಂದಿದೆ.

ಜಿಲ್ಲೆಯ ಅನೇಕ ಭಾಗಗಳಲ್ಲಿ ಬೆಟ್ಟದ ಸಾಲುಗಳಲ್ಲಿ ಹಾಸುಗಲ್ಲುಗಳನ್ನು ತೆಗೆಯುತ್ತಾರೆ. ಈ ಬಗೆಯ ಕಲ್ಲು ಬಿಳುಪಾಗಿರುತ್ತದೆ. ಶಿರಾ ತಾಲ್ಲೂಕಿನ ಮದ್ದಕ್ಕನಹಳ್ಳಿ ಪ್ರದೇಶದಲ್ಲಿನ ಬಿಳೀಬಣ್ಣದ ಹಾಸುಗಲ್ಲು ಮೃದುವಾಗಿಯೂ ಮತ್ತು ಆಕರ್ಷಕವಾಗಿಯೂ ಇದ್ದು ಕ್ಲೋಸ್‌ಪೇಟೆ ಗ್ರಾನೈಟ್ ಜಾತಿಯ ಹರಳು ಮಿಶ್ರಿತ ಹೊಳಪುಕಲ್ಲಾಗಿದೆ. ಇಂತಹ ಕಲ್ಲು ವಿದೇಶ-ಗಳಿಗೆ ರಫ್ತಾಗುತ್ತಿದೆ.

**ಬೆಟ್ಟಗುಡ್ಡಗಳು** : ತುಮಕೂರು ಜಿಲ್ಲೆಯ ಪೂರ್ವ ಮತ್ತು ಉತ್ತರ ಭಾಗಗಳಲ್ಲಿ ಬೆಟ್ಟಗುಡ್ಡಗಳ ಶ್ರೇಣಿಗಳನ್ನು ಕಾಣಬಹುದು. ಈ ಬೆಟ್ಟಗುಡ್ಡಗಳು ಹಲವು ಭಾಗಗಳಲ್ಲಿ ಹಿರಿದಾದ ಏಕಶಿಲಾ ಬಂಡೆಗಳನ್ನು ಹೊಂದಿದೆ. ಅಂತಹ ಒಂದು ಬೃಹತ್ ಅಖಂಡ ಶಿಲೆಯು ಮಧುಗಿರಿಯಲ್ಲಿದ್ದು ಇದು ಏಷ್ಯದಲ್ಲಿಯೇ ಅತಿ ದೊಡ್ಡದೆಂದು ಪ್ರಸಿದ್ಧವಾಗಿದೆ. ಬಂಡೆಗಳುಳ್ಳ ಇಂತಹ ಬೆಟ್ಟಗಳಲ್ಲಿ ಅಲ್ಲಲ್ಲಿ ಸ್ವಾಭಾವಿಕ ಗುಹೆಗಳನ್ನು ಕಾಣಬಹುದು. ಈ ಗುಹೆಗಳು ಆದಿಮಾನವನ ನಿವಾಸಕ್ಕೆ ಯೋಗ್ಯ ಸ್ಥಳವಾಗಿದ್ದಿ-ತೆಂಬ ಅಂಶ ಅಲ್ಲಿ ದೊರಕುವ ಅವಶೇಷಗಳಿಂದ ದೃಢಪಟ್ಟಿದೆ.

ಜಿಲ್ಲೆಯ ಪೂರ್ವಭಾಗದ ಬೆಟ್ಟದಸಾಲು ಹಲವಾರು ಬಗೆಯ ಖನಿಜ ಸಂಪತ್ತನ್ನು ಹೊಂದಿದೆ. ಪಶ್ಚಿಮ ಭಾಗದ ಬೆಟ್ಟದಸಾಲು ಗ್ರಾನೈಟ್ ಪದರ ಶಿಲೆಗಳ ಬೆಟ್ಟವಾಗಿದ್ದು ಉತ್ತಮವಾದ ಬಿಳಿ ಗ್ರಾನೈಟ್ ಹೊಂದಿ ಸುಮಾರು ಮೂವತ್ತು ಕಿ.ಮೀ. ಉತ್ತರ ದಕ್ಷಿಣವಾಗಿ ವ್ಯಾಪಿಸಿದೆ. ಈ ಶಿಲಾರಾಶಿಯ ಬೆಟ್ಟಗಳು, ತುಮಕೂರು, ಕೊರಟಗೆರೆ, ಮಧುಗಿರಿ, ಶಿರಾ ಮತ್ತು ಪಾವಗಡ ತಾಲ್ಲೂಕುಗಳಲ್ಲಿದ್ದು ಇಂತಹ ಪ್ರದೇಶ ಮಾನವನ ಜೀವನದ ಆರಂಭದ ಕಾಲದ ಆಸರೆಯ ಸ್ಥಳಗ-ಳಾಗಿದ್ದುವೆಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ. ಜಿಲ್ಲೆಯಲ್ಲಿ ಸುಮಾರು ಹದಿನೆಂಟು ಬೆಟ್ಟಗುಡ್ಡಗಳಿದ್ದು ಅವುಗಳಲ್ಲಿ ಮಧುಗಿರಿ ದುರ್ಗವು ಅತಿ ಎತ್ತರ (೧೪೨೭.೯೦ಮೀ.)ವಾಗಿದ್ದು ಮಂದರಗಿರಿ ಬೆಟ್ಟ (೯೩೦ಮೀ)ಅತಿ ಚಿಕ್ಕದ್ದಾಗದೆ.

ವಿಭಿನ್ನ ಪ್ರಾಕೃತಿಕ ಪರಿಸರಗಳನ್ನು ನೀಡಿ ಪ್ರಾಚೀನ ಮಾನವನಿಂದ ಹಿಡಿದು ಇಂದಿನವರೆಗೂ ವಿಶೇಷ ಪ್ರಭಾವ ಬೀರಿವೆ. ಉದಾಹರಣೆಗಾಗಿ ಉತ್ತರದ ಪೆನ್ನಾರ್ ನದೀ ಪಾತ್ರದಲ್ಲಿರುವ ಭೂ ಪ್ರದೇಶದಲ್ಲಿ ನೂತನ ಶಿಲಾಯುಗದ ಮತ್ತು ಬೃಹತ್ ಶಿಲಾಯುಗದ ನೆಲೆಗಳ ಸಾಂದ್ರತೆ ಹೆಚ್ಚಾಗಿವೆ. ಅಂದಿನ ಕಾಲದಲ್ಲಿ ತನ್ನ ಜೀವಿತದ ಅಲೆದಾಟದ ಹಂತವನ್ನು ಮುಗಿಸಿ ಒಂದು ಸ್ಥಳದಲ್ಲಿ ಸ್ಥಿರವಾಗಿ ಕೆಲವು ಕಾಲ ಇರಲು ಮಾನವ ಪ್ರಯತ್ನಿಸುತ್ತಿದ್ದಾಗ ಅವನ ವಾಸಕ್ಕೆ ಯೋಗ್ಯವಾದ ಪರಿಸರವನ್ನು ಹೆಚ್ಚು ಉನ್ನತವಲ್ಲದ ಹಾಗು ಕ್ಲಿಷ್ಟವಲ್ಲದ ಗ್ರಾನೈಟ್ ಶಿಲೆಯ ಇಳಿಜಾರು ಗುಡ್ಡಗಳಲ್ಲಿ ನೈಸರ್ಗಿಕವಾಗಿ ಸೃಷ್ಟಿಸಲ್ಪ-ಟ್ಟಿರುವ ನೀರಿನ ಒರತೆಗಳು, ಹಳ್ಳಗಳು ಮತ್ತು ಕಿರಿದಾದ ಕಣಿವೆಗಳ ಬಳಿಯಲ್ಲಿ ಕಂಡುಕೊಂಡನು. ಬಹು ಮುಖ್ಯವಾದ ಇಂತಹ ನೆಲೆಗಳನ್ನು ಪ್ರಸ್ತುತ ಪುರಾತತ್ವ ಅನ್ವೇಷಣೆಯಲ್ಲಿ ಪಾವಗಡ ತಾಲ್ಲೂಕಿನ ಯಲ್ಲಪ್ಪನಾಯಕನ ಹೊಸಕೋಟೆ(ನೂತನ ಶಿಲಾಯುಗ ) ಮತ್ತು ಕೊರಟಗೆರೆ ತಾಲ್ಲೂಕು ಇರಕಸಂದ್ರಕಾಲೋನಿ (ಬೃಹತ್ ಶಿಲಾಗೋರಿಗಳು) ಯಲ್ಲಿ ಕಾಣಬಹುದು. ಇದೇರೀತಿ ಈ ಜಿಲ್ಲೆಯ ಹಲವು ಪ್ರದೇಶಗಳು ಪ್ರಾಕೃತಿಕವಾಗಿ ತಮ್ಮವೇ ಆದ ವಿಭಿನ್ನ ಘಟ್ಟಗಳಲ್ಲಿ ಇರುವುದರಿಂದ ವಿಶಿಷ್ಟ ಹವಾಗುಣವನ್ನು ಹೊಂದಿದ್ದು ಮಾನವ ಜೀವನ ಕ್ರಮದಲ್ಲಿ ಪ್ರಮುಖವಾಗಿರುವುದನ್ನು ಗುರುತಿಸಬಹುದು.

**ಜಲ ಸಂಪತ್ತು** : ತುಮಕೂರು ಜಿಲ್ಲಾ ಪ್ರದೇಶ ಪ್ರಮುಖವಾಗಿ ಉತ್ತರ ಪೆನ್ನಾರ್, ಕೃಷ್ಣಾ, ಕಾವೇರಿನದೀ ಪಾತ್ರವಾಗಿದ್ದು ಈ ಭಾಗದಲ್ಲಿ ಹರಿವ ನದೀ ಅಥವಾ ಹೊಳೆಗಳು ಈ ಮುಖ್ಯ ನದಿಗಳನ್ನು ಸೇರಿಕೊಳ್ಳುವುದರಿಂದ ಈ ಜಿಲ್ಲಾ ಪ್ರದೇಶದ ಒಟ್ಟು ಭೂ ಭಾಗದಲ್ಲಿ ಶೇ ೩೭.೧ ನ್ನು ಕೃಷ್ಣಾ ನದೀ ಪಾತ್ರವೆಂದು, ಶೇ ೩೫.೪೦ಭಾಗವನ್ನು ಕಾವೇರಿ ನದೀ ಪಾತ್ರವೆಂದು ಉಳಿದ ಭಾಗ ೨೭.೫ ನ್ನು ಉತ್ತರ ಪೆನ್ನಾರ್ ನದೀ ಪಾತ್ರಕ್ಕೆ ಸೇರಿದುದಾಗಿದೆಯೆಂದು ತಿಳಿಯಲಾಗಿದೆ. ಈ ಪ್ರದೇಶದಲ್ಲಿ ಜೀವನದಿಗಳಾವುವೂ ಇಲ್ಲ. ಕೆಲವು ನದಿಗಳು ಈ ಪ್ರದೇಶದ ಮೂಲಕ ಹಾದು ಹೋಗುತ್ತವೆ. ಮತ್ತೆ ಕೆಲವು ನದೀ ಮತ್ತು ಹೊಳೆಗಳು ಬೆಟ್ಟಗುಡ್ಡಗಳಲ್ಲಿ ಹುಟ್ಟಿ ಬಯಲು ಪ್ರದೇಶಗಳಲ್ಲಿ ಹರಿಯುತ್ತವೆ. ಬೇಸಿಗೆ ಸಮಯದಲ್ಲಿ ಸುಳಿವು ಸಿಗದ ಈ ನದಿ ಅಥವಾ ಹೊಳೆಗಳು ಹಲವಾರು ಕೆರೆಗಳಿಗೆ ನೀರೊದಗಿಸುತ್ತವೆ. ಇಲ್ಲಿ ಹರಿಯುವ ಮುಖ್ಯ ನದಿಗಳೆಂದರೆ ಶಿಂಷಾ ಮತ್ತು ಜಯಮಂಗಲಾ.

**ಶಿಂಷಾ ನದಿ**: ಶಿಂಷಾ ನದಿಯು ದೇವರಾಯನದುರ್ಗದ ದಕ್ಷಿಣ ಭಾಗದಲ್ಲಿ ಹುಟ್ಟುವ ಒಂದು ಮುಖ್ಯನದಿಯಾಗಿದೆ. ತುಮಕೂರು ತಾಲ್ಲೂಕಿನ ೨೮.೧೫ಕಿ.ಮೀ. ದೂರ ಹರಿದು ನೈಋತ್ಯ ಭಾಗದಲ್ಲಿ ಗುಬ್ಬಿ ತಾಲ್ಲೂಕನ್ನು ಪ್ರವೇಶಿಸಿ ೩೩.೭೮ಕಿ. ಮೀ.ಗಳಷ್ಟು ದೂರ ಹರಿಯುತ್ತದೆ. ಕಡಬ ಕೆರೆಯನ್ನು ಪ್ರವೇಶಿಸಿ ಅಲ್ಲಿಂದ ಮುಂದುವರಿದು ದಕ್ಷಿಣಾಭಿಮುಖವಾಗಿ ಹರಿದು ಕಲ್ಲೂರಿನ ಸಮೀಪ ನಾಗಾಹೊಳೆಯನ್ನು ಸೇರಿಕೊಳ್ಳುತ್ತದೆ. ನಾಗಾ ಹೊಳೆಯು ತುರುವೇಕೆರೆ ತಾಲ್ಲೂಕಿನ ಭೂಭಾಗಕ್ಕೆ

ನೀರುಣಿಸುವ ಮುಖ್ಯ ಹೊಳೆಯಾಗಿದೆ. ಶಿಂಷಾ ನದಿಯು ತುರುವೇಕೆರೆ ತಾಲ್ಲೂಕಿನಲ್ಲಿ ೧೩.೭೭ಕಿ.ಮೀ.ಹರಿದು ಮುಂದೆ ಕುಣಿಗಲ್ ತಾಲ್ಲೂಕಿನಲ್ಲಿ ೨೪.೧೩ಕಿ.ಮೀ. ದೂರ ಹರಿದು ತನ್ನ ಪಾತ್ರವನ್ನು ವಿಸ್ತರಿಸಿಕೊಳ್ಳುತ್ತಾ ಮಂಡ್ಯ ಜಿಲ್ಲೆಯಲ್ಲಿ ಕಾವೇರೀ ನದಿಯನ್ನು ಸೇರುತ್ತದೆ. ಶಿಂಷಾ ನದಿಗೆ ಮರ್ಕೋನಹಳ್ಳಿ (ಕುಣಿಗಲ್ ತಾಲ್ಲೂಕು)ಯಲ್ಲಿ ಅಣೆಕಟ್ಟೆಯನ್ನು ನಿರ್ಮಿಸಲಾಗಿದೆ. ಇದರಿಂದ ಸುಮಾರು ೧೧,೦೦೦ಎಕರೆ ಭೂಮಿಗೆ ನೀರೊದಗುತ್ತದೆ.

**ಜಯಮಂಗಲಾ**: ಜಯಾ ಮತ್ತು ಮಂಗಲಾ ಎಂಬ ಎರಡು ನದಿಗಳು ಸೇರಿ ಜಯಮಂಗಲಾ ಆಗಿದೆ. ದೇವರಾಯನ ದುರ್ಗದ ಉತ್ತರ ಭಾಗದಲ್ಲಿ ಈ ಎರಡೂ ನದಿಗಳೂ ಹುಟ್ಟಿ ಹರಿಯುತ್ತವೆ. ಇಳಿಜಾರಿನಲ್ಲಿರುವ ಒಂದು ಕೊಳವೇ ಮಂಗಲಾ ನದಿಯ ಮೂಲವೆನ್ನಲಾಗಿದೆ. ದುರ್ಗದ ಮೇಲ್ಭಾಗದಲ್ಲಿರುವ ಜಯತೀರ್ಥವೇ ಜಯ ನದಿಯ ಮೂಲಸ್ಥಾನ. ಈ ಎರಡೂ ನದಿಗಳೂ ತುಮಕೂರು ತಾಲ್ಲೂಕಿನಲ್ಲಿ ೧೨.೮೭ಕಿ.ಮೀ. ದೂರಹರಿಯುತ್ತದೆ. ಕೊರಟಗೆರೆ ತಾಲ್ಲೂಕಿನ ಇರಕಸಂದ್ರಕಾಲೋನಿಯ ಮೂಲಕ ಹರಿದು, ಹೊಳವನಹಳ್ಳಿ ಪೂರ್ವ ಭಾಗದಿಂದ ಬರುವ ಗರುಡಾಚಲ ನದಿಯು ಜಯಮಂಗಲಾ ನದಿಯನ್ನು ಸೇರಿಕೊಳ್ಳುತ್ತದೆ. ಮತ್ತೆ ಇದೇ ತಾಲ್ಲೂಕಿನ ರಾಂಪುರದ ಬಳಿ ಪಶ್ಚಿಮದಕಡೆಯಿಂದ ಹರಿದು ಬರುವ ಸುವರ್ಣಮುಖಿ ನದಿಯು ಜಯಮಂಗಲಾ ನದಿಯನ್ನು ಕೂಡಿಕೊಳ್ಳುತ್ತದೆ. ಕೊರಟಗೆರೆ ತಾಲ್ಲೂಕಿನಲ್ಲಿ ೨೪ ಕಿ.ಮೀ. ಹರಿದು ಮಧುಗಿರಿ ತಾಲ್ಲೂಕನ್ನು ಪ್ರವೇಶಿಸಿ ಪೂರ್ವಾಭಿಮುಖವಾಗಿ ಹರಿದು ಮುಂದೆ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಪರಗಿಯ ಸಮೀಪ ಉತ್ತರ ಪಿನಾಕಿನಿ ಅಥವಾ ಪೆನ್ನಾರ್ ನದಿಯೊಡನೆ ಬೆರೆಯುತ್ತದೆ.

**ಸುವರ್ಣಮುಖಿ**: ಸುವರ್ಣಮುಖಿ ನದಿಯು ಚನ್ನರಾಯನದುರ್ಗ (ಕೊರಟಗೆರೆ ತಾಲ್ಲೂಕು)ದಲ್ಲಿ ಒಂದು ತೊರೆಯಾಗಿ ಆರಂಭವಾಗಿ ಆಗ್ನೇಯಕ್ಕೆ ಹರಿದು ಮತ್ತೆ ಈಶಾನ್ಯಕ್ಕೆ ತಿರುಗಿ ಕೊರಟಗೆರೆಯಲ್ಲಿ ೨೪ಕಿ.ಮೀ. ಕ್ರಮಿಸಿ ಜಯಮಂಗಲಾ ನದಿಯನ್ನು ಕೂಡಿಕೊಳ್ಳುತ್ತದೆ. ೧೮೮೮-೯೨ರಲ್ಲಿ ಈ ನದಿಗೆ ಒಂದು ಅಡ್ಡಕಟ್ಟೆಯನ್ನು ಕಟ್ಟಿ ೧೪೦೦ ಎಕರೆ ಪ್ರದೇಶಕ್ಕಾಗುವಷ್ಟು ನೀರನ್ನು ಕ್ರೋಢೀಕರಿಸಿ ಕೊಳ್ಳಲಾಗುತ್ತಿದೆ.

**ಗರುಡಾಚಲ**: ದೇವರಾಯನದುರ್ಗದ ಆಗ್ನೇಯ ಬೆಟ್ಟದ ಸಾಲಿನಲ್ಲಿ ಹುಟ್ಟಿ ಉತ್ತರಕ್ಕೆ ಕೊರಟಗೆರೆ ಮೂಲಕ ಹರಿದು ಜಯಮಂಗಲಾ ನದಿಯೊಂದಿಗೆ ಹೊಳವನಹಳ್ಳಿಯಲ್ಲಿ ಕೂಡಿಕೊಳ್ಳುತ್ತದೆ.

**ಉತ್ತರ ಪಿನಾಕಿನಿ ಅಥವಾ ಉತ್ತರ ಪೆನ್ನಾರ್**: ಉತ್ತರ ಪಿನಾಕಿನಿ ನದಿಯು ಕೋಲಾರ ಜಿಲ್ಲೆಯ ನಂದಿ ಬೆಟ್ಟದ ಭಾಗದ

ಚನ್ನಕೇಶವ ಬೆಟ್ಟದಲ್ಲಿ ಹುಟ್ಟುತ್ತದೆ. ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ ಹರಿದು ಈ ಪ್ರದೇಶದ ಮುಕ್ಕಾಲುಭಾಗ ಈ ನದೀ ಪಾತ್ರಕ್ಕೆ ಒಳಗೊಂಡಿದೆ. ಪಾವಗಡ ತಾಲ್ಲೂಕಿನ ಪೆಂಡ್ಲಜೀವಿ ಗ್ರಾಮದ ಸಮೀಪ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಕಡೆಗೆ ಹಾದು ಹೋಗುತ್ತದೆ.

**ಕುಮುದ್ವತಿ**: ಕುಂದರ್ ಅಥವಾ ಕುಮುದ್ವತಿ ನದಿಯು ಬೆಂಗಳೂರು ಜಿಲ್ಲೆ ದೊಡ್ಡಬಳ್ಳಾಪುರ ತಾಲ್ಲೂಕಿನ ಮಾಕಳಿದುರ್ಗ ಪ್ರದೇಶದಲ್ಲಿ ಸಣ್ಣ ತೊರೆಯಾಗಿ ಜನ್ಮ ತಳೆದು ಬೆಂಗಳೂರು ಜಿಲ್ಲೆಯಲ್ಲಿ ಉತ್ತರಕ್ಕೆ ಹರಿದು ನಂತರ ಗೌರಿಬಿದನೂರು ತಾಲ್ಲೂಕಿನಲ್ಲೂ, ತುಮಕೂರುಜಿಲ್ಲೆ ಮಧುಗಿರಿ ತಾಲ್ಲೂಕಿನಲ್ಲಿಯೂ ಪ್ರವಹಿಸಿ ರಾಜ್ಯದ ಗಡಿ ಪ್ರದೇಶದಲ್ಲಿ ಪೆನ್ನಾರ್ ನದಿಯನ್ನು ಸೇರಿಕೊಳ್ಳುತ್ತದೆ.

**ನಾಗಿನಿ**: ಕುಣಿಗಲ್ ದೊಡ್ಡ ಕೆರೆಯಲ್ಲಿ ಜನ್ಮ ತಳೆಯುವ ನಾಗಿನಿ ನದಿಯು ೮ಕಿ.ಮೀ. ಹರಿದು ಹನುಮಂತಪುರ ಗ್ರಾಮದ ಸಮೀಪ ಶಿಂಷಾ ನದಿಯನ್ನು ಸೇರಿಕೊಳ್ಳುತ್ತದೆ. ಈ ನದಿಗೆ ಸಂಕನಪುರದ ಬಳಿ ಅಣೆಕಟ್ಟೆಯನ್ನು ನಿರ್ಮಿಸಲಾಗಿದ್ದು ಸುಮಾರು ೨೪೩ ಹೆಕ್ಟೇರಿಗೆ ನೀರೊದಗಿಸಲಾಗುತ್ತದೆ. ಇತ್ತೀಚೆಗೆ ಮಂಗಳಾ ಬಳಿ ಅಣೆಕಟ್ಟೆಯನ್ನು ನಿರ್ಮಿಸಿ ಮಂಗಳಾ ಜಲಾಶಯವನ್ನು ನಿರ್ಮಿಸಲಾಗಿದೆ. ಕುಣಿಗಲ್ ಕೆರೆಗೆ ಕಮಲ ಮತ್ತು ನಳಿನ ಎಂಬೆರೆಡು ನದಿಗಳೂ ಬಂದು ಸೇರುತ್ತವೆ. ಆದರೆ ಅವುಗಳ ಹುಟ್ಟು ಮತ್ತು ಚಲನವಲನದ ಬಗ್ಗೆ ತಿಳಿಯದು. ಜಿಲ್ಲೆಯ ಹಲವು ಭಾಗಗಳಲ್ಲಿ ಹಲವಾರು ನೀರಿನ ಚಿಲುಮೆಗಳಿದ್ದು ಇವುಗಳನ್ನು 'ತಲಪರಿಗೆ' ಎಂದು ಕರೆಯುತ್ತಾರೆ. ಇಂತಹ ತಲಪರಿಗೆಗಳು ಕೂಡ ನೀರಿನಾಸರೆಯಾಗಿವೆ. ಕೆರೆ, ಅಣೆಕಟ್ಟೆ, ಜಲಾಶಯ ಹಾಗು ಮತ್ತಿತರ ನೀರಿನಾಸರೆಗಳನ್ನು ಜಿಲ್ಲೆಯಾದ್ಯಂತ ಅಲ್ಲಲ್ಲಿ ಕಾಣಬಹುದಾಗಿದೆ.

ಜಿಲ್ಲೆಯಲ್ಲಿ ಒಟ್ಟು ೪೨೭ ದೊಡ್ಡ ಮತ್ತು ೧೨೧೭ಸಣ್ಣ ಕೆರೆಗಳಿವೆ ಎಂದು ತಿಳಿಯುತ್ತದೆ. ಇವುಗಳು ಕೂಡ ಜಿಲ್ಲೆಯ ಒಂದು ಪ್ರಮುಖ ನೀರಿನಾಸರೆಯಾಗಿದೆ. ಪ್ರಮುಖ ಕೆರೆಗಳೆಂದರೆ ಮೈದಾಳ ,ಕುಣಿಗಲ್, ಗುಬ್ಬಿ, ಕಡಬ, ಕಡಗತ್ತೂ-ರು, ಸೊಣವಿನಕೆರೆ, ಕಳ್ಳಂಬೆಳ್ಳ, ಮಲ್ಲಾಘಟ್ಟ ಮುಂತಾದವು.

ಮತ್ತೊಂದು ಪ್ರಮುಖ ನೀರಿನಾಸರೆಯನ್ನು ಮಡು ಮತ್ತು ದೊಣೆ ಎಂದು ಕರೆಯಲಾಗುತ್ತದೆ. ಇಂತಹ ಮಡು ಮತ್ತು ದೊಣೆಗಳನ್ನು ಜಿಲ್ಲೆಯಾದ್ಯಂತ ಅಲ್ಲಲ್ಲಿ ಕಾಣಬಹುದಾಗಿದೆ. ಒಟ್ಟಿನಲ್ಲಿ ಹಲವಾರು ಮಾದರಿಯ ನೀರಿನಾಸರೆ-ಯನ್ನು ಜಿಲ್ಲೆಯಾದ್ಯಂತ ಕಾಲಮಾನದುದ್ದಕ್ಕೂ ಇದ್ದುದು ತಿಳಿದು ಬರುತ್ತದೆ.

**ಭೂಗರ್ಭ ಸಂಪತ್ತು**

ಜಿಲ್ಲಾ ಪ್ರದೇಶದ ಭೂಗರ್ಭ ಸಂಪತ್ತು ಗಮನಾರ್ಹ. ಈ ಪ್ರದೇಶದಲ್ಲಿ ಲೋಹಯುಕ್ತ ನಿಕ್ಷೇಪವು ಜಿಲ್ಲೆಯ ಪಶ್ಚಿಮ ಭಾಗದ ತಾಲ್ಲೂಕುಗಳಲ್ಲಿಯೂ, ಅದೇರೀತಿ ಬೆಲೆ ಬಾಳುವ ಹರಳುಯುಕ್ತ ನಿಕ್ಷೇಪಗಳು ಜಿಲ್ಲೆಯ ಉತ್ತರ ಭಾಗದ-ಲ್ಲಿಯೂ ಇವೆ.

ಚಿಕ್ಕನಾಯಕನಹಳ್ಳಿ ಪ್ರದೇಶದಲ್ಲಿ ಗಣಿ ಉದ್ಯಮವು ಅತಿ ಪ್ರಾಚೀನವಾದುದು. ತಾಲ್ಲೂಕಿನ ಪೂರ್ವ ಭಾಗ-ದಲ್ಲಿ ದಕ್ಷಿಣೋತ್ತರವಾಗಿ ಹಬ್ಬಿರುವ ಬೆಟ್ಟದ ಸಾಲು ಹಲವಾರು ಖನಿಜಗಳ ಆಗರವಾಗಿದೆ. ಜಾನೇಹಾರು ಮತ್ತು ಕಾರೇಕುರ್ಚಿ ಪ್ರದೇಶವು ಕಬ್ಬಿಣ ಮತ್ತು ಮ್ಯಾಂಗನೀಸ್‌ಯುಕ್ತ ಅದಿರನ್ನು ಹೊಂದಿವೆ. ಹಿಮೋಟೈಟ್ ಮತ್ತು ಲಿಮೋಟೈಟ್ ಜಾತಿಯ ಕಬ್ಬಿಣದ ಅದಿರು ಈ ಪ್ರದೇಶದಲ್ಲಿ ದೊರೆತಿದೆ. ಮ್ಯಾಂಗನೀಸ್ ಅದಿರು ಕಾರೇಕುರ್ಚಿ,ಜಾನೇಹಾರು, ಹೊನ್ನೇಬಾಗಿ, ನರ-ಸೇನಹಳ್ಳಿ, ಸೊಂಡೇನಹಳ್ಳಿ ಮತ್ತು ಕುದುರೆಕಣಿವೆಯ ಪ್ರದೇಶದಲ್ಲಿ ಹೇರಳವಾಗಿ ದೊರಕುತ್ತದೆ.

ಮೇಲನಹಳ್ಳಿ ಸಮೀಪ ಸಿಕ್ಕಿರುವ ಸುಣ್ಣದಕಲ್ಲು ಸಿಮೆಂಟ್ ತಯಾರಿಕೆಗೆ ಒಳ್ಳೆಯ ಕಚ್ಚಾವಸ್ತುವಾಗಿದೆ. ಹುಳಿ-ಯಾರು ಮತ್ತು ಚಿಕ್ಕನಾಯಕನಹಳ್ಳಿ ಸುತ್ತಮುತ್ತ ದಕ್ಷಿಣ ಪ್ರದೇಶದಲ್ಲಿ ಸುಣ್ಣ ತಯಾರಿಕೆಗೆ ಬೇಕಾಗುವ ಕಚ್ಚಾವಸ್ತು ದೊರಕುತ್ತದೆ.

ತಾಲ್ಲೂಕಿನ ಪೂರ್ವ ಭಾಗದ ಹೊನ್ನೇಬಾಗಿ ಮತ್ತು ಬೆಳ್ಳಾರಗಳಲ್ಲಿ ಇಂಡಿಯನ್ ಮೈನ್ಸ್ ಸಿಂಡಿಕೇಟ್ (೧೯೦೨ ರಿಂದ ೧೯೫೪) ಮತ್ತು ಕರ್ನಾಟಕ ಭೂ ವಿಜ್ಞಾನ ಇಲಾಖೆ( ೧೯೦೪ ರಿಂದ ೧೯೫೪ ರವರೆಗೆ)ಗಳು ಚಿನ್ನದ ಅದಿರನ್ನು ತೆಗೆಯಲಾಗುತ್ತಿದ್ದು, ಆರ್ಥಿಕವಾಗಿ ಲಾಭದಾಯಕವಲ್ಲವೆಂದು ಈ ಕಾರ್ಯವನ್ನು ನಿಲ್ಲಿಸಲಾಗಿತ್ತು. ಆದರೆ ಇತ್ತೀ-ಚಿನ ದಿನಗಳಲ್ಲಿ ಚಿನ್ನದ ಬೆಲೆಯ ಏರಿಕೆಯಿಂದಾಗಿ ಮತ್ತೆ ನಿಕ್ಷೇಪಕಾರ್ಯ ನಿರ್ವಹಿಸಲಾಗುತ್ತಿದೆ.

ತಿಪಟೂರು ತಾಲ್ಲೂಕಿನ ಪೂರ್ವ ಭಾಗ ಮತ್ತು ಗುಬ್ಬಿ ತಾಲ್ಲೂಕಿನ ಪಶ್ಚಿಮ ಭಾಗಗಳು ಅದಿರುಯುಕ್ತ ನಿಕ್ಷೇ-ಪಗಳನ್ನು ಹೊಂದಿವೆ. ಈ ಪ್ರದೇಶದ ದೊಡ್ಡಗುಣಿ, ಶಿವಸಂದ್ರ, ಕಿಬ್ಬನಹಳ್ಳಿ ಮತ್ತು ಕಾರೇಕುರ್ಚಿ ಪ್ರದೇಶಗಳಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರು ಹೆಚ್ಚಿನ ಪ್ರಮಾಣದಲ್ಲಿ ದೊರೆತಿದೆ. ಅದೇ ರೀತಿ ದೊರೆಗುಡ್ಡ ಮತ್ತು ವಜ್ರ ಗುಡ್ಡಗಳಲ್ಲಿ ದೊರೆಯುವ ಸುಣ್ಣಕಲ್ಲು ಸಿಮೆಂಟ್ ತಯಾರಿಕೆಗೆ ಉಪಯುಕ್ತ ಕಚ್ಚಾವಸ್ತುವಾಗಿದೆ.

ಪಾವಗಡ ತಾಲ್ಲೂಕಿನಲ್ಲಿ ಹರಳುಯುಕ್ತ ಕಚ್ಚಾವಸ್ತು ದೊರಕಿ ಒಮ್ಮೆ ಅಂತರರಾಷ್ಟ್ರೀಯ ಪ್ರಸಿದ್ಧಿ ಪಡೆದಿದ್ದಿತು (ಭಾಸ್ಕರಪ್ಪ: ೧೯೮೧). ಇಲ್ಲಿ ದೊರೆತ ಬರ್ಮಾ ರೂಬಿಯನ್ನು ಹೋಲುವ ರೂಬಿಸ್ಟೋನ್ ಮತ್ತು ಕೆಂಪು ಹರಳುಗಳು ಕೃಷ್ಣಾಪುರ, ಹುಲಿಬೆಟ್ಟ, ಜಾಜೂರಾಯನಹಳ್ಳಿ ಮತ್ತು ಅಕ್ಕಮ್ಮನಹಳ್ಳಿಗಳಲ್ಲಿ ದೊರೆತಿದ್ದಿತು. ಮಧುಗಿರಿ ತಾಲ್ಲೂಕಿನ ಕೆಲವು ಭಾಗಗಳಲ್ಲಿ ಪಚ್ಚೆ ಮತ್ತು ಕೆಂಪು ಜಾತಿಗೆ ಸೇರಿದ ಹರಳು ಜಾತಿಯ ಕಲ್ಲುಗಳು ದೊರಕುತ್ತವೆ. ಕುಣಿಗಲ್ ತಾಲ್ಲೂಕಿನಲ್ಲಿ ಪದ್ಮ-ರಾಗ ಹರಳು ಶಿಲೆ ಮತ್ತು ಬೆಲೆಬಾಳುವ ಕೆಂಪು ಪದರಗಲ್ಲುಗಳು ದೊರಕುತ್ತವೆ ಎಂದು ತಿಳಿದು ಬಂದಿದೆ.

ಒಟ್ಟಿನಲ್ಲಿ ತುಮಕೂರು ಜಿಲ್ಲಾ ಪ್ರದೇಶದಲ್ಲಿ ಅದಿರುಯುಕ್ತ ನಿಕ್ಷೇಪಗಳಾದ ಕಬ್ಬಿಣ, ಮ್ಯಾಂಗನೀಸ್ ಮತ್ತು ಅಲ್ಪ ಪ್ರಮಾಣದಲ್ಲಿ ಚಿನ್ನವೂ ಹಾಗೂ ಹರಳುಯಕ್ತ ನಿಕ್ಷೇಪಗಳಿರುವುದನ್ನು ಹಲವು ಪ್ರದೇಶಗಳಲ್ಲಿ ಗುರುತಿಸಲಾಗಿದೆ.

**ಸಸ್ಯ ಸಂಪತ್ತು**

ತುಮಕೂರು ಜಿಲ್ಲೆ ಮೈದಾನ ಪ್ರದೇಶವಾಗಿದ್ದು ಇದರ ಒಟ್ಟು ವಿಸ್ತೀರ್ಣದ ಶೇ. ೪.೨೨ ರಷ್ಟು ಅಂದರೆ ಒಟ್ಟು ವಿಸ್ತೀರ್ಣದ ಕೇವಲ ೮೮೩.೧೯ ಚ.ಕಿ.ಮೀ. ಮಾತ್ರ ಸಾಂಪ್ರದಾಯಿಕ ಅರಣ್ಯವನ್ನು ಹೊಂದಿದೆ. ಇಂತಹ ರಕ್ಷಿತ ಅರಣ್ಯ ಪ್ರದೇಶವನ್ನು ಶಿರಾ ತಾಲ್ಲೂಕಿನ ಬುಕ್ಕಾಪಟ್ಟಣ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಬೆಳ್ಳಾರ ಮತ್ತು ತೀರ್ಥಪುರ ಪ್ರದೇಶ, ಗುಬ್ಬಿ ತಾಲ್ಲೂಕು ಹಾಗಲವಾಡಿ ಪ್ರದೇಶ, ತುಮಕೂರು ತಾಲ್ಲೂಕಿನ ದೇವರಾಯನದುರ್ಗದ ಸುತ್ತಮುತ್ತಲ ಪ್ರದೇಶ ಮಧುಗಿರಿ ತಾಲ್ಲೂಕಿನ ಮಧುಗಿರಿ ಬೆಟ್ಟದ ಸುತ್ತಮುತ್ತಲ ಪ್ರದೇಶ, ತಿಪಟೂರು ತಾಲ್ಲೂಕು ಕಿಬ್ಬನಹಳ್ಳಿ ಪಶ್ಚಿಮದ ಬೆಟ್ಟದ ಶ್ರೇಣಿ ಪ್ರದೇ-ಶ, ಕುಣಿಗಲ್ ತಾಲ್ಲೂಕು ಹುಲಿಯೂರುದುರ್ಗ ಪ್ರದೇಶಗಳಲ್ಲಿ ಕಾಣಬಹುದಾಗಿದೆ.

ಜಿಲ್ಲೆಯಲ್ಲಿ ಹರಡಿರುವ ಕಾಡುಗಳು ಬೆಟ್ಟದ ತಪ್ಪಲು ಪ್ರದೇಶದಲ್ಲಿ ದಟ್ಟವಾಗಿಯೂ ಮತ್ತಿತರ ಪ್ರದೇಶಗಳಲ್ಲಿ ಕುರುಚಲಾಗಿಯೂ ಇರುವುದನ್ನು ಕಾಣಬಹುದು. ಜಿಲ್ಲಾ ಪ್ರದೇಶದಲ್ಲಿ ಮಳೆ ಪ್ರಮಾಣ ಬಹಳ ಕಡಿಮೆ ಇರುವುದರಿಂದ, ದಟ್ಟ ಅರಣ್ಯಗಳಿರದೆ ಪೊದೆಗಳೂ ಮತ್ತು ಎತ್ತರವಲ್ಲದ ಮರಗಳನ್ನೂ ಕಾಣಬಹುದಾಗಿದೆ. ಇಲ್ಲಿಯ ಅರಣ್ಯಗಳು ಮಾನವ ರಕ್ಷಿತ ಅರಣ್ಯಗಳೆಂದು ಹೇಳಬಹುದು. ಕುರುಚಲು ಕಾಡು ಸಾಮಾನ್ಯ ಲಕ್ಷಣವಾಗಿದ್ದು, ಉಷ್ಣವಲಯ ಜಾತಿಗೆ ಸೇರಿದುದಾಗಿ-ದೆ. ಬುಕ್ಕಾಪಟ್ಟ ಪ್ರದೇಶದಲ್ಲಿನ ಮರಗಳು ಕುರುಚಲು ಗಿಡಗಳಿಗಿಂತ ಭಿನ್ನವಾದುದಾಗಿದೆ. ಇಲ್ಲಿನ ಮರಗಳ ಬುಡಗಳ ಸುತ್ತಳತೆ ಜಾಸ್ತಿಯಾಗಿರುವುದಲ್ಲದೆ ಎತ್ತರ ಹಾಗು ಗಡುಸುತನದಿಂದ ಕೂಡಿರುವ ಮರಗಳು ಇಲ್ಲಿವೆ.

ಜಿಲ್ಲೆಯ ಅರಣ್ಯಪ್ರದೇಶದಲ್ಲಿ ಹಲವಾರು ಜಾತಿಯ ಸಸ್ಯವರ್ಗಗಳಿವೆ. ಅವುಗಳಲ್ಲಿ ಪ್ರಮುಖ ಸಸ್ಯವರ್ಗಗಳೆಂದರೆ

| | |
|---|---|
| ಬಿಲ್ವರ | Albizzid odoratissima |
| ಜಲಾರಿ | Shorea talura |
| ದಿಂಡಿಗ | Anogeissus latifolia (gum ghatti, Axle) |
| ಹೊನ್ನೆ | Pterocarpus marsupium (Indian kino tree malbar kino) |
| ತೋರಮತ್ತಿ | Terminalia arjuna |
| ಕರಿಮತ್ತಿ | Terminalia tomentosa |
| ಹುಣಸೆ | Tamarindus indica (tamarind) |
| ತೇಗ | Tactona grandis (Teak) |
| ಶ್ರೀ ಗಂಧ | Santalum album (white sandal wood) |
| ಬಿಗೆ (ಬಾಗಿ) | Albizzia lebbeck (kokko; lebbeck tree) |
| ಚಿಲಕ ಧೂಪ(ಧೂಪ) | Boswellia serrata (Indian frankincars) |
| ನಂದಿ | Lagersroemia lanceolata |

ಇವುಗಳ ಜೊತೆಗೆ ಸಣ್ಣಸಣ್ಣ ಕುರುಚಲುಪೊದೆಗಳಾಗಿ ಬೆಳೆಯುವ ಕೆಲವು ಸಣ್ಣ ಗಿಡಗಳಿರುವ ಕಾಡನ್ನೂ ಕಾಣಬಹುದು. ಇಂತಹ ಕುರುಚಲು ಕಾಡನ್ನು ಪಾವಗಡ ತಾಲ್ಲೂಕಿನಲ್ಲಿ ವಿಶೇಷವಾಗಿ ಕಾಣಬಹುದಾಗಿದೆ. ಇಂತಹ ಕುರು-ಚಲು ಜಾತಿಗೆ ಸೇರಿದ ಗಿಡಗಳ ಪೈಕಿ ಪ್ರಮುಖವಾದುವುಗಳೆಂದರೆ:

| | |
|---|---|
| ಕಗ್ಗಲಿ | Acacia catechu (Black catch catechu) |
| ಪಾಲೆ | Wrightia tinctoria (sweet-indrajao; pala indigo plant) |
| ಕಾರೆ | Canthium parviflorum |
| ಬಂದ್ರೆ | Dodonaea viscosa (jamaica; switch sorrel) |
| ತಂಗಡಿ | Cassia auriculata (avaram tanners cassia) |
| ಕಕ್ಕೆ | Cassia fistula (Indian laburnum; purging cassia, golden-shour) |
| ಬುಜ್ಜಲಿ | Albizzia amara |

ಕಕ್ಕೆ ಮತ್ತು ತಂಗಡಿ ಗಿಡಗಳು ಜಿಲ್ಲೆಯ ಎಲ್ಲಾ ಪ್ರದೇಶದಲ್ಲಿಯೂ ಕಾಣಬಹುದಾಗಿದೆ. ಇದರ ಜೊತೆಗೆ ಹಲವು ಅರಣ್ಯ ಉತ್ಪನ್ನದ ಸಸ್ಯಗಳನ್ನೂ ಕಾಣಬಹುದು. ಅಂತಹ ಅರಣ್ಯದ ಸಸ್ಯ ಗಳೆಂದರೆ:

| | |
|---|---|
| ಅಳಲೆ | Terminalia chebula (Yellow Myrobalan- Chebulic Myrobolan) |
| ಮರಡಿ | Buchnania angustifolia |
| ತೂಪರೆ | Diospyros pruriens |
| ಸೀತಾಫಲ | Annona squamosa (sweet sop, sugar apple) |

ತುಮಕೂರು ತಾಲ್ಲೂಕು ದೇವರಾಯನದುರ್ಗ ಮತ್ತು ಕೊರಟಗೆರೆ ತಾಲ್ಲೂಕು ಸಿದ್ಧರಬೆಟ್ಟಗಳು ಇತ್ತೀಚಿನ ವರ್ಷಗಳಲ್ಲಿ ಅಂತರ ರಾಷ್ಟ್ರೀಯ ಮನ್ನಣೆಯ ಸ್ಥಳಗಳಾಗಿವೆ ಎಂದು ಹೇಳಬಹುದು. ಇಲ್ಲಿರುವ ಔಷಧಿಯುಕ್ತ ಗಿಡಮೂಲಿಕೆಗಳು ವಿಶಿಷ್ಟವಾದವುಗಳು. ಭಾರತೀಯ ಸಸ್ಯಶಾಸ್ತ್ರ ಸರ್ವೇಕ್ಷಣಾಲಯವು ೧೯೮೫ರವರೆಗೆ ಕೈಗೊಂಡ ಸರ್ವೇಕ್ಷಣೆಯಲ್ಲಿ ಸಿದ್ದರಬೆಟ್ಟದ ಈ ಪ್ರದೇಶಗಳಲ್ಲಿ ಸುಮಾರು ೨೮೫ ಪುಷ್ಪಯುಕ್ತ ಸಸ್ಯಗಳನ್ನು ಗುರುತಿಸಿದ್ದು ಅವುಗಳಲ್ಲಿ ಸುಮಾರು ೧೪೭ ಮಾದರಿಯ ಔಷಧಿ ಸಸ್ಯಗಳು ಕಂಡು ಬರುತ್ತದೆ. ಇಲ್ಲಿ ದೊರೆತಿರುವ ಅತಿ ಮುಖ್ಯ ಗಿಡಮೂಲಿಕಾ ಸಸ್ಯ ಸಂಪತ್ತೆಂದರೆ:

| | |
|---|---|
| ಕರಗಿನಮರ | Semecarpus anacardium |
| ಕಾಡುಸೋಗೆ | Holorrhena |
| ಕೊರಸಿಗನ ಗಿಡ | Antidysenterica |
| ತಾರೆ | Terminalia bellarica (phyllanthus embica) |
| ಗುಲಗಂಜಿ | Arbus precatorius |
| ಹಾವುಮಕ್ಕಳ ತಾಯಿಗಿಡ | Asparagus recemosus |
| ಅಕ್ಕ-ತಂಗಿ ಬಳ್ಳಿ | Gloriosa superba |
| ಚಳ್ಳದ ಬೀಜ | Strychnos potatrum |
| ತೊಟ್ಟಿ ಸೊಪ್ಪು(ಬಲ) | Sida cordifolia |
| ಅಮೃತಬಳ್ಳಿ | Tinosporo cordifolia |
| ಗೌತುಭರಣಿ | Clerodendrum serratum |

ಹೀಗೆ ಹಲವಾರು ಗಿಡಮೂಲಿಕೆಗಳ ವನ್ಯಸಂಪತ್ತನ್ನು ಹೊಂದಿರುವ ತುಮಕೂರು ಜಿಲ್ಲಾ ಪ್ರದೇಶವು 'ಧನ್ವಂತ್ರಿಯ ಉಗ್ರಾಣ'ವೆಂದು ಪ್ರಸಿದ್ಧಿ ಪಡೆದುಕೊಂಡಿದೆ.

**ಪ್ರಾಣಿ ಸಂಪತ್ತು:** ಈ ಜಿಲ್ಲೆಯಲ್ಲಿ ಗೊಂಡಾರಣ್ಯಗಳು ಇಲ್ಲದೆ ಇರುವ ಪ್ರಯುಕ್ತ ಇಲ್ಲಿನ ಶುಷ್ಕ ವಾತಾವರಣದ ಕಾಡುಗಳಲ್ಲಿ ದ್ವಿತೀಯ ದರ್ಜೆಯ ವಿಶೇಷವಾಗಿ ಮಾಂಸಾಹಾರಿ ಪ್ರಾಣಿಗಳಾದ ನರಿ, ತೋಳ ಕತ್ತೆಕಿರುಬ ಮುಂತಾದವುಗಳು ಕಾಣಸಿಗುತ್ತವೆ. ಇವುಗಳಲ್ಲಿ ಕತ್ತೆಕಿರುಬದ ಸಾಂದ್ರತೆಯು ಪಾವಗಡ ತಾಲ್ಲೂಕಿನಲ್ಲಿ ಕಂಡು ಬಂದಿದೆ. ಅಪರೂಪವಾಗಿ ಒಮ್ಮೊಮ್ಮೆ ಹುಲಿ ಮತ್ತು ಚಿರತೆ ಕಂಡು ಬಂದಿರುವ ವರದಿಗಳಿವೆ. ತಿಪಟೂರು ಸುತ್ತಮುತ್ತಲಿನ ಗುಡ್ಡಗಳಲ್ಲಿ ಕರಡಿ ಕಂಡು

ಬಂದಿದೆ. ಇದೇ ಅಲ್ಲದೆ ಅಲ್ಪ ಸಂಖ್ಯೆಯಲ್ಲಿ ಜಿಂಕೆ, ಕಾಡುಕೋಣ, ಕಾಡುಹಂದಿ, ಮುಳ್ಳುಹಂದಿಗಳು ಶಿರಾ ಹಾಗು ಮಧುಗಿರಿ ಆಸುಪಾಸಿನಲ್ಲಿ ಕಂಡು ಬಂದಿವೆ. ಪಕ್ಷಿಗಳು, ಮುಂಗುಸಿ, ಮೊಲಗಳು ಹೇರಳವಾಗಿ ಜಿಲ್ಲೆಯಾದ್ಯಂತ ಕಾಣಸಿಗತ್ತವೆ. ಉರಗ ಜಾತಿಯಲ್ಲಿ ಎಲ್ಲಾ ವಿಧದ ವಿಷಪೂರಿತ ಮತ್ತು ವಿಷಪೂರಿತವಲ್ಲದ ಹಾವುಗಳು ಜಿಲ್ಲೆಯಾದ್ಯಂತ ಕಂಡು ಬರುತ್ತವೆ.

**ವಾಯುಗುಣ**: ತುಮಕೂರು ಜಿಲ್ಲೆಯಲ್ಲಿ ಹವಾಮಾನವನ್ನು ತಿಳಿಯಪಡಿಸುವ ಯಾವುದೇ ಪ್ರಮುಖ ಮಾಪನ ಕೇಂದ್ರಗಳಿಲ್ಲದಿದ್ದರೂ, ಅಬ್ಸರ್ವೇಟರಿಗಳು ನೀಡುವ ವರಧಿಯನ್ನು ಆಧರಿಸಿ ಈ ಜಿಲ್ಲೆಗೂ ಅನ್ವಯಿಸಬಹುದಾಗಿದೆ. ಮಾರ್ಚ್ ನಿಂದ ಮೇ ತಿಂಗಳವರೆಗೂ ವಾತಾವರಣದ ಉಷ್ಣಾಂಶವು ಗಣನೀಯ ಪ್ರಮಾಣದಲ್ಲಿ ಹೆಚ್ಚಿರುತ್ತದೆ. ಏಪ್ರಿಲ್ ಅತಿ ಹೆಚ್ಚಿನ ಉಷ್ಣಾಂಶದಿಂದ ಕೂಡಿದ ತಿಂಗಳು ಪರಮಾವಧಿ ೪೦-೪೧ ಡಿಗ್ರಿ ಸೆಂಟಿಗ್ರೇಡ್ (೧೦೪ ಅಥವಾ ೧೦೬ ಡಿಗ್ರಿ ಫ್ಯಾರನ್ ಹೀಟ್). ನೈಋತ್ಯದ ಮುಂಗಾರು ಮಾರುತದಿಂದಾಗಿ ಜೂನ್ ತಿಂಗಳಲ್ಲಿ ಬಿಸಿ ಉಷ್ಣಾಂಶ ಕಡಿಮೆಯಾಗುತ್ತ ವಾತಾವರಣವು ಅಕ್ಟೋಬರ್ ನವಂಬರ್, ಡಿಸೆಂಬರ್ ಮತ್ತು ಜನವರಿಯಲ್ಲಿ ತಂಪಾಗಿದ್ದು ಇದು ಫೆಬ್ರವರಿವರೆಗೂ ಮುಂದುವರಿಯುತ್ತದೆ. ಡಿಸೆಂಬರ್‌ನಲ್ಲಿ ಅತಿ ಹೆಚ್ಚು ತಂಪು ವಾತಾವರಣ ಅಥವಾ ಶೈತ್ಯವಿರುವ ತಿಂಗಳು. ಆಗಿನ ದಿನ ನಿತ್ಯದ ಹವಾಮಾನದಲ್ಲಿ ಉಷ್ಣಾಂಶವು ತುಂಬಾ ಇಳಿಕೆಯಲ್ಲಿದ್ದು ಸರಾಸರಿ ೯ರಿಂದ ೧೦ ಡಿಗ್ರಿ ಸೆಂಟಿಗ್ರೇಡ್ (೪೮ ರಿಂದ ೫೦ ಡಿಗ್ರಿ ಫ್ಯಾರನ್ ಹೀಟ್) ಮಾತ್ರ ಇರುತ್ತದೆ. ಇಲ್ಲಿನ ವಾಯುಗುಣ ಮಳೆಯ ಪ್ರಮಾಣದ ಮೇಲೆ ಹೆಚ್ಚಿನ ಪ್ರಭಾವ ಬೀರಿದೆ. ಜಿಲ್ಲೆಯ ಉತ್ತರ ಪ್ರದೇಶ ಭಾಗದಲ್ಲಿ ಮಳೆ ಕಡಿಮೆ ಇದ್ದರೆ ದಕ್ಷಿಣ ಭಾಗದಲ್ಲಿ ಸ್ವಲ್ಪ ಜಾಸ್ತಿ ಇರುತ್ತದೆ. ಸರಾಸರಿ ಮಳೆ ಪ್ರಮಾಣ ೬೮೭.೯ ಮಿ.ಮೀ. ವರ್ಷಒಂದಕ್ಕೆ ಸರಾಸರಿ ೪೫ ಮಳೆ ದಿನಗಳಿರುತ್ತವೆ. ವಾಯುಭಾರ ನಿಮ್ನತೆಯಿಂದಾಗಿ ಕೆಲವು ಬಾರಿ ಸರಾಸರಿ ದಿನಗಳಲ್ಲೂ ಬದಲಾವಣೆ ಇರುತ್ತದೆ.

ಮೇಲೆ ಹೇಳಿದ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯ ಹತ್ತು ತಾಲ್ಲೂಕುಗಳಲ್ಲಿ ಹರಡಿರುವ ೧೨೩೦ಕ್ಕೂ ಹೆಚ್ಚಿನ ಗ್ರಾಮಗಳಲ್ಲಿ ತೀವ್ರ ರೀತಿಯ ವೈಜ್ಞಾನಿಕ ಕ್ಷೇತ್ರ ಕಾರ್ಯವನ್ನು ಕೈಗೊಳ್ಳಲಾಯಿತು. ಇದರ ಪರಿಣಾಮ-ವಾಗಿ ವಿವಿಧ ಸಾಂಸ್ಕೃತಿಕ ಹಂತಗಳನ್ನು ಪ್ರತಿನಿಧಿಸುವ ೨೪೬ ಪ್ರಾಗೈತಿಹಾಸಿಕ ನೆಲೆಗಳು ಶೋಧವಾದವು. ಈ ನೆಲೆಗಳು ಒಟ್ಟು ೯೦ ಗ್ರಾಮಗಳ ಪರಿಮಿತಿಯಲ್ಲಿ ಬರುತ್ತವೆ. ಈ ನೆಲೆಗಳಲ್ಲಿ ದೊರೆತ ವಿವಿಧ ಸಾಂಸ್ಕೃತಿಕ ಹಂತಗಳ ವಿವರವನ್ನು ಸ್ತಂಭ ನಕ್ಷೆ ಸಂಖ್ಯೆ ೩.೮ ನಲ್ಲಿ ಹಾಗು ತಾಲ್ಲೂಕುಗಳನ್ವಯದಂತೆ ಕೋಷ್ಟಕ ಸಂಖ್ಯೆ ೩.೨.೧ ರಲ್ಲಿ ಮತ್ತು ಒಟ್ಟು ನೆಲೆಗಳ ಕೋಷ್ಟಕ ಸಂಖ್ಯೆ ೩.೨.೨ ರಲ್ಲಿ ಹಾಗೂ ಭೂ ನಕ್ಷೆಯನ್ನು ಪುಟ ಸಂಖ್ಯೆ ೧೭ ರಲ್ಲಿ ನೀಡಿದೆ.

ಸ್ತಂಭ ನಕ್ಷೆ ಸಂಖ್ಯೆ ೩.೮




೧. ಆದಿ ಹಳೆಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೧೮).
೨. ಮಧ್ಯ ಹಳೆಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೨೨).
೩. ಅಂತ್ಯ ಹಳೆಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೫೦).
೪. ಸೂಕ್ಷ್ಮ ಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೬೬).
೫. ನೂತನ ಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೩೧).
೬. ನೂತನ-ತಾಮ್ರ ಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೨).
೭. ಬೃಹತ್ ಶಿಲಾಯುಗದ ಸಂಸ್ಕೃತಿ ನೆಲೆಗಳು(ಒಟ್ಟು-೩೮).
೮. ಇತಿಹಾಸ ಆರಂಭಕಾಲದ ನೆಲೆಗಳು(ಒಟ್ಟು-೧೯).

## ತುಮಕೂರು ಜಿಲ್ಲೆಯ ಪ್ರಾಗೈತಿಹಾಸಿಕ ನೆಲೆಗಳು (ತಾಲ್ಲೂಕುಗಳನ್ವಯದಂತೆ)

ಕೋಷ್ಟಕ ಸಂಖ್ಯೆ ೩.೨.೧

| ಕ್ರಮ ಸಂಖ್ಯೆ | ತಾಲ್ಲೂಕು | ಆದಿ ಹಳೆ ಶಿಲಾಯುಗ | ಮಧ್ಯ ಹಳೆ ಶಿಲಾಯುಗ | ಅಂತ್ಯ ಹಳೆ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ನೂತನ-ತಾಮ್ರ ಶಿಲಾಯುಗ | ಬೃಹತ್ ಶಿಲಾಯುಗ | | | ಇತಿಹಾಸ ಆರಂಭಕಾಲ | ಒಟ್ಟು |
|---|---|---|---|---|---|---|---|---|---|---|---|---|
| | | | | | | | | ನೆಲೆ | ಗೋರಿ | ನಿಲಸುಗಲ್ಲು | | |
| ೧ | ಕುಣಿಗಲ್ | | | ೧ | ೨ | | | ೧ | | | ೧ | ೫ |
| ೨ | ಕೊರಟಗೆರೆ | | | ೨ | ೫ | ೪ | | | ೭ | ೧ | | ೧೮ |
| ೩ | ಗುಬ್ಬಿ | ೧೦ | ೧೦ | ೨೪ | ೨೫ | ೨ | | ೧ | | | ೨ | ೭೪ |
| ೪ | ಚಿಕ್ಕನಾಯಕನಹಳ್ಳಿ | | ೧ | ೪ | ೪ | ೨ | | | ೧ | | | ೧೨ |
| ೫ | ತಿಪಟೂರು | ೩ | ೪ | ೭ | ೮ | ೧ | | | ೧ | | | ೨೪ |
| ೬ | ತುಮಕೂರು | ೧ | ೧ | ೩ | ೯ | ೪ | | ೫ | ೭ | ೭ | ೨ | ೩೨ |
| ೭ | ತುರುವೇಕೆರೆ | | | | ೧ | ೧ | | | | | | ೨ |
| ೮ | ಪಾವಗಡ | ೧ | ೨ | ೩ | ೨ | ೮ | ೨ | ೪ | ೪ | | ೭ | ೩೩ |
| ೯ | ಮಧುಗಿರಿ | ೨ | ೩ | ೬ | ೧೦ | ೭ | | ೫ | ೧ | ೨ | ೬ | ೪೦ |
| ೧೦ | ಶಿರಾ | ೧ | ೧ | | | ೨ | | ೧ | | | ೧ | ೬ |
| | ಒಟ್ಟು | ೧೮ | ೨೨ | ೫೦ | ೬೬ | ೩೧ | ೨ | ೧೭ | ೨೧ | ೧೦ | ೧೯ | ೨೪೬ |

# ತುಮಕೂರು ಜಿಲ್ಲೆಯ ಪ್ರಾಗೈತಿಹಾಸಿಕ ನೆಲೆಗಳು

ಕೋಷ್ಟಕ ಸಂಖ್ಯೆ ೩.೨.೨

| ಕ್ರಮ ಸಂಖ್ಯೆ | ನೆಲೆ | ತಾಲ್ಲೂಕು | ಆದಿ ಹಳೆ ಶಿಲಾಯುಗ | ಮಧ್ಯ ಹಳೆ ಶಿಲಾಯುಗ | ಅಂತ್ಯ ಹಳೆ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಕಾಲ |
|---|---|---|---|---|---|---|---|---|---|---|
| | | | | | | | | ನೆಲೆ | ಗೋರಿ | |
| ೧. | ಅಗ್ರಹಾರ | ತುಮಕೂರು | | | | | | | ✓ | |
| ೨. | ಅದ್ದಗೆರೆ | ಗುಬ್ಬಿ | | | ✓ | ✓ | | | | |
| ೩. | ಅಪ್ಪಾನಹಳ್ಳಿ | ಗುಬ್ಬಿ | ✓ | ✓ | ✓ | ✓ | | | | |
| ೪ | ಅವರಗಲ್ಲು | ಮಧುಗಿರಿ | ✓ | ✓ | ✓ | ✓ | ✓ | | | |
| ೫. | ಅಳಿಲುಘಟ್ಟ | ಗುಬ್ಬಿ | | | | ✓ | | | | |
| ೬. | ಅಂಕವಬಾವಿ | ಚಿಕ್ಕನಾಯಕನಹಳ್ಳಿ | | ✓ | ✓ | ✓ | ✓ | | | |
| ೭ | ಇರಕಸಂದ್ರ ಕಾಲೋನಿ | ಕೊರಟಗೆರೆ | | | ✓ | ✓ | | | ✓ | |
| ೮. | ಉನಗನಾಲ | ಗುಬ್ಬಿ | | | ✓ | ✓ | | | | |
| ೯ | ಒಬಳಾಪುರ | ಗುಬ್ಬಿ | ✓ | ✓ | ✓ | ✓ | | | | |
| ೧೦. | ಕತ್ತಿಕ್ಯಾತನಹಳ್ಳಿ | ಪಾವಗಡ | | | | | | | ✓ | |
| ೧೧ | ಕತ್ತಿರಾಜನಹಳ್ಳಿ | ಮಧುಗಿರಿ | | | | ✓ | ✓ | | ✓ | ✓ |
| ೧೨ | ಕರಡಿ | ತಿಪಟೂರು | | ✓ | ✓ | ✓ | | | | |
| ೧೩ | ಕಲ್ಲೇನಹಳ್ಳಿ | ಮಧುಗಿರಿ | | | | | ✓ | | | |
| ೧೪. | ಕಲ್ಲೇನಹಳ್ಳಿ | ಕೊರಟಗೆರೆ | | | | | ✓ | | | |
| ೧೫. | ಕಾರೆಕುರ್ಚಿ | ತಿಪಟೂರು | | | ✓ | ✓ | | | | |
| ೧೬ | ಕಾವಲಹಟ್ಟಿ | ಚಿಕ್ಕನಾಯಕನಹಳ್ಳಿ | | | ✓ | ✓ | | | | |
| ೧೭ | ಕೈದಾಳ | ತುಮಕೂರು | | | | | ✓ | ✓ | | ✓ |
| ೧೮ | ಕೈಮರ | ಗುಬ್ಬಿ | ✓ | ✓ | ✓ | ✓ | ✓ | | | |
| ೧೯ | ಕೊಡಗೇನಹಳ್ಳಿ | ಮಧುಗಿರಿ | | | | | | | | ✓ |
| ೨೦ | ಗಳಿಗೆಕೆರೆ | ಗುಬ್ಬಿ | ✓ | ✓ | ✓ | ✓ | | | | |
| ೨೧ | ಗುಟ್ಟೆ | ಮಧುಗಿರಿ | | ✓ | ✓ | ✓ | | ✓ | | ✓ |
| ೨೨ | ಗುರಮ್ಮನಹಟ್ಟಿ | ಮಧುಗಿರಿ | | | ✓ | ✓ | ✓ | ✓ | | ✓ |
| ೨೩ | ಗೌಡನಹಟ್ಟಿ | ತುಮಕೂರು | | | | | | | ✓ | |
| ೨೪ | ಗೊಲ್ಲರಹಟ್ಟಿ | ಮಧುಗಿರಿ | | | ✓ | ✓ | ✓ | | | |
| ೨೫ | ಚಿಕ್ಕೇಗೌಡನರೊಪ್ಪ | ಮಧುಗಿರಿ | ✓ | | ✓ | ✓ | | | | |
| ೨೬ | ಚಿವಗ | ತುಮಕೂರು | | | | ✓ | | | ✓ | |
| ೨೭ | ಚಿನವಾರ | ತುಮಕೂರು | | | | ✓ | | | ✓ | |
| ೨೮ | ಜಕ್ಕನಹಳ್ಳಿ | ತಿಪಟೂರು | | | | | | | ✓ | |
| ೨೯ | ಜೋಗಿಹಳ್ಳಿ | ಗುಬ್ಬಿ | | | ✓ | ✓ | | | | |
| ೩೦ | ಡಕಾಪುರ | ತುಮಕೂರು | | | ✓ | ✓ | | | ✓ | |
| ೩೧ | ತಡ್ಡೇನಹಳ್ಳಿ | ಕೊರಟಗೆರೆ | | | | | | | ✓ | |
| ೩೨ | ತೆಪ್ಪಸಂದ್ರ | ಕುಣಿಗಲ್ | | | | | | ✓ | | ✓ |
| ೩೩ | ತ್ಯಾಗಟೂರು | ಗುಬ್ಬಿ | | | ✓ | ✓ | | | | ✓ |
| ೩೪ | ತರಟಿ | ಕೊರಟಗೆರೆ | | | | ✓ | | | ✓ | |
| ೩೫ | ದಬ್ಬೇಗಟ್ಟ | ಮಧುಗಿರಿ | | | | ✓ | | | | ✓ |
| ೩೬ | ದೊಡ್ಡಗುಣಿ | ಗುಬ್ಬಿ | ✓ | ✓ | ✓ | ✓ | | | | |
| ೩೭ | ನಾಗಲಾಪುರ | ಪಾವಗಡ | | | ✓ | ✓ | ✓ | | | |
| ೩೮ | ನಿಡುಗಲ್ಲು | ಪಾವಗಡ | | ✓ | ✓ | ✓ | ✓ | | ✓ | |
| ೩೯ | ಪಾವಗಡ | ಪಾವಗಡ | | | | | ✓ | ✓ | | ✓ |
| ೪೦ | ಪಾಲ್ಯಹಳ್ಳಿ | ಕೊರಟಗೆರೆ | | | | | | | ✓ | |
| ೪೧ | ಒಕ್ಕೆಗಾನಹಳ್ಳಿ | ಗುಬ್ಬಿ | | | ✓ | ✓ | | | | |
| ೪೨ | ಬಿಜ್ಜಾವರ | ಮಧುಗಿರಿ | | | | ✓ | | | | |
| ೪೩ | ಬುಕ್ಕಾಪಟ್ಟ | ಶಿರಾ | | | | | ✓ | ✓ | | ✓ |
| ೪೪ | ಬೂದಿಗುಡ್ಡ | ಶಿರಾ | ✓ | ✓ | | | ✓ | | | |
| ೪೫ | ಬೂದಿಬೆಟ್ಟ | ಪಾವಗಡ | | | | | ✓ | | ✓ | ✓ |

ಮುಂದುವರಿದಿದೆ. . .

| ಕ್ರಮ ಸಂಖ್ಯೆ | ನೆಲೆ | ತಾಲ್ಲೂಕು | ಆದಿ ಹಳೆ ಶಿಲಾಯುಗ | ಮಧ್ಯ ಹಳೆ ಶಿಲಾಯುಗ | ಅಂತ್ಯ ಹಳೆ ಶಿಲಾಯುಗ | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಬೃಹತ್ ಶಿಲಾಯುಗ | | ಇತಿಹಾಸ ಆರಂಭಕಾಲ |
|---|---|---|---|---|---|---|---|---|---|---|
| | | | | | | | | ನೆಲೆ | ಗೋರಿ | |
| ೪೬ | ಬೆಟ್ಟದಹಳ್ಳಿ | ಗುಬ್ಬಿ | | | | ✓ | | ✓ | | ✓ |
| ೪೭ | ಬೆಳ್ಳಿಬಟ್ಟಲಹಳ್ಳಿ | ತುಮಕೂರು | | | | ✓ | ✓ | | ✓ | |
| ೪೮ | ಬೊಮ್ಮೇನಹಳ್ಳಿ | ತಿಪಟೂರು | ✓ | ✓ | ✓ | ✓ | | | | |
| ೪೯ | ಬೋಗಸಂದ್ರ | ಗುಬ್ಬಿ | | | ✓ | ✓ | | | | |
| ೫೦ | ಬಂಡನಹಳ್ಳಿ | ಗುಬ್ಬಿ | | | ✓ | ✓ | | | | |
| ೫೧ | ಮಧುಗಿರಿ | ಮಧುಗಿರಿ | | | ✓ | ✓ | ✓ | ✓ | | |
| ೫೨ | ಮರಿದಾಸನಹಳ್ಳಿ | ಪಾವಗಡ | | | | | ✓ | | ✓ | ✓ |
| ೫೩ | ಮಾರನಾಯಕನಪಾಳ್ಯ | ತುಮಕೂರು | | | | ✓ | ✓ | ✓ | | ✓ |
| ೫೪ | ಮಾರಶೆಟ್ಟಿಹಳ್ಳಿ | ಗುಬ್ಬಿ | ✓ | ✓ | ✓ | | | | | |
| ೫೫ | ಮಿಡಿಗೇಶಿ | ಮಧುಗಿರಿ | | ✓ | ✓ | ✓ | ✓ | ✓ | | ✓ |
| ೫೬ | ಮುದಿಪುರ | ಗುಬ್ಬಿ | | | ✓ | ✓ | | | | |
| ೫೭ | ಮೂಗನಾಯಕನಕೋಟೆ | ಗುಬ್ಬಿ | ✓ | ✓ | ✓ | ✓ | | | | |
| ೫೮ | ಮಂಚಕಲ್ ಕುಪ್ಪೆ | ತುಮಕೂರು | | ✓ | ✓ | ✓ | | ✓ | | |
| ೫೯ | ಮಂಚಲದೊರೆ | ಗುಬ್ಬಿ | ✓ | ✓ | ✓ | ✓ | | | | |
| ೬೦ | ಯಕ್ಕಲಕಟ್ಟೆ | ಗುಬ್ಬಿ | ✓ | ✓ | ✓ | ✓ | | | | |
| ೬೧ | ಯಲ್ಲಾಪುರ | ಗುಬ್ಬಿ | | | ✓ | ✓ | | | | |
| ೬೨ | ರಜತಾದ್ರಿಪುರ | ತಿಪಟೂರು | | | | ✓ | ✓ | | | |
| ೬೩ | ರಾಜಮಾರನಹಳ್ಳಿ | ಪಾವಗಡ | | | | | ✓ | ✓ | | ✓ |
| ೬೪ | ವೀರಾಪುರ | ಗುಬ್ಬಿ | | | ✓ | ✓ | | | | |
| ೬೫ | ಯಲ್ಲಪ್ಪನಾಯಕನ ಹಳ್ಳಿ | ಪಾವಗಡ | | | | | ✓ | ✓ | | ✓ |
| ೬೬ | ಯಲ್ಲಪ್ಪನಾಯಕನಹೊಸಕೋಟೆ | ಪಾವಗಡ | ✓ | ✓ | ✓ | | ✓ | ✓ | | ✓ |
| ೬೭ | ಶಿವಪುರ | ಗುಬ್ಬಿ | ✓ | ✓ | ✓ | ✓ | | | | |
| ೬೮ | ಶೆಟ್ಟಿಹಳ್ಳಿ | ತಿಪಟೂರು | | | ✓ | ✓ | | | | |
| ೬೯ | ಸಾಕಸಂದ್ರ | ಗುಬ್ಬಿ | | | ✓ | ✓ | | | | |
| ೭೦ | ಸಾಲುಕಟ್ಟೆ | ಚಿಕ್ಕನಾಯಕನಹಳ್ಳಿ | | | ✓ | ✓ | | | | |
| ೭೧ | ಸಿದ್ಧರಬೆಟ್ಟ | ಕೊರಟಗೆರೆ | | | | ✓ | ✓ | | | |
| ೭೨ | ಸಿದ್ಧಗಂಗಾಬೆಟ್ಟ | ತುಮಕೂರು | | | | ✓ | ✓ | ✓ | | |
| ೭೩ | ಸಿದ್ದಾಪುರ | ಮಧುಗಿರಿ | | | | ✓ | ✓ | ✓ | | ✓ |
| ೭೪ | ಸಿದ್ದೇಹಳ್ಳಿ | ತಿಪಟೂರು | | | ✓ | ✓ | | | | |
| ೭೫ | ಸೀಗೆಪಾಳ್ಯ | ಕೊರಟಗೆರೆ | | | | ✓ | ✓ | | ✓ | |
| ೭೬ | ಸೀಗೆಹಳ್ಳಿ | ತುಮಕೂರು | ✓ | | | | | | ✓ | |
| ೭೭ | ಸೌರಸಕೋಟೆ | ಗುಬ್ಬಿ | | | ✓ | ✓ | | | | |
| ೭೮ | ಸಂಪಿಗೆ | ತುರುವೇಕೆರೆ | | | | ✓ | ✓ | | | |
| ೭೯ | ಹರೇನಹಳ್ಳಿ | ತಿಪಟೂರು | ✓ | ✓ | ✓ | ✓ | | | | |
| ೮೦ | ಹಿಮಗಿರಿ | ಕುಣಿಗಲ್ | | | ✓ | ✓ | | | | |
| ೮೧ | ಹಿರೇಸುಂದಗಲ್ಲು | ತುಮಕೂರು | | | | ✓ | | ✓ | | |
| ೮೨ | ಹಿರೇಹಳ್ಳಿ | ತುಮಕೂರು | | | ✓ | ✓ | | | | |
| ೮೩ | ಹುಲಿಯೂರುದುರ್ಗ | ಕುಣಿಗಲ್ | | | | ✓ | | | | |
| ೮೪ | ಹುಳಿಯಾರು | ಚಿಕ್ಕನಾಯಕನಹಳ್ಳಿ | | | | | | | ✓ | |
| ೮೫ | ಹೂವಿನಕಟ್ಟೆ | ಗುಬ್ಬಿ | | | ✓ | ✓ | ✓ | | | |
| ೮೬ | ಹೊವ್ವೇನಹಳ್ಳಿ | ಕೊರಟಗೆರೆ | | | | | | | ✓ | |
| ೮೭ | ಹೊವ್ವೇಮಾರನಹಳ್ಳಿ | ತಿಪಟೂರು | ✓ | ✓ | ✓ | ✓ | | | | |
| ೮೮ | ಹೊಸಕೆರೆ | ಗುಬ್ಬಿ | | | ✓ | ✓ | | | | |
| ೮೯ | ಹೊಸಕೋಟೆ | ಕೊರಟಗೆರೆ | | | | | | | ✓ | |
| ೯೦ | ಹೊಸಹಳ್ಳಿ | ಚಿಕ್ಕನಾಯಕನಹಳ್ಳಿ | | | ✓ | ✓ | ✓ | | | |
| | | ಒಟ್ಟು | ೧೮ | ೨೨ | ೫೦ | ೬೬ | ೩೧ | ೧೭ | ೨೧ | ೧೯ |

IV ಸೂಕ್ಷ್ಮ ಮತ್ತು ಬೃಹತ್.

V ನೆಲೆಯ ಪಶ್ಚಿಮಕ್ಕೆ ಬೆಟ್ಟವಿದೆ. ಸ್ವಾಭಾವಿಕ ಗುಹೆಗಳಿವೆ. ನೀರಿನ ಹರಿವುಗಳಿವೆ. ಸ್ಥಳೀಯವಾಗಿ ಕಚ್ಚಾ ವಸ್ತುವಿದೆ.
ಮರಳು ಮಿಶ್ರಿತ ಕಂದು ಮಣ್ಣಿನ ಭೂಮಿಯಾಗಿದೆ.

VI ಸು. ೧ ಹೆಕ್ಟೇರ್ ಪ್ರದೇಶ. ಕೃಷಿ ಭೂಮಿ. ನೆಲೆ ಹಾಳಾಗಿದೆ.

VII ಸೂಕ್ಷ್ಮ- ನೀಳಚಕ್ಕೆ(೧), ಮೊನೆ(೧), ಹೆರೆಚಕ್ಕೆ(೪) ಮತ್ತು ಕೊರೆಯುಳಿ(೧)
ಉಪಕರಣಗಳು ಜಾಸ್ಪರ್ ಮತ್ತು ಕ್ವಾರ್ಟ್ಸ್ ಶಿಲೆಯಲ್ಲಿವೆ.
ಬೃಹತ್- ವಸತಿ ನೆಲೆ. ಕಪ್ಪು, ಕೆಂಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿವೆ.

೮೨

I ಹಿರೇಹಳ್ಳಿ/ಉರ್ಡಗೆರೆ/ತುಮಕೂರು.

II ಗ್ರಾಮದ ಉತ್ತರಕ್ಕೆ ೧ ಕಿ.ಮೀ. ಅಂತರ.

III ಉ.ಅ- ೧೩°೧೬'೧೬" ಪೂ.ರೇ- ೭೭°೧೧' ೫೭ G/೩

IV ಅಂತ್ಯ ಮತ್ತು ಸೂಕ್ಷ್ಮ.

V ನೆಲೆಯ ಉತ್ತರಕ್ಕೆ ಬೆಟ್ಟವಿದೆ. ಸ್ವಾಭಾವಿಕ ಕಲ್ಲಿನಾಸರೆಗಳಿವೆ. ನೀರಿನ ಹರಿವುಗಳಿವೆ. ಸ್ಥಳೀಯವಾಗಿ ಕಚ್ಚಾ ವಸ್ತುವಿದೆ.
ಮರಳು ಮಿಶ್ರಿತ ಕಂದು ಮಣ್ಣಿನ ಭೂಮಿಯಾಗಿದೆ.

VI ಸು. ೧ ಎಕರೆ ಪ್ರದೇಶ. ಸ್ವಾಭಾವಿಕವಾಗಿ ನೆಲೆ ಹಾಳಾಗಿದೆ.

VII ಅಂತ್ಯ- ನೀಳಚಕ್ಕೆ (೪), ಹೆರೆಚಕ್ಕೆ(೫) ಉಪಕರಣಗಳಿದ್ದು ಜಾಸ್ಪರ್ ಮತ್ತು ಕ್ವಾರ್ಟ್ಸ್ ಶಿಲೆಯಲ್ಲಿವೆ.
ಸೂಕ್ಷ್ಮ- ನೀಳಚಕ್ಕೆ(೫), ಮೊನೆ(೪) ಮತ್ತು ಹೆರೆಚಕ್ಕೆ(೧೦) ದೊರಕಿದ್ದು. ಜಾಸ್ಪರ್ ಮತ್ತು ಕ್ವಾರ್ಟ್ಸ್ ಶಿಲೆಯಲ್ಲಿವೆ.

೮೩

I ಹುಲಿಯೂರುದುರ್ಗ/ಹುಲಿಯೂರುದುರ್ಗ/ಕುಣಿಗಲ್.

II ಗ್ರಾಮದ ಪಶ್ಚಿಮಕ್ಕೆ ೦.೫ ಕಿ.ಮೀ. ಅಂತರ

III ಉ.ಅ- ೧೨°೪'೨೨" ಪೂ.ರೇ- ೭೭°೧'೩೬" ೫೭ H/೧

IV ಸೂಕ್ಷ್ಮ.

V ನೆಲೆಯ ಉತ್ತರಕ್ಕೆ ಗುಡ್ಡವಿದೆ. ಎತ್ತರದ ಪ್ರದೇಶ. ನೀರಿನ ಹರಿವುಗಳಿವೆ. ಸ್ಥಳೀಯವಾಗಿ ಕಚ್ಚಾವಸ್ತು ಇದೆ.
ಮರಳು ಮಿಶ್ರಿತ ಕೆಂಪು ಮಣ್ಣಿನ ಭೂಮಿಯಾಗಿದೆ.

VI ಸು. ೧ ಎಕರೆ ಪ್ರದೇಶ. ಕೃಷಿ ಭೂಮಿ. ನೆಲೆ ಹಾಳಾಗಿದೆ.

VII ಸೂಕ್ಷ್ಮ- ನೀಳಚಕ್ಕೆ(೨), ಮೊನೆ(೧), ಹೆರೆಚಕ್ಕೆ(೧) ಮತ್ತು ಬಾಣದ ಮೊನೆ(೧) ಉಪಕರಣಗಳು ಕ್ವಾರ್ಟ್ಸ್ ಶಿಲೆಯಲ್ಲಿವೆ.

೮೪

I ಹುಳಿಯೂರು/ಹುಳಿಯೂರು/ಚಿಕ್ಕನಾಯಕನಹಳ್ಳಿ.

II ಗ್ರಾಮದ ದಕ್ಷಿಣಕ್ಕೆ ೧ ಕಿ.ಮೀ. ಅಂತರ

III ಉ.ಅ- ೧೩°೩೫" ಪೂ.ರೇ- ೭೬°೩೭'೨೫" ೫೭ C/೧೦

IV ಬೃಹತ್.

V ಸು. ೦.೫ ಎಕರೆ ಪ್ರದೇಶ. ನೆಲೆ ಬಯಲು ಪ್ರದೇಶದಲ್ಲಿದೆ. ನೀರಿನ ಹರಿವು ಇದೆ.
ಮರಳು ಮಿಶ್ರಿತ ಕೆಂಪು ಮಣ್ಣಿನ ಭೂಮಿಯಾಗಿದೆ.

VI ಒಂದು ಶಿಲಾಗೋರಿ ಇದೆ. ಸುಸ್ಥಿತಿಯಲ್ಲಿದೆ.

VII ಬೃಹತ್- ಒಂದು ಶಿಲಾವೃತ್ತವಿದೆ.

೮೫

I ಹೂವಿನಕಟ್ಟೆ/ಹಾಗಲವಾಡಿ/ಗುಬ್ಬಿ.

II ಗ್ರಾಮದ ಪಶ್ಚಿಮಕ್ಕೆ ೦.೫ ಕಿ.ಮೀ. ಅಂತರ

III ಉ.ಅ- ೧೩°೨೯'೧೮" ಪೂ.ರೇ- ೭೬°೫೦'೨೧" ೫೭ C/೧೫

IV ಅಂತ್ಯ, ಸೂಕ್ಷ್ಮ ಮತ್ತು ನೂತನ.

V ನೆಲೆಯ ಉತ್ತರಕ್ಕೆ ಬೆಟ್ಟವಿದೆ. ಅಲ್ಲಲ್ಲಿ ಹುಟ್ಟು ಬಂಡೆಗಳಿವೆ. ನೀರಿನ ಸಂಗ್ರಹ ಕೇಂದ್ರಗಳಿವೆ. ಸ್ಥಳೀಯವಾಗಿ ಕಚ್ಚಾವಸ್ತುವಿದೆ. ಕೆಂಪು ಮಣ್ಣಿನ ಭೂಮಿಯಾಗಿದೆ.

VI ಸು. ೧ ಹೆಕ್ಟೇರ್ ಪ್ರದೇಶ. ಕೃಷಿ ಭೂಮಿ. ನೆಲೆ ಹಾಳಾಗಿದೆ.

VII ಅಂತ್ಯ- ನೀಳಚಕ್ಕೆ(೪), ಮೊನೆ(೨), ಹೆರೆಚಕ್ಕೆ(೨) ಮತ್ತು ಕೊರೆಯುಳಿ(೪) ಉಪಕರಣಗಳು ಅದಿರುಯುಕ್ತ ಜಾಸ್ಪರ್ ಮತ್ತು ಕ್ವಾರ್ಟ್ಜ಼ ಶಿಲೆಯಲ್ಲಿವೆ.

ಸೂಕ್ಷ್ಮ- ನೀಳಚಕ್ಕೆ(೨೮), ಮೊನೆ(೩), ಹೆರೆಚಕ್ಕೆ(೩೫), ಕೊರೆಯುಳಿ(೩), ಅರ್ಧಚಂದ್ರಾಕೃತಿ(೩೨) ಮತ್ತು ದಬ್ಬಳ(೪) ಉಪಕರಣಗಳು ಅದಿರುಯುಕ್ತ ಜಾಸ್ಪರ್ ಮತ್ತು ಕ್ವಾರ್ಟ್ಜ಼ ಶಿಲೆಯಲ್ಲಿವೆ.

ನೂತನ- ಉಂಗುರಕಲ್ಲು(೧) ಉಪಕರಣದ ಬಾಗ ಬಳಪದ ಕಲ್ಲಿನಲ್ಲಿದೆ.

ನೂತನ- ಸೂಕ್ಷ್ಮ ಶಿಲಾ ಉಪಕರಣ ನೀಳಚಕ್ಕೆ(೯), ಮೊನೆ(೪), ಹೆರೆಚಕ್ಕೆ(೧೮) ಕೊರೆಗ(೨) ಅರ್ದಚಂದ್ರಾಕೃತಿ(೨) ಮತ್ತು ಮೂಲಶಿಲಾಗಟ್ಟಿ(೪) ಇದೆ. ಅದಿರುಯುಕ್ತ ಜಾಸ್ಪರ್ ಮತ್ತು ಕ್ವಾರ್ಟ್ಜ಼ ಶಿಲೆಯಲ್ಲಿವೆ.

೮೬

I ಹೊನ್ನೇನಹಳ್ಳಿ/ಕೋಳಾಲ/ಕೊರಟಗೆರೆ.

II ಗ್ರಾಮದ ದಕ್ಷಿಣಕ್ಕೆ ೦.೫ ಕಿ.ಮೀ. ಅಂತರ.

III ಉ.ಅ- ೧೩°೨೬'೩೭" ಪೂ.ರೇ- ೭೭°೧೩'೩" ೫೭ G/೩

IV ಬೃಹತ್.

V ನೆಲೆಯ ದಕ್ಷಿಣಕ್ಕೆ ಬೆಟ್ಟವಿದೆ. ಕಲ್ಲು ಚಪ್ಪಡಿಗಳನ್ನು ತೆಗೆಯಲಾಗಿದೆ. ನೀರಿನ ಹರಿವುಗಳಿವೆ. ಮರಳು ಮಿಶ್ರಿತ ಕೆಂಪು ಮಣ್ಣಿನ ಭೂಮಿಯಾಗಿದೆ. ಸ್ಥಳೀಯವಾಗಿ ಕಚ್ಚಾವಸ್ತುವಿದೆ.

V ಸು. ೧ ಎಕರೆ ಪ್ರದೇಶ. ಶಿಲಾಗೋರಿಗಳು ಕೆಲವು ಹಾಳಾಗಿವೆ. ಕೆಲವು ಸುಸ್ಥಿತಿಯಲ್ಲಿವೆ.

VII ಶಿಲಾವೃತ್ತ ಮಾದರಿ ಹಾಗೂ ಕಲ್ಮನೆ ಮಾದರಿ ಗೋರಿಗಳಿವೆ.

೮೭

I ಹೊನ್ನೇಮಾರನಹಳ್ಳಿ/ತಿಪಟೂರು/ತಿಪಟೂರು.

II ಗ್ರಾಮದ ಪಶ್ಚಿಮಕ್ಕೆ ೦.೫ ಕಿ.ಮೀ. ಅಂತರ.

III ಉ.ಅ- ೧೩°೧೮'೬" ಪೂ.ರೇ- ೭೬°೩೩' ೫೭ C/೧೧

IV ಆದಿ, ಮಧ್ಯ, ಅಂತ್ಯ ಮತ್ತು ಸೂಕ್ಷ್ಮ.

V ನೆಲೆಯ ಉತ್ತರ ಮತ್ತು ಪಶ್ಚಿಮಕ್ಕೆ ಬೆಟ್ಟವಿದೆ. ಹುಟ್ಟು ಬಂಡೆಗಳಿವೆ. ನೀರಿನ ಹರಿವು ಇದೆ. ಸ್ಥಳೀಯವಾಗಿ ಕಚ್ಚಾವಸ್ತುವಿದೆ. ಮರಳು ಮಿಶ್ರಿತ ಕಂದು ಮಣ್ಣಿನ ಭೂಮಿಯಾಗಿದೆ.

VI ಸು. ೧ ಹೆಕ್ಟೇರ್ ಪ್ರದೇಶ. ಕೃಷಿ ಭೂಮಿ. ನೆಲೆ ಹಾಳಾಗಿದೆ.

VII ಆದಿ- ಸೀಳುಗತ್ತಿ(೨) ಉಪಕರಣ. ಚಕ್ಕೆ ಮಾದರಿಯಲ್ಲಿದೆ. ಕ್ವಾರ್ಟ್ಸೈಟ್ ಶಿಲೆಯದಾಗಿದೆ.

ಮಧ್ಯ- ಕೈಗೊಡಲಿ(೧), ಚಕ್ರಾಕಾರದ ಉಪಕರಣ(೧), ಹೆರೆಚಕ್ಕೆ ಮಾದರಿ(೪), ಸಾಮಾನ್ಯ ಮೊನೆ(೧), ಕೊರೆಗ(೧) ಮತ್ತು ಬಾಣದ ಮೊನೆ(೨), ಉಪಕರಣಗಳು ಜಾಸ್ಪರ್ ಮತ್ತು ಕ್ವಾರ್ಟ್ಜ಼ ಶಿಲೆಯಲ್ಲಿವೆ.

ಅಂತ್ಯ- ನೀಳಚಕ್ಕೆ(೧೧), ಮೊನೆ(೭), ಹೆರೆಚಕ್ಕೆ(೮), ಕೊರೆಗ(೨) ಉಪಕರಣಗಳು ಜಾಸ್ಪರ್ ಮತ್ತು ಕ್ವಾರ್ಟ್ಜ಼ ಶಿಲೆಯಲ್ಲಿವೆ.

ಸೂಕ್ಷ್ಮ- ನೀಳಚಕ್ಕೆ(೧೬), ಮೊನೆ(೪), ಹೆರೆಚಕ್ಕೆ(೪), ಬಾಣದ ಮೊನೆ(೨), ಕೊರೆಗ(೨) ಮತ್ತು ಅರ್ಧ ಚಂದ್ರಾಕೃತಿ(೨) ಉಪಕರಣಗಳು ಕ್ವಾರ್ಟ್ಜ಼ ಶಿಲೆಯಲ್ಲಿವೆ.

೮೮

I ಹೊಸಕೆರೆ/ಹಾಗಲವಾಡಿ/ಗುಬ್ಬಿ.

II ಗ್ರಾಮದ ದಕ್ಷಿಣಕ್ಕೆ ೨ ಕಿ.ಮೀ. ಅಂತರ.

III ಉ.ಅ- ೧೩°೨೫'೧೫" ಪೂ.ರೇ- ೭೬°೫೦'೧೫" ೫೭ C/೧೫

IV ಅಂತ್ಯ ಮತ್ತು ಸೂಕ್ಷ್ಮ.

V ನೆಲೆಯ ದಕ್ಷಿಣಕ್ಕೆ ಗುಡ್ಡವಿದೆ. ಹುಟ್ಟು ಬಂಡೆಗಳಿವೆ. ನೀರಿನ ಹರಿವುಗಳಿವೆ. ಸ್ಥಳೀಯವಾಗಿ ಕಚ್ಚಾ ವಸ್ತುವಿದೆ. ಮರಳು ಮಿಶ್ರಿತ ಕೆಂಪು ಮಣ್ಣು ಭೂಮಿಯಾಗಿದೆ.

VI ಸು. ೧ ಎಕರೆ ಪ್ರದೇಶ. ಕೃಷಿ ಭೂಮಿ. ನೆಲೆ ಹಾಳಾಗಿದೆ.

VII ಅಂತ್ಯ- ಈ ನೆಲೆಯನ್ನು ಮೂಗನಾಯಕನಕೋಟೆ ಉತ್ತರ ಎಂದು ಅಧ್ಯಯಿಸಲಾಗಿದೆ.
ಸೂಕ್ಷ್ಮ- ಈ ನೆಲೆಯನ್ನು ಮೂಗನಾಯಕನಕೋಟೆ ಉತ್ತರ ಎಂದು ಅಧ್ಯಯಿಸಲಾಗಿದೆ.

೮೯

I ಹೊಸಕೋಟೆ/ಕೋಳಾಲ/ಕೊರಟಗೆರೆ.

II ಗ್ರಾಮದ ಪಶ್ಚಿಮಕ್ಕೆ ೦.೫ ಕಿ.ಮೀ. ಅಂತರ.

III ಉ.ಅ- ೧೩°೨೭'೧೩" ಪೂ.ರೇ- ೭೭°೧೨'೨೯" ೫೭ G/೩

IV ಬೃಹತ್.

V ನೆಲೆಯ ದಕ್ಷಿಣಕ್ಕೆ ಬೆಟ್ಟವಿದೆ. ನೀರಿನ ಹರಿವುಗಳಿವೆ. ಶಿಲಾ ಚಪ್ಪಡಿಗಳನ್ನು ತೆಗೆದಿದೆ. ಮರುಳು ಮಿಶ್ರಿತ ಕೆಂಪು ಮಣ್ಣಿನ ಭೂಮಿಯಾಗಿದೆ.

VI ಸು. ೧ ಎಕರೆ ಪ್ರದೇಶ. ಕೃಷಿ ಭೂಮಿ. ಶಿಲಾಗೋರಿಗಳು ಹಾಳಾಗಿವೆ.

VII ಬೃಹತ್- ಶಿಲಾ ವೃತ್ತಗಳಿವೆ(೪).

೯೦

I ಹೊಸಹಳ್ಳಿ/ಹುಳಿಯೂರು/ಚಿಕ್ಕನಾಯಕನಹಳ್ಳಿ.

II ಗ್ರಾಮದ ಉತ್ತರಕ್ಕೆ ೧ ಕಿ.ಮೀ. ಅಂತರ

III ಉ.ಅ- ೧೩°೩೪'೮" ಪೂ.ರೇ- ೭೬°೩೦'೨೮" ೫೭ G/೧೦

IV ಅಂತ್ಯ, ಸೂಕ್ಷ್ಮ ಮತ್ತು ನೂತನ.

V ನೆಲೆ ಎತ್ತರದ ಪ್ರದೇಶದಲ್ಲಿದೆ. ಹುಟ್ಟು ಬಂಡೆಗಳಿವೆ. ನೀರಿನ ಸಂಗ್ರಹವಿದೆ. ಕೆಂಪು ಮಣ್ಣಿನ ಭೂಮಿಯಾಗಿದೆ. ಕಚ್ಚಾವಸ್ತು ಸ್ಥಳೀಯವಾಗಿದೆ.

VI ಸು. ೧ ಎಕರೆ ಪ್ರದೇಶ. ನೈಸರ್ಗಿಕವಾಗಿ ಹಾಳಾಗಿದೆ.

VII ಅಂತ್ಯ- ಹೆರೆಚಕ್ಕೆ(೩) ಮತ್ತು ಅರ್ಧಚಂದ್ರಾಕೃತಿ(೧) ಉಪಕರಣಗಳು ಕ್ವಾರ್ಟ್ಜ್ ಶಿಲೆಯಲ್ಲಿವೆ.
ಸೂಕ್ಷ್ಮ- ನೀಳಚಕ್ಕೆ(೧), ಮೊನೆ(೨), ಹೆರೆಚಕ್ಕೆ(೧) ಮತ್ತು ಬಾಣದ ಮೊನೆ(೧) ಉಪಕರಣವು ಕ್ವಾರ್ಟ್ಜ್ ಶಿಲೆಯಲ್ಲಿವೆ.
ನೂತನ- ಭಗ್ನ ಉಪಕರಣ(೧) ದೊರೆತಿದೆ. ಡಾಲರೈಟ್ ಶಿಲೆಯಲ್ಲಿದೆ.

ಅಧ್ಯಾಯ ನಾಲ್ಕು

# ಆದಿ ಹಳೆಶಿಲಾಯುಗ ಸಂಸ್ಕೃತಿ

ಕ್ರಿ.ಶ. ೧೮೬೩ರಲ್ಲಿ ಖ್ಯಾತ ಭೂ ವಿಜ್ಞಾನಿ ರಾಬರ್ಟ್ ಬ್ರೂಸ್ ಫೂಟ್ ರವರು ತಮಿಳುನಾಡಿನ ಪಲ್ಲಾವರಂ ಪ್ರದೇಶದ ಲ್ಯಾಟರೈಟ್ ಸ್ತರದಲ್ಲಿ ಶೋಧಿಸಿದ ಆದಿ ಹಳೆಶಿಲಾಯುಗದ ಉಪಕರಣಗಳು ಭಾರತದಲ್ಲಿ ಪ್ರಪ್ರಥಮವಾಗಿ ಶೋಧಿತವಾದ ಉಪಕರಣಗಳಾಗಿವೆ(ಫೂಟ್:೧೯೧೬). ಅಂದಿನಿಂದ ಇಂದಿನವರೆಗೆ ಭಾರತ ಹಾಗೂ ವಿದೇಶಗಳ ಹಲ-ವಾರು ಪುರಾತತ್ವ ಶಾಸ್ತ್ರಜ್ಞರ ಸತತ ಪರಿಶ್ರಮ ಹಾಗೂ ಪರಿಶೋಧನೆಗಳಿಂದ ಭಾರತಾದ್ಯಂತ ಅನೇಕ ಪ್ರಾಗೈತಿಹಾಸಿಕ ನೆಲೆ-ಗಳು ಬೆಳಕಿಗೆ ಬಂದಿವೆ. ಇವುಗಳಲ್ಲಿ ಹೆಚ್ಚಿನವು ನಮ್ಮ ದೇಶದ ಜೀವನದಿಗಳ ಪಾತ್ರದಲ್ಲಿ ಮತ್ತು ವ್ಯಾಪ್ತಿಯಲ್ಲಿ ನೆಲೆಗೊಂಡಿವೆ. ನದೀ ಪಾತ್ರಗಳಲ್ಲಿರುವ ಶಿಲಾಯುಗ ಸಂಸ್ಕೃತಿಗಳ ಅಧ್ಯಯನಗಳಲ್ಲಿ ಸೋಹನ್ (ಡಿ.ಟೆರ್ರಾ ಮತ್ತು ಪ್ಯಾಟರ್‌ಸನ್:೧೯೩೯), ಸಬರಮತಿ(ಜೂನರ್:೧೯೫೦) ಸಿಂಗರೋಲಿ(ಕೃಷ್ಣಸ್ವಾಮಿ ಮತ್ತು ಸೌಂದರರಾಜನ್:೧೯೫೧;೪-೪೫) ಮಲ-ಪ್ರಭಾ (ಜೋಶಿ:೧೯೫೫) ಬಿಯಾಸ್ ಮತ್ತು ಬಾನಗಂಗಾ(ಲಾಲ್:೧೯೫೬;೫೮-೯೨), ಕೃಷ್ಣಾ(ಸೌಂದರರಾಜನ್:೧೯೬೧;೬೮-೮೫), ನರ್ಮದಾ (ವೈಯ್ನ್‌ರೈಟ್:೧೯೬೪) ಪ್ರವರಾ(ಕಾರ್ವಿನಸ್:೧೯೭೦;೧೩-೨೨) ಹಾಗೂ ಲೂನಿ (ಮಿಶ್ರ:೧೯೬೩;೮೫-೧೬೫) ನದೀ ದಂಡೆಗಳಲ್ಲಿ ನಡೆದಿರುವ ಅಧ್ಯಯನಗಳಲ್ಲಿ ಶಿಲೋಪಕರಣಗಳು ನಿರ್ದಿಷ್ಟ ಭೌಗೋ-ಳಿಕ ಸ್ತರಗಳಲ್ಲಿ ದೊರೆತಿದ್ದು ಆದಿ ಹಳೆಶಿಲಾಯುಗದ ಪ್ರಾಕೃತಿಕ ಹಾಗೂ ಭೌಗೋಳಿಕ ಪರಿಸರದ ಅಧ್ಯಯನಕ್ಕೂ ಹೆಚ್ಚಿನ ಮಾಹಿತಿಗಳನ್ನು ಒದಗಿಸಿವೆ. ಈ ಸ್ಥಳಗಳಲ್ಲಿ ದೊರೆತಿದ್ದ ಆದಿ ಹಳೆಶಿಲಾಯುಗದ ಮಾನವನ ವಸತಿ ನಿವೇಶನ ಮತ್ತು ಜೀವನ ವಿಧಾನಕ್ಕೆ ಸಂಬಂಧಿಸಿದ ಇನ್ನೂ ಹೆಚ್ಚಿನ ಮಾಹಿತಿಗಳು ಬಿಂಬೇಟ್ಕ (ಮಿಶ್ರ ಮತ್ತು ವಾಕಂಕರ್:೧೯೭೬;೭-೨೯), ಚಿರ್ಕಿನೇ-ವಾಸ (ಕಾರ್ವಿನಸ್:೧೯೭೭;೨೧೬-೨೧೮) ಮತ್ತು ಕರ್ನಾಟಕದ ಹುಣಸಗಿ (ಪದ್ದಯ್ಯ:೧೯೮೨) ಯಲ್ಲಿ ನಡೆದ ಉತ್ಖನ-ನಗಳಲ್ಲಿ ಬೆಳಕಿಗೆ ಬಂದಿದೆ. ಆದಿ ಹಳೆಶಿಲಾಯುಗದ ಉಪಕರಣಗಳೊಂದಿಗೆ ಸೋಹನ್, ನರ್ಮದಾ (ವೈಯ್ನ್‌ರೈಟ್:೧೯೬೪) ಗೋದಾವರಿ ಮತ್ತು ಬೇಲಾನ್ (ಶರ್ಮಾ:೧೯೮೦) ನದಿ ಕಣಿವೆಗಳಲ್ಲಿ ಆ ಕಾಲದ ಪ್ರಾಣಿಗಳ ಪಳೆಯುಳಿಕೆಗಳೂ ಬೆಳಕಿಗೆ ಬಂದಿರುವುದು ಗಮನಾರ್ಹ ಅಂಶ.

ಕರ್ನಾಟಕಕ್ಕೆ ಸಂಬಂಧ ಪಟ್ಟಂತೆ ಈ ರಾಜ್ಯದ ದಕ್ಷಿಣ ಭಾಗಗಳಲ್ಲಿ ಅಲ್ಲಲ್ಲಿ ಕೆಲವು ನಿವೇಶನಗಳು ಬೆಳಕಿಗೆ ಬಂದಿದ್ದರೂ ಆ ಸಂಸ್ಕೃತಿಗೆ ಸಂಬಂಧಿಸಿದ ಹೆಚ್ಚಿನ ವಿವರಗಳು ಬೆಳಕಿಗೆ ಬಂದಿರುವುದು, ಉತ್ತರ ಕರ್ನಾಟಕದ ಜೀವನದಿಗಳ

ಪಾತ್ರದಲ್ಲಿ ನಡೆಸಿದ ಭೂವೈಜ್ಞಾನಿಕ ಪರಿಶೋಧನೆಗಳಿಂದಲೇ. ಕರ್ನಾಟಕದಲ್ಲಿ ಮೊದಲಬಾರಿಗೆ ನಿರ್ದಿಷ್ಟ ಭೌಗೋಳಿಕ ಪರಿಸರ ಮತ್ತು ಸ್ತರಗಳಲ್ಲಿ ಶಿಲೋಪಕರಣಗಳು ದೊರೆತಿರುವುದು ಈ ಪ್ರದೇಶದಲ್ಲಿಯೇ. ಇಂತಹ ಪ್ರಮುಖ ಅಧ್ಯಯನಗಳಲ್ಲಿ ಮಲಪ್ರಭಾ ನದೀ ಕಣಿವೆ (ಜೋಶಿ:೧೯೫೫.) ಕೃಷ್ಣಾಮೇಲ್ದಂಡೆ(ಪಪ್ಪು:೧೯೭೪) ಶೋರಾಪುರ ದೋಆಬ್(ಪದ್ದಯ್ಯ:೧೯೬೮) ಮುಂತಾದವುಗಳನ್ನು ಹೆಸರಿಸಬಹುದು. ಮೊದಲೆರಡು ಸ್ಥಳಗಳಲ್ಲಿ ನಡೆದ ಅಧ್ಯಯನಗ- ಳಿಂದ ಆದಿ ಮತ್ತು ಮಧ್ಯ ಹಳೆಶಿಲಾಯುಗದ ಎರಡು ಪ್ರತ್ಯೇಕ ಸಂಪ್ರದಾಯಗಳಿಗೆ ಸೇರಿದ ಶಿಲೋಪಕರಣಗಳನ್ನು ನಿರ್ದಿಷ್ಟ ಸ್ತರಗಳಲ್ಲಿ ಗುರುತಿಸಿ ಅವುಗಳ ಕಾಲಮಾನಗಳನ್ನು ನಿರ್ಧರಿಸಲು ಸಾಧ್ಯವಾಯಿತು.

ಶೋರಾಪುರ ಪ್ರದೇಶದಲ್ಲಿ ನಡೆದಿರುವ ಪ್ರಾಗೈತಿಹಾಸಿಕ ಅಧ್ಯಯನಗಳಿಂದ ಅಶ್ಯೂಲಿಯನ್ ಸಂಪ್ರದಾಯದ ಶಿಲೋಪಕರಣಗಳ ಬೃಹತ್ ಉತ್ಪಾದನಾ ಕೇಂದ್ರವೊಂದು ಬೆಳಕಿಗೆ ಬಂದಿದೆ. ಈ ಉತ್ಪಾದನಾ ಕೇಂದ್ರದಲ್ಲಿ ತಯಾರಿಸಲಾಗುತ್ತಿದ್ದ ಮುಖ್ಯ ಉಪಕರಣಗಳೆಂದರೆ ಕೈಗೊಡಲಿ, ಚಕ್ರಾಕಾರದ ಉಪಕರಣ, ಹೆರೆಗತ್ತಿ ಮತ್ತು ಚಾಕುಗಳು. ಮೊದಲ ಬಾರಿಗೆ ಈ ಉಪಕರಣಗಳನ್ನು ತಯಾರಿಸಲು ಆದಿ ಮಾನವನು ಸುಣ್ಣಕಲ್ಲನ್ನು ಉಪಯೋಗಿಸಿರುವುದು ಕುತೂಹಲಕರವಾದ ಅಂಶ. ತುಂಗಭದ್ರಾ ನದಿಯ ಬಲದಂಡೆಯ ಮೇಲಿರುವ ತೆಕ್ಕಲಕೋಟೆಯ ಹತ್ತಿರದ ನಿಟ್ಟೂರಿನಲ್ಲಿ ಉಂಡೆಗಲ್ಲುಗಳಿಂದ ರೂಪಿಸಿದ ಶಿಲೋಪಕರಣಗಳ ಸಮಕಾಲ ಎನ್ನಬಹುದಾದ ಗೋವಿನ ಜಾತಿಯ ಪ್ರಾಣಿಯ ಪಳೆಯುಳಿಕೆಗಳು ದೊರೆತಿವೆ (ಅನ್ಸಾರಿ:೧೯೭೦;೧-೭). ಇದೇ ಉಂಡೆಗಲ್ಲಿನ ಸ್ತರಗಳಲ್ಲಿ ಮಧ್ಯ ಹಳೆಶಿಲಾಯುಗದ ಉಪಕರಣಗಳೂ ದೊರೆತಿರುವುದು ಕುತೂಹಲಕರವಾದ ಅಂಶ. ಇದೇ ರೀತಿಯಲ್ಲಿ ತುಂಗಭದ್ರಾ ದಂಡೆಯ ಹಂಪಸಾಗರದಲ್ಲಿಯೂ ಮಧ್ಯ ಮತ್ತು ಅಂತ್ಯ ಹಳೆಶಿಲಾಯುಗದ ಉಪಕರಣಗಳು ದೊರೆತಿವೆ (ಶೇಷಾದ್ರಿ:೧೯೫೬). ಇತ್ತೀಚಿನ ಪರಿಶೋಧನೆಗಳಿಂದ ಗುಲ್ಬರ್ಗ, ಬೀದರ್, ಧಾರವಾಡ, ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಇನ್ನಷ್ಟು ಹೆಚ್ಚಿನ ಸಂಖ್ಯೆಯ ನಿವೇಶನಗಳು ಬೆಳಕಿಗೆ ಬಂದಿವೆ (ಇಂ.ಆ.ರಿ:೧೯೭೬-೭೭ ರಿಂದ ೧೯೯೫-೯೬).

ಉತ್ತರ ಕರ್ನಾಟಕದ ಶೋಧನೆಗಳಿಂದ ಆದಿ ಹಳೆಶಿಲಾಯುಗ ಸಂಸ್ಕೃತಿಯ ಬಗೆಗಿನ ಇಷ್ಟೊಂದು ವಿವರಗಳು ತಿಳಿದು ಬಂದಿದ್ದರೂ ದಕ್ಷಿಣ ಕರ್ನಾಟಕದಲ್ಲಿ ಬಿಡಿ ಬಿಡಿಯಾದ ಕೆಲವು ನಿವೇಶನಗಳು ಮಾತ್ರ ಬೆಳಕಿಗೆ ಬಂದಿವೆ. ಇಡೀ ಪ್ರದೇಶಕ್ಕೇ ಸಂಬಂಧಿಸಿದಂತೆ ಒಂದು ಸ್ಪಷ್ಟ ಚಿತ್ರಣ ದೊರೆತಿಲ್ಲ. ಅಂತಹ ಬಿಡಿ ನಿವೇಶನಗಳಲ್ಲಿ ಮುಖ್ಯವಾದುವು- ಗಳೆಂದರೆ ಕಿಬ್ಬನಹಳ್ಳಿ , ಬಿಳಿಗೆರೆ, (ಸಂಪತ್ಐಯ್ಯಂಗಾರ್: ೧೯೨೪) ಕಡೂರು, ನ್ಯಾಮತಿ, ತಾಳ್ಯ (ಶೇಷಾದ್ರಿ:೧೯೫೬) ಮುಂತಾದವು. ಇವುಗಳಲ್ಲಿ ಕಿಬ್ಬನಹಳ್ಳಿ ಒಂದು ಮಹತ್ವದ ನೆಲೆಯಾಗಿದ್ದು ದೇಶ ವಿದೇಶಗಳ ಪ್ರಸಿದ್ಧ ಪುರಾತತ್ವ ಶಾಸ್ತ್ರಜ್ಞರು ಅಲ್ಲಿನ ನೆಲೆ

ಮತ್ತು ಉಪಕರಣಗಳನ್ನು ಪುನಃ ಪುನಃ ಪರಿಶೀಲನೆ ನಡೆಸಿ ಹೊಸ ಹೊಸ ಮಾಹಿತಿಗಳನ್ನು ದೊರಕಿಸಿಕೊಟ್ಟಿದ್ದಾರೆ (ಕೆ.ಶ್ರೀಪಾದರಾವ್:೧೯೩೨;೧೦೬-೧೧೮, ಬಿ.ಆಲ್ಚಿನ್:೧೯೫೨;೨೬೮-೭೧ ಮತ್ತು ಎಂ.ಶೇಷಾದ್ರಿ:೧೯೫೬;೧೨-೨೪ ). ಇವುಗಳ ಜೊತೆಗೆ ತುಂಗಭದ್ರಾ, ಹೇಮಾವತಿ ಮತ್ತು ವೇದಾವತಿ ನದೀ ಕಣಿವೆಗಳಲ್ಲಿ ಇತ್ತೀಚೆಗೆ ನಡೆದಿರುವ ಶೋಧನೆಗಳಿಂದ (ಪೂಣಚ್ಚ:೧೯೯೦:೭೧-೧೯೮). ಆದಿ ಹಳೆಶಿಲಾಯುಗದ ಭೌಗೋಳಿಕ ವ್ಯಾಪ್ತಿ ಮತ್ತು ಉಪಕರಣ ವೈವಿಧ್ಯಗಳ ಬಗೆಗೆ ಹೆಚ್ಚಿನ ಮಾಹಿತಿ ದೊರೆತಂತಾಗಿದೆ.

ಈ ಹಿನ್ನೆಲೆಯಲ್ಲಿ ಮಲೆನಾಡು ಪ್ರದೇಶದ ಪೂರ್ವಕ್ಕಿರುವ ತುಮಕೂರು ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ಸಂಸ್ಕೃತಿಗಳ ಭೌಗೋಳಿಕ ವ್ಯಾಪ್ತಿ ಮತ್ತು ಉಪಕರಣಗಳ ವೈವಿಧ್ಯವನ್ನು ತಿಳಿಯಲು ಪ್ರಸ್ತುತ ಸಂಶೋಧನೆಯನ್ನು ಕೈಗೊಳ್ಳಲಾಯಿತು.

ಈ ಶೋಧನೆಯ ಫಲವಾಗಿ ಒಟ್ಟು ಹದಿನೆಂಟು ಸ್ಥಳಗಳಲ್ಲಿ ಆದಿ ಹಳೆಶಿಲಾಯುಗದ ಉಪಕರಣಗಳು ಬೆಳಕಿಗೆ ಬಂದಿವೆ. ಈ ನಿವೇಶನಗಳು ಮತ್ತು ಅವು ನೆಲೆಗೊಂಡಿರುವ ಸ್ಥಳ ವಿವರಗಳನ್ನು ಕೋಷ್ಟಕ ಸಂಖ್ಯೆ ೪.೧ ನಲ್ಲಿ, ಭೂನಕ್ಷೆ ಪುಟ ಸಂಖ್ಯೆ ೬೧ ರಲ್ಲಿ ನೀಡಲಾಗಿದೆ. ವೃತ್ತ ನಕ್ಷೆಯನ್ನು ೫ ಉಪಕರಣಗಳಿಗೂ ಹೆಚ್ಚು ದೊರೆತ ನೆಲೆಗಳನ್ವಯದಂತೆ ರೂಪಿಸಿ ವೃತ್ತ ನಕ್ಷೆ ಸಂಖ್ಯೆ ೪.ಅ ನಲ್ಲಿ ನೀಡಲಾಗಿದೆ.

**ಆದಿ ಹಳೆಶಿಲಾಯುಗದ ನೆಲೆಗಳು**

ವೃತ್ತ ನಕ್ಷೆ ಸಂಖ್ಯೆ ೪.ಅ





ಪಾವಗಡ
ಚಿತ್ರದುರ್ಗ ಜಿಲ್ಲೆ
ಅನಂತಪುರ ಜಿಲ್ಲೆ
ಶಿರಾ
ಮಧುಗಿರಿ
ಕೋಲಾರ ಜಿಲ್ಲೆ
ಚಿಕ್ಕಮಗಳೂರು ಜಿಲ್ಲೆ
ಕೊರಟಗೆರೆ
ಚಿಕ್ಕನಾಯಕನಹಳ್ಳಿ
ತುಮಕೂರು
ಗುಬ್ಬಿ
ತಿಪಟೂರು
ಬೆಂಗಳೂರು ಜಿಲ್ಲೆ
ತುರುವೇಕೆರೆ
ಹಾಸನ ಜಿಲ್ಲೆ
ಕುಣಿಗಲ್
ಮಂಡ್ಯ ಜಿಲ್ಲೆ

ಆದಿ ಹಳೆಶಿಲಾಯುಗದ ನೆಲೆಗಳು.

ಕೋಷ್ಟಕ ಸಂಖ್ಯೆ ೪.೧

| ಕ್ರಮ ಸಂಖ್ಯೆ | ನೆಲೆ | ಪರಿಸರ |
|---|---|---|
| ೧ | ಅಪ್ಪಾನಹಳ್ಳಿ | ಬೆಟ್ಟದ ತಪ್ಪಲಿನಲ್ಲಿ ಸ್ವಾಭಾವಿಕ ನೀರಿನಾಸರೆ. |
| ೨ | ಅವಗ್ಗಲ್ಲಿ. | ಬೆಟ್ಟದ ತಪ್ಪಲು. |
| ೩ | ಓಬಳಾಪುರ | ಬೆಟ್ಟದ ತಪ್ಪಲಿನಲ್ಲಿ ಸ್ವಾಭಾವಿಕ ನೀರಿನಾಸರೆ. |
| ೪ | ಕೈಮರ | ಬೆಟ್ಟದ ತಪ್ಪಲಿನಲ್ಲಿ ಸ್ವಾಭಾವಿಕ ನೀರಿನಾಸರೆ. |
| ೫ | ಗಳಿಗೆರೆ | ಬೆಟ್ಟದ ತಪ್ಪಲಿನಲ್ಲಿ ಸ್ವಾಭಾವಿಕ ನೀರಿನಾಸರೆ. |
| ೬ | ಚಿಕ್ಕೇಗೌಡನರೊಪ್ಪ | ಬೆಟ್ಟದ ತಪ್ಪಲು |
| ೭ | ದೊಡ್ಡಗುಣಿ | ಬೆಟ್ಟದ ತಪ್ಪಲು |
| ೮ | ಬೊಮ್ಮೇನಹಳ್ಳಿ | ಬೆಟ್ಟದ ತಪ್ಪಲು |
| ೯ | ಬೂದಿಗುಡ್ಡ | ಬೆಟ್ಟದ ತಪ್ಪಲು |
| ೧೦ | ಮಾರಶೆಟ್ಟಿಹಳ್ಳಿ | ಬೆಟ್ಟದ ತಪ್ಪಲು |
| ೧೧ | ಮೂಗನಾಯಕನಕೋಟೆ | ಬೆಟ್ಟದ ತಪ್ಪಲು |
| ೧೨ | ಮಂಚಲದೊರೆ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ. |
| ೧೩ | ಯಕ್ಕಲಕಟ್ಟೆ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ. |
| ೧೪ | ಯಲ್ಲಪ್ಪನಾಯಕನಹೊಸಕೋಟೆ | ಬೆಟ್ಟದ ತಪ್ಪಲು |
| ೧೫ | ಶಿವಪುರ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ. |
| ೧೬ | ಸೀಗೆಹಳ್ಳಿ | ಬೆಟ್ಟದ ತಪ್ಪಲು. |
| ೧೭ | ಹರೇನಹಳ್ಳಿ | ಬೆಟ್ಟದ ತಪ್ಪಲು. |
| ೧೮ | ಹೊನ್ನೇಮಾರನಹಳ್ಳಿ | ಬೆಟ್ಟದ ತಪ್ಪಲು |

**ಪರಿಸರ ಮತ್ತು ಶಿಲಾಮಾದರಿ**

ಭೂಶಾಸ್ತ್ರಜ್ಞರು ಅಭಿಪ್ರಾಯ ಪಟ್ಟಿರುವಂತೆ ಭಾರತದಲ್ಲಿ ಆದಿ ಹಳೆಶಿಲಾಯುಗದ ಕಾಲದಲ್ಲಿ ಇಂದಿಗಿಂತ ಸುಮಾರು ಒಂದುವರೆ ಪಟ್ಟು ಹೆಚ್ಚು ಮಳೆಯಾಗುತ್ತಿತ್ತು. ಇದರಿಂದಾಗಿ ಹೆಚ್ಚು ತಗ್ಗಾದ ಪ್ರದೇಶಗಳು ಜಲಾವೃತವಾಗಿದ್ದು ಜೌಗು ಪ್ರದೇಶವನ್ನು ಹೊಂದಿದ್ದುದೇ ಅಲ್ಲದೆ ಆಗ ಸಸ್ಯ ಸಂಪತ್ತೂ ಹೆಚ್ಚಾಗಿತ್ತು. ಹೀಗೆ ತುಮಕೂರು ಜಿಲ್ಲಾ ಪ್ರದೇಶದಲ್ಲಿ ಈ ಸಂಸ್ಕೃತಿಯ ಕಾಲಮಾನದ ಪರಿಸರವು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಿಭಿನ್ನವಾಗಿದ್ದಿರಬೇಕೆಂದು ತಿಳಿ-ಯುತ್ತದೆ. ಗುಡ್ಡ ಬೆಟ್ಟಗಳಿರುವ ಪ್ರದೇಶ ಮತ್ತು ನೀರಿನಾಸರೆ ಇರುವ ಪ್ರದೇಶಗಳು ಒಂದು ರೀತಿಯ ಪರಿಸರವನ್ನು ಹೊಂದಿದ್ದರೆ, ಮತ್ತಿತರ ಪ್ರದೇಶಗಳು ಇದಕ್ಕಿಂತ ಭಿನ್ನವಾಗಿದ್ದಿರಬೇಕೆಂದು ತಿಳಿಯುತ್ತದೆ. ನಿರ್ದಿಷ್ಟ ಪ್ರದೇಶಗಳು ಮಾತ್ರ ಪ್ರಾಣಿ ಸಂಕುಲಗಳ ಇರುವಿಕೆಗೆ ಯೋಗ್ಯವಾದ ಸ್ಥಳವಾಗಿದ್ದಿರಬೇಕು.

ಪ್ರಸ್ತುತ ಅಧ್ಯಯನ ಪ್ರದೇಶವು ದಕ್ಷಿಣ ಕರ್ನಾಟಕದ ಪ್ರಸ್ಥ ಭೂಮಿಗೆ ಕೇಂದ್ರ ಸ್ಥಳವಾಗಿದ್ದು ಸಮುದ್ರ ಮಟ್ಟದಿಂದ ಸುಮಾರು ೩೦೦ ರಿಂದ ೬೦೦ ಮೀ. ಎತ್ತರದಲ್ಲಿದೆ. ನೈಋತ್ಯಕ್ಕಿರುವ ಮಲೆನಾಡು ಮತ್ತು ಅರೆಮಲೆ-ನಾಡು ಅಥವಾ ಮೈದಾನ ಪ್ರದೇಶಗಳ ಪರಿಧಿಯಲ್ಲಿದೆ. ಹಾಗೂ ಇಲ್ಲಿ ದೊರೆತಿರುವ ಆದಿ ಹಳೆಶಿಲಾಯುಗದ ನೆಲೆಗಳು ತಮ್ಮದೇ ಆದ ನಿರ್ದಿಷ್ಟ ಭೌಗೋಳಿಕ ಪರಿಸರವನ್ನು ಹೊಂದಿದ್ದು ಸುಮಾರು ೩೦ ಕಿ.ಮೀ. ವ್ಯಾಪ್ತಿಯಲ್ಲಿ ಪಸರಿಸಿರುವುದನ್ನು

ಕಾಣಬಹುದು. ಈ ಸ್ಥಳದ ಭೂ ಭಾಗವು ತಮ್ಮ ಹೊರ ಪರಧಿಯಲ್ಲಿ ಕಣಶಿಲೆಗಳ ಉನ್ನತವಾದ ಗುಡ್ಡಗಳನ್ನು ಹೊಂದಿದ್ದು ಅಲ್ಲಲ್ಲಿ ಕ್ವಾರ್ಟ್ಸೈಟ್, ಕ್ವಾರ್ಟ್ಸ್ ಮತ್ತು ಶಿಸ್ಟ್ ಮಾದರಿಯ ಅಡ್ಡ ಅಯ್ದ ಶಿಲಾ ಸ್ತರಗಳನ್ನು ಹೊಂದಿದ್ದು ಮೊರಜುಗಲ್ಲಿನ(Latrite) ಭೂ ಪ್ರದೇಶದಲ್ಲಿ ವೇಗವಾಗಿ ಹರಿಯುವ ಮಳೆಗಾಲದ ಕೊರಕಲು, ಹಳ್ಳ, ನಾಲೆಗಳು ಇಲ್ಲಿನ ಭೌಗೋಳಿಕ ಚಿತ್ರಣದ ಭಾಗವಾಗಿರುವುದೇ ಅಲ್ಲದೆ, ಈ ನಾಲೆಗಳು ತಗ್ಗು ಪ್ರದೇಶದ ಸಾಧಾರಣದಿಂದ ಸುಮಾರು ಆಳ-ವಾದ ಅರ್ಧವೃತ್ತಾಕಾರದ, ವೃತ್ತಾಕಾರದ ಮತ್ತು ಆಮೀಬಾ ಆಕಾರದ ಕೊಳ್ಳಗಳಿಗೆ ಅಥವಾ ಕೆರೆಗಳಿಗೆ ಸೇರುತ್ತವೆ. ಈ ನೈಸ-ರ್ಗಿಕ ತೊರೆ, ಹಳ್ಳ ಹಾಗೂ ಕಣಿವೆಗಳಲ್ಲಿನ ಕೆರೆ, ಕುಂಟೆಗಳ ಪ್ರದೇಶದಲ್ಲಿ ಸುಮಾರು ೧ಲ ನೆಲೆಗಳು ಕಂಡುಬಂದಿವೆ. ಇತ್ತೀ-ಚಿನ ಮಾನವನ ತೀವ್ರತರವಾದ ವ್ಯವಸಾಯಕ್ಕೆ ಒಳಪಟ್ಟಿದ್ದರೂ ಅಪ್ಪಾನಹಳ್ಳಿ, ಮೂಗನಾಯಕನಕೋಟೆಯಂತಹ ಕೆಲವು ನೆಲೆಗಳು ತಮ್ಮ ಅಂದಿನ ಮೂಲಸ್ವರೂಪವನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹ. ಹೀಗೆ ಮೂಗನಾಯಕನ-ಕೋಟೆಯಲ್ಲಿ ಆದಿ ಹಳೆಶಿಲಾಯುಗದ ಅವಶೇಷಗಳು ದೊರಕುವ ಸ್ತರವಿವರಣೆಯು ದೊರಕಿದೆ(ರೇಖಾ ನಕ್ಷೆ ೪.೧ ಛಾಯಾ ಚಿತ್ರ ಸಂಖ್ಯೆ ೪.೩ ಮತ್ತು ೪.೪) ಉಪಕರಣ ತಯಾರಿಕಾ ಸ್ಥಳ (ರೇಖಾ ನಕ್ಷೆ ಸಂಖ್ಯೆ ೪.೨ ಮತ್ತು ಛಾಯಾಚಿತ್ರ ಸಂಖ್ಯೆ ೪.೫ ೪.೬ ಉಪಕರಣ ತಯಾರಿಕಾ ವೇದಿಕೆ ಛಾಯಾ ಚಿತ್ರ ಸಂಖ್ಯೆ ೪.೭ ಮತ್ತು ೪.೮ ) ಅದೇ ಸ್ಥಳದಲ್ಲಿ ದೊರೆತ ಉಪಕರಣಗಳು (ಛಾಯಾ ಚಿತ್ರ ೪.೯.೧, ೪.೯.೨ ಮತ್ತು ತ್ಯಾಜ್ಯ ಚಕ್ಕೆಗಳನ್ನು ಛಾಯ ಚಿತ್ರ ಸಂಖ್ಯೆ ೪.೧೦.೧, ೪.೧೦.೨) ಇರುವುದನ್ನು ಈಗಲೂ ಕಾಣಬಹುದು. ಮೇಲೆ ಹೇಳಿದ ಚಿತ್ರಣವು ಮೂಗನಾಯಕನಕೋಟೆಯದಾದರೆ ಅದರ ವಾಯುವ್ಯಕ್ಕೆ ೨೦ ಕಿ.ಮೀ. ದೂರದಲ್ಲಿರುವ ಅಪ್ಪಾನಹಳ್ಳಿಯ ಭೌಗೋಳಿಕ ಪರಿಸರವು ಅದು ಒಂದು ಜೌಗು ಪ್ರದೇಶವಾ-ಗಿತ್ತೆಂಬುದನ್ನು ಅಲ್ಲಿ ದೊರೆತಿರುವ ಉಪಕರಣಗಳ ಮೇಲೆ ರೂಪಿತವಾಗಿರುವ ನೈಸರ್ಗಿಕ ಪೊರೆಯಿಂದ ತಿಳಿದು ಬರುತ್ತದೆ. ಅವುಗಳನ್ನು ಬಳಸಿದ ಉದ್ದೇಶಗಳನ್ನು ಅವಲೋಕಿಸಿದರೆ ವಿವಿಧ ಮಾದರಿ ಪ್ರಾಣಿ-ಪಕ್ಷಿ ಹಾಗೂ ಜೀವಜಂತುಗಳು ಸಾಕಷ್ಟು ಸಂಖ್ಯೆಯಲ್ಲಿಯೇ ಇದ್ದಿತೆಂದು ತಿಳಿಯುತ್ತದೆ.

ರೇಖಾ ನಕ್ಷೆ ಸಂಖ್ಯೆ ೪.೧

ಶಿಲಾಯುಧಗಗಳುಳ್ಳ ಸ್ತರ
ಮೊರಜು ಕಲ್ಲಿನ ಸ್ತರ
ಕೆಮ್ಮಣ್ಣಿನ ಸ್ತರ

ಶಿಸ್ಟ್ ಶಿಲಾ ಸ್ತರ



ರೇಖಾ ನಕ್ಷೆ ಸಂಖ್ಯೆ ೪.೨


ಉ
ಸೂಚಿ
::: ನೊರಜುಗಲ್ಲಿನ ಭೂಮಿ
::: ಕಲ್ಲಿನ ಚೆಕ್ಕೆ
::: ಶಿಲಾಯುಧಗಳು
ಹಳ್ಳ
ಮಳೆಗಾಲದ ತೊರೆ
ಖುಷ್ಕಿ ಭೂಮಿ
ಕಲ್ಲಿನ ಆಯುಧ
ತಯಾರಿಕಾ ವೇದಿಕೆ
ಕೊರಕಲು
ಕಟ್ಟೆ





ಛಾಯ ಚಿತ್ರ ಸಂಖ್ಯೆ ೪.೩ ಮತ್ತು ೪.೪





ಛಾಯ ಚಿತ್ರ ಸಂಖ್ಯೆ ೪.೫ ಮತ್ತು ೪.೬







ಛಾಯ ಚಿತ್ರ ಸಂಖ್ಯೆ ೪.೭ ಮತ್ತು ೪.೮



ಛಾಯ ಚಿತ್ರ ಸಂಖ್ಯೆ ೪.೯.೧(ಮುಂಬದಿ)



ಛಾಯ ಚಿತ್ರ ಸಂಖ್ಯೆ ೪.೯.೨(ಹಿಂಬದಿ)





ಛಾಯ ಚಿತ್ರ ಸಂಖ್ಯೆ ೪.೧೦.೧(ಮುಂಬದಿ) ಮತ್ತು ೪.೧೦.೨(ಹಿಂಬದಿ)

ಅದೇ ರೀತಿ ನಿರ್ದಿಷ್ಟ ಉಪಯುಕ್ತ ಶಿಲಾ ಮಾದರಿ ದೊರಕುವ ಸ್ಥಳಗಳಲ್ಲಿ ಮಾತ್ರ ಶಿಲೋಪಕರಣಗಳನ್ನು ರೂಪಿಸಿಕೊಂಡಂತೆ ತಿಳಿಯುತ್ತದೆ. ಅದರಲ್ಲಿಯೂ ಪ್ರಮುಖವಾಗಿ ದೊರಕುವ ಕ್ವಾರ್ಟ್ಜೈಟ್ ಶಿಲಾಮಾದರಿಯನ್ನು ಹೆಚ್ಚಾಗಿ ಉಪಯೋಗಿಸಿಕೊಳ್ಳಲಾಗಿದೆ. ಕ್ವಾರ್ಟ್ಜ್, ಕಬ್ಬಿಣಯುಕ್ತ ಕಪ್ಪುಕಲ್ಲು ಮುಂತಾದವುಗಳ ಬಳಕೆಯನ್ನು ಅಲ್ಲಲ್ಲಿ ಗುರುತಿಸಬಹುದು. ಸ್ಥಳೀಯವಾಗಿ ದೊರಕುವ ಶಿಲಾ ಮಾದರಿಗಳನ್ನಷ್ಟೇ ಬಳಸಿರುವುದು ತಿಳಿಯುತ್ತದೆ. ದೊರೆತಿರುವ ಒಟ್ಟು ಉಪಕರಣಗಳ ಶಿಲಾ ಮಾದರಿಯನ್ನು ಕೋಷ್ಟಕ ಸಂಖ್ಯೆ ೪.೨ ರಲ್ಲಿ ನೀಡಿದೆ, ವೃತ್ತ ನಕ್ಷೆ ಸಂಖ್ಯೆ ೪.೮ ರಲ್ಲಿ ನೀಡಿದೆ,

*ಆದಿ ಹಳೆಶಿಲಾಯುಗದ ಉಪಕರಣಗಳ ಶಿಲಾಮಾದರಿ.*

ಕೋಷ್ಟಕ ಸಂಖ್ಯೆ ೪.೨

| | ಕ್ವಾರ್ಟ್ಸೈಟ್ | ಕ್ವಾರ್ಟ್ಸ್ | ಡೈಕ್ | ಅದಿರುಯುಕ್ತ ಜಾಸ್ಪರ್ | ಅದಿರುಯುಕ್ತಕಪ್ಪು ಉಂಡೆಕಲ್ಲು | ಒಟ್ಟು |
|---|---|---|---|---|---|---|
| ಉಪಕರಣಸಂಖ್ಯೆ | ೭೭ | ೨೮ | ೫ | ೪ | ೭ | ೧೨೧ |
| ಶೇಕಡಾ | ೬೩.೬೪ | ೨೩.೧೪ | ೪.೧೩ | ೩.೩೦ | ೫.೭೮ | |

ವೃತ್ತ ನಕ್ಷೆ ಸಂಖ್ಯೆ ೪.೮




**ಉಪಕರಣ ವೈವಿಧ್ಯ**

ಪ್ರಸ್ತುತ ಸ್ಥಳ ಪರಿಶೋಧನೆಯಲ್ಲಿ ಆದಿ ಹಳೆಶಿಲಾಯುಗಕ್ಕೆ ಸೇರುವ ಒಟ್ಟು ೧೨೧ ಉಪಕರಣಗಳು ದೊರೆತಿವೆ. ಅವುಗಳ ಆಕಾರ ಮತ್ತು ಉಪಯೋಗವನ್ನು ಅನುಸರಿಸಿ ಅವುಗಳನ್ನು ಕೈಗೊಡಲಿ, ಮಚ್ಚುಗತ್ತಿ, ಚಕ್ರಾಕಾರದ ಉಪಕರಣ, ಅಂಡಾಕೃತಿ ಉಪಕರಣ, ಸೀಳುಗತ್ತಿ ಮತ್ತು ಹೆರೆಗತ್ತಿ ಉಪಕರಣಗಳು ಎಂದು ವಿಂಗಡಿಸಲಾಗಿದೆ. ಇವುಗಳಲ್ಲದೆ ಮೊದಲಿಗೆ ಮೇಲಿನ ಯಾವುದಾದರೊಂದು ವರ್ಗಕ್ಕೆ ಸೇರಿದ ಉಪಕರಣವಾಗಿದ್ದು, ಹೆಚ್ಚಿನ ಉಪಯೋಗದಿಂದ ಮುರಿದು ಅನಂತರ ಯಾವುದೇ ನಿರ್ದಿಷ್ಟ ಉಪಕರಣಗಳ ಗುಂಪಿಗೆ ಸೇರಿಸಲಾಗದಂತಹ ಹದಿಮೂರು ಉಪಕರಣಗಳು ದೊರೆತಿವೆ. ಮೇಲೆ ಹೇಳಿದ ಮುಖ್ಯ ಉಪಕರಣಗಳನ್ನು, ಮೂಲಗಟ್ಟಿ ಉಪಕರಣ(ಒಟ್ಟು ೭೮;ಶೇ.೬೪.೪೬) ಮತ್ತು ಚಕ್ಕೆ(ಒಟ್ಟು ೪೩;ಶೇ.೩೫.೫೩) ಉಪಕರಣಗಳೆಂದು ಉಪ ವಿಭಾಗ ಮಾಡಬಹುದು. ಮೂಲಗಟ್ಟಿ ಉಪಕರಣಗಳನ್ನು ಸಾಧಾರಣವಾಗಿ, ಸ್ವಾಭಾವಿಕವಾಗಿ ದೊರೆಯುವ ಅನಿರ್ದಿಷ್ಟ ಆಕಾರದ ಮೂಲ ಶಿಲಾ ಖಂಡಗಳನ್ನು ಉಪಯೋಗಿಸಿ ತಯಾರಿಸಿದ್ದರೂ ಕೆಲ ಉಪಕರಣಗಳನ್ನು ನದಿ, ತೊರೆಗಳ ಪಾತ್ರಗಳಲ್ಲಿ ದೊರಕುವಂತಹ ಮಧ್ಯಮ ಗಾತ್ರದ ಉಂಡೆಗಲ್ಲುಗಳನ್ನು ಉಪಯೋಗಿಸಿ ತಯಾರಿಸಿರುವುದು ಕಂಡು ಬರುತ್ತದೆ. ಉಂಡೆಗಲ್ಲುಗಳಿಂದ ರೂಪಿಸಿರುವ ಈ ಉಪಕರಣಗಳು ತೀರಾ ಕಡಿಮೆ ಸಂಖ್ಯೆಯ-

ಲ್ಲಿದ್ದು ಕೆಲವೇ ನೆಲೆಗಳಿಗೆ ಸೀಮಿತವಾಗಿರುವುದರಿಂದ ಮತ್ತು ಹೆಚ್ಚಿನ ವೈಶಿಷ್ಟ್ಯ ಕಂಡು ಬರದಿರುವುದರಿಂದ ಅವುಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸದೆ ಮೂಲ ಶಿಲಾಗಟ್ಟಿಗಳಿಂದ ರೂಪಿಸಿರುವ ಉಪಕರಣಗಳೊಂದಿಗೆ ಪರಿಶೀಲಿಸಿದೆ.

ದೊರೆತಿರುವ ಉಪಕರಣಗಳಲ್ಲಿ ಪ್ರತಿಯೊಂದರ ನೆಲೆ, ವೈವಿಧ್ಯ, ಸಂಖ್ಯೆ ಮತ್ತು ಶೇಕಡಾವಾರು ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೪.೩.೧ ಮತ್ತು ೪.೩.೨ ರಲ್ಲಿ ನೀಡಿದೆ. ಒಟ್ಟು ಉಪಕರಣಗಳ ಶೇಕಡಾವಾರು ಪ್ರಮಾಣದನ್ವಯದಂತೆ ವೃತ್ತ ನಕ್ಷೆ ೪.ಇ ಯನ್ನುರೂಪಿಸಲಾಗಿದೆ ಪ್ರತಿಯೊಂದು ಉಪವಿಭಾಗದ ಉಪಕರಣಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದೆ.

ಕೋಷ್ಟಕ ಸಂಖ್ಯೆ ೪.೩.೧

| ಕ್ರಮ ಸಂಖ್ಯೆ | ನೆಲೆ | ಕೈಕೊಡಲಿ handaxe | | | | ಅಂಡಾಕಾರ ovate | | ಸೀಳುಗತ್ತಿ cleaver | | ಮಚ್ಚುಗತ್ತಿ chopper | | ಹೆರೆಗತ್ತಿ scraper | | ಚಕ್ರಾಕಾರದ ಉಪಕರಣ discoid | | ನಿರ್ಧರಿಸಲಾಗದ ಉಪಕರಣ | | ಒಟ್ಟು | ಶೇ |
|---|---|---|---|---|---|---|---|---|---|---|---|---|---|---|---|---|---|---|---|
| | | ಕಿರು | | ದೊಡ್ಡ | | | | | | | | | | | | | | | |
| | | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | ಉಂಡೆಕಲ್ಲು/ ಮೂಲಶಿಲಾಗಟ್ಟಿ | ಚಕ್ಕೆ ಕಲ್ಲು | | |
| ೧. | ಅಪ್ಪಾನಹಳ್ಳಿ | ೧ | ೧ | ೨ | ೧ | | | | ೩ | ೨ | | ೧ | ೫ | ೨ | ೧ | ೧ | | ೨೦ | ೧೬.೫೨ |
| ೨. | ಅಮ್ಗಲ್ಲ | ೧ | | | | | | | | | | | | | | | | ೧ | ೦.೮೨ |
| ೩. | ಓಬಳಾಪುರ | | | ೧ | | | | | | | | | | | | ೪ | | ೫ | ೪.೧೩ |
| ೪. | ಕೈಮರ | ೨ | | ೧ | ೧ | | | | | | ೪ | | ೩ | | | ೨ | | ೧೩ | ೧೦.೭೪ |
| ೫. | ಗಣಿಕೆರಿ | | | ೧ | | | | | | | | | | | | | | ೧ | ೦.೮೨ |
| ೬. | ಚಿಕ್ಕಗೌಡನರೊಪ್ಪ | | | ೧ | | | | | | | | | | | | | | ೧ | ೦.೮೨ |
| ೭. | ದೊಡ್ಡಗುಣಿ | | | | | | | | | ೧ | | | ೨ | | | | | ೩ | ೨.೪೭ |
| ೮. | ಬೊಮ್ಮೇನಹಳ್ಳಿ | | | | ೧ | | | | | | | | | | | | | ೧ | ೦.೮೨ |
| ೯. | ಬೂದಿಗುಡ್ಡ | ೧ | | | | ೩ | | | | | | ೧ | | ೧ | | | | ೬ | ೪.೯೬ |
| ೧೦. | ಮಾರಕ್ಕಿನಹಳ್ಳಿ | ೨ | | | | | | | | | | | | | | | | ೨ | ೧.೬೫ |
| ೧೧. | ಮೂಗನಾಯಕನಕೋಟೆ | | ೧ | ೪ | ೧ | | ೧ | | ೧ | ೨ | | ೧ | ೧ | ೧ | | ೨ | | ೧೫ | ೧೨.೩೯ |
| ೧೨. | ಮಂಚಿಟ್ಟೂರಿ | ೨ | | ೪ | | ೫ | | | ೧ | ೧ | | ೧ | ೧ | | | | | ೧೫ | ೧೨.೩೯ |
| ೧೩. | ಯಕ್ಕಲಕಟೆ | ೧ | | ೪ | | ೫ | ೧ | | ೩ | ೩ | ೪ | | ೩ | ೪ | | | | ೨೮ | ೨೩.೧೪ |
| ೧೪. | ಯಲ್ಲಪ್ಪನಾಯಕನಹೊಸಕೋಟೆ | | | ೧ | | | | | | | | | | | | | | ೧ | ೦.೮೨ |
| ೧೫. | ಶಿವಪುರ | | | ೧ | | | | | | | | | | | | | | ೧ | ೦.೮೨ |
| ೧೬. | ಸೀಗೆಹಳ್ಳಿ | ೧ | | | | | | | | | ೧ | | | | | | | ೨ | ೧.೬೫ |
| ೧೭. | ಹರೇನಹಳ್ಳಿ | | | | | | | | | | | | | | | ೨ | | ೨ | ೧.೬೫ |
| ೧೮. | ಹೊನ್ನೇಮಾರನಹಳ್ಳಿ | | | | | | | | ೨ | | | | | | | ೨ | | ೪ | ೩.೩೦ |
| | ಒಟ್ಟು | ೧೧ | ೨ | ೨೦ | ೪ | ೧೩ | ೨ | | ೧೦ | ೯ | ೯ | ೪ | ೧೫ | ೮ | ೧ | ೧೩ | | ೧೨೧ | |
| | | | | | | | | | | | | | | | | | | | |

ಕೋಷ್ಟಕ ಸಂಖ್ಯೆ ೪.೩.೨

| | ಒಟ್ಟು | ಶೇ |
|---|---|---|
| ಮೂಲಶಿಲಾಗಟ್ಟಿ /ಉಂಡೆಕಲ್ಲು | ೭೮ | ೬೪.೪೬ |
| ಚಕ್ಕೆಕಲ್ಲು | ೪೩ | ೩೫.೫೩ |
| ಕೈಗೊಡಲಿ | ೩೭ | ೩೦.೫೭ |
| ಅಂಡಾಕಾರ | ೧೫ | ೧೨.೩೯ |
| ಸೀಳುಗತ್ತಿ | ೧೦ | ೮.೨೬ |
| ಮಚ್ಚುಗತ್ತಿ | ೧೮ | ೧೪.೮೭ |
| ಹೆರೆಗತ್ತಿ | ೧೯ | ೪.೭೩ |
| ಚಕ್ರಾಕಾರ | ೯ | ೪.೭೩ |
| ನಿರ್ಧರಿಸಲಾಗದ | ೧೩ | ೧೦.೭೩ |

ವೃತ್ತ ನಕ್ಷೆ ಸಂಖ್ಯೆ ೪.ಇ



೧. ಕೈಗೊಡಲಿ

ದೊರೆತಿರುವ ಒಟ್ಟು ಉಪಕರಣ ಸಮೂಹದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿರುವ ಒಟ್ಟು ೩೭ (ಶೇ. ೩೦.೫೭.) ಉಪಕರಣವನ್ನು ಅವುಗಳ ಗಾತ್ರ ಮತ್ತು ಉಪಯೋಗಿಸಿರುವ ಶಿಲೆಯನ್ನಾಧರಿಸಿ ಮೂಲಗಟ್ಟಿ ಅಥವಾ ಉಂಡೆಗಲ್ಲು ಕೈಗೊಡಲಿಗಳು (೩೧ ಶೇ. ೮೩-೭೮)ಮತ್ತು ಚಕ್ಕೆಕಲ್ಲು ಕೈಗೊಡಲಿ (ಒಟ್ಟು ೬, ಶೇ. ೧೬.೨೧)ಗಳೆಂದು ಎರಡು ಗುಂಪುಗಳಾಗಿ ವರ್ಗೀಕರಿಸಿದೆ. ಅಲ್ಲದೆ ಗಾತ್ರವನ್ನು ಅನುಸರಿಸಿ ದೊಡ್ಡ ಹಾಗೂ ಮಧ್ಯಮ ಗಾತ್ರದ ಉಪಕರಣಗಳು (ಒಟ್ಟು ೨೪ ಶೇ. ೬೪.೮೬) ಮತ್ತು ಕಿರುಗಾತ್ರದ (ಒಟ್ಟು ೧೩ ಶೇ. ೩೫.೧೩) ಉಪಕರಣಗಳೆಂದು ವಿಭಾಗಿಸಿದೆ.

**೧.ಅ. ದೊಡ್ಡ ಹಾಗೂ ಮಧ್ಯಮ ಗಾತ್ರದ ಕೈಗೊಡಲಿ**

ಯಾವುದೇ ನಿರ್ದಿಷ್ಟ ಆಕಾರವಿಲ್ಲದ, ಉಪಯೋಗಕ್ಕೆ ತಕ್ಕಂತಹ ಗಾತ್ರವುಳ್ಳ, ಸ್ವಾಭಾವಿಕವಾಗಿ ದೊರೆಯುವ ಮೂಲ ಶಿಲಾಗಟ್ಟಿ ಅಥವಾ ಉಂಡೆಗಲ್ಲುಗಳನ್ನು ಉಪಯೋಗಿಸಿ ಈ ಉಪಕರಣಗಳನ್ನು ತಯಾರಿಸಿದೆ. ದೊಡ್ಡ ಗಾತ್ರದ ಮೂಲ ಶಿಲಾಗಟ್ಟಿ ಅಥವಾ ಉಂಡೆಗಲ್ಲಿನಿಂದ ತೆಗೆದ ದೊಡ್ಡ ಮತ್ತು ಮಧ್ಯಮ ಗಾತ್ರದ ಚಕ್ಕೆಗಳ ಮೇಲೂ ಈ ಉಪಕರಣಗಳನ್ನು ರೂಪಿಸಿರುವುದು ಕಾಣುತ್ತದೆ. ಆದಿ ಹಳೆಶಿಲಾಯುಗದ ಪ್ರಾರಂಭದ ಹಂತದಿಂದಲೂ ಈ ಉಪಕರಣಗಳು ಬಳಕೆಯಾಗುತ್ತಿದ್ದವು. ಹೆಚ್ಚಿನ ಉಪಕರಣಗಳಲ್ಲಿ ಎರಡೂ ಬದಿಗಳಿಂದ ಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಕಾರ್ಯ ನಿರ್ವಾಹಕ ಮೊನೆ ಅಥವಾ ಅಲಗನ್ನು ರೂಪಿಸಿರುವುದರಿಂದ ಇವುಗಳನ್ನು ದ್ವಿಮುಖ ಉಪಕರಣಗಳೆಂದು ಕರೆಯಲಾಗುತ್ತದೆ. ಕೆಲವೊಮ್ಮೆ ಒಂದೇ ಬದಿಯಿಂದ ಹೆಚ್ಚಿನ ಕೋನದಲ್ಲಿ ಚಕ್ಕೆ ಎಬ್ಬಿಸಿ ಮೊನೆ ಅಥವಾ ಅಲಗು ರೂಪಿಸಿರುವುದುಂಟು. ಅಂತಹ ಉಪಕರಣಗಳನ್ನು ಏಕ ಮುಖ ಉಪಕರಣಗಳೆಂದು ಕರೆಯಲಾಗುತ್ತದೆ. ಎರಡೂ ಗಾತ್ರದ ಉಪಕರಣಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ಅಂಶಗಳೆಂದರೆ ತೆಳುವಾದ ಕ್ರಮೇಣ ಚೂಪಾಗುತ್ತ ಹೋಗುವ ಮೊನಚಾದ ಮೇಲ್ತುದಿ ಮತ್ತು ಒರಟಾಗಿ ಕೆತ್ತಿದ ಹಿಡಿತಕ್ಕೆ ಅನುವಾಗುವ ದಪ್ಪ ಕೆಳತುದಿ. ಕೆಲವು ಉಪಕರಣಗಳಲ್ಲಿ ಹೊರಮೈ ಶಿಲಾ ತೊಗಟೆಯ ಅಂಶ ಉಳಿದಿರುವುದು ಕಂಡುಬರುತ್ತದೆ. ಕೆಲವು ಉಪಕರಣಗಳಲ್ಲಿ ಹರಿತ ಅಲಗು ಪ್ರಾರಂಭವಾಗುವ ಹಂತದಲ್ಲಿ ಎರಡೂ ಬದಿಗಳಿಂದ ಕಚ್ಚುಗಳನ್ನುಂಟುಮಾಡಿ ಮರಗ ಇಲ್ಲವೆ ಮೂಳೆಯ ಹಿಡಿಕೆಗೆ ಜೋಡಿಸುವಂತೆ ರೂಪಿಸಿಕೊಂಡಿರುವಂತೆ ಕಾಣುತ್ತದೆ. (ಮೂಗನಾಯಕನ ಕೋಟೆ ಸಂಖ್ಯೆ ೬ ಮತ್ತು ೯). ಒಂದೆರಡು ಉಪಕರಣಗಳನ್ನು ಅಬ್ಬೆವಿಲಿಯನ್ ಮತ್ತು ಅಶ್ಯೂಲಿಯನ್ ರೀತಿಯ ಚಕ್ಕೆ ತೆಗೆಯುವ ತಂತ್ರವನ್ನು ಉಪಯೋಗಿಸಿ ರೂಪಿಸಲಾಗಿದೆ. ಕೇವಲ ನಾಲ್ಕು ಉಪಕರಣಗಳನ್ನು ದಪ್ಪ ಚಕ್ಕೆಗಳಲ್ಲಿ ರಚಿಸಲಾಗಿದೆ. ಈ ಉಪಕರಣಗಳನ್ನು ಗಾತ್ರವನ್ನನುಸರಿಸಿ ಮೂರು ಗುಂಪುಗಳಾಗಿ ವಿಂಗಡಿಸಬಹುದು. ೧೦೦ ರಿಂದ ೧೨೦

ಮಿ.ಮೀ ಎತ್ತರದ ದೊಡ್ಡ ಗಾತ್ರದ ಉಪಕರಣಗಳು ಒಟ್ಟು ೫ ಇವೆ. ೧೨೦ ರಿಂದ ೧೪೦ ಮಿ. ಮೀ. ನಡುವಣ ಎತ್ತರದ ಉಪಕರಣಗಳು ೧೪ ಇವೆ. ೫ ಉಪಕರಣಗಳ ಎತ್ತರ ೧೪೦ರಿಂದ ೨೦೦ ಮಿ. ಮೀ. ಒಳಗಿವೆ.

ಉಪಕರಣಗಳನ್ನು ರೂಪಿಸಲು ಬಳಕೆಯಾದ ವಿಧಾನಗಳನ್ನು ಅನುಸರಿಸಿ ಈ ಉಪಕರಣಗಳನ್ನು ಮತ್ತೆ ಮೂರು ಗುಂಪುಗಳಾಗಿ ವರ್ಗೀಕರಿಸಬಹುದು.

ಮೊದಲನೆ ಗುಂಪಿನ ಐದು ಉಪಕರಣಗಳು ಒಂದು ಹಂತವನ್ನು ಪ್ರದರ್ಶಿಸುತ್ತವೆ. ಸ್ವಾಭಾವಿಕವಾಗಿ ದಪ್ಪ ಬುಡ ಮತ್ತು ಚೂಪು ತುದಿಯನ್ನು ಹೊಂದಿರುವ ದೊಡ್ಡ ಹಾಗೂ ಮಧ್ಯಮ ಗಾತ್ರದ ಮೂಲ ಶಿಲಾಗಟ್ಟಿಗಳನ್ನು ಉಪ-ಯೋಗಿಸಿ ಬೇರೊಂದು ಶಿಲಾಗಟ್ಟಿಯಿಂದ ಬಡಿದು ಚಕ್ಕೆ ಎಬ್ಬಿಸಿ ಮೊನಚು ತುದಿ ಮತ್ತು ಅಲಗನ್ನು ರೂಪಿಸಿರುವ ಈ ಉಪಕರಣಗಳು ತೀರಾ ಒರಟು ಚಕ್ಕೆ ಕಲೆಗಳನ್ನು ಹೊಂದಿವೆ. ಅಲ್ಲದೆ ಇವು ಯಾವುದೇ ನಿರ್ದಿಷ್ಟ ಆಕಾರವನ್ನು ಹೊಂದಿಲ್ಲ. ಹೆಚ್ಚು ಒರಟಾಗಿದ್ದು, ಈ ಉಪಕರಣಗಳಲ್ಲಿ ಹೊರ ಆವರಣದ ಹೆಚ್ಚಿನ ಭಾಗದಲ್ಲಿ ಮೂಲಶಿಲಾ ತೊಗಟೆಯನ್ನು ಉಳಿಸಿ-ಕೊಳ್ಳಲಾಗಿದೆ.

ಎರಡನೇ ಗುಂಪಿನ ನಾಲ್ಕು ಉಪಕರಣಗಳಿದ್ದು, ಇವು ಮೊದಲ ಹಂತಕ್ಕಿಂತ ಸ್ವಲ್ಪ ಮಟ್ಟಿಗೆ ಮುಂದಿನದಾದ ಅಬ್ಬೆವಿಲಿಯನ್ ತಂತ್ರವನ್ನು ಉಪಯೋಗಿಸಿ ತಯಾರಿಸಲಾಗಿದೆ. ಉದ್ದೇಶಿತ ಉಪಕರಣದ ಆಕಾರ ಮತ್ತು ಗಾತ್ರವನ್ನು ಹೋಲುವಂತಹ ಉಂಡೆಗಲ್ಲು ಅಥವಾ ಮೂಲ ಶಿಲಾಗಟ್ಟಿಯನ್ನು ಹೊಂದಿದ್ದು ಒಂದು ಅಥವಾ ಎರಡು ಬದಿಯಿಂದ ದೊಡ್ಡ ಚಕ್ಕೆಗಳನ್ನೆಬ್ಬಿಸಿ ಈ ಉಪಕರಣಗಳನ್ನು ರೂಪಿಸಿದೆ. ನುಣುಪಾದ ದಪ್ಪನೆಯ ಬುಡ, ಹರಿತವಾದ ಪಾರ್ಶ್ವಗಳು ಮತ್ತು ಮೊನಚಾದ ಮೇಲ್ತುದಿಗಳನ್ನು ಈ ಉಪಕರಣಗಳಲ್ಲಿ ಕಾಣಬಹುದು. ಎರಡೂ ಬದಿಗಳಲ್ಲಿ ಮುಖ್ಯವಾಗಿ ಮುಂಬದಿಯಲ್ಲಿ ಮೂಲ ಶಿಲಾ ತೊಗಟೆ ಹೆಚ್ಚಿನ ಭಾಗದಲ್ಲಿ ಕಂಡು ಬರುತ್ತದೆ.

ಮೂರನೆ ಗುಂಪಿನ ಉಪಕರಣಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದು ಕೆಲವು ಉತ್ತಮ ಮಾದರಿಗಳನ್ನು ಹೊಂದಿವೆ. ಮಧ್ಯ ಮತ್ತು ಅಂತ್ಯ ಅಶ್ಯೂಲಿಯನ್ ತಂತ್ರಗಳನ್ನು ಉಪಯೋಗಿಸಿ ರೂಪಿಸಿರುವ ಈ ಉಪಕರಣಗಳು ಗಾತ್ರ ಮತ್ತು ಆಕಾರಗಳಲ್ಲಿ ಮಧ್ಯದ ಉಬ್ಬೇಣು ಎದ್ದು ಕಾಣುತ್ತಿದ್ದು, ಎರಡೂ ಬದಿಗಳಲ್ಲಿ ಚಕ್ಕೆಗಳನ್ನೆಬ್ಬಿಸಿರುವುದರಿಂದ ಉಪಕರ-ಣದ ಮಧ್ಯ ಭಾಗ ಮತ್ತು ಕೆಳತುದಿ ದಪ್ಪವಾಗಿದ್ದು ಮೇಲ್ತುದಿ ಮತ್ತು ಪಾರ್ಶ್ವಗಳು ಮೊನಚಾಗಿವೆ. ಹೆಚ್ಚಿನ ಉಪಕರಣಗಳಲ್ಲಿ ಎರಡೂ ಬದಿಗಳಿಂದ ವಿರುದ್ಧ ದಿಕ್ಕಿನಲ್ಲಿ ಅನುಕ್ರಮವಾಗಿ ಚಕ್ಕೆಗಳನ್ನೆಬ್ಬಿಸಿರುವುದರಿಂದ ಹರಿತವಾದ ಅಂಕು ಡೊಂಕಾದ

ಅಲಗು ಉಂಟಾಗಿದೆ. ಕೆಲವು ಉಪಕರಣಗಳಲ್ಲಿ ಮಾತ್ರ ಸಣ್ಣ ಮರು ಚಕ್ಕೆಗಳನ್ನೆಬ್ಬಿಸಿರುವುದೂ ಕಂಡುಬರುತ್ತದೆ. ಕೆಲವು ಉಪಕರಣಗಳು ಹೆಚ್ಚು ಸವೆತಕ್ಕೊಳಗಾಗಿವೆ. ಹೆಚ್ಚಿನ ಉಪಕರಣಗಳಲ್ಲಿ ಮೊದಲೇ ತಯಾರಿಸಿದ ತಾಡನ ವೇದಿಕೆ ಕಾಣುತ್ತದೆ ಮತ್ತು ಎರಡೂ ಬದಿಗಳಲ್ಲಿ ಮೂಲ ಶಿಲೆಯ ತೊಗಟೆ ಅಂಶ ಉಳಿದು ಕೊಂಡಿದೆ.

ಈ ಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೪ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೪.೪

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧. | ಶಿವಪುರ | ೧೦೫ | ೯೦ | ೫೦ |
| ೨. | ಯಕ್ಕಲಕಟ್ಟೆ | ೧೦೫ | ೭೦ | ೪೦ |
| ೩ | ಚಿಕ್ಕೇಗೌಡನರೊಪ್ಪ | ೧೦೮ | ೬೫ | ೪೦ |
| ೪. | ಯಕ್ಕಲಕಟ್ಟೆ | ೧೧೦ | ೭೦ | ೪೦ |
| ೫ | ಮಂಚಲ್ದೊರೆ | ೧೧೦ | ೬೩ | ೩೫ |
| ೬. | ಅಪ್ಪಾನಹಳ್ಳಿ | ೧೧೦ | ೭೫ | ೩೫ |
| ೭. | ಕೈಮರ | ೧೧೦ | ೭೫ | ೩೫ |
| ೮. | ಓಬಳಾಪುರ | ೧೧೫ | ೭೦ | ೩೫ |
| ೯ | ಮಂಚಲ್ದೊರೆ | ೧೨೦ | ೮೩ | ೪೫ |
| ೧೦. | ಮಂಚಲ್ದೊರೆ | ೧೨೦ | ೯೦ | ೪೫ |
| ೧೧. | ಮೂಗನಾಯಕನಕೋಟೆ | ೧೨೦ | ೧೦೦ | ೫೦ |
| ೧೨ | ಯಲ್ಲಪ್ಪನಾಯಕನಹೊಸಕೋಟೆ | ೧೨೦ | ೯೦ | ೭೦ |
| ೧೩ | ಯಕ್ಕಲಕಟ್ಟೆ | ೧೨೩ | ೧೧೦ | ೭೦ |
| ೧೪ | ಬೊಮ್ಮೇನಹಳ್ಳಿ | ೧೨೩ | ೮೮ | ೩೫ |
| ೧೫ | ಯಕ್ಕಲಕಟ್ಟೆ | ೧೨೩ | ೭೮ | ೪೩ |
| ೧೬ | ಗಳಿಗೆಕೆರೆ | ೧೨೫ | ೮೦ | ೬೫ |
| ೧೭. | ಮಂಚಲ್ದೊರೆ | ೧೨೫ | ೭೮ | ೪೩ |
| ೧೮ | ಕೈಮರ | ೧೩೦ | ೯೦ | ೪೦ |
| ೧೯. | ಅಪ್ಪಾನಹಳ್ಳಿ | ೧೩೦ | ೮೫ | ೫೦ |
| ೨೦ | ಮೂಗನಾಯಕನಕೋಟೆ | ೧೪೦ | ೮೦ | ೬೦ |
| ೨೧ | ಮೂಗನಾಯಕನಕೋಟೆ | ೧೪೦ | ೧೦೦ | ೬೫ |
| ೨೨ | ಮೂಗನಾಯಕನಕೋಟೆ | ೧೫೦ | ೭೫ | ೬೦ |
| ೨೩ | ಮೂಗನಾಯಕನಕೋಟೆ | ೧೫೫ | ೧೦೫ | ೭೨ |
| ೨೪ | ಕೈಮರ. | ೨೦೦ | ೧೧೦ | ೮೦ |

*ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೦೮ ಗರಿಷ್ಠ ೨೦೦, ಅಗಲ ಕನಿಷ್ಠ ೬೫ ಗರಿಷ್ಠ ೧೧೦ ಹಾಗೂ ದಪ್ಪ ಕನಿಷ್ಠ ೩೫ ಗರಿಷ್ಠ ೮೦, ಮಿ. ಮೀ.ಗಳಾಗಿವೆ.*

## ೧.ಆ. ಕಿರುಗಾತ್ರದ ಕೈಗೊಡಲಿ.

ಕಿರು ಗಾತ್ರದ ಒಟ್ಟು ೧೩(ಶೇ.೩೫.೧೩) ಉಪಕರಣಗಳಲ್ಲಿ ಎರಡನ್ನು ಮಾತ್ರ ಲೆವಲಾಯಸ್ ಮಾದರಿಯ ಚಕ್ಕೆಗಳ ಮೇಲೆ ರೂಪಿಸಿದ್ದು ಉಳಿದವನ್ನು ಸಣ್ಣ ಮೂಲ ಶಿಲಾಗಟ್ಟಿ ಅಥವ ಉಂಡೆಕಲ್ಲುಗಳ ಮೇಲೆ ರೂಪಿಸಿದೆ. ಗಾತ್ರದ ದೃಷ್ಟಿಯಿಂದ ಇವೆಲ್ಲವು ೧೦೦ ಮಿ.ಮೀ. ಗಿಂತ ಕಡಿಮೆ ಗಾತ್ರದಲ್ಲಿದ್ದು ಅವುಗಳಲ್ಲಿ ೮೫ ರಿಂದ ೧೦೦ ಮಿ.ಮೀ. ಎತ್ತರದೊಳಗಿರುವ ಉಪಕರಣಗಳು ಹೆಚ್ಚಿನ ಸಂಖ್ಯೆ (ಒಟ್ಟು ೯ಶೇ. ೬೯.೨೩) ಯಲ್ಲಿದ್ದು, ೭೫ ರಿಂದ ೮೫ ಮಿ.ಮೀ. ಎತ್ತರದೊಳಗಿನವು (ಒಟ್ಟು ೪ ಶೇ. ೩೦.೭೬) ಇವೆ. ಸುಲಭವಾಗಿ ಉದ್ದೇಶಿತ ಆಕಾರದ ಉಪಕರಣವನ್ನು ಮಾಡಬಹುದಾದ ಸಣ್ಣ ಉಂಡೆಗಲ್ಲು ಅಥವಾ ಮೂಲ ಶಿಲಾಗಟ್ಟಿಯನ್ನು ಆಯ್ದುಕೊಂಡು ಒಂದು ಅಥವಾ ಎರಡೂ ಬದಿಗಳಿಂದ ಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಮೊನಚು ತುದಿಯನ್ನು ರೂಪಿಸಲಾಗಿದೆ. ಇವೆಲ್ಲಾ ಉಪಕರಣಗಳಲ್ಲಿ ಗಮನಿಸಬಹುದಾದ ಮುಖ್ಯಾಂಶವೆಂದರೆ ಕ್ರಮೇಣ ಕಿರಿದಾಗುತ್ತಾ ಹೋಗುವ ಮೊನಚು ಮೇಲ್ತುದಿ ಮತ್ತು ದಪ್ಪ ಕೆಳತುದಿ. ಆಕಾರದಲ್ಲಿ ಇವು ತ್ರಿಭುಜ, ಎಲೆಯಾಕಾರ ಮತ್ತು ವಜ್ರಾಕೃತಿಯನ್ನು ಹೋಲುವ ಚತುರ್ಭುಜಾಕಾರದಲ್ಲಿವೆ. ಕೆಲವು ಉಪಕರಣಗಳ ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದ್ದರೆ ಎರಡೂ ಬದಿಯಿಂದ ಚಕ್ಕೆ ಎಬ್ಬಿಸಿರುವ ಕೆಲವು ಉಪಕರಣಗಳಲ್ಲಿ ಹಿಂಬದಿಯಲ್ಲಿಯೂ ಮಧ್ಯದ ಉಬ್ಬೇಣು ಕಾಣುತ್ತವೆ. ಹೆಚ್ಚಿನ ಉಪಕರಣಗಳಲ್ಲಿ ಮುಂಬದಿಯಲ್ಲಿ ಉಬ್ಬೇಣು ದಪ್ಪಗಿನ ಮೇಲ್ತುದಿಯ ಬಳಿ ಮೂಲ ಶಿಲೆಯ ತೊಗಟೆ ಎದ್ದು ಕಾಣುತ್ತದೆ. ಕೆಲವು ಉಪಕರಣಗಳ ಇಡೀ ಒಂದು ಬದಿಯಲ್ಲಿ ಮೇಲ್ತೊಗಟೆ ಉಳಿದಿದೆ. ಅಡ್ಡ ವಿನ್ಯಾಸದಲ್ಲಿ ತಿಭುಜಾಕಾರ, ಸಮತಲ ಉಬ್ಬು ಮತ್ತು ಚತುರ್ಭುಜಾಕಾರಗಳು ಕಾಣುತ್ತವೆ. ಹೆಚ್ಚಿನ ಉಪಕರಣಗಳಲ್ಲಿ ಪಾರ್ಶ್ವ ಅಲಗುಗಳು ನೇರ ಸರಳ ರೇಖೆಯಲ್ಲಿದ್ದರೆ ಕೆಲವು ಉಪಕರಣಗಳಲ್ಲಿ ಮಾತ್ರ ಮರು ಚಕ್ಕೆಗಳನ್ನೆಬ್ಬಿಸಿರುವುದರಿಂದ ಈ ಪಾರ್ಶ್ವ ರೇಖೆಗಳು ಅಂಕುಡೊಂಕಾಗಿದ್ದು ಅಶ್ಯೂಲಿಯನ್ ತಂತ್ರದ ಬಳಕೆಯನ್ನು ತೋರಿಸುತ್ತದೆ. ಒಂದೆರಡು ಉಪಕರಣಗಳಲ್ಲಿ ಕೆಳ ತುದಿಯ ಬಳಿ ಚಕ್ಕೆಗಳನ್ನೆಬ್ಬಿಸಿ ಹಿಡಿಕೆಗೆ ಜೋಡಿಸಲು ಅನುಕೂಲವಾಗುವಂತೆ ರೂಪಿಸಿರುವುದನ್ನು ಕಾಣುತ್ತೇವೆ. ಈ ಉಪಕರಣಗಳ ಕಿರುಗಾತ್ರ ಮತ್ತು ಕೆಳ ತುದಿಯ ಗೂಟದಂತಹ ಮುಂಚಾಚುಗಳಿಂದ ಇವುಗಳನ್ನು ಈಟಿ ಅಥವಾ ಬರ್ಜಿ ಮೊನೆಯಂತೆಯೂ ಉಪಯೋಗಿಸಿರಬಹುದೆಂದು ತಿಳಿಯಬಹುದು. ಹೆಚ್ಚಿನ ಉಪಕರಣಗಳು ಸವಕಲಿಗೆ ಈಡಾಗಿರುವುದು ಕಂಡು ಬಂದರೆ ಒಂದೆರಡು ಉದಾಹರಣೆಗಳಲ್ಲಿ ತುದಿ ಮತ್ತು ಪಾರ್ಶ್ವದ ಮೊನಚು ಇನ್ನೂ ಹರಿತವಾಗಿ ಉಳಿದಿವೆ.

ಒಟ್ಟು ಉಪಕರಣಗಳಲ್ಲಿ ಎರಡನ್ನು ಅದಿರುಯುಕ್ತ ಕಪ್ಪು ಉಂಡೆಗಲ್ಲಿನಮೇಲೆ, ತಲಾ ಒಂದೊಂದು ಡೈಕ್ ಹಾಗೂ ಅದಿರುಯುಕ್ತ ಜಾಸ್ಪರ್ ಶಿಲೆಯಿಂದ ರೂಪಿಸಿದ್ದರೆ ಉಳಿದೆಲ್ಲ ಉಪಕರಣಗಳನ್ನು ವಿವಿಧ ಬಣ್ಣಗಳ ಕ್ವರ್ಟ್ಸೈಟ್ ಶಿಲೆಯಲ್ಲಿ ರೂಪಿಸಿದೆ.

ಈ ಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೫ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೪.೫

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ. | ಅಗಲ ಮಿ.ಮೀ. | ದಪ್ಪ ಮಿ.ಮೀ. |
|---|---|---|---|---|
| ೧. | ಕೈಮರ | ೭೫ | ೬೦ | ೩೮ |
| ೨. | ಮಂಚಲ್ದೊರೆ | ೮೦ | ೬೦ | ೪೦ |
| ೩. | ಕೈಮರ | ೮೫ | ೬೫ | ೪೦ |
| ೪. | ಸೀಗೆಹಳ್ಳ | ೮೮ | ೫೫ | ೪೩ |
| ೫. | ಮಂಚಲ್ದೊರೆ | ೯೦ | ೭೦ | ೪೦ |
| ೬. | .ಮಾರಶೆಟ್ಟಹಳ್ಳಿ | ೯೦ | ೬೮ | ೪೫ |
| ೭. | .ಮಾರಶೆಟ್ಟಹಳ್ಳಿ | ೯೫ | ೫೩ | ೩೦ |
| ೮. | ಮೂಗನಾಯಕನಕೋಟೆ | ೯೫ | ೬೩ | ೩೩ |
| ೯. | ಯಕ್ಕಲಕಟ್ಟೆ | ೯೫ | ೭೫ | ೪೦ |
| ೧೦. | ಅಪ್ಪಾನಹಳ್ಳಿ | ೯೫ | ೭೦ | ೪೦ |
| ೧೧. | ಅವರ್ಗಲ್ಲು | ೯೫ | ೬೦ | ೩೫ |
| ೧೨. | ಅಪ್ಪಾನಹಳ್ಳಿ | ೯೮ | ೫೪ | ೨೫ |
| ೧೩. | ಬೂದಿಗುಡ್ಡ | ೧೦೦ | ೭೦ | ೫೦ |

ಈ ಉಪಕರಣಗಳ ಉದ್ದ ಕನಿಷ್ಠ ೭೫, ಗರಿಷ್ಠ ೧೦೦, ಅಗಲ ಕನಿಷ್ಠ ೫೪, ಗರಿಷ್ಠ ೭೫ ಹಾಗೂ ದಪ್ಪ ಕನಿಷ್ಠ ೨೫, ಗರಿಷ್ಠ ೫೦ ಮಿ. ಮೀ. ಗಳಿವೆ.

**೨.ಮಚ್ಚುಗತ್ತಿ**

ಈ ಗುಂಪಿನ ಉಪಕರಣಗಳಲ್ಲಿ ಸಾಧಾರಣವಾಗಿ ಹರಿತವಾದ ಅಲಗು ಇರುವ ಮೊನಚು ತುದಿ ಒಂದು ಪಾರ್ಶ್ವದಲ್ಲಿದ್ದು ವಿರುದ್ಧ ತುದಿಯು ದಪ್ಪವಾಗಿರುತ್ತದೆ. ಕೈಗೊಡಲಿಯ ನಂತರ ಆದಿ ಹಳೆ ಶಿಲಾಯುಗದ ಪ್ರಾತಿನಿಧಿಕ ಉಪ-ಕರಣವಾದ ಈ ಗುಂಪಿನವು ಒಟ್ಟು ೧೮ (ಚೀ. ೧೪.೮೭), ಇದ್ದು ಅವುಗಳಲ್ಲಿ ತಲಾ ೯ ಮೂಲ ಶಿಲಾಗಟ್ಟಿಗಳ ಮೇಲೆ ಮತ್ತು ಉಳಿದವನ್ನು ದಪ್ಪ ಕ್ಲಾಕ್ಟೋನಿಯನ್ ಚಕ್ಕೆಗಳ ಮೇಲೆ ರೂಪಿಸಿದೆ. ಎಲ್ಲಾ ಉಪಕರಣಗಳನ್ನು ಕ್ವಾರ್ಟ್ಸೈಟ್ ಶಿಲಾ ಮಾದರಿಯಲ್ಲಿ ರೂಪಿಸಿದ್ದರೂ ಕೆಲವು ಉಪಕರಣಗಳಿಗೆ ಆಯ್ದುಕೊಂಡಿರುವ ಮೂಲ ಸಾಮಗ್ರಿ ಉತ್ತಮ ದರ್ಜೆಯದಲ್ಲ. ದಪ್ಪ ಮತ್ತು ಮಧ್ಯಮ ಗಾತ್ರದ ಮೂಲ ಶಿಲಾಗಟ್ಟಿ ಹಾಗೂ ದಪ್ಪ ಚಕ್ಕೆಗಳ ಮೇಲೆ ರೂಪಿಸಿರುವ ಈ ಉಪಕರಣಗಳನ್ನು ಗಾತ್ರಕ್ಕನುಗುಣವಾಗಿ ಮೂರು ಗುಂಪುಗಳಾಗಿ ವರ್ಗೀಕರಿಸಬಹುದು. ೭೫ ರಿಂದ ೮೦ ಮಿ.ಮೀ. ಉದ್ದದ ಐದು ಉಪಕರಣ-ಗಳು ಮೊದಲನೆ ಗುಂಪಿಗೂ, ೮೦ ರಿಂದ ೧೦೦ ಮಿ.ಮೀ. ಉದ್ದದ ಒಂಬತ್ತು ಉಪಕರಣಗಳು ಎರಡನೇ ಗುಂಪಿಗೂ ಮತ್ತು

೧೦೦ ರಿಂದ ೧೨೦ ಮಿ.ಮೀ.ನ ನಾಲ್ಕು ಉಪಕರಣಗಳು ಮೂರನೇ ಗುಂಪಿಗೂ ಸೇರಿವೆ. ಉಪಯೋಗಿಸಿರುವ ತಂತ್ರದ ದೃಷ್ಟಿಯಿಂದ ಈ ಉಪಕರಣಗಳನ್ನು ಒಬ್ಬದಿ ಮತ್ತು ಇಬ್ಬದಿ ಮಚ್ಚುಗತ್ತಿಗಳೆಂದು ವಿಭಾಗಿಸಬಹುದು. ಮೊದಲನೆಯ ವಿಭಾಗದಲ್ಲಿ ಎರಡು ಉಪಕರಣಗಳಿದ್ದು ಎರಡರಲ್ಲಿಯೂ ಹಿಂಬದಿ ಸಮತಲವಾಗಿವೆ. ಮುಂಬದಿಯ ಮಧ್ಯದಿಂದ ಪರಿಧಿಯ ಕಡೆಗೆ ಮೆಟ್ಟಿಲು ಮೆಟ್ಟಿಲಾಗಿ ಮೂರಕ್ಕೂ ಹೆಚ್ಚಿನ ಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಅಲಗನ್ನು ರೂಪಿಸಿದೆ. ಎರಡೂ ಬದಿಗಳಲ್ಲಿ ಮೂಲಶಿಲಾ ತೊಗಟೆ ಉಳಿದು ಕೊಂಡಿದೆ.

ಎರಡನೆಯ ವಿಭಾಗದ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಈ ಉಪಕರಣಗಳಲ್ಲಿ ಎರಡೂ ಬದಿಗಳಿಂದ ಅನುಕ್ರಮವಾಗಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ಎಬ್ಬಿಸಿ ಹರಿತವಾದ ಮತ್ತು ಅಂಕುಡೊಂಕಾದ ಅಲಗನ್ನು ಮೂಡಿಸಿದೆ. ಹೆಚ್ಚಿನ ಉಪಕರಣಗಳು ದುಂಡಾಗಿದ್ದು ಅತ್ಯಂತ ಕಡಿಮೆ ಸಂಖ್ಯೆಯ ಚಕ್ಕೆಯ ಗುರುತುಗಳನ್ನು ಹೊಂದಿದ್ದರೆ ಕೆಲವು ಉಪಕರಣಗಳಲ್ಲಿ ಎರಡೂ ಬದಿಯಲ್ಲಿ ಹೊರಮೈ ಶಿಲಾತೊಗಟೆ ಭಾಗಗಳು ಉಳಿದು ಕೊಂಡಿದೆ. ಹೆಚ್ಚಿನ ಉಪಕರಣಗಳು ಸವೆತಕ್ಕೊಳಾಗಿವೆ . ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೬ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೪.೬

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ. | ಅಗಲ ಮಿ.ಮೀ. | ದಪ್ಪ ಮಿ.ಮೀ. |
|---|---|---|---|---|
| ೧. | ಅಪ್ಪಾನಹಳ್ಳಿ | ೬೫ | ೫೫ | ೩೫ |
| ೨. | ಕೈವಾರ | ೭೦ | ೮೫ | ೩೦ |
| ೩. | ಮೂಗನಾಯಕನಕೋಟೆ | ೭೦ | ೭೦ | ೪೦ |
| ೪. | ಯಕ್ಕಲಕಟ್ಟೆ | ೮೦ | ೭೦ | ೩೦ |
| ೫. | ಯಕ್ಕಲಕಟ್ಟೆ | ೮೦ | ೭೦ | ೪೫ |
| ೬. | ಕೈವಾರ | ೮೫ | ೮೦ | ೫೫ |
| ೭. | ಯಕ್ಕಲಕಟ್ಟೆ | ೮೫ | ೭೦ | ೬೦ |
| ೮. | ಯಕ್ಕಲಕಟ್ಟೆ | ೯೦ | ೭೫ | ೫೦ |
| ೯. | ಅಪ್ಪಾನಹಳ್ಳಿ | ೯೦ | ೭೫ | ೪೫ |
| ೧೦. | ಕೈವಾರ | ೯೦ | ೮೫ | ೬೫ |
| ೧೧. | ಸೀಗೆಹಳ್ಳ | ೯೫ | ೭೫ | ೫೦ |
| ೧೨. | ದೊಡ್ಡಗುಣಿ | ೯೫ | ೮೫ | ೪೮ |
| ೧೩. | ಯಕ್ಕಲಕಟ್ಟೆ | ೯೫ | ೯೦ | ೪೫ |
| ೧೪. | ಮೂಗನಾಯಕನಕೋಟೆ | ೯೫ | ೮೦ | ೪೫ |
| ೧೫. | ಯಕ್ಕಲಕಟ್ಟೆ | ೧೦೦ | ೮೦ | ೪೫ |
| ೧೬. | ಕೈವಾರ | ೧೦೦ | ೭೫ | ೫೫ |
| ೧೭ | ಮಂಚಲ್ದೊರೆ | ೧೧೫ | ೯೦ | ೬೫ |
| ೧೮. | ಯಕ್ಕಲಕಟ್ಟೆ | ೧೨೦ | ೧೦೦ | ೭೫ |

ಈ ಉಪಕರಣಗಳ ಕನಿಷ್ಠ ಉದ್ದ ೬೫ ಹಾಗೂ ಗರಿಷ್ಠ ೧೨೦, ಅಗಲ ಕನಿಷ್ಠ ೫೫ ಗರಿಷ್ಠ ೧೦೦ ಮತ್ತು ದಪ್ಪ ಕನಿಷ್ಠ ೩೦ ಗರಿಷ್ಠ ೭೫ ಮಿ.ಮೀ.ಗಳಾಗಿವೆ.

೩. ಚಕ್ರಾಕಾರದ ಉಪಕರಣ

ಈ ಉಪಕರಣಗಳೂ ಸಹ ಕೈಗೊಡಲಿಯ ಒಂದು ವಿಶಿಷ್ಟ ಭಾಗವಾಗಿದ್ದು ಇವುಗಳ ಆಕೃತಿ ಮತ್ತು ರೂಪಣ ವಿಧಾನದಿಂದ ಬೇರೆಯಾಗಿಯೇ ವರ್ಗೀಕರಿಸಲಾಗಿದೆ. ದೊರೆತಿರುವ ಒಟ್ಟು ೯ (ಕೋ. ೭.೪೩) ಉಪಕರಣಗಳಲ್ಲಿ ಚಕ್ಕೆಯ ಮೇಲೆ ರೂಪಿಸಿರುವ ಅಪ್ಪಾನಹಳ್ಳಿಯ ಒಂದು ಉಪಕರಣವನ್ನು ಹೊರತುಪಡಿಸಿ ಉಳಿದ ಎಲ್ಲವೂ ಮೂಲ ಶಿಲಾಗಟ್ಟಿಯಲ್ಲಿಯೇ ರೂಪಿತವಾಗಿವೆ. ಒಂದು ಡೈಕ್ ಶಿಲೆಯದ್ದಾಗಿದ್ದರೆ ಉಳಿದವುಗಳು ಕ್ವಾರ್ಟ್ಸೈಟ್ ಶಿಲೆಯಲ್ಲಿವೆ. ಮೂರು ಉಪಕರಣಗಳು ಮೂಲತಃ ಕೊಡಲಿಗಳಾಗಿದ್ದು ಚೂಪಾದ ಮೇಲ್ತುದಿಯು ಮುರಿದಿರುವುದರಿಂದ ಉಳಿದ ಬುಡಭಾಗದಲ್ಲಿ ಚಕ್ಕೆ ತೆಗೆದು ಚಕ್ರಾಕಾರದ ಉಪಕರಣವಾಗಿ ರೂಪಿಸಲಾಗಿದೆ. ಎಲ್ಲವೂ ಹೆಚ್ಚು ಕಡಿಮೆ ವೃತ್ತಾಕಾರದಲ್ಲಿದ್ದು ಕೆಲವು ಉಪಕರಣಗಳನ್ನು ಒಂದೇ ಬದಿಯಿಂದ ಚಕ್ಕೆ ತೆಗೆದು ಮಾಡಿದ್ದರೆ ಹೆಚ್ಚಿನವುಗಳನ್ನು ಎರಡೂ ಬದಿಗಳಿಂದ ಚಕ್ಕೆ ತೆಗೆದು ರೂಪಿಸಿದೆ. ಮಧ್ಯದಿಂದ ಸುತ್ತಲೂ ಚಕ್ಕೆ ತೆಗೆದಿರುವುದರಿಂದ ಮಧ್ಯದಲ್ಲಿ ದಪ್ಪವಾಗಿದ್ದು ಪರಿಧಿಯಲ್ಲಿ ಅಲಗನ್ನು ಹೊಂದಿವೆ. ಒಂದೆರಡು ಉಪಕರಣಗಳಲ್ಲಿ ಒಂದು ತುದಿ ದಪ್ಪವಾಗಿರುವುದು ಕಂಡು ಬರುತ್ತದೆ. ಹೆಚ್ಚಿನ ಉಪಕರಣಗಳಲ್ಲಿ ಮೂಲ ಶಿಲಾತೊಗಟೆ ಭಾಗಗಳು ಉಳಿದಿವೆ. ಎರಡೂ ಮುಖಗಳಿಂದ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ಎಬ್ಬಿಸಿರುವದರಿಂದ ಅಲಗು ಅಂಕು ಡೊಂಕಾಗಿದೆ. ಈ ಹೆಚ್ಚಿನ ಉಪಕರಣಗಳು ಸವೆತಕ್ಕೊಳಗಾಗಿದ್ದರೆ ಒಂದೆರಡು ಉದಾಹರಣೆಗಳಲ್ಲಿ ಹರಿತ ಅಲಗು ಮೂಲರೂಪದಲ್ಲಿಯೇ ಉಳಿದಿದೆ. ಪ್ರಮಾಣಕ್ಕನುಗುಣವಾಗಿ ಇವುಗಳನ್ನು ದೊಡ್ಡ, ಮಾಧ್ಯಮ ಮತ್ತು ಕಿರು ಗಾತ್ರದವು ಎಂದು ಮೂರು ಗುಂಪುಗಳಾಗಿ ವಿಭಾಗಿಸಬಹುದು. ದೊಡ್ಡ ಗಾತ್ರದ ಒಂದು, ಮಧ್ಯಮ ಗಾತ್ರದ ಆರು ಮತ್ತು ಕಿರುಗಾತ್ರದ ಎರಡು ಉಪಕರಣಗಳಿವೆ. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೭ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೪.೭

| ಕ್ರಮ ಸಂಖ್ಯೆ | ನೆಲೆ | ವ್ಯಾಸ ಮಿ.ಮೀ | ದಪ್ಪ ಮಿ.ಮೀ |
|---|---|---|---|
| ೧. | ಯಕ್ಕಲಕಟ್ಟೆ | ೮೫ | ೪೦ |
| ೨. | ಅಪ್ಪಾನಹಳ್ಳಿ | ೯೫ | ೩೫ |
| ೩. | ಯಕ್ಕಲಕಟ್ಟೆ | ೧೦೦ | ೪೦ |
| ೪. | ಯಕ್ಕಲಕಟ್ಟೆ | ೧೦೫ | ೩೦ |
| ೫. | ಅಪ್ಪಾನಹಳ್ಳಿ | ೧೦೫ | ೩೦ |
| ೬. | ಬೂದಿಗುಡ್ಡ | ೧೧೫ | ೫೫ |
| ೭. | ಯಕ್ಕಲಕಟ್ಟೆ | ೧೧೫ | ೪೫ |
| ೮. | ಅಪ್ಪಾನಹಳ್ಳಿ | ೧೧೫ | ೩೫ |
| ೯. | ಮೂಗನಾಯಕನಕೋಟೆ | ೧೭೦ | ೬೦ |

ಈ ಉಪಕರಣಗಳ ವ್ಯಾಸ ಕನಿಷ್ಠ ೮೫ ಗರಿಷ್ಠ ೧೭೦ ಹಾಗೂ ದಪ್ಪ ಕನಿಷ್ಠ ೩೦ ಗರಿಷ್ಠ ೬೦ ಮಿ.ಮೀ. ಗಳಾಗಿವೆ.

೪. ಅಂಡಾಕಾರದ ಉಪಕರಣ.

ಸಾಧಾರಣವಾಗಿ ಕೈಗೊಡಲಿಗಳ ಗುಂಪಿನಲ್ಲಿಯೇ ವರ್ಗೀಕರಿಸಲಾಗುವ ಈ ಉಪಕರಣಗಳು ಅವುಗಳ ವಿಶಿಷ್ಟ ಆಕಾರ ಮತ್ತು ಕಾರ್ಯ ಸಾಧಕ ಅಲಗಿನ ಸ್ವರೂಪದಿಂದಾಗಿ ಪ್ರತ್ಯೇಕವಾಗಿಯೂ ಅಧ್ಯಯನ ಯೋಗ್ಯವಾಗಿವೆ. ಕೈಗೊಡಲಿಯ ಸಾಧಕ ತುದಿ ಚೂಪಾಗಿದ್ದು ಪಾರ್ಶ್ವದ ಕೆಲವು ಭಾಗ ಹರಿತವಾಗಿದ್ದು ಕೆಳತುದಿ ದಪ್ಪವಾಗಿದ್ದರೆ ಅಂಡಾಕಾರದ ಈ ಉಪಕರಣಗಳಲ್ಲಿ ಬುಡ ಅಥವಾ ಮಧ್ಯ ಭಾಗವು ದಪ್ಪವಾಗಿದ್ದು ಸುತ್ತಲೂ ಲೆವಲ್ಲಾಯ್ಸ್ ವಿಧಾನದಿಂದ ಚಕ್ಕೆಗಳನ್ನೆಬ್ಬಿಸಿ ಪರಿಧಿಯ ಹೆಚ್ಚಿನ ಭಾಗವನ್ನು ಅಲಗನ್ನಾಗಿ ರೂಪಿಸಿರುತ್ತದೆ.

ಇಂತಹ ಉಪಕರಣಗಳು ಒಟ್ಟು ೧೫ (ಶೇ.೧೨.೩೯) ದೊರೆತಿದ್ದು ಅವುಗಳಲ್ಲಿ ೭ (ಶೇ. ೧೩.೩೩) ಚಕ್ಕೆಯ ಮತ್ತು ೧೩ (ಶೇ. ೮೬.೬೬) ಉಂಡೆಗಲ್ಲು ಅಥವಾ ಮೂಲ ಶಿಲಾಗಟ್ಟಿಯಿಂದ ರೂಪಿತವಾಗಿವೆ. ಈ ಎಲ್ಲಾ ಉಪಕರಣಗಳು ನಾಲ್ಕೇ ನಿವೇಶನಗಳಾದ ಬೂದಿಗುಡ್ಡ, ಮೂಗನಾಯಕನಕೋಟೆ, ಮಂಚಲ್ದೊರೆ ಮತ್ತು ಯಕ್ಕಲಕಟ್ಟೆಗಳಲ್ಲಿ ದೊರೆತಿರುವುದು ಗಮನಾರ್ಹ. ಚಕ್ಕೆಯ ಮೇಲೆ ರೂಪಿತವಾಗಿರುವ ಎಲ್ಲಾ ಉಪಕರಣಗಳೂ ಪೀನವಾಗಿ ಉಬ್ಬಿವೆ. ಹೆಚ್ಚಿನ-ಉಪಕರಣಗಳಲ್ಲಿ ಎರಡೂ ಬದಿಗಳಲ್ಲಿ ಮೂಲಶಿಲೆಯ ತೊಗಟೆಯನ್ನು ಭಾಗಶಃ ಉಳಿಸಿಕೊಳ್ಳಲಾಗಿದೆ.

ಗಾತ್ರದ ದೃಷ್ಟಿಯಿಂದ ಈ ಉಪಕರಣಗಳನ್ನು ಕಿರು, ಮಧ್ಯಮ ಮತ್ತು ದೊಡ್ಡಗಾತ್ರ ಎಂದು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಕಿರುಗಾತ್ರದ ಉಪಕರಣಗಳು ೬ ಇದ್ದು ಅವುಗಳ ಉದ್ದ ೮೦ ರಿಂದ ೧೦೦ ಮಿ.ಮೀ. ಮಧ್ಯಮ ಗಾತ್ರದ ೫ ಉಪಕರಣಗಳ ಉದ್ದ ೧೦೦ ರಿಂದ ೧೨೦ ಮಿ.ಮೀ.ಗಳೂ, ದೊಡ್ಡ ಗಾತ್ರದ ೪ ಉಪಕರಣಗಳ ಉದ್ದ ೧೨೦ ರಿಂದ ೧೪೦ ಮಿ.ಮೀ. ಗಳಿವೆ. ಈ ಉಪಕರಣಗಳು ಕ್ವಾರ್ಟ್ಸೈಟ್, ಡೈಕ್ ಮತ್ತು ಅದಿರುಯುಕ್ತ ಕಪ್ಪು ಉಂಡೆ-ಗಲ್ಲಿನಲ್ಲಿವೆ. ಅಲಗು ಕೆಲವು ಉಪಕರಣಗಳಲ್ಲಿ ಪರಿಧಿಯ ಸುತ್ತಲೂ ಇವೆ. ಅಲಗು ಕೆಲವು ಉಪಕರಣಗಳಲ್ಲಿ ವಿರುದ್ಧ ದಿಕ್ಕಿ-ನಿಂದ ಅನುಕ್ರಮವಾಗಿ ಚಕ್ಕೆ ಎಬ್ಬಿಸಿರುವುದರಿಂದ ಅಂಕುಡೊಂಕಾದ ಅಲಗನ್ನು ಹೊಂದಿವೆ. ಹೆಚ್ಚಿನ ಉಪಕರಣಗಳು ಸವೆತ-ಕ್ಕೊಳಗಾಗಿವೆ. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೮ ರಲ್ಲಿ ನೀಡಿದೆ.

*ಕೋಷ್ಟಕ ಸಂಖ್ಯೆ ೪.೮*

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ. | ಅಗಲ ಮಿ.ಮೀ. | ದಪ್ಪ ಮಿ.ಮೀ. |
|---|---|---|---|---|
| ೧. | ಬೂದಿಗುಡ್ಡ | ೮೦ | ೬೫ | ೩೩ |
| ೨. | ಬೂದಿಗುಡ್ಡ | ೮೮ | ೭೦ | ೩೦ |
| ೩. | ಯಕ್ಕಲಕಟ್ಟೆ | ೯೦ | ೮೦ | ೩೫ |
| ೪. | ಬೂದಿಗುಡ್ಡ | ೯೫ | ೭೩ | ೫೦ |
| ೫. | ಯಕ್ಕಲಕಟ್ಟೆ | ೧೦೦ | ೮೦ | ೩೫ |
| ೬. | ಯಕ್ಕಲಕಟ್ಟೆ | ೧೦೦ | ೭೫ | ೪೦ |
| ೭. | ಮಂಚಲ್ದೊರೆ | ೧೦೨ | ೮೦ | ೪೨ |
| ೮. | ಮೂಗನಾಯಕನಕೋಟೆ | ೧೧೦ | ೮೫ | ೩೦ |
| ೯. | ಮಂಚಲ್ದೊರೆ | ೧೧೫ | ೭೮ | ೪೦ |
| ೧೦. | ಯಕ್ಕಲಕಟ್ಟೆ | ೧೨೦ | ೯೫ | ೪೦ |
| ೧೧. | ಮಂಚಲ್ದೊರೆ | ೧೨೦ | ೮೦ | ೪೦ |
| ೧೨. | ಮಂಚಲ್ದೊರೆ | ೧೩೦ | ೯೦ | ೫೫ |
| ೧೩. | ಯಕ್ಕಲಕಟ್ಟೆ | ೧೩೫ | ೯೫ | ೬೫ |
| ೧೪. | ಮಂಚಲ್ದೊರೆ | ೧೩೮ | ೧೦೦ | ೫೦ |
| ೧೫. | ಯಕ್ಕಲಕಟ್ಟೆ | ೧೪೦ | ೮೫ | ೬೫ |

ಕೋಷ್ಟಕದಿಂದ ತಿಳಿದು ಬರುವಂತೆ ಈ ಉಪಕರಣಗಳ ಉದ್ದ ಕನಿಷ್ಠ ೮೦ ಗರಿಷ್ಠ ೧೪೦, ಅಗಲ ಕನಿಷ್ಠ ೬೫ ಗರಿಷ್ಠ ೮೫ ಮತ್ತು ದಪ್ಪ ಕನಿಷ್ಠ ೩೦ ಗರಿಷ್ಠ ೬೫ ಮಿ.ಮೀ. ಗಳಾಗಿವೆ.

**೫. ಸೀಳುಗತ್ತಿ**

ದೊರೆತಿರುವ ಉಪಕರಣ ಸಮೂಹದಲ್ಲಿ ಸೀಳುಗತ್ತಿ ಗುಂಪಿಗೆ ಸೇರುವ ಒಟ್ಟು ೧೦ (ಶೇ. ೧೦.೨೬)ಉಪಕರಣಗಳಿದ್ದು, ಇವು ಐದು ನಿವೇಶನಗಳಲ್ಲಿ ಮಾತ್ರ ದೊರೆತಿವೆ. ಏಳು ಉಪಕರಣವನ್ನು ತಿಳಿಕಂದು ಬಣ್ಣದ ಕ್ವಾರ್ಟ್ಸೈಟ್ ಶಿಲೆಯಲ್ಲಿ ರೂಪಿಸಿದ್ದರೆ, ಮೂರು ಕ್ವಾರ್ಟ್ಸನ ವಿವಿಧ ಬಣ್ಣದ ಶಿಲೆಗಳಲ್ಲಿ ರೂಪಿಸಲಾಗಿದೆ. ಸಹಜವಾಗಿ ಕ್ವಾರ್ಟ್ಸೈಟ್ ನಲ್ಲಿ ರೂಪಿಸಿರುವ ಉಪಕರಣಗಳು ಉತ್ತಮ ರೀತಿಯವಾಗಿದ್ದರೆ ಕ್ವಾರ್ಟ್ಸ್ ಶಿಲೆಯಲ್ಲಿರುವ ಉಪಕರಣಗಳು ಸಾಧಾರಣ ದರ್ಜೆಯವುಗಳಾಗಿವೆ. ಕರ್ನಾಟಕ ಮತ್ತು ಇತರ ಪ್ರಸಿದ್ಧ ನೆಲೆಗಳಲ್ಲಿ ದೊರೆತಿರುವ ಸೀಳುಗತ್ತಿಗಳಿಗೆ ಹೋಲಿಸಿದರೆ ಸಂಖ್ಯೆ ಮತ್ತು ರೂಪಣಾ ವಿಧಾನಗಳಲ್ಲಿ ಗಮನ ಸೆಳೆಯುವ ಹೆಚ್ಚಿನ ವಿವರಗಳು ಕಾಣುವುದಿಲ್ಲ. ಎಲ್ಲಾ ಉಪಕರಣಗಳನ್ನೂ ಮಧ್ಯಮ ಗಾತ್ರದ ಮತ್ತು ತೆಳ್ಳನೆಯ ಚಕ್ಕೆಗಳ ಮೇಲೆ ರೂಪಿಸಿದ್ದು ಸಾಕಷ್ಟು ಹರಿತವಿರುವ ಚೂಪಾದ ಅಲಗಿರುವ ಕೆಳತುದಿ ಮತ್ತು ದಪ್ಪನೆಯ ಮೇಲ್ತುದಿ ಗಮನಾರ್ಹ ಅಂಶಗಳು. ಏಳು ಉಪಕರಣಗಳು ಹೆಚ್ಚು ಕಡಿಮೆ ರೋಮನ್ ಅಕ್ಷರದ U ಆಕಾರದಲ್ಲಿದ್ದರೆ ಮೂರರ

ದಪ್ಪನೆಯ ತುದಿ ಚೂಪಾಗಿದ್ದು V ಆಕಾರವನ್ನು ಹೋಲುತ್ತವೆ. ದಪ್ಪ ಮೂಲಚಕ್ಕೆಯ ಒಂದು ಬದಿಯಲ್ಲಿ ಉದ್ದೇಶಿತ ಹರಿತ ಅಲಗನ್ನು ರೂಪಿಸಲು ಸೂಕ್ತವಾಗುವಂತೆ ಚಕ್ಕೆ ತೆಗೆದಿರುವುದು ಕಾಣುತ್ತದೆ. ಕನಿಷ್ಠ ನಾಲ್ಕು ಉಪಕರಣಗಳು ಮೂಲತಃ ಕೈಗೊಡಲಿಗಳಾಗಿದ್ದು ಉಪಯೋಗದಿಂದ ಮೊನಚು ತುದಿ ಮುರಿದ ನಂತರ ಒಂದು ಅಥವಾ ಎರಡು ಬದಿಗಳಲ್ಲಿ ಚಕ್ಕೆಗಳನೆಬ್ಬಿಸಿ ಸೀಳುಗತ್ತಿಗಳನ್ನಾಗಿ ಮಾರ್ಪಡಿಸಿರುವುದು ಕಾಣುತ್ತದೆ. ನೀಳಚಕ್ಕೆಯನ್ನೆಬ್ಬಿಸಿದ ಪ್ರಮುಖ ಉಬ್ಬೇಣು ಕೆಲವು ಉದಾಹರಣೆಗಳಲ್ಲಿ ಕಂಡು ಬರುತ್ತದೆ. ಹಿಂಬದಿ ಬಹುತೇಕ ಸಮತಲವಾಗಿದ್ದು ಮುಂಬದಿ ಚೂಪು ಅಥವಾ ಪೀನವಾಗಿರುವದರಿಂದ ಅಡ್ಡ ವಿನ್ಯಾಸವು ವಿಷಮ ತ್ರಿಭುಜದಿಂದ ಹಿಡಿದು ಅರ್ಧಚಂದ್ರಾಕೃತಿಯವರೆಗೆ ಹರಡಿವೆ. ಹೆಚ್ಚಿನ ಉಪಕರಣಗಳಲ್ಲಿ ಕೆಳತುದಿ ಮಾತ್ರ ಹರಿತ ಅಲಗನ್ನು ಹೊಂದಿದ್ದರೆ ಒಂದೆರಡು ಉಪಕರಣಗಳಲ್ಲಿ ಒಂದು ಅಥವಾ ಎರಡು ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಹೆಚ್ಚಿನ ಉಪಕರಣಗಳಲ್ಲಿ ಅಲಗು ಸರಳರೇಖೆಯಲ್ಲಿದ್ದರೆ, ಒಂದೆರಡು ಉಪಕರಣಗಳಲ್ಲಿ ತುದಿಗಳಲ್ಲಿ ಬಾಗಿ ಅರ್ಧಚಂದ್ರಾಕೃತಿಯನ್ನು ಹೋಲುತ್ತವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೯ ರಲ್ಲಿ ನೀಡಿದೆ.

*ಕೋಷ್ಟಕ ಸಂಖ್ಯೆ ೪.೯*

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ. | ಅಗಲ ಮಿ.ಮೀ. | ದಪ್ಪ ಮಿ.ಮೀ |
|---|---|---|---|---|
| ೧. | ಯಕ್ಕಲಕಟ್ಟೆ | ೬೦ | ೮೫ | ೨೫ |
| ೨. | ಯಕ್ಕಲಕಟ್ಟೆ | ೭೦ | ೭೦ | ೩೫ |
| ೩. | ಹೊನ್ನೇಮಾರನಹಳ್ಳಿ | ೭೦ | ೭೦ | ೩೫ |
| ೪. | ಹೊನ್ನೇಮಾರನಹಳ್ಳಿ | ೮೦ | ೯೦ | ೪೦ |
| ೫. | ಮಂಚಲ್ದೊರೆ | ೮೫ | ೮೦ | ೩೫ |
| ೬. | ಅಪ್ಪಾನಹಳ್ಳಿ | ೮೫ | ೮೦ | ೪೩ |
| ೭. | ಅಪ್ಪಾನಹಳ್ಳಿ | ೮೮ | ೭೦ | ೩೦ |
| ೮. | ಅಪ್ಪಾನಹಳ್ಳಿ | ೯೦ | ೭೦ | ೩೫ |
| ೯. | ಮೂಗನಾಯಕನಕೋಟೆ | ೯೦ | ೯೦ | ೪೦ |
| ೧೦. | ಯಕ್ಕಲಕಟ್ಟೆ | ೯೫ | ೭೫ | ೩೦ |

ಈ ಉಪಕರಣಗಳ ಉದ್ದ ಕನಿಷ್ಠ ೬೦ ಗರಿಷ್ಠ ೯೫, ಅಗಲ ಕನಿಷ್ಠ ೭೦ ಗರಿಷ್ಠ ೯೦, ಹಾಗೂ ದಪ್ಪ ಕನಿಷ್ಠ ೨೫ ಗರಿಷ್ಠ ೪೩ ಮಿ.ಮೀ. ಗಳಾಗಿವೆ.

೬. ಹೆರೆಗತ್ತಿ

ದೊರೆತಿರುವ ಒಟ್ಟು ೧೯ (ಶೇ. ೧೫.೭೦)ಉಪಕರಣಗಳಲ್ಲಿ ನಾಲ್ಕನ್ನು ಮಧ್ಯಮ ಗಾತ್ರದ ಉಂಡೆಗಲ್ಲುಗಳ ಮೇಲೆ ರೂಪಿಸಿದ್ದರೆ ಉಳಿದವುಗಳು ಮಧ್ಯಮ ಗಾತ್ರದ ಮೂಲ ಚಕ್ಕೆಗಳ ಮೇಲೆ ತಯಾರಿಸಲಾಗಿದೆ. ಮೂಲಗಟ್ಟಿ ಅಥವಾ ಉಂಡೆಗಲ್ಲುಗಳ ಮೇಲೆ ರೂಪಿತವಾಗಿರುವ ಉಪಕರಣಗಳಲ್ಲಿ ಎರಡೂ ಬದಿಗಳಿಂದ ಚಕ್ಕೆ ಎಬ್ಬಿಸಿ ಅಲಗನ್ನು ಮೂಡಿಸಿದ್ದರೆ ಚಕ್ಕೆಗಳ ಮೇಲೆ ತಯಾರಿಸಿರುವ ಉಪಕರಣಗಳಲ್ಲಿ ಸಾಧಾರಣವಾಗಿ ಮುಂಬದಿಯಲ್ಲಿ ಮಾತ್ರ ಚಕ್ಕೆಗಳನ್ನೆಬ್ಬಿಸಿ ಅಲಗನ್ನು ರೂಪಿಸಿದೆ. ಎರಡು ರೀತಿಯ ಉಪಕರಣಗಳಲ್ಲಿ ಅಲ್ಲಲ್ಲಿ ಮೂಲ ಶಿಲಾತೊಗಟೆಗಳು ಉಳಿದಿವೆ. ಇದೇ ಕಾರಣಕ್ಕಾಗಿ ಮೂಲಗಟ್ಟಿ ಅಥವಾ ಉಂಡೆಗಲ್ಲುಗಳ ಮೇಲೆ ರೂಪಿತವಾಗಿರುವ ಉಪಕರಣಗಳ ಹಿಂಬದಿಯು ಸಮತಲವಾಗಿಲ್ಲದೆ ಪೀನ-ವಾಗಿ ಉಬ್ಬಿಕೊಂಡಿದ್ದರೆ ಚಕ್ಕೆಗಳ ಮೇಲೆ ರೂಪಿಸಿರುವ ಉಪಕರಣಗಳ ಹಿಂಬದಿ ಹೆಚ್ಚು ಕಡಿಮೆ ಸಮತಲ ಇಲ್ಲವೇ ಉಬ್ಬೇಣು ತಾಡನ ಶಂಖುಗಳಿಂದ ಸ್ವಲ್ಪ ನಿಮ್ನವಾಗಿವೆ. ಚಕ್ಕೆಗಳಿಂದ ರೂಪಿಸಿರುವ ಉಪಕರಣಗಳ ಹೆಚ್ಚಳ ಮತ್ತು ಮೇಲ್ತು-ದಿಯಲ್ಲಿ ಮಾತ್ರ ಚಕ್ಕೆಗಳನ್ನೆಬ್ಬಿಸಿರುವುದು. ಈ ಲಕ್ಷಣಗಳು ಅಶ್ಯೂಲಿಯನ್ ನಂತರದ ಉಪಕರಣ ತಯಾರಿಸುವ ವಿಧಾನಗ-ಳನ್ನು ಹೆಚ್ಚಾಗಿ ಬಳಸಿರುವುದನ್ನು ತೋರಿಸುತ್ತದೆ. ಕೆಲವು ಚಕ್ಕೆಗಳನ್ನು ಲಿವೆಲಾಸಿಯನ್ ವಿಧಾನದಿಂದ ತೆಗೆದಿರುವುದೂ ಗಮ-ನಾರ್ಹ. ಉಪಯೋಗಿಸಿರುವ ಶಿಲಾ ಮಾದರಿಗಳು ಕ್ವಾರ್ಟ್ಸೈಟ್, ಕ್ವಾರ್ಟ್ಸ್, ಅದಿರುಯುಕ್ತ ಜಾಸ್ಪರ್ ಮತ್ತು ಡೈಕ್. ಸಹಜವಾಗಿ ಕ್ವಾರ್ಟ್ಸೈಟ್ ನಲ್ಲಿ ರೂಪಿಸಿರುವ ಉಪಕರಣಗಳೇ ಹೆಚ್ಚು ಸಂಖ್ಯೆಯಲ್ಲಿವೆ.

ಈ ಉಪಕರಣಗಳು ತ್ರಿಭುಜ, ಹೆಚ್ಚು ಕಡಿಮೆ ಆಯತಾಕಾರ ಮತ್ತು ವೃತ್ತಾಕಾರಗಳಲ್ಲಿವೆ. ಉಪಯೋಗಿಸಿ-ರುವ ಅಲಗನ್ನು ಆದರಿಸಿ ಇವುಗಳನ್ನು ಒಬ್ಬದಿ (೩ ಉಪಕರಣ), ಇಬ್ಬದಿ (೭), ದುಂಡು ಅಥವಾ ಮುಬ್ಬದಿ (ಮೂರೂ ಬದಿ)(೭)ಮತ್ತು ತುದಿ (೨) ಹೆರಗತ್ತಿಗಳೆಂದು ನಾಲ್ಕು ಗುಂಪುಗಳಾಗಿ ವಿಂಗಡಿಸಬಹುದು.

ಒಬ್ಬದಿ ಹೆರೆಗತ್ತಿಗಳು (ಒಟ್ಟು ೩ಶೇ. ೧೫.೭೮)ಒಂದು ಮೂಲ ಶಿಲಾಗಟ್ಟಿಯಲ್ಲೂ, ಉಳಿದೆರಡು ಚಕ್ಕೆಗಳ ಮೇಲೂ ರೂಪಿತವಾಗಿವೆ. ಚಕ್ಕೆಗಳ ಒಂದು ಬದಿಯಲ್ಲಿ ಅಲಗು ರೂಪಿಸಿರುವ ಒಂದು ಅಥವಾ ಒಂದಕ್ಕಿಂತ ಹೆಚ್ಚು ಚಕ್ಕೆಗ-ಳನೆಬ್ಬಿಸಿ ಹರಿತ ಅಲಗು ರೂಪಿಸಿದೆ. ಮೂರೂ ಉಪಕರಣಗಳು ಹೆಚ್ಚು ಕಡಿಮೆ ಆಯತಾಕಾರದಲ್ಲಿವೆ.

ಇಬ್ಬದಿ ಹೆರೆಗತ್ತಿಗಳು ಏಳು (ಶೇ. ೩೬.೮೪) ಇವೆ. ಮುಂಬದಿಯಲ್ಲಿ ಎರಡು ಪಾರ್ಶ್ವಗಳಲ್ಲಿ ಮಧ್ಯದಿಂದ ಚಕ್ಕೆ ಎಬ್ಬಿಸಿ ಅಲಗುಗಳನ್ನು ರೂಪಿಸಿರುವುದರಿಂದ ಉಪಕರಣದ ಮಧ್ಯದಲ್ಲಿ ಉಬ್ಬೇಣು ಇದ್ದು ಅಡ್ಡವಿನ್ಯಾಸದಲ್ಲಿ ವಿಷಮ ತ್ರಿಭುಜಾಕಾರವನ್ನು ತೋರುತ್ತವೆ. ಒಂದೆರಡು ಉಪಕರಣಗಳಲ್ಲಿ ಹೆರೆಯುವ ಎರಡೂ ಅಲಗುಗಳೂ ಹೆಚ್ಚುಕಡಿಮೆ ಸಮಾ-

ನಾಂತರವಾಗಿದ್ದು ಸೀಳುಗತ್ತಿಗಳನ್ನು ಹೋಲುತ್ತವೆ. ಈ ಗುಂಪಿನ ನೀಳವಾದ ತೆಳ್ಳನೆಯ ಮೂರು ಉಪಕರಣಗಳು ನಂತರದ ಶಿಲಾಯುಗಗಳಲ್ಲಿ ಕಾಣುವ ನೀಳಚಕ್ಕೆಗಳ ಮೂಲವನ್ನು ಗುರುತಿಸಲು ಸಹಾಯವಾಗುತ್ತವೆ. ಎರಡು ತ್ರಿಭುಜಾಕಾರದಲ್ಲಿದ್ದರೆ ಉಳಿದವು ಆಯತಾಕಾರದಲ್ಲಿವೆ.

ದುಂಡು ಅಥವಾ ಮುಬ್ಬದಿ ಹೆರೆಗತ್ತಿಗಳು ಒಟ್ಟು ೭ (ಶೇ. ೩೬.೮೪) ಇದ್ದು ಅವುಗಳಲ್ಲಿ ಒಂದೊಂದು ಅಂಡಾಕಾರ ಮತ್ತು ವೃತ್ತಾಕಾರ, ಉಳಿದವು ತ್ರಿಭುಜಾಕಾರದಲ್ಲಿವೆ. ವೃತ್ತಾಕಾರದ ಉದಾಹರಣೆಗಳಲ್ಲಿ ಮಧ್ಯದಿಂದ ಸುತ್ತಲೂ ಚಕ್ಕೆಗಳನ್ನೆಬ್ಬಿಸಿದ್ದು, ತ್ರಿಭುಜಾಕಾರದ ಉಪಕರಣಗಳಲ್ಲಿ ಮಧ್ಯದಿಂದ ಮೂರು ಭುಜಗಳ ಕಡೆಗೆ ಚಕ್ಕೆಗಳನ್ನೆಬ್ಬಿಸಿ ಉಪಕರಣ ರೂಪಿಸಿದೆ.

ತುದಿ ಹೆರೆಗತ್ತಿಗಳು ೨ (ಶೇ ೧೦.೫೨) ಇವೆ. ಇವುಗಳ ಮೇಲ್ತುದಿಯಲ್ಲಿ ಮೇಲಿನಿಂದ ಕೆಳಮುಖವಾಗಿ ಒಂದೆರಡು ಚಕ್ಕೆಗಳನ್ನು ತೆಗೆದು ಕೆಳತುದಿಯಲ್ಲಿ ಹೆರೆಯುವ ಅಲಗನ್ನುಂಟುಮಾಡಿದೆ. ಜಾಸ್ಪರ್ ಮೂಲಶಿಲೆಯಲ್ಲಿರುವ ಒಂದು ಉಪಕರಣದ ಎರಡೂ ಬದಿಗಳಲ್ಲಿ ಮೂಲಶಿಲಾ ತೊಗಟೆಯನ್ನು ಕಾಣಬಹುದು.

ಈ ಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೪.೧೦ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೪.೧೦

| ಈ | ನೆಲೆ | ಉದ್ದ ಮಿ.ಮೀ. | ಅಗಲ ಮಿ.ಮೀ. | ದಪ್ಪ ಮಿ.ಮೀ. |
|---|---|---|---|---|
| ೧. | ಮೂಗನಾಯಕನಕೋಟೆ | ೬೦ | ೭೦ | ೩೦ |
| ೨. | ದೊಡ್ಡಗುಣಿ | ೬೦ | ೬೫ | ೪೦ |
| ೩. | ಅಪ್ಪಾನಹಳ್ಳಿ | ೭೦ | ೫೦ | ೩೫ |
| ೪. | ಮಂಚಲ್ದೊರೆ | ೭೫ | ೭೫ | ೩೦ |
| ೫. | ಯಕ್ಕಲಕಟ್ಟೆ | ೭೫ | ೬೦ | ೩೫ |
| ೬. | ಯಕ್ಕಲಕಟ್ಟೆ | ೭೫ | ೭೦ | ೨೫ |
| ೭. | ಅಪ್ಪಾನಹಳ್ಳಿ | ೭೫ | ೬೫ | ೩೦ |
| ೮. | ಮೂಗನಾಯಕನಕೋಟೆ | ೭೫ | ೭೦ | ೨೫ |
| ೯. | ಅಪ್ಪಾನಹಳ್ಳಿ | ೮೦ | ೬೫ | ೨೫ |
| ೧೦. | ಮಂಚಲ್ದೊರೆ | ೮೦ | ೮೫ | ೪೦ |
| ೧೧. | ಯಕ್ಕಲಕಟ್ಟೆ | ೮೫ | ೬೫ | ೩೦ |
| ೧೨. | ದೊಡ್ಡಗುಣಿ | ೮೫ | ೭೦ | ೩೦ |
| ೧೩. | ಬೂದಿಗುಡ್ಡ | ೮೫ | ೭೫ | ೩೮ |
| ೧೪. | ಅಪ್ಪಾನಹಳ್ಳಿ | ೯೦ | ೭೫ | ೩೦ |
| ೧೫. | ಕೈಮರ | ೯೦ | ೭೫ | ೩೫ |
| ೧೬. | ಕೈಮರ | ೯೫ | ೮೫ | ೪೦ |
| ೧೭. | ಕೈಮರ | ೧೦೦ | ೬೫ | ೨೫ |
| ೧೮. | ಅಪ್ಪಾನಹಳ್ಳಿ | ೧೦೦ | ೬೦ | ೪೦ |
| ೧೯. | ಅಪ್ಪಾನಹಳ್ಳಿ | ೧೦೦ | ೫೫ | ೨೮ |

ಈ ಉಪಕರಣಗಳ ಉದ್ದ ಕನಿಷ್ಠ ೬೦ ಗರಿಷ್ಠ ೧೦೦, ಅಗಲ ಕನಿಷ್ಠ ೫೫ ಗರಿಷ್ಠ ೮೫ ಹಾಗು ದಪ್ಪ ಕನಿಷ್ಠ ೨೫ ಗರಿಷ್ಠ ೪೦ ಮಿ.ಮೀ. ಗಳಾಗಿವೆ.

**ತಾಂತ್ರಿಕತೆ**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರಕಿರುವ ಉಪಕರಣಗಳ ವೈವಿಧ್ಯ ಮತ್ತು ಅವುಗಳನ್ನು ರೂಪಿಸಲು ಬಳಸಿರುವ ವಿಧಾನಗಳು ಸಾಧಾರಣವಾಗಿ ಪ್ರಪಂಚದೆಲ್ಲೆಡೆಯಲ್ಲೂ ಆದಿ ಹಳೆಶಿಲಾಯುಗ ಮಾನವನು ಉಪಯೋಗಿಸುತ್ತಿದ್ದ ತಂತ್ರಗಳೇ ಆಗಿವೆ. ಅವು ಮುಖ್ಯವಾಗಿ ಈ ನಾಲ್ಕು ವಿಧಾನಗಳು,

*೧. ಕಲ್ಲಿನಿಂದ ಕಲ್ಲಿಗೆ ಘಟ್ಟಿಸುವುದು: ಈ ವಿಧಾನವನ್ನು ಮುಖ್ಯವಾಗಿ ಏಕಮುಖ, ದ್ವಿಮುಖ ಕೈಗೊಡಲಿ, ಮಚ್ಚುಗತ್ತಿಗಳನ್ನು ರೂಪಿಸಲು ಮತ್ತು ಮೂಲ ಶಿಲಾಗಟ್ಟಿಯಿಂದ ದಪ್ಪ ಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಆಕಾರಕ್ಕೆ ತರಲು ಬಳಸಿದೆ.*

*೨. ಭಾರಕಲ್ಲು ಸುತ್ತಿಗೆ ವಿಧಾನ: ದಪ್ಪನೆಯ ಪ್ರಾಥಮಿಕ ಚಕ್ಕೆಗಳನ್ನು ತೆಗೆದ ನಂತರ ಉಂಡೆಗಲ್ಲು ಅಥವಾ ಮೂಲಗಟ್ಟಿಗೆ ಉದ್ದೇಶಿತ ಸ್ಥೂಲ ಆಕಾರ ಸಾದೃಶ್ಯವನ್ನು ನೀಡಲು, ದ್ವಿತೀಯ ಶ್ರೇಣಿ ಹಂತದ ಚಕ್ಕೆಗಳನ್ನು ತೆಗೆಯಲು ಈ ವಿಧಾನವನ್ನು ಬಳಸಿದೆ.*

*೩. ಲಘುಕಲ್ಲು ಸುತ್ತಿಗೆ ವಿಧಾನ: ಉದ್ದೇಶಿತ ಆಕಾರವನ್ನು ಹೆಚ್ಚು ಪರಿಷ್ಕರಣಗೊಳಿಸಿ ಉಪಕರಣಕ್ಕೆ ನಿರ್ದಿಷ್ಟ ರೂಪಕೊಡಲು ಈ ವಿಧಾನದ ಬಳಕೆಯಾಗಿದೆ.*

*೪. ಕೊಳವೆ ಸುತ್ತಿಗೆ ವಿಧಾನ: ಖಚಿತವಾದ ಹೊರರೂಪ, ಆಕಾರ ಪಡೆದ ಉಪಕರಣದ ಕಾರ್ಯ ಸಾಧಕ ಮೊನೆ ಅಥವಾ ಅಂಚನ್ನು ಪುಡಿ ಚಕ್ಕೆಗಳನ್ನೆಬ್ಬಿಸಿ ಸಾಕಷ್ಟು ಹರಿತಗೊಳಿಸಲು ಬಳಸಿದೆ .*

ಪ್ರಸ್ತುತ ದೊರೆತಿರುವ ಉಪಕರಣಗಳಲ್ಲಿ ಅತಿ ಹೆಚ್ಚಿನವು ಕ್ವಾರ್ಟ್ಸೈಟ್(ಒಟ್ಟು,೭೭ ಶೇ.೬೩.೬೪)ಶಿಲಾ ಮಾದರಿಯಲ್ಲಿದ್ದು ಉತ್ತಮ ರೀತಿಯ ಚಕ್ಕೆಗಳನ್ನೆಬ್ಬಿಸಲು ಸಹಾಯಕವಾಗಿರುವುದರಿಂದ ಈ ನಾಲ್ಕು ವಿಧಾನಗಳನ್ನು ಉಪ-ಯೋಗಿಸಿದೆ. ಉದ್ದೇಶಿತ ರೂಪ ಮತ್ತು ಹರಿತ ಅಲಗುಗಳನ್ನು ಹೊಂದಿರುವ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಹಾಗಿದ್ದರೂ ಬಳಸಿರುವ ಮೂಲ ಸಾಮಗ್ರಿಯು ಕಳಪೆಯಾಗಿರುವುದು ಮತ್ತು ವಿವಿಧ ಹಂತದ ಸವೆತಕ್ಕೊಳಗಾಗಿರುವುದ-ರಿಂದ ತಮ್ಮ ಮೂಲ ರೂಪವನ್ನು ಕಳೆದು ಕೊಂಡಿವೆ. ಕೆಲವು ಉಪಕರಣಗಳ ಅಂಚಿನಲ್ಲಿ ಕಂಡು ಬರುವ ಕಿರು ಚಕ್ಕೆಕಲೆಗಳು ಹರಿತ ಅಲಗನ್ನು ಮೂಡಿಸಲು ಉಪಯೋಗಿಸಿದ್ದ ಕೊಳವೆ ಸುತ್ತಿಗೆ ವಿಧಾನವನ್ನು ನಿರೂಪಿಸುತ್ತವೆ. ಕೈಮರ, ಚಿಕ್ಕೆಗೌಡನ-ದೊಪ್ಪ ಮತ್ತು ಅಪ್ಪಾನಹಳ್ಳಿಗಳಲ್ಲಿ ದೊರೆತಿರುವ ಕೈಗೊಡಲಿಗಳು ಅಶ್ಯೂಲಿಯನ್ ಮಾದರಿಯಲ್ಲಿ ರೂಪಿತವಾಗಿವೆ. ಚಕ್ಕೆ

ಉಪಕರಣಗಳನ್ನು ರೂಪಿಸಲು ಬಳಸಿರುವ ದಪ್ಪ, ಮಧ್ಯಮ ಗಾತ್ರದ ಚಕ್ಕೆಗಳನ್ನು ಲೆವಲ್ಲಾಯ್ಸ್ ತಂತ್ರದಿಂದ ಚಕ್ಕೆಯನ್ನು ಎಬ್ಬಿಸಿ ಕಿರುಗಾತ್ರದ ಚಕ್ಕೆಗಲನ್ನೆಬ್ಬಿಸಲು (ಮುಖ್ಯವಾಗಿ ಹೆರೆಗತ್ತಿಗಳನ್ನು ಮಾಡಲು) ಕ್ಲಾಕ್ಟೋನಿಯನ್ ತಂತ್ರವನ್ನು ಬಳಸಿರುವುದು ತಿಳಿಯುತ್ತದೆ.

**ಪರಿಶೀಲನೆ**

ಸಂಪತ್ ಐಯ್ಯಂಗಾರ್ ರವರು ೧೯೨೪ರಲ್ಲಿ ಕಿಬ್ಬನಹಳ್ಳಿಯ ಆದಿ ಹಳೆ ಶಿಲಾಯುಗದ ನೆಲೆ ಪತ್ತೆ ಮಾಡಿದ್ದನ್ನು ಮೊದಲನೆಯ ಅಧ್ಯಾಯದಲ್ಲಿ ಗಮನಿಸಲಾಗಿದೆ(೧೯೨೪). ಇದೊಂದು ಈ ಸಂಸ್ಕೃತಿಯ ಉಪಕರಣಗಳನ್ನು ಸಿದ್ಧ ಮಾಡುತ್ತಿದ್ದ ಕೈಗಾರಿಕಾ ನೆಲೆ ಎಂಬುದನ್ನು ಕೂಡ ವಿವರಿಸಲಾಗಿದೆ. ಶೇಷಾದ್ರಿಯವರು ಈ ನೆಲೆಯಿಂದ ಸಂಗ್ರಹಿಸಿದ ಉಪಕರಣಗಳ ಎಲ್ಲಾ ಪ್ರಕಾರಗಳ ರೇಖಾ ಚಿತ್ರಗಳ ಸಹಿತ ವಿವರಣೆ ನೀಡಿರುವುದನ್ನು ಮೇಲೆ ಹೇಳಲಾಗಿದೆ (ಶೇಷಾದ್ರಿ.ಎಂ: ೧೯೫೬). ಇದನ್ನು ಗಮನದಲ್ಲಿರಿಸಿಕೊಂಡು ಮೊದಮೊದಲು ಈ ಪ್ರದೇಶದ ಸುತ್ತಮುತ್ತ ಅನ್ವೇಷಣೆ ಕೈಗೊಂಡು ಕ್ರಮೇಣ ನೆಲೆಯ ಉತ್ತರ ಮತ್ತು ಪೂರ್ವ ಭಾಗಕ್ಕೂ ಮುಂದುವರಿಸಲಾಯಿತು. ತತ್ಪರಿಣಾಮವಾಗಿ ಕಿಬ್ಬನಹಳ್ಳಿಯಲ್ಲದೆ, ಈ ಸಂಸ್ಕೃತಿಗೆ ಸೇರಿದ ಹದಿನೆಂಟು ನೆಲೆಗಳನ್ನು ಗುರುತಿಸಲು ಸಾಧ್ಯವಾಗಿದೆ(ಕೋಷ್ಟಕ ಸಂಖ್ಯೆ ೪.೧ ಮತ್ತು ಭೂನಕ್ಷೆ ಪುಟ ಸಂಖ್ಯೆ ೬೧). ಕಿಬ್ಬನಹಳ್ಳಿಯಿಂದ ಸುಮಾರು ೨೦-೩೦ ಕಿ.ಮೀ. ಅಂತರದಲ್ಲಿ ಕಾವೇರಿ ನದಿಯ ಉಪನದಿಯಾದ ಶಿಂಷಾ ನದಿಯ ಪಾತ್ರದಲ್ಲಿ ೧೪ ನೆಲೆಗಳನ್ನು, ಉತ್ತರ ಭಾಗದಲ್ಲಿ ಅಂದರೆ ಜಿಲ್ಲೆಯ ಉತ್ತರಕ್ಕಿರುವ ಪೆನ್ನಾರ್ ನದೀ ಪಾತ್ರಕ್ಕೆ ಹೊಂದಿಕೊಂಡ ಪ್ರದೇಶದಲ್ಲಿ ೪ ನೆಲೆಗಳನ್ನು ಗುರುತಿಸಲಾಯಿತು. ಈ ನೆಲೆಗಳ ವಿವರಣೆಗಳನ್ನು ಪ್ರತ್ಯೇಕವಾಗಿ ವಿವರಣೆಗಳೊಂದಿಗೆ ಪಟ್ಟಿಮಾಡಲಾಗಿದೆ (ಕೋಷ್ಟಕ ಸಂಖ್ಯೆ ೪.೩) ಮತ್ತು ಈ ನೆಲೆಗಳಲ್ಲಿ ದೊರೆತ ವಿವಿಧ ಪ್ರಕಾರಗಳ ಉಪಕರಣಗಳ ಅಂಕಿಅಂಶದ ಪಟ್ಟಿ ಯೊಂದನ್ನು ಸಿದ್ಧ ಮಾಡಲಾಗಿದೆ. ಇವೆರಡು ವಿವರಣೆಗಳಿಂದ ಈ ಸಂಸ್ಕೃತಿಯ ಬಗ್ಗೆ ಕೆಲವೊಂದು ಅಂಶಗಳು ಸ್ಪಷ್ಟವಾಗುತ್ತವೆ. ಈ ಜಿಲ್ಲೆಯ ಅನ್ವೇಷಣೆ ಮಾಡಿದ ಪ್ರದೇಶದಲ್ಲಿ ಶಿಂಷಾನದೀ ಬಯಲಿನಲ್ಲಿಯೇ ಹೆಚ್ಚಿನ ಸಂಖ್ಯೆಯಲ್ಲಿ ಉಪಕರಣಗಳುಳ್ಳ ನೆಲೆಗಳಾದ ಮೂಗನಾಯಕನಕೋಟೆ ಹಾಗು ಇಲ್ಲಿಂದ ಎಂಟು ಕಿ.ಮೀ. ದೂರದಲ್ಲಿರುವ ಯಕ್ಕಲಕಟ್ಟೆ ಮತ್ತು ಅಪ್ಪಾನ ಹಳ್ಳಿಯೂಕೂಡ ಕಿಬ್ಬನಹಳ್ಳಿಯಂತೆ ಪ್ರಮುಖ ನೆಲೆಗಳೆಂದು ಹೇಳಬಹುದು. ಈ ನೆಲೆಗಳ ಸಮೀಪದಲ್ಲಿ ಶಿಂಷಾ ನದಿಗೆ ಸೇರುವ ತೊರೆಗಳಿವೆ. ಹೆಚ್ಚು ಮಳೆಯಾದಲ್ಲಿ ಮಾತ್ರ ಈ ತೊರೆಗಳಲ್ಲಿ ಸ್ವಲ್ಪ ಕಾಲದವರೆಗೆ ನೀರಿರುತ್ತದೆ. ಈ ನೆಲೆಗಳ ಹತ್ತಿರದಲ್ಲಿಯೇ ಗುಡ್ಡಗಳಿವೆ. ಬಹುಶಃ ಈ ಸಂಸ್ಕೃತಿ ಊರ್ಜಿತವಿದ್ದ ಕಾಲದಲ್ಲಿ ಸ್ವಲ್ಪ ಹೆಚ್ಚು ನೀರಿನ ಸೌಕರ್ಯವಿದ್ದು ತಕ್ಕಮಟ್ಟಿಗೆ ಸಸ್ಯವರ್ಗವೂ ಇದ್ದಂತೆ ತೋರುತ್ತದೆ. ಆದ್ದರಿಂದ ಈ ಸಂಸ್ಕೃತಿಯ ಜನರಿಗೆ ನೀರಿನಾಶ್ರಯ, ಸಸ್ಯ ಮತ್ತು ಪ್ರಾಣಿ-

ವರ್ಗ ಸಂಪತ್ತು ಹಾಗು ಉಪಕರಣಗಳನ್ನು ತಯಾರಿಸಲು ಬೇಕಾದ ಯೋಗ್ಯ ಕಲ್ಲುಗುಂಡುಗಳೂ ಲಭ್ಯವಿದ್ದವು. ಆದ್ದರಿಂದಲೇ ಈ ಪ್ರದೇಶವು ಜನರನ್ನು ಆ ಕಾಲದಲ್ಲಿ ತನ್ನೆಡೆಗೆ ಆಕರ್ಷಿಸಿತ್ತೆಂದು ಕಾಣುತ್ತದೆ.

ಈ ಪ್ರಮುಖ ನೆಲೆಗಳಲ್ಲಿ ಉಪಕರಣಗಳನ್ನು ಮಾಡಲು ಆರಿಸಿತಂದ ಕಲ್ಲುಗುಂಡುಗಳು ಮತ್ತು ಅದನ್ನು ರೂಪಿಸುವಾಗ ತೆಗೆದ ಚಕ್ಕೆಗಳು, ಅರ್ಧ ಹಾಗು ಪೂರ್ಣವಾಗಿ ರೂಪಿಸಿದ ಕೆಲವೇ ಉಪಕರಣಗಳು ದೊರೆತಿವೆ. ಒಂದು ಗಮನಾರ್ಹ ಅಂಶವೆಂದರೆ ಮೂಗನಾಯಕನಕೋಟೆ ನೆಲೆಯಲ್ಲಿ ಉಪಕರಣಗಳನ್ನು ಸಿದ್ಧ ಮಾಡುವ ತಂತ್ರದಲ್ಲಿ ಉಪಯೋಗಿಸಿದ್ದಿರಬಹುದಾದ ಪೀಠಕಲ್ಲು ಕೂಡ ದೊರೆತಿದೆ(ಛಾಯ ಚಿತ್ರ ಸಂಖ್ಯೆ ೪.೩-೪.೧೦.೨ ಪುಟ ೬೩-೬೬). ಅದ್ದರಿಂದ ಈ ನೆಲೆಯು ಉಪಕರಣಗಳ ಕೈಗಾರಿಕೆಯ ನೆಲೆಯೆಂದು ಸ್ಪಷ್ಟವಾಗುತ್ತದೆ. ಈ ಉಪಕರಣಗಳ ಪ್ರಕಾರಗಳಲ್ಲಿ ಕೈಗೊಡಲಿ ಮತ್ತು ಎಸೆಯ ಬಹುದಾದ ಚಕ್ರಗಳೂ ಹೆಚ್ಚಿವೆ. ಕೈಗೊಡಲಿಯಲ್ಲದೆ ಮಧ್ಯಮ ಪ್ರಮಾಣದ ಪ್ರಾಣಿಗಳನ್ನು ಬೇಟೆಯಾಡಲು ಚಕ್ರವು ಒಂದು ಪರಿಣಾಮಕಾರಿಯಾದ ಉಪಕರಣ. ತಜ್ಞರು ಈಗಾಗಲೆ ಅಭಿಪ್ರಾಯ ಪಟ್ಟಿರುವಂತೆ ಕೊಡಲಿಗಳನ್ನು ಒಂದು ಬಲವಾದ ಕೋಲಿಗೆ ಕಟ್ಟಿ ಈಟಿಯ ಹಾಗೆ ಮಾಡಿಕೊಂಡು ದೊಡ್ಡ ಪ್ರಾಣಿಗಳನ್ನು ಹತ್ತಾರು ಜನ ಸೇರಿ ಈಟಿಗಳಿಂದ ತಿವಿದು ಬೇಟೆಯಾಡಲು ಹಾಗು ಗೆಡ್ಡೆಗೆಣಸುಗಳನ್ನು ಅಗೆದು ತೆಗೆಯಲು ಉಪಯುಕ್ತ. ಅದ್ದರಿಂದ ಈ ಜನರ ಸಾಮಾನ್ಯ ನಿತ್ಯ ಜೀವನಕ್ರಮ ಇತರ ಪ್ರದೇಶಗಳಲ್ಲಿಯ ಜನರ ಜೀವನ ಶೈಲಿಗಿಂತ ಅಷ್ಟೇನೂ ಭಿನ್ನವಾಗಿ ಕಾಣುವುದಿಲ್ಲ.

ಇನ್ನೊಂದು ಮುಖ್ಯ ಅಂಶವೆಂದರೆ ಇಲ್ಲಿ ದೊರೆತ ಉಪಕರಣಗಳು ಬಹುದೂರದಿಂದ ನೀರಿನೊಂದಿಗೆ ಹರಿದು ಬಂದು ಹೊಡೆತದಿಂದ ಉಂಟಾದ ಸವೆತ ಇವುಗಳಲ್ಲಿ ಕಾಣುವುದಿಲ್ಲ. ಅದ್ದರಿಂದ ಇವೆಲ್ಲಾ ಮೂಲ ನೆಲೆಗಳೆಂದು ಹೇಳಬಹುದು ಮತ್ತು ಈ ಪ್ರದೇಶದಲ್ಲಿ ಜನರು ಓಡಾಡಿಕೊಂಡಿದ್ದರೆಂದು ಹೇಳಬಹುದು. ಆದರೆ ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಬಾದಾಮಿ ಐಹೊಳೆ ಪ್ರದೇಶದ ಗುಡ್ಡಗಳಲ್ಲಿ ಗವಿಗಳು ಕಲ್ಲಾಸರೆಗಳು ಇವೆ. ಇವು ಜನರ ವಾಸ ಯೋಗ್ಯ ಸ್ಥಳಗಳು. ಅದ್ದರಿಂದ ಅಲ್ಲಿನ ಜನರು ಅಂತಹ ಗವಿ ಹಾಗೂ ಕಲ್ಲಾಸರೆಗಳನ್ನು ವಾಸಕ್ಕೆ ಉಪಯೋಗ ಮಾಡಿಕೊಂಡಿರಬಹುದು. ಆದರೆ ಶಿಂಪಾ ನದೀ ಪ್ರದೇಶದಲ್ಲಿ ಇಂತಹ ನೈಸರ್ಗಿಕ ಅನುಕೂಲವಿಲ್ಲ. ಹೆಚ್ಚಾಗಿ ಬಯಲು ಭೂಮಿ, ಅಲ್ಲಲ್ಲಿ ಗುಡ್ಡಗಳು. ಆದ್ದರಿಂದ ಈ ಜನರು ಜೋಪಡಿಯಂತಹ ಕೃತಕ ಗುಡಿಸಲುಗಳನ್ನು ಮಾಡಿಕೊಂಡಿದ್ದಿರಬೇಕು. ಅಂತಹ ಗುಡಿಸಲು ಅವಶೇಷಗಳು ಬಹಳ ಕಾಲದವರೆಗೆ ಉಳಿದು ಬರಲು ಸಾಧ್ಯವಿಲ್ಲ. ಹೀಗೆ ಬಿಸಿಲು, ಮಳೆ ಮತ್ತು ಗಾಳಿಯಿಂದ ರಕ್ಷಿಸಿಕೊಳ್ಳಲು ಆಸರೆಗಳನ್ನು ಮಾಡಿಕೊಳ್ಳುತ್ತಿದ್ದರೆಂಬುದಕ್ಕೆ ಪರೋಕ್ಷವಾಗಿ ಹುಣಸಗಿಯಲ್ಲಿ ಅಸ್ಪಷ್ಟವಾಗಿ ಗುರುತುಗಳಿವೆ (ಪದ್ದಯ್ಯ.ಕೆ:೧೯೮೨).

ಯಕ್ಕಲಕಟ್ಟೆ, ಅಪ್ಪಾನಹಳ್ಳಿ, ಮೂಗನಾಯಕನಕೋಟೆ, ಮಂಚಲ್ದೊರೆ, ಕೈಮರ ಮೊದಲಾದ ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯ ಉಪಕರಣಗಳಿವೆ. ಇವುಗಳ ಸುತ್ತಮುತ್ತಲಿನ ಬೂದಿಗುಡ್ಡ, ಹೊನ್ನೇಮಾರನಹಳ್ಳಿ, ದೊಡ್ಡಗುಣಿ, ಮಾರಶೆಟ್ಟಿಹಳ್ಳಿ, ಹರೇನಹಳ್ಳಿ ಸೀಗೆಹಳ್ಳ, ಬೊಮ್ಮೇನಹಳ್ಳಿ, ಶಿವಪುರ ಮೊದಲಾದ ನೆಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಉಪಕರಣಗಳಿವೆ. ಆದ್ದರಿಂದ ತುಮಕೂರು ಜಿಲ್ಲಾ ಪ್ರದೇಶದಲ್ಲಿ ಗುಬ್ಬಿ ತಾಲ್ಲೂಕಿನ ಭಾಗವು ಈ ಸಂಸ್ಕೃತಿಯ ಕೇಂದ್ರವೆಂದು ಹೇಳಬಹುದು. ಈ ಪ್ರದೇಶದಿಂದ ಉತ್ತರ-ಈಶಾನ್ಯ ದಿಕ್ಕಿಗೆ ಸುಮಾರು ಮೂವತ್ತು ಕಿ.ಮೀ. ದೂರದಲ್ಲಿಯ ಚಿಕ್ಕೇಗೌಡನರೊಪ್ಪ ಮತ್ತು ಅವರ್ಗಲ್ಲು ಹಾಗೂ ಅಲ್ಲಿಂದ ಸು. ನಲ್ವತ್ತೈದು ಕಿ.ಮೀ. ದೂರಕ್ಕಿರುವ ಪೆನ್ನಾರ್ ನದೀ ಬಯಲ್ಲಿನಲ್ಲಿರುವ ಯಲ್ಲಪ್ಪನಾಯಕನಹೊಸಕೋಟೆಗಳಲ್ಲಿ ಅತಿ ಕಡಿಮೆ ಪ್ರಮಾಣದಲ್ಲಿ ಉಪಕರಣಗಳಿವೆ (ಅಂಕಿ-ಅಂಶ ಪಟ್ಟಿ ಕೋಷ್ಟಕ ಸಂಖ್ಯೆ ೪.೩ ನೋಡಿ). ಪೆನ್ನಾರ್ ನದಿಯು ತುಂಗ ಭದ್ರಾನದಿಯ ಉಪನದಿ. ಇದರ ಉತ್ತರಕ್ಕೆ ಬಳ್ಳಾರಿ ಜಿಲ್ಲೆಯ ನಿಟ್ಟೂರಿನಲ್ಲಿ ಆದಿ ಹಳೆಶಿಲಾಯುಗದ ನೆಲೆ ಇರುವುದು ಮೊದಲೇ ತಿಳಿದ ವಿಷಯ (ಅನ್ಸಾರಿ.ಜಡ್.ಡಿ:೧೯೭೦;೧-೭).

ಮೂಗನಾಯಕನಕೋಟೆ-ಯಕ್ಕಲಕಟ್ಟೆ-ಅಪ್ಪಾನಹಳ್ಳಿ ನೆಲೆಗಳ ಪಶ್ಚಿಮಕ್ಕೆ ಶಿವಮೊಗ್ಗ ಜಿಲ್ಲೆಯ ತುಂಗಾ ಮತ್ತು ಭದ್ರಾ ನದಿಗಳ ಉಗಮ ಪ್ರದೇಶದಲ್ಲಿ ಹಾಸನ ಜಿಲ್ಲೆಯ ಹೇಮಾವತಿ ನದೀ ಪ್ರದೇಶಗಳಲ್ಲಿ ಹಾಗು ಚಿಕ್ಕಮಗಳೂರು ಜಿಲ್ಲೆಗಳ ಪ್ರದೇಶದಲ್ಲಿಯ ಪ್ರಮುಖ ನೆಲೆಗಳಾದ ಗೋವಿನಕೋವಿ, ಚಿಕ್ಕಬಸೂರ್, ಸೂಡೂರ್, ಅಗ್ರಹಾರ, ಗೆದ್ದಹಳ್ಳಿ, ಹರಿಹರಪುರ, ಪಿಳಂಗೆರೆ, ಕಟ್ಟೆ ಬೆಳಗುಲಿ ಮೊದಲಾದ ಆದಿ ಹಳೆಶಿಲಾಯುಗದ ನೆಲೆಗಳಿವೆ. ಗೋವಿನಕೋವಿ, ಗೆದ್ದಹಳ್ಳಿ, ಪಿಳಂಗೆರೆ, ಕಟ್ಟೆ ಬೆಳಗುಲಿ, ಮೊದಲಾದ ನೆಲೆಗಳ ಉಪಕರಣಗಳನ್ನು ಕ್ವಾರ್ಟ್ಸ್ ಮತ್ತು ಕ್ವಾರ್ಟ್ಸೈಟ್ ನ ಉಂಡೆಕಲ್ಲಿನಲ್ಲಿ ರೂಪಿಸಲಾಗಿದ್ದು ಇವು ಹೆಚ್ಚಾಗಿ ಕೈಗೊಡಲಿ ಮತ್ತು ಮಚ್ಚುಗತ್ತಿ ಪ್ರಕಾರದ ಉಪಕರಣಗಳೇ ಆಗಿದ್ದು ಇವು ಮೂಗನಾಯಕನಕೋಟೆ, ಯಕ್ಕಲಕಟ್ಟೆ, ಅಪ್ಪಾನಹಳ್ಳಿ, ಮಂಚಲ್ದೊರೆ, ಕೈಮರ ಮೊದಲಾದ ನೆಲೆಗಳಲ್ಲಿ ದೊರೆತ ಉಪಕರಣಗಳಿಗಿಂತ ಉಪಯೋಗಿಸಿದ ಶಿಲಾಮಾದರಿ, ಆಕೃತಿ ಹಾಗು ವೈವಿಧ್ಯಗಳ ದೃಷ್ಟಿಯಿಂದ ಅಷ್ಟೇನೂ ಭಿನ್ನವಾಗಿಲ್ಲ. ಹೀಗಾಗಿ ಮಲೆನಾಡು, ಅರೆ ಮಲೆನಾಡು ಪ್ರದೇಶಗಳಾದ ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ಹಾಸನ ಜಿಲ್ಲೆಯ ನೆಲೆಗಳಲ್ಲಿ ರೂಪಿತವಾದ ಉಪಕರಣಗಳು ಇಲ್ಲಿನ ಉಪಕರಣಗಳನ್ನೇ ಹೆಚ್ಚಾಗಿ ಹೋಲುತ್ತವೆಂದು ಹೇಳಬಹುದು.

ಈ ನೆಲೆಗಳಲ್ಲಿನ ಉಪಕರಣಗಳನ್ನು ತುಲನಾತ್ಮಕವಾಗಿ ಕಲ್ಲಿನಿಂದ ಕಲ್ಲಿಗೆ ಘಟ್ಟಿಸುವ ಮತ್ತು ಕೊಳವೆ ಸುತ್ತಿಗೆ ತಂತ್ರಗಳಿಂದ ಮಾಡಲಾಗಿದೆ ಎಂದು ಈ ಉಪಕರಣಗಳ ಮೇಲಿನ ಚಕ್ಕೆಗಳನ್ನೆಬ್ಬಿಸಿದ ರೀತಿಯಿಂದ ತಿಳಿಯಬಹುದು.

**ಆಯ್ದ ಉಪಕರಣಗಳ ವಿವರಣೆ.**

**ಮಚ್ಚುಗತ್ತಿ**

೧. ಯಕ್ಕಲಕಟ್ಟೆ:- ಮಧ್ಯಮಗಾತ್ರ. ಕ್ವಾರ್ಟ್ಜೈಟ್ ಶಿಲೆ. ಉದ್ದ ೧೦೦ ಅಗಲ ೮೦ ದಪ್ಪ ೪೫ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಸಮತಲವಿದ್ದು ಮೂಲ ಶಿಲಾ ತೊಗಟೆ ಅಂಶವಿದೆ. ಸುತ್ತಲೂ ಆಳಚಕ್ಕೆ ತೆಗಿದಿದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದು ಅಲಗು ಮೂಡಿಸಿದ್ದು ದೀರ್ಘ ವೃತ್ತಾಕಾರವಾಗಿದೆ. ಬಲಪಾರ್ಶ್ವ ಮೊಂಡಾಗಿದೆ. ಮೇಲ್ತುದಿ ಹಾಳಾಗಿದೆ. ಕೆಳತುದಿ ಆಳಚಕ್ಕೆ ತೆಗೆದಿದ್ದು ಅಲಗು ಇದೆ. ಹಿಂಬದಿ ಸಮತಲ. ಅಡ್ಡವಿನ್ಯಾಸದಲ್ಲಿ ಅಸಮ ಆಯತಕಾರ.
ಸಾಮ್ಯ:- ಸಂಖ್ಯೆ-೧೫, ನಕ್ಷೆ-೩೨ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫).

೨. ಯಕ್ಕಲಕಟ್ಟೆ:- ಮಧ್ಯಮಗಾತ್ರ. ನಸು ಗೆಂಪಿನ ಕ್ವಾರ್ಟ್ಜೈಟ್‌ಶಿಲೆ. ಉದ್ದ ೮೦ ಅಗಲ ೭೦ ದಪ್ಪ ೪೫ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಸಮತಲವಾಗಿದ್ದು ಆಳಚಕ್ಕೆ ತೆಗೆದು ಅಲಗು ಮೂಡಿಸಿದೆ. ಎಡಪಾರ್ಶ್ವದಲ್ಲಿ ಕಿರು ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಬಲಪಾರ್ಶ್ವದಲ್ಲಿ ಮೂಲ ಶಿಲಾ ತೊಗಟೆ ಅಂಶವಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸದಲ್ಲಿ ಆಯತಾಕಾರ.
ಸಾಮ್ಯ:- ಸಂಖ್ಯೆ-೧೯. ನಕ್ಷೆ-೩೨. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

**ಇಬ್ಬದಿ ಮಚ್ಚುಗತ್ತಿ**

೩. ದೊಡ್ಡಗುಣಿ:- ಮಧ್ಯಮಗಾತ್ರ. ಆದಿರುಯುಕ್ತ ಜಾಸ್ಪರ್‌ಶಿಲೆ. ಉದ್ದ ೯೫ ಅಗಲ ೮೫ ದಪ್ಪ ೪೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಪರಿಧಿಯ ಕಡೆಗೆ ಸಣ್ಣಸಣ್ಣ ಚಕ್ಕೆ ತಗೆದಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ನಿಮ್ನ ಹರಿತ ಅಲಗನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ವಕ್ರರೇಖೆಯಲ್ಲಿದೆ. ವಿರುದ್ಧ ದಿಕ್ಕಿನಲ್ಲಿ ಸಣ್ಣಸಣ್ಣ ಚಕ್ಕೆ ತಗೆದಿದೆ. ಹಿಂಬದಿ ಪೀನವಾಗಿದೆ. ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-೧೦ ನಕ್ಷೆ-೩೧ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ:೧೯೭೫)

೪. ಕೈಮರ:- ಮಧ್ಯಮಗಾತ್ರ. ಕ್ವಾರ್ಟ್ಜೈಟ್ ಶಿಲೆ. ಉದ್ದ ೭೦ ಅಗಲ ೮೫ ದಪ್ಪ ೩೦ ಮಿ.ಮೀ. ಚತುರ್ಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ಹಲವು ಚಕ್ಕೆಗಳನ್ನು ತೆಗೆದು ಅಲಗು ಮೂಡಿಸಿದೆ. ಮೇಲ್ತುದಿಯಲ್ಲಿ ಹರಿತ ಅಲಗು ವಕ್ರರೇಖೆಯಲ್ಲಿದೆ. ಎರಡೂ ಬದಿಯಿಂದ ಚಕ್ಕೆ ತೆಗೆದಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಹೆಚ್ಚುಕಡಿಮೆ ಸಮತಲವಿದ್ದು ಚಕ್ಕೆಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-೩. ನಕ್ಷೆ-೩೧ ನಾಗಾರ್ಜುನಕೊಂಡ(ಸುಬ್ರಹ್ಮಣ್ಯಂ.ಆರ್:೧೯೭೫).

೫. ಮಂಚಲ್ದೊರೆ:- ದೊಡ್ಡಗಾತ್ರ. ಕ್ವಾರ್ಟ್ಜೈಟ್ ಶಿಲೆ. ಉದ್ದ ೧೧೫ ಅಗಲ ೯೦ ದಪ್ಪ ೭೫ ಮಿ.ಮೀ. ಅಂಡಾಕಾರ, ಮುಂಬದಿ ಮಧ್ಯ ಉಬ್ಬೇಣು ಇದ್ದು ಆಳಚಕ್ಕೆ ತೆಗಿದಿದೆ. ಚಕ್ಕೆ ಕಲೆ ಇದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ಮೂಲಶಿಲಾಗಟ್ಟಿ ಅಂಶವಿದ್ದು ಅಲಗನ್ನು ಹೊಂದಿದೆ. ಎರಡೂ ಪಾಶ್ವಗಳಲ್ಲೂ ಹರಿತ ಅಲಗನ್ನು ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ರೂಪಿಸಿದೆ. ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಪೀನವಾಗಿದೆ. ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ ಜಡ್ ೬/೭೧೧ ನಕ್ಷೆ-೨೫ ಕಿಬ್ಬನಹಳ್ಳಿ(ಶೇಷಾದ್ರಿ.ಎಂ:೧೯೫೬).






೧,೨ ಒಬ್ಬದಿ ಮಚ್ಚುಗತ್ತಿ
೩,೪.೫ ಇಬ್ಬದಿ ಮಚ್ಚುಗತ್ತಿ
ಗಾತ್ರ ೧ : ೦.೫

**ಕೈಗೊಡಲಿ (ದೊಡ್ಡ /ಮಧ್ಯಮಗಾತ್ರ)**

೬. ಮೂಗನಾಯಕನಕೋಟೆ:- ಮಧ್ಯಮಗಾತ್ರ. ಅದಿರುಯುಕ್ತ ಕಪ್ಪು ಶಿಲೆ. ಉದ್ದ ೧೫೦,ಅಗಲ ೭೫ ದಪ್ಪ ೬೦ ಮಿ.ಮೀ. ಅಂಡಾಕಾರ. ಮುಂಬದಿಯಲ್ಲಿ ಉಬ್ಬುಗಳಿದ್ದು ಮಧ್ಯಮಗಾತ್ರದ ಚಕ್ಕೆತೆಗೆದ ಕಲೆ ಇದೆ. ಮೇಲ್ತುದಿ ಮೊನೆಯನ್ನು ಹೊಂದಿದ್ದು ಎರಡೂ ಪಾರ್ಶ್ವಗಳಲ್ಲೂ ಚಕ್ಕೆ ತೆಗೆದು ಅಲಗು ರೂಪಿಸಿದೆ. ಕೆಳತುದಿ ದಪ್ಪವಿದ್ದು ಅಂಡಾಕಾರವಾಗಿದೆ. ಉಪಕರಣದ ಮಧ್ಯದಲ್ಲಿ ಎರಡೂ ಪಾರ್ಶ್ವಗಳಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದು ಹಿಡಿಕೆಗೆ ಕಟ್ಟುವಂತೆ ರೂಪಿಸಿದೆ. ಹಿಂಬದಿ ಅಸಮತಲ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-೬ ನಕ್ಷೆ- ೬ ಕಿಬ್ಬನಹಳ್ಳಿ(ಶೇಷಾದ್ರಿ.ಎಂ.:೧೯೫೬)

೭. ಬೊಮ್ಮೇನಹಳ್ಳಿ:- ಮಧ್ಯಮಗಾತ್ರ. ಅದಿರುಯುಕ್ತ ಜಾಸ್ಪರಶಿಲೆ. ಉದ್ದ ೧೨೩, ಅಗಲ ೮೮, ದಪ್ಪ೩೫ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಇದ್ದು ಎಡಭಾಗಕ್ಕೆ ಮಧ್ಯಮ ಗಾತ್ರದ ಚಕ್ಕೆ ತೆಗೆದಿದೆ. ಬಲಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಮೇಲ್ತುದಿಯಲ್ಲಿ ಮೊಂಡಾಗಿದ್ದು ಮೊನೆ ರೂಪಿಸಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವದ ಹರಿತ

ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-ಜಡ್ -೬ /೬೩೧. ನಕ್ಷೆ- ೬ಕಿಬ್ಬನಹಳ್ಳಿ (ಶೇಷಾದ್ರಿ. ಎಂ:೧೯೫೬)

೮. ಚಿಕ್ಕೇಗೌಡನರೊಪ್ಪ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೦೮ ಅಗಲ ೬೫ ದಪ್ಪ ೪೫ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬೇಣು ಇದ್ದು ಮೇಲ್ಬದಿಯಲ್ಲಿ ಚಿಕ್ಕಚಿಕ್ಕ ಚಕ್ಕೆ ತೆಗೆದು ಮೇಲ್ತುದಿಯಲ್ಲಿ ಹರಿತ ಮೊನೆ ಮೂಡಿಸಿದೆ. ಕೆಳ ತುದಿ ದಪ್ಪವಾಗಿದ್ದು ಮೊಂಡಾಗಿದೆ. ಅರ್ಧ ವೃತ್ತಾಕಾರವಾಗಿದೆ. ಮೂಲ ಶಿಲಾ ತೊಗಟೆ ಅಂಶವಿದೆ. ಎರಡೂ ಪಾರ್ಶ್ವಗಳಲ್ಲೂ ನಿರ್ದಿಷ್ಟ ಅಲಗು ಇಲ್ಲ. ಹಿಂಬದಿ ಅಸಮತಲ. ಚಕ್ಕೆ ತೆಗೆದಿದೆ . ಅಡ್ಡ ವಿನ್ಯಾಸದಲ್ಲಿ ಅಂಡಾಕಾರವಾಗಿದೆ.
ಸಾಮ್ಯ:- ಸಂಖ್ಯೆ- ೬ ನಕ್ಷೆ- ೧೫ ಕೃಷ್ಣಾ ಬೆಸಿನ್(ಪಪ್ಪು. ಆರ್. ಎಸ್:೧೯೭೪)

೯. ಮೂಗನಾಯಕನಕೋಟೆ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೫೦ ಅಗಲ ೭೫ ದಪ್ಪ ೬೦ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಸುತ್ತ ಚಿಕ್ಕಚಿಕ್ಕ ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಮೇಲ್ತುದಿ ಹರಿತ ಅಲಗನ್ನು ಹೊಂದಿದೆ. ಕೆಳತುದಿ ತೆಳುವಾಗಿದ್ದು ಅಲಗಿದೆ. ಎಡಪಾರ್ಶ್ವ ಮೇಲ್ಬದಿ ಅಲಗು ಇದ್ದು ಕೆಳಬದಿ ದಪ್ಪ ಹಾಗೂ ಮೊಂಡಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದಿದ್ದು ಅಲಗು ವಕ್ರರೇಖೆಯಲ್ಲಿದೆ. ಹಿಂಬದಿಯಲ್ಲೂ ಮಧ್ಯ ಉಬ್ಬು ಇದೆ. ಚಕ್ಕೆ ಕಲೆಗಳಿವೆ. ಅಲ್ಲಲ್ಲಿ ಮೂಲ ಶಿಲಾ ತೊಗಟೆ ಅಂಶವಿದೆ. ಉಪಕರಣದ ಮಧ್ಯದಲ್ಲಿ ಸಣ್ಣ ಚಕ್ಕೆಗಳನ್ನು ತೆಗೆದು ಹಿಡಿಕೆಗೆ ಕಟ್ಟುವಂತೆ ರೂಪಿಸಿದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ
ಸಾಮ್ಯ:- ಸಂಖ್ಯೆ-ಜಡ್-೬ /೧೬ ನಕ್ಷೆ-೮ ಕಿಬ್ಬನಹಳ್ಳಿ(ಶೇಷಾದ್ರಿ.ಎಂ:೧೯೫೬).

೧೦. ಅಪ್ಪಾನಹಳ್ಳಿ:- ಮಧ್ಯಮ ಗಾತ್ರ. ಕ್ವಾರ್ಟ್ಸೈಟ್ ಶಿಲೆ.ಉದ್ದ. ೧೩೦ ಅಗಲ ೮೫ ದಪ್ಪ ೮೫ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಪರಿಧಿಯ ಸುತ್ತಲೂ ಚಿಕ್ಕಚಿಕ್ಕ ಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಕಂಸಾಕಾರದ ಅಲಗಿದೆ ಕೆಳತುದಿಯಲ್ಲಿ ಅರ್ಧ ಚಂದ್ರಾಕೃತಿಯ ಹರಿತ ಅಲಗನ್ನು ಹೊಂದಿದೆ. ಎರಡು ಪಾರ್ಶ್ವಗಳಲ್ಲೂ ಅಲಗು ವಕ್ರರೇಖೆಯಲ್ಲಿದೆ. ವಿರುದ್ಧ ದಿಕ್ಕಿನಲ್ಲಿ ಚಕ್ಕೆಗಳನ್ನು ತೆಗೆದಿದೆ. ಹಿಂಬದಿ ಮಧ್ಯ ಉಬ್ಬೇಣು ಇದೆ. ಅಲ್ಲಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಅಡ್ಡವಿನ್ಯಾಸದಲ್ಲಿ ಅಂಡಾಕಾರ.
ಸಾಮ್ಯ:- ಸಂಖ್ಯೆ- Z೬/೬೩೧ ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬).

೧೧. ಕೈಮರ:- ದೊಡ್ಡಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೨೦೦ ಅಗಲ ೧೧೦ ದಪ್ಪ ೮೦ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬು ಹೆಚ್ಚು ಕಡಿಮೆ ಸಮತಲವಾಗಿದ್ದು ಪರಿಧಿಯ ಸುತ್ತಲೂ ಆಳವಾದ ಮತ್ತು ತೆಳುಚಕ್ಕೆ ತೆಗೆದು ಅಲಗನ್ನು ರೂಪಿಸಿದೆ. ಮೇಲ್ತುದಿ ಹರಿತ ಅಲಗನ್ನು ಹೊಂದಿದ್ದು ಮಧ್ಯದಲ್ಲಿ ಮೊನೆಯಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಮೊನೆ ರೂಪಿತವಾಗಿದೆ. ಎಡಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವದ ಮೇಲರ್ಧದಲ್ಲಿ ಹರಿತ ಅಲಗಿದೆ. ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ಕಲೆಗಳಿವೆ. ಮೂಲಶಿಲಾತೊಗಟೆ ಅಂಶ ಅಲ್ಲಲ್ಲಿ ಇದೆ. ಅತಿ ದೊಡ್ಡ ಕೈಗೊಡಲಿ.
ಸಾಮ್ಯ:- ಸಂಖ್ಯೆ- ೧೩. ನಕ್ಷೆ- ೨೨. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ. ಆರ್:೧೯೭೫)

೧೨. ಯಕ್ಕಲಕಟ್ಟೆ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೦೫ ಅಗಲ ೭೦ ದಪ್ಪ ೪೦ ಮಿ.ಮೀ. ಅರ್ಧಚಂದ್ರಾಕೃತಿ, ಮುಂಬದಿ ಮಧ್ಯ ಉಬ್ಬಿದ್ದು ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದೆ. ಉಳಿದ ಭಾಗದಲ್ಲಿ ಸಣ್ಣ ಸಣ್ಣ ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಬಲಪಾರ್ಶ್ವದಲ್ಲಿ ಅರ್ಧಚಂದ್ರಾಕಾರದ ಹರಿತ ಅಲಗು ವಕ್ರರೇಖೆಯಲ್ಲಿದೆ. ಮೇಲ್ತುದಿ ಹರಿತ ಅಲಗಿದ್ದು ಮಧ್ಯದಲ್ಲಿ ಮೊನೆಯಂತಿದೆ. ಕೆಳತುದಿಯಲ್ಲಿ ಕಂಸಾಕಾರದ ಹರಿತ ಅಲಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ ಚಕ್ಕೆಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- Z-೬/೬೦೧. ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬)

೧೩. ಅಪ್ಪಾನಹಳ್ಳಿ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೩೦ ಅಗಲ ೮೫ ದಪ್ಪ ೫೦ ಮಿಮೀ. ಎಲೆಯಾಕಾರ. ಮಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಸುತ್ತ ಚಕ್ಕೆ ತೆಗೆದಿದೆ. ಮೇಲ್ತುದಿ ದಪ್ಪವಾಗಿದ್ದು ಮೊಂಡಾಗಿದೆ. ಕೆಳತುದಿ ತೆಳ್ಳಗಿದೆ. ಬಲ ಮತ್ತು ಎಡಪಾರ್ಶ್ವಗಳು ಹರಿತ ಅಲಗನ್ನು ಹೊಂದಿದ್ದು ವಕ್ರರೇಖೆಯಲ್ಲಿವೆ. ಹಿಂಬದಿ ಮಧ್ಯ ಉಬ್ಬು ಇದೆ. ಚಕ್ಕೆಕಲೆ ಇದೆ. ಅಡ್ಡ ವಿನ್ಯಾಸ ಅಂಡಾಕಾರ.
ಸಾಮ್ಯ:- ಸಂಖ್ಯೆ- ೨೭ ನಕ್ಷೆ- ೨೩ ನಾಗಾರ್ಜುನಕೊಂಡ.(ಸುಬ್ರಹ್ಮಣ್ಯಂ.ಆರ್:೧೯೭೫)




**ಕಿರುಗಾತ್ರದ ಕೈಗೊಡಲಿ**

೧೪. ಬೂದಿಗುಡ್ಡ:- ಕಿರುಗಾತ್ರ. ಕಶ್ಮಲಯುಕ್ತ ಕ್ವಾರ್ಟ್ಸೈಟ್ ಶಿಲೆ. ಉದ್ದ ೧೦೦ ಅಗಲ ೭೦ ದಪ್ಪ ೫೦ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲರ್ಧ ಭಾಗದಲ್ಲಿ ಚಕ್ಕೆ ತೆಗೆದಿದೆ. ಉಳಿದ ಭಾಗದಲ್ಲಿ ಮೂಲಶಿಲಾ ತೊಗಟೆಯ ಅಂಶವಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದಿದೆ. ಬಲಪಾರ್ಶ್ವದ ಮೇಲ್ಭಾಗ ಅಲಗನ್ನು ಹೊಂದಿದೆ. ಉಳಿದ ಭಾಗ ದಪ್ಪವಾಗಿದ್ದು ಮೊಂಡಾಗಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿದ್ದು ಕಂಸಾಕಾರವಾಗಿದೆ. ಹಿಂಬದಿ ಪೀನವಾಗಿದೆ. ಚಕ್ಕೆ ತೆಗೆದಿದೆ ಅಡ್ಡವಿನ್ಯಾಸ ತ್ರಿಭುಜಾಕಾರ .
ಸಾಮ್ಯ:- ಸಂಖ್ಯೆ- ಜಡ್-೭/೮೮. ನಕ್ಷೆ- ೪. ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೭).

೧೫. ಮಂಚಲ್ದೊರೆ:- ಕಿರುಗಾತ್ರ ಕ್ವಾರ್ಟ್ಸೈಟ್ ಶಿಲೆ. ಉದ್ದ ೯೦ ಅಗಲ ೭೦ ದಪ್ಪ ೪೦ ಮಿ.ಮೀ. ತ್ರಿಭುಜಾಕಾರ. ಮಂಬದಿ ಮಧ್ಯ ಉಬ್ಬು ಇದೆ. ಮಧ್ಯಮಗಾತ್ರದ ಚಕ್ಕೆಗಳನ್ನು ಎರಡೂ ಪಾರ್ಶ್ವದತ್ತ ತೆಗೆದಿದೆ. ಮೇಲ್ತುದಿಯಲ್ಲಿ ಮೊಂಡಾದ ಮೊನೆಯಿದೆ. ಕೆಳತುದಿ ದಪ್ಪವಾಗಿದ್ದು ಕಂಸಾಕಾರವಾಗಿದೆ. ಹಿಂಬದಿ ಮಧ್ಯ ಉಬ್ಬು ಇದ್ದು ಪೀನವಾಗಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ. ಉಪಕರಣ ಸಾಕಷ್ಟು ಸವೆದಿದೆ.
ಸಾಮ್ಯ:- ಸಂಖ್ಯೆ- ೪೦. ನಕ್ಷೆ- ೨೪. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೬. ಮುಗನಾಯಕನಕೋಟೆ:- ಕಿರುಗಾತ್ರ. ಕ್ವಾರ್ಟ್ಸೈಟ್ ಶಿಲೆ ಉದ್ದ ೫೫ ಅಗಲ ೭೩ ದಪ್ಪ ೩೩ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರವಾಗಿದೆ. ಆಳಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ತೆಳ್ಳಗಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದೆ. ಬಲಪಾರ್ಶ್ವದಲ್ಲಿ ಅಲಗಿದ್ದು ನಿಮ್ನವಾಗಿದೆ. ಹಿಂಬದಿ ಸಮತಲ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ .
ಸಾಮ್ಯ:- ಸಂಖ್ಯೆ-Z -೭/೭೧೦ ನಕ್ಷೆ- ೧. (ಶೇಷಾದ್ರಿ.ಎಂ:೧೯೫೭).

೧೭. ಅಪ್ಪಾನಹಳ್ಳಿ:- ಕಿರುಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೯೮. ಅಗಲ ೫೪. ದಪ್ಪ ೨೫. ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಸಮತಲವಿದ್ದು ಎರಡೂ ಬದಿ ಚಕ್ಕೆ ತೆಗೆದಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ಹಿಡಿಕೆ ಮೂಡಿಸಿದೆ. ಎಡಪಾರ್ಶ್ವ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗಿದೆ. ಹಿಂಬದಿ ಸಮತಲ. ಚಕ್ಕೆಕಲೆಇದೆ ಮೂಲಶಿಲಾ ತೊಗಟೆ ಅಂಶ ಅಲ್ಲಲ್ಲಿ ಇದೆ. ಈಟಿ ಉಪಕರಣದಂತಿದೆ.

ಸಾಮ್ಯ:- ಸಂಖ್ಯೆ- ೧೫. ನಕ್ಷೆ- ೨. ಕೃಷ್ಣಾ ಬೇಸಿನ್( ಪಪ್ಪು.ಆರ್. ಎಸ್:೧೯೭೪).
ಸಂಖ್ಯೆ- ೫. ನಕ್ಷೆ- ೩೭ . ಮಲಪ್ರಭಾ ಬೇಸಿನ್(ಜೋಶಿ.ಆರ್.ವಿ:೧೯೫೫).
ಸಂಖ್ಯೆ- ೨೩. ನಕ್ಷೆ- ೨೩. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ. ಆರ್:೧೯೭೫).










ಗಾತ್ರ ೧:೦.೩

**ಅಂಡಾಕಾರದ ಉಪಕರಣ**

೧೮. ಯಕ್ಕಲಕಟ್ಟೆ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೨೦ ಅಗಲ ೯೫ ದಪ್ಪ ೪೦ ಮಿ.ಮೀ. ಅಂಡಾಕಾರ ಮುಂಬದಿ ಮಧ್ಯಉಬ್ಬೇಣು ಇದ್ದು, ಪರಿಧಿಯ ಸುತ್ತಲೂ ಚಿಕ್ಕಚಿಕ್ಕ ಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಕಂಸಾಕಾರದ ಅಲಗು ಹರಿತವಾಗಿದೆ. ಕೆಳತುದಿ ಮತ್ತು ಎಡಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿವೆ. ಬಲಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಹೀನವಾಗಿದೆ. ಚಕ್ಕೆ ಕಲೆಗಳಿವೆ. ಮೂಲ ಶಿಲಾತೊಗಟೆ ಅಂಶವಿದೆ. ಅಡ್ಡವಿನ್ಯಾಸ ಆಯತಾಕಾರ.
ಸಾಮ್ಯ:- ಸಂಖ್ಯೆ- ೬ ಪ್ಲೇಟ್-X.(ಶೇಷಾದ್ರಿ.ಎಂ:೧೯೫೬)

೧೯. ಯಕ್ಕಲಕಟ್ಟೆ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೦೦ ಅಗಲ ೮೦ ದಪ್ಪ ೩೫ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಸುತ್ತಲು ಚಕ್ಕೆಗಳನ್ನು ತೆಗೆದಿದೆ. ಕಂಸಾಕಾರದ ಅಲಗನ್ನು ಹೊಂದಿದ್ದು ಸವೆದಿದೆ. ಎಡಪಾರ್ಶ್ವದಲ್ಲಿ ವಕ್ರರೇಖೆಯ ಹರಿತ ಅಲಗು ಇದೆ. ಅಲಗು ಭಾಗದಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದಿದೆ. ಬಲಪಾರ್ಶ್ವದ ಅಲಗು ನೇರವಾಗಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಮಧ್ಯ ಉಬ್ಬು ಹೀನವಾಗಿದೆ. ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ಅಂಡಾಕಾರ. ಒಟ್ಟು ಉಪಕರಣ ಸವೆದಿದೆ.
ಸಾಮ್ಯ:- ಸಂಖ್ಯೆ- ೭. ಪ್ಲೇಟ್-VIII.(ಶೇಷಾದ್ರಿ.ಎಂ:೧೯೫೬)
ಸಂಖ್ಯೆ- ೩೯. ನಕ್ಷೆ- ೨೪. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೦. ಯಕ್ಕಲಕಟ್ಟೆ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೧೦೦ ಅಗಲ ೭೫ ದಪ್ಪ ೪೦ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಮೇಲ್ಭಾಗ ತೆಳ್ಳಗಿದ್ದು ಕೆಳಭಾಗ ದಪ್ಪವಾಗಿದೆ. ಚಕ್ಕೆ ಕಲೆಗಳಿವೆ. ಮೇಲ್ತುದಿಯ ಮೊಂಡು ಮೊನೆ ಎಡಪಾರ್ಶದಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದ್ದು ವಕ್ರರೆಖೆಯಲ್ಲಿದೆ. ಬಲಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಕೆಳತುದಿಯಲ್ಲಿ ಕಂಸಾಕಾರದ ಅಲಗು ರೂಪಿಸಿದೆ. ಹಿಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಸುತ್ತ ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೪೨. ನಕ್ಷೆ- ೨೪. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫).




೧೮




೧೯




೨೦

ಗಾತ್ರ ೧:೦.೩




**ಚಕ್ರಾಕಾರದ ಉಪಕರಣ**

೨೧. ಅಪ್ಪಾನಹಳ್ಳಿ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್ ಶಿಲೆ. ವ್ಯಾಸ ೧೦೫ ದಪ್ಪ ೩೦ ಮಿ.ಮೀ. ಹೆಚ್ಚು ಕಡಿಮೆ ವೃತ್ತಾಕಾರ. ಮುಂಬದಿ ಮಧ್ಯ ಉಬ್ಬು ಚಕ್ಕೆ ಕಲೆ ಇದೆ. ಮೇಲ್ತುದಿಯಲ್ಲಿ ವಕ್ರರೇಖೆಯ ಹರಿತ ಅಲಗಿದೆ. ಎಡಪಾರ್ಶ್ವದ ಹರಿತ ಅಲಗು ನೇರವಾಗಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಅಲಗು ರೂಪಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಸುತ್ತಲು ಚಿಕ್ಕಚಿಕ್ಕ ಚಕ್ಕೆ ತೆಗೆದಿದೆ. ಉಬ್ಬೇಣು ಇದೆ. ಅಡ್ಡವಿನ್ಯಾಸ ಕಂಸಾಕಾರ.
ರೇಸಾಮ್ಯ:- ಸಂಖ್ಯೆ- ೩ ಪ್ಲೇಟ್-VIII ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬)

೨೨. ಅಪ್ಪಾನಹಳ್ಳಿ:- ಮಧ್ಯಮಗಾತ್ರ. ಬಿಳಿಬಣ್ಣದ ಕ್ವಾರ್ಟ್ಸೈಟ್ ಶಿಲೆ. ವ್ಯಾಸ ೯೫. ದಪ್ಪ ೩೫. ಮಿ.ಮೀ. ಹೆಚ್ಚು ಕಡಿಮೆ ವೃತ್ತಾಕಾರವಾಗಿದೆ. ಮುಂಬದಿ ಮಧ್ಯ ಉಬ್ಬೇಣು ಕೆಳತುದಿಯಿಂದ ಮೇಲ್ತುದಿವರೆಗೆ ವಕ್ರರೇಖೆಯಲ್ಲಿ ಸಾಗಿದೆ. ಎರಡೂ ಬದಿಗೆ ಮಧ್ಯಮ ಗಾತ್ರದ ಚಕ್ಕೆ ತೆಗೆದಿದೆ. ಮೇಲ್ತುದಿ ಮತ್ತು ಕೆಳ ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಹಿಂಬದಿಯಿಂದ ಚಕ್ಕೆ ತೆಗೆದು ನೇರ ಅಲಗು ರೂಪಿಸಿದೆ. ಬಲಪಾರ್ಶ್ವದ ಅಲಗು ಹರಿತವಾಗಿದ್ದು ದೀರ್ಘ ವೃತ್ತಾಕಾರವಾಗಿದೆ. ಹಿಂಬದಿ ಉಬ್ಬಿದ್ದು ಚಕ್ಕೆ ಕಲೆಗಳಿವೆ. ಮೂಲಶಿಲಾ ತೊಗಟೆ ಅಂಶ ಅಲ್ಲಲ್ಲಿ ಇದೆ. ಅಡ್ಡವಿನ್ಯಾಸ ಅಂಡಾಕಾರ.
ಸಾಮ್ಯ:- ಸಂಖ್ಯೆ- ೧. ಪ್ಲೇಟ್-IX (ಶೇಷಾದ್ರಿ.ಎಂ:೧೯೫೬).




೨೧




ಗಾತ್ರ ೧:೦.೫ ೨೨




**ಸೀಳುಗತ್ತಿ**

೨೩. ಅಪ್ಪಾನಹಳ್ಳಿ:- ಮಧ್ಯಮ ಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ ೮೫. ಅಗಲ ೮೦. ದಪ್ಪ ೪೩.ಮಿ.ಮೀ. ಚೌಕಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ಭಾಗ ತೆಳ್ಳಗಿದ್ದು ಕೆಳಭಾಗ ದಪ್ಪಗಿದೆ. ಮೇಲ್ತುದಿ ತೆಳ್ಳಗಿದ್ದು ಅಗಲ ಅಲಗನ್ನು ಹೊಂದಿದೆ. ಅಲಗು ಭಾಗ ಹಾಳಾಗಿದೆ . ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಮೊಂಡು ಅಲಗಿದೆ. ಬಲಪಾರ್ಶ್ವದಲ್ಲಿ ನೇರ ಹರಿತ ಅಲಗಿದೆ. ಹಿಂಬದಿ ಪೀನವಾಗಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ .
ಸಾಮ್ಯ:- ಸಂಖ್ಯೆ- ೪. ನಕ್ಷೆ- ೩.೩. ಖ್ಯಾಡ್-೪೧೯. ಮಲಪ್ರಭಾ ಬೇಸಿನ್ (ಜೋಶಿ.ಆರ್.ವಿ:೧೯೫೫).

೨೪. ಹೊನ್ನೇಮಾರನಹಳ್ಳಿ:- ಮಧ್ಯಮ ಗಾತ್ರ . ಕ್ವಾರ್ಟ್ಸೈಟ್ ಶಿಲೆ. ಉದ್ದ ೮೦ ಅಗಲ ೯೦ ದಪ್ಪ ೪೦ ಮಿ.ಮೀ. ಚೌಕಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಮಧ್ಯಮ ಗಾತ್ರದ ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿಯಲ್ಲಿ ಆಳಚಕ್ಕೆ ತೆಗೆದು ಅಗಲ ಹರಿತ ಅಲಗನ್ನು ರೂಪಿಸಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದೆ. ಬಲಪಾರ್ಶ್ವದ ಅಲಗು ಹರಿತವಾಗಿದ್ದು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದೆ. ಚಕ್ಕೆಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ .
ಸಾಮ್ಯ:- ಸಂಖ್ಯೆ- ೯. ನಕ್ಷೆ- ೨೫. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೫.ಯಕ್ಕಲಕಟ್ಟೆ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್‌ಶಿಲೆ. ಉದ್ದ.೭೦ ಅಗಲ.೮೫ ದಪ್ಪ.೨೫ ಮಿ.ಮೀ. ಆಯತಾಕಾರ. ಮುಂಬದಿ ಉಬ್ಬೇಣು ಬಲಬದಿಯಲ್ಲಿ ಇದ್ದು ಒಂದು ಆಳ ಚಕ್ಕೆ ಮತ್ತು ಮತ್ತೊಂದು ತೆಳುಚಕ್ಕೆ ತೆಗೆದಿದೆ. ಮೇಲ್ತುದಿಯ ಅಲಗು ಮೊಂಡಾಗಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಅಡ್ಡವಿನ್ಯಾಸ ಆಯತಾಕಾರ.
ಸಾಮ್ಯ:- ಸಂಖ್ಯೆ- ಜಡ್-೭/೯೦. ನಕ್ಷೆ- ೨. ಕಿಬ್ಬನಹಳ್ಳಿ(ಶೇಷಾದ್ರಿ.ಎಂ:೧೯೫೭)

೨೬. ಯಕ್ಕಲಕಟ್ಟೆ:- ಮಧ್ಯಮಗಾತ್ರ. ಬಿಳಿ ಕ್ವಾರ್ಟ್ಸಶಿಲೆ. ಉದ್ದ ೭೦. ಅಗಲ ೭೦. ದಪ್ಪ ೩೫. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆ ಕಲೆ ಇದೆ. ಮೇಲ್ತುದಿ ಕಂಸಾಕಾರದ ಅಲಗನ್ನು ಹೊಂದಿದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಅಲಗು ರೂಪಿಸಿದೆ. ಬಲಪಾರ್ಶ್ವದ ಅಲಗು ಮೊಂಡಾಗಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಅಲಗು ರೂಪಿಸಿದೆ. ಹಿಂಬದಿ ಉಬ್ಬು ಇದ್ದು ಚಕ್ಕೆ ಕಲೆಗಳಿವೆ.
ಸಾಮ್ಯ:- ಸಂಖ್ಯೆ- ೨. ನಕ್ಷೆ- ೧೯. ಕೃಷ್ಣಾ ಬೇಸಿನ್ (ಪಪ್ಪು.ಆರ್.ಎಸ್:೧೯೭೪).














ಗಾತ್ರ ೧:೦.೫




ಹೆರೆಗತ್ತಿ

೨೬. ದೊಡ್ಡಗುಣಿ:- ಮಧ್ಯಮಗಾತ್ರ. ಆದಿರುಯುಕ್ತ ಜಾಸ್ಪರ್ ಶಿಲೆ. ಉದ್ದ. ೮೫ ಅಗಲ. ೭೦ ದಪ್ಪ .೩೦ .ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯದಲ್ಲಿ ಮೂಲಶಿಲಾ ತೊಗಟೆ ಅಂಶವಿದ್ದು ಉಬ್ಬಾಗಿದೆ. ಪರಿಧಿಯ ಸುತ್ತಲೂ ಚಿಕ್ಕಚಿಕ್ಕ ಚಕ್ಕೆ ತೆಗೆದು ಹರಿತ ಅಲಗನ್ನು ರೂಪಿಸಿದೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಹರಿತ ಅಲಗನ್ನು ರೂಪಿಸಿದೆ. ಮಧ್ಯದಲ್ಲಿ ಮೊಂಡುಮೊನೆ ಇದೆ. ಎಡಪಾರ್ಶ್ವದಲ್ಲಿ ಪುಡಿಗೆಲಸ ಮಾಡಿದ ಹರಿತ ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವದಲ್ಲಿ ಚಕ್ಕೆ ತೆಗೆದಿದ್ದು ಅಲಗು ಭಾಗ ದಪ್ಪವಿದ್ದು ಮೊಂಡಾಗಿದೆ. ಮೊಂಡು ಮೊನೆಯಿದೆ. ಕೆಳತುದಿ ಅಲಗು ಹರಿತವಾಗಿದ್ದು ನಿಮ್ನವಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ಜಡ್-೬/೮೨. ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬)
ಸಂಖ್ಯೆ- ೨೫ ನಕ್ಷೆ- ೩೫. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫).

೨೮. ಅಪ್ಪಾನಹಳ್ಳಿ:- ಮಧ್ಯಮಗಾತ್ರ. ಆದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೮೦ ಅಗಲ ೭೫ ದಪ್ಪ ೨೫ ಮಿ.ಮೀ. ಆಯತಾಕಾರ. ಮುಂಬದಿ ಉಬ್ಬಾಗಿದ್ದು ಚಕ್ಕೆಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ಅಂಚು ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಚಕ್ಕೆ ಕಲೆ ಇದೆ. ಅಡ್ಡವಿನ್ಯಾಸ ಆಯತಾಕಾರ.
ಸಾಮ್ಯ:- ಸಂಖ್ಯೆ- ೧೨. ನಕ್ಷೆ- ೩೧. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಅರ್:೧೯೭೫).

೨೯ ಕೈಮರ:- ಮಧ್ಯಮಗಾತ್ರ. ಕ್ವಾರ್ಟ್ಸೈಟ್‌ಶಿಲೆ. ಉದ್ದ ೧೦೦ ಅಗಲ ೬೫ ದಪ್ಪ ೨೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ಬದಿಗೆ ಮಧ್ಯಮ ಗಾತ್ರದ ಚಕ್ಕೆ ತೆಗೆದು ಅಲಗು ರೂಪಿಸಿದೆ. ಮೇಲ್ತುದಿಯ ಮಧ್ಯದಲ್ಲಿ ಮೊನೆ ಇದ್ದು ಮೊಂಡಾಗಿದೆ. ಎಡಪಾರ್ಶ್ವದ ಕೆಳಭಾಗದಲ್ಲಿ ವಕ್ರ ಹರಿತ ಅಲಗಿದೆ ಬಲಪಾರ್ಶ್ವದಲ್ಲಿ ನಿಮ್ನ ಅಲಗು ಇದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-Z -೬/೪೨೮. ನಕ್ಷೆ-೭. ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬).

೩೦. ಅಪ್ಪಾನಹಳ್ಳಿ:- ಮಧ್ಯಮ ಗಾತ್ರ. ಕ್ವಾರ್ಟ್ಸೈಟ್ ಶಿಲೆ. ಉದ್ದ. ೯೦ ಅಗಲ. ೭೫ ದಪ್ಪ. ೩೦ ಮಿ.ಮೀ. ತ್ರಿಭುಜಾಕಾರ. ಮಧ್ಯ ಉಬ್ಬೇಣು ಅರ್ಧಚಂದ್ರಾಕೃತಿಯಲ್ಲಿ ಮತ್ತು ನೇರವಾಗಿದೆ. ಮಧ್ಯಮ ಗಾತ್ರದ ಮೂರು ಚಕ್ಕೆ ಮತ್ತು ಹಲವು ಚಿಕ್ಕಚಿಕ್ಕ ಚಕ್ಕೆ ತೆಗೆದು ಅಲಗನ್ನು ರೂಪಿಸಿದೆ. ಮೇಲ್ತುದಿಯ ಮಧ್ಯದಲ್ಲಿ ಮೊನೆ ರೂಪಿಸಿದೆ. ಬಲ ಪಾರ್ಶ್ವದಲ್ಲಿ ವಕ್ರರೇಖೆಯ ಹರಿತ ಅಲಗಿದೆ. ಕೆಳತುದಿಯಲ್ಲಿ ವಕ್ರರೇಖೆಯ ಹರಿತ ಅಲಗು ನಿಮ್ನವಾಗಿದೆ. ಹಿಂಬದಿ ಸಮತಲ. ತಾಡನವೇದಿಕೆ ಇದೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ಜಡ್‌೬/೧೨೬. ನಕ್ಷೆ- ೬. ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬)
ಸಂಖ್ಯೆ- ೩೪. ನಕ್ಷೆ- ೩೬. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೧. ದೊಡ್ಡಗುಣಿ:- ಮಧ್ಯಮಗಾತ್ರ. ಅದಿರುಯುಕ್ತ ಕ್ವಾರ್ಟ್ಸೈಟ್‌ಶಿಲೆ. ಉದ್ದ ೬೦ ಅಗಲ ೬೫ ದಪ್ಪ ೪೦ ಮಿ.ಮೀ. ಆಯತಾಕಾರ. ಮುಂಬದಿಯ ಮೇಲ್ಭಾಗ ತೆಳುವಾಗಿದ್ದು ಕೆಳಭಾಗ ದಪ್ಪವಾಗಿದೆ. ಆಳ ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಅಲಗು ರೂಪಿಸಿದೆ. ಎಡಪಾರ್ಶ್ವದ ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಮೇಲ್ಭಾಗದಲ್ಲಿ ಹರಿತ ಅಲಗಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಚಕ್ಕೆಕಲೆ ಇದೆ. ಮೂಲ ಶಿಲಾ ತೊಗಟೆ ಅಂಶವಿದೆ. ಅಡ್ಡವಿನ್ಯಾಸ ಆಯತಾಕಾರ.
ಸಾಮ್ಯ:- ಸಂಖ್ಯೆ- ೨೪. ನಕ್ಷೆ- ೩೫. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫).




೨೮




೨೭




೨೯

ಅಧ್ಯಾಯ ಐದು

# ಮಧ್ಯ ಹಳೆಶಿಲಾಯುಗ ಸಂಸ್ಕೃತಿ

ಆದಿ ಹಳೆಶಿಲಾಯುಗದ ಪ್ರಬುದ್ಧ ಸ್ಥಿತಿಯಾದ ಅಶ್ಯೂಲಿಯನ್ ಮಾದರಿಯ ಉಪಕರಣಗಳ ಕಾಲದ ಅನಂತರ ವಿಶ್ವದ ಉಳಿದೆಡೆಗಳಲ್ಲಿ ಆದಂತೆಯೇ ಭಾರತದಲ್ಲಿಯೂ ಭೌಗೋಳಿಕ ಹಾಗೂ ಪ್ರಾಕೃತಿಕ ಪರಿಸರದಲ್ಲಿ ಮಹತ್ವದ ಬದಲಾವಣೆಗಳಾದವು. ಹೆಚ್ಚಾಗಿ ಬಿದ್ದಿರುವ ಮಳೆ ಮತ್ತು ಭೂಮಿಯ ರಚನೆಯಲ್ಲಾದ ಬದಲಾವಣೆಗಳಿಂದಾಗಿ ಎತ್ತರದ ಪ್ರದೇಶಗಳ ಸವೆತ, ಮಿತಿಮೀರಿದ ಪ್ರವಾಹಗಳಿಂದಾಗಿ ಭೂ ಕೊರೆತಗಳು, ಸಸ್ಯ ಮತ್ತು ಪ್ರಾಣಿ ಸಂಕುಲಗಳಲ್ಲಿಯೂ ಹೆಚ್ಚಿನ ಬದಲಾವಣೆಗಳಾದವು. ಅನಂತರದ ಕಾಲಮಾನದಲ್ಲಿ ರೂಪುಗೊಂಡ ಪ್ರಾಗೈತಿಹಾಸಿಕ ಸಂಸ್ಕೃತಿ-ಮಧ್ಯ ಹಳೆಶಿಲಾಯುಗ ಸಂಸ್ಕೃತಿ.

ಈ ಶತಮಾನದ ಮೊದಲರ್ಧ ಭಾಗದವರೆಗೂ ಭಾರತದಲ್ಲಿ ಮಧ್ಯ ಹಳೆಶಿಲಾಯುಗದ ಬಗೆಗೆ ಹೆಚ್ಚಿನ ಮಾಹಿತಿ ದೊರೆತಿರಲಿಲ್ಲ. ಪಂಜಾಬಿನ ವಾಯುವ್ಯ ಪ್ರದೇಶ (ಸಹನಿ ಮತ್ತು ಮಹಾಪಾತ್ರ: ೧೯೬೪;೧೬೮-೮೦) ಆಂಧ್ರ ಪ್ರದೇಶದ ಕರ್ನೂಲ್ (ಐಸಾಕ್;೧೯೬೦) ಹಾಗೂ ಮಹಾರಾಷ್ಟ್ರದ ಖಾಂದಿವಳ್ಳಿ (ಮಲಿಕ್;೧೯೫೯), ಈ ಮೂರೂ ಪ್ರದೇಶಗಳಲ್ಲಿ ದೊರೆತಿದ್ದ ಮಧ್ಯಮ ಗಾತ್ರದ ಚಕ್ಕೆ ಉಪಕರಣಗಳಿಗೆ ಹೆಚ್ಚಿನ ಗಮನ ನೀಡಿರಲಿಲ್ಲ. ಪಂಜಾಬ್‌ನ ವಾಯುವ್ಯ ಪ್ರದೇಶದಲ್ಲಿ ಮೊದಲಿಗೆ ಗುಂಡುಗಲ್ಲಿನ ಉಪಕರಣಗಳು ಮತ್ತು ಕೈಗೊಡಲಿ, ಮಚ್ಚುಗತ್ತಿ ಉಪಕರಣಗಳ ನಂತರ ದೊರಕಿದ್ದ ತೃತೀಯ ಶ್ರೇಣಿ ಉಪಕರಣಗಳನ್ನು ಹಾಗೂ ಕರ್ನೂಲ್ ಗುಹೆಗಳಲ್ಲಿ ದೊರಕಿದ ಇಂತಹುದೇ ಉಪಕರಣಗಳನ್ನು ಸರಿಯಾದ ಸ್ತರ ವಿಂಗಡಣೆಯಲ್ಲಿ ವಿವರಿಸಲು ಸಾಧ್ಯವಾಗಿರಲಿಲ್ಲ. ಈ ದಿಕ್ಕಿನಲ್ಲಿ ೧೯೫೪ರಲ್ಲಿ ಸಾಂಕಳಿಯಾ ಅವರು ಮಹಾರಾಷ್ಟ್ರದ ಪ್ರವರಾ ನದಿಯ ದಂಡೆಯಲ್ಲಿರುವ ನೇವಾಸ (೧೯೫೬;೩೫-೫೭)ದಲ್ಲಿ ನಡೆಸಿದ ಸ್ಥಳ ಪರಿಶೋಧನೆ ಹಾಗೂ ಉತ್ಖನನ, ಮಧ್ಯ ಹಳೆಶಿಲಾಯುಗವನ್ನು ಸೂಕ್ತ ಆಧಾರಗಳೊಡನೆ ನಿಖರವಾಗಿ ಗುರುತಿಸಲು ಸಹಾಯಕವಾಯಿತು. ಮೊಟ್ಟಮೊದಲ ಬಾರಿಗೆ ಈ ಸಂಸ್ಕೃತಿಯನ್ನು ಸ್ತರ ವಿಂಗಡಣೆ ಮತ್ತು ಇತರ ಸಾಂಸ್ಕೃತಿಕ ಅವಶೇಷಗಳೊಂದಿಗೆ ಅರ್ಥ ಮಾಡಿಕೊಳ್ಳುವುದು ಸಾಧ್ಯವಾದುದು ನೇವಾಸದಲ್ಲಿಯೇ. ಹೀಗಾಗಿ ಈ ಹಿಂದೆ ದ್ವಿತೀಯ ಹಾಗೂ ತೃತೀಯ ಶ್ರೇಣಿ ಉಪಕರಣಗಳು ಚಕ್ಕೆ , ಹೆರೆಚಕ್ಕೆ ಉಪಕರಣ ಸಂಪ್ರದಾಯ. ಈ ಚಕ್ಕೆ ಹೆರೆಚಕ್ಕೆ ಸಂಪ್ರದಾಯ ಮೊದಲಾಗಿ ಕರೆಯಲಾಗುತ್ತಿದ್ದ ಸಂಸ್ಕೃತಿಗಳನ್ನು ನಿರ್ದಿ-ಷ್ಟವಾಗಿ ಮಧ್ಯ ಹಳೆಶಿಲಾಯುಗವೆಂದು ಕರೆಯಲು ಆರಂಭವಾಯಿತು.

ಮುಂದಿನ ನಾಲ್ಕು ದಶಕಗಳಲ್ಲಿ ಭಾರತಾದ್ಯಂತ ಹೆಚ್ಚು ಕಡಿಮೆ ಎಲ್ಲಾ ಆದಿ ಹಳೆಶಿಲಾಯುಗದ ನೆಲೆಗಳಲ್ಲಿ ಈ ಸಂಸ್ಕೃತಿಯನ್ನು ಗುರುತಿಸಲಾಯಿತು. ಮಹಾರಾಷ್ಟ್ರದ ಆಧಂಘರ್ ಬೆಟ್ಟದ ಸಾಲು (ಜೋಶಿ.ಆರ್.ವಿ:೧೯೭೮), ಆಂಧ್ರ ಪ್ರದೇಶದ ಬೆಟ್ಟಂಚರ್ಲ (ಮೂರ್ತಿ.ಎಂ.ಎಲ್.ಕೆ:೧೯೭೫;೧೩೧-೮), ಕರ್ನೂಲ್ (ಐಸಾಕ್;೧೯೬೦), ರೇಣಿಗುಂಟ (ಮೂರ್ತಿ:೧೯೬೬),ನಾಗಾರ್ಜುನಕೊಂಡ(ಸುಬ್ರಹ್ಮಣ್ಯಂ:೧೯೭೫;೪೨-೪೫),ಸೋನ್ ಮತ್ತು ತಾಪಿ ಕಣಿವೆಯ (ಸಾಲಿ.ಎಸ್.ಎ:.೧೯೭೦;೧೫೭-೧೬೭) ಹಲವಾರು ನೆಲೆಗಳು ಕರ್ನಾಟಕದ ಸಾಲ್ವಡಗಿ (ಇಂ.ಆ.ರಿ.೧೯೬೦-೬೧;೪೦), ತಮ್ಮಿನಹಾಳ (ಜೋಶಿ.ಆರ್.ವಿ:.೧೯೫೫), ನಿಟ್ಟೂರು(ಅನ್ಸಾರಿ.ಜೆಡ್.ಡಿ:೧೯೭೦)ಮೊದಲಾದ ಪ್ರಮುಖ ನೆಲೆಗಳು ಶೋಧವಾಗಿವೆ.

ಈ ನೆಲೆಗಳಲ್ಲಿ ಆಂಧ್ರಪ್ರದೇಶದ ಬೆಟ್ಟಂಚರ್ಲ, ನಾಗಾರ್ಜುನಕೊಂಡ, ಮುಚ್ಚಟ್ಲ ಚಿಂತಾಮಣಿ (ಮೂರ್ತಿ ಎಂ.ಎಲ್.ಕೆ.:೧೯೭೫;೧೩೧-೮) ನೆಲೆಗಳು, ಮಹಾರಾಷ್ಟ್ರದ ಆದಂಗರ್, ನೇವಾಸ, ಮತ್ತು ಮಾಹೇಶ್ವರ್ (ಸಾಂಕಳಿಯಾ,ಸುಬ್ಬರಾವ್ ಮತ್ತು ದೇವ್:೧೯೫೮), ಸೋನ್ ನದಿ ದಡದ ಪತ್ತ್‌ವಾಡ ಮತ್ತು ನಕ್ ಜಾರ್ ಖುರ್ದ್ (ಇಂ.ಆ.ರಿ:.೧೯೬೨-೬೩) ಮುಂತಾದ ಸ್ಥಳಗಳಲ್ಲಿ ನಡೆದಿರುವ ಉತ್ಖನನಗಳಿಂದ ಹೆಚ್ಚಿನ ಮಾಹಿತಿ ದೊರೆತಿದೆ.

**ಕರ್ನಾಟಕದಲ್ಲಿ ಮಧ್ಯ ಹಳೆಶಿಲಾಯುಗ ಸಂಸ್ಕೃತಿ**

ಭಾರತದಲ್ಲಿ ಈ ಶತಮಾನದ ಐವತ್ತರ ದಶಕದಲ್ಲಷ್ಟೇ ಮಧ್ಯ ಹಳೆಶಿಲಾಯುಗ ಸಂಸ್ಕೃತಿಯು ಇರುವ ಬಗ್ಗೆ ಗುರುತಿಸಿ ಮಾನ್ಯ ಮಾಡಿರುವರು. ೧೯೫೦ರಲ್ಲಿ ಸಾಂಕಳಿಯಾ (೧೯೫೬;೩೫-೫೨) ಅವರು ನೇವಾಸದಲ್ಲಿ ಶೋಧಿಸಿದ ವಿವಿಧ ಮಾದರಿಯ ಉಪಕರಣಗಳು ಪದರಶಾಸ್ತ್ರದನ್ವಯದಂತೆ ದೊರಕಿದ್ದು, ಪ್ರಾಗಿತಿಹಾಸದ ಒಂದು ಪ್ರಮುಖ ಹಂತ-ವನ್ನು ಗುರುತಿಸಲು ಸಹಾಯಕವಾಗಿದೆ. ಹೀಗಾಗಿ ಭಾರತದಲ್ಲಿಯೂ ಸಹ ಮಧ್ಯ ಹಳೆಶಿಲಾಯುಗ ಸಂಸ್ಕೃತಿಯ ಹಂತದ ಜೀವನ ಕ್ರಮವು ಇದ್ದಿತೆಂಬ ಅಂಶ ಸ್ಪಷ್ಟವಾಗಿ ತಿಳಿದು ಬರುತ್ತದೆ.

ರಾಬರ್ಟ್ ಬ್ರೂಸ್ ಫೂಟ್ (೧೯೧೬) ತಮ್ಮ ಶೋಧನೆಯ ಸಮಯದಲ್ಲಿ ಮಧ್ಯ ಹಳೆಶಿಲಾಯುಗಕ್ಕೆ ಸಂಬಂಧಿಸಿದ ಹಲವು ಉಪಕರಣಗಳನ್ನು ಉತ್ತರ ಕರ್ನಾಟಕದಲ್ಲಿ ಶೋಧಿಸಿದ್ದರೂ, ಅವುಗಳ ವಿಭಿನ್ನತೆ ಮತ್ತು ಕಾಲಮಾನದ ಬಗ್ಗೆ ನಿರ್ದಿಷ್ಟ ಅಂಶಗಳು ದೊರೆತಿರಲಿಲ್ಲ.

ಕರ್ನಾಟಕದಲ್ಲಿ ಮಧ್ಯ ಹಳೆಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಪ್ರಪ್ರಥಮವಾಗಿ ಗುರುತಿಸಿದವರು ಬ್ಯಾನರ್ಜಿ(೧೯೫೭). ಸುಂದರ ಅವರು ಬಿಜಾಪುರ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಹಲವು ನೆಲೆಗಳನ್ನು ಶೋಧಿಸಿದ್ದು ಅವು-ಗಳಲ್ಲಿ ಪ್ರಮುಖವಾದವುಗಳೆಂದರೆ ಚನೆಗಾಂ(ಇಂ.ಆ.ರಿ:೧೯೫೮-೫೯;೩೨) ಶಿಡ್ಲಪಡಿ ಗುಹೆಗಳು(ಇಂ.ಆ.ರಿ:. ೧೯೫೯-೬೦;೭೩), ಸಾಲ್ವಡಗಿ, ಮಟಕ ದೇವನ ಹಳ್ಳಿ, ಕುಚುವೋಲ್ (ಇಂ.ಆ.ರಿ:೧೯೬೦-೬೧;೨೮) ಮುಂತಾದವು. ಬಿಜಾಪುರಜಿಲ್ಲೆ ಸಾಲ್ವಡಗಿಯಲ್ಲಿ ದೊರೆತ ಉಪಕರಣಗಳ ವಿವರಣೆಯನ್ನು ಶೇಷಾದ್ರಿಯವರು ನೀಡಿರುವರು. (೧೯೬೦-೬೧;೨೮)ಗುಲ್ಬರ್ಗಾಜಿಲ್ಲೆ ಉಡ್ಚಣ್ (ಇಂ.ಆ.ರಿ:೧೯೬೦-೬೧;೬೫)ಮಳ್ಖೇಡ್ (ಇಂ.ಆ.ರಿ:೧೯೬೮-೬೯;೬೭) ನೆಲೆಗಳು ಸುಂದರ ಅವರ ಪ್ರಮುಖ ಶೋಧಗಳಾಗಿವೆ. ಅಮರ್ಜ ನದಿ ಕಣಿವೆ ಪ್ರದೇಶದಲ್ಲಿ ಜವಳಿ ನೆಲೆಯನ್ನು ನಾಗರಾಜುರ-ವರು ಶೋಧಿಸಿರುವರು(ನಾಗರಾಜು:೧೯೭೧;೨೧೮-೨೩).

ಕೃಷ್ಣಾ ಮತ್ತು ಘಟಪ್ರಭಾ ನದಿಗಳ ಪಾತ್ರದ ಬಿಜಾಪುರ ಮತ್ತು ಬೆಳಗಾವಿ ಜಿಲ್ಲೆಯಲ್ಲಿ ಪಪ್ಪುರವರು ಕೆಗೊಂಡ ಕ್ಷೇತ್ರ ಕಾರ್ಯದಿಂದಾಗಿ ಹಲವಾರು ಮಧ್ಯ ಹಳೆಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಮುಖ್ಯವಾದವುಗ-ಳೆಂದರೆ ಆಸಂಗಿ, ಹಿಪ್ಪರಿಗಿ, ಜೈನಾಪುರ, ಸೀತಿಮನಿ, ಕದಂಪುರ್, ಸಲ್ಗುಂದಿ (ಇಂ.ಆ.ರಿ:೧೯೬೩-೬೪;೨೩) ಮುಂತಾದ-ವು. ಕೆಲವು ನೆಲೆಗಳಲ್ಲಿ ಆದಿ ಹಳೆಶಿಲಾಯುಗಕ್ಕೆ ಸಂಬಂಧಿಸಿದ ಅವಶೇಷಗಳೂ ದೊರೆತಿದ್ದು ಈ ಎರಡೂ ಸಂಸ್ಕತಿಯ ವಿಭಿನ್ನತೆಯನ್ನು ಸ್ತರಗಳನ್ವಯದಂತೆ ಅಧ್ಯಯಿಸಿಲು ಸಹಾಯಕವಾಗಿದೆ. ಬಿಜಾಪುರ ಜಿಲ್ಲೆ ಕೋವಳ್ಳಿ (ಪಪ್ಪು:೧೯೭೪) ಯಲ್ಲಿ ನಡೆಸಿದ ಸಣ್ಣ ಪ್ರಮಾಣದ ಉತ್ಖನನವು ಈ ಸಂಸ್ಕತಿಯ ನಿರ್ದಿಷ್ಟತೆಯನ್ನು ತಿಳಿಯುವುದರ ಜೊತೆಗೆ ಈ ನೆಲೆ ಆಯುಧ ಉಧ್ಯಮ ಕೇಂದ್ರ  ಎಂದು ಗುರುತಿಸಲಾಗಿದೆ.

ಗುಲ್ಬರ್ಗ ಮತ್ತು ಭಾಗಶಃ ಬಿಜಾಪುರ ಜಿಲ್ಲೆಗಳಲ್ಲಿನ ಹಲವಾರು ನೆಲೆಗಳನ್ನು ಪದ್ದಯ್ಯನವರು ಶೋಧಿಸಿರುವ-ರು. ಅಲ್ಲದೆ ಇದುವರೆಗೆ ಈ ಸಂಸ್ಕತಿಯ ಬಗ್ಗೆ ತಿಳಿಯದಿದ್ದ ಹಲವಾರು ಹೊಸ ವಿಷಯಗಳನ್ನು ತಿಳಿಯಲು ಸಹಾಯಕವಾ-ಗಿದೆ. ಈ ನೆಲೆಗಳು ಭೀಮಾ ನದೀ  ಮತ್ತು ಅದರ ಉಪನದಿಗಳಲ್ಲೊಂದಾದ ಡೋಣ್ ಪ್ರದೇಶಗಳಲ್ಲಿವೆ. ಅಂತಹ ಪ್ರಮುಖ ನೆಲೆಗಳೆಂದರೆ ಬರ್ನಲ್, ಚೇಚ್‌ನೂರ್ ದೇವಪುರ, ಗುಲಬಾಳ, ಕಲದೇವನಹಳ್ಳಿ, ಹುಣಸಗಿ, ಮರಳ್‌ಭಾವಿ, ವಜ್ಜಾಳ, ತುಮಕೂರು, ಕೊಲ್ಲೂರು (ಇಂ.ಆ.ರಿ:೧೯೬೮-೬೯;೨೧)ಹಾಗರಗುಂಡಿ (ಇಂ.ಆ.ರಿ:೧೯೬೮-೬೯;೩೭)ಮುಂತಾದವು.

ಮಾಜರಾ - ಕಾರಂಜಾ ನದೀ ಕೊಳ್ಳದಲ್ಲಿಯೂ ಮಧ್ಯ ಹಳೆಶಿಲಾಯುಗದ ಹದಿಮೂರು ನೆಲೆಗಳು ದೊರೆತಿದ್ದು ಚಕ್ಕೆ ಮಾದರಿಯ ಉಪಕರಣಗಳ ಬಳಕೆ ಹೆಚ್ಚು ಇರುವುದು ತಿಳಿಯುತ್ತದೆ. (ಷಡಕ್ಷರಯ್ಯ;೧೯೯೫:೭೪-೮೬)

ಮಲೆನಾಡು ಮತ್ತು ಅರೆಮಲೆನಾಡು ಪ್ರದೇಶದ ನದಿ ಕೊಳ್ಳಗಳಾದ ತುಂಗಾ-ಭದ್ರಾ,ವೇಧಾವತಿ, ಹೇಮಾವತಿಗಳಲ್ಲಿ ಮಧ್ಯ ಹಳೆಶಿಲಾಯುಗದ ಉಪಕರಣಗಳುಳ್ಳ ನಿವೇಶನಗಳು ದೊರೆತಿವೆ. ಗೋವಿನಕೋವಿ, ತಕ್ಕನಹಳ್ಳಿ, ಕಟ್ಟೆ ಬೆಳಗುಲಿ ನೆಲೆಗಳು ಪ್ರಮುಖವಾದವುಗಳಾಗಿವೆ. (ಪೂಣಚ್ಚ:೧೯೯೦;೧೯೯-೨೭೧).

**ಪರಿಸರ ಮತ್ತು ಶಿಲಾಮಾದರಿ**

ಆದಿ ಹಳೆಶಿಲಾಯುಗದ ಪರಿಸರವು ಹೆಚ್ಚು ಕಡಿಮೆ ಈ ಕಾಲದಲ್ಲಿಯೂ ಮುಂದುವರೆದಂತೆ ತಿಳಿದು ಬರುತ್ತದೆ. ಬೆಟ್ಟಗುಡ್ಡ ಹಾಗೂ ಕಣಿವೆ ಪ್ರದೇಶಗಳೇ ಹೆಚ್ಚಾಗಿ ಬಳಕೆಯಾಗಿರುವಂತೆ ತಿಳಿಯುತ್ತದೆ.

ಉಪಕರಣ ತಯಾರಿಕೆಯ ತಾಂತ್ರಿಕತೆಯಲ್ಲಿ ಬದಲಾವಣೆ ಕಂಡು ಬಂದರೂ ಬಳಸಿರುವ ಶಿಲಾ ಮಾದರಿಗಳು ಅವೇ ಆಗಿವೆ. ಅಲ್ಲದೆ ಕೆಲವೊಂದು ಉದಾಹರಣೆಗಳಲ್ಲಿ ಅದಿರುಯುಕ್ತ ಶಿಲಾ ಪ್ರಬೇಧದ ಬಳಕೆಯೂ ಕಂಡು ಬರುತ್ತದೆ. ಇಂತಹ ಬಳಕೆಯಿಂದಾಗಿ ಉಪಕರಣಗಳು ಇಂದಿಗೂ ಕೂಡ ಟಂಕನ ರೀತಿಯಲ್ಲಿಯೇ ಇವೆ. ಉಳಿದ ಶಿಲಾ ಪ್ರಬೇಧಗಳ ಉಪಕರಣಗಳು ಕಾಲಮಾನದಲ್ಲಿ ಸವಕಲಾಗಿರುವುದು ಮತ್ತು ಕಾರ್ಯ ನಿರ್ವಹಿಸುವ ತುದಿ ಹಾಳಾಗಿರುವುದು ತಿಳಿಯುತ್ತದೆ.

ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶಕ್ಕೆ ಸಂಬಂಧಿಸಿದಂತೆ ಸಾಂಸ್ಕೃತಿಕವಾಗಿ ಮುಂದುವರಿಕೆಯ ಹಂತವಾಗಿರುವುದರಿಂದ ಪರಿಸರ ಮತ್ತು ಶಿಲಾ ಮಾದರಿಗಳಲ್ಲಿ ಹೆಚ್ಚೇನು ಬದಲಾವಣೆ ಕಂಡು ಬರುವುದಿಲ್ಲ.

ದೊರೆತಿರುವ ಒಟ್ಟು ಉಪಕರಣಗಳ ಶಿಲಾಮಾದರಿಯ ಪೂರ್ಣ ವಿವರಣೆಯನ್ನು ಕೋಷ್ಟಕ ಸಂಖ್ಯೆ:೫.೧ ರಲ್ಲಿ ಮತ್ತು ವೃತ್ತ ನಕ್ಷೆ ಸಂಖ್ಯೆ ೫.೮ ರಲ್ಲಿ ಕೊಟ್ಟಿದೆ.

ಕೋಷ್ಟಕ ಸಂಖ್ಯೆ ೫.೧

| | ಕ್ವಾರ್ಟ್ಜ್ | ಕ್ವಾರ್ಟ್ಜೈಟ್ | ಅದಿರುಯುಕ್ತ ಕ್ವಾರ್ಟ್ಜ್ | ಜಾಸ್ಪರ್ | ಛರ್ಟ್ | ಡಾಲರೈಟ್ | ಅದಿರುಯುಕ್ತ ಜಾಸ್ಪರ್ | ಒಟ್ಟು |
|---|---|---|---|---|---|---|---|---|
| ಉಪಕರಣ ಸಂಖ್ಯೆ | ೧೩೦ | ೪೬ | ೨೯ | ೧೫ | ೧೫ | ೮ | ೪ | ೨೪೭ |
| % | ೫೨.೬೩ | ೧೯.೧೧ | ೧೧.೭೯ | ೬.೦೭ | ೬.೦೭ | ೩.೨೪ | ೧.೬೨ | |

ವೃತ್ತ ನಕ್ಷೆ ಸಂಖ್ಯೆ ೫.ಅ



**ಮಧ್ಯ ಹಳೆಶಿಲಾಯುಗ ಸಂಸ್ಕೃತಿಯ ನೆಲೆಗಳು**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಮಧ್ಯ ಹಳೆಶಿಲಾಯುಗ ಸಂಸ್ಕೃತಿಯ ಒಂದು ನೆಲೆ ಈಗಾಗಲೇ ಕಿಬ್ಬನಹಳ್ಳಿಯಲ್ಲಿದ್ದು ಈ ಸಂಸ್ಕೃತಿಯ ಪ್ರಸರಣದ ಬಗ್ಗೆ ಯಾವುದೇ ನಿರ್ದಿಷ್ಟ ಅಂಶಗಳನ್ನು ತಿಳಿಯಲು ಸಾಧ್ಯವಾಗಿರಲಿಲ್ಲ. ಈ ಹಿನ್ನೆಲೆಯಲ್ಲಿ ಕೈಗೊಂಡ ಕ್ಷೇತ್ರಕಾರ್ಯದ ಫಲವಾಗಿ ಒಟ್ಟು ೨೨ ನೆಲೆಗಳು ಬೆಳಕಿಗೆ ಬಂದಿವೆ. ಹೆಚ್ಚಿನ ಈ ನೆಲೆಗಳು ಜಿಲ್ಲೆಯ ದಕ್ಷಿಣ ಭಾಗದ ಕಾವೇರಿ ನದೀ ಪಾತ್ರದ ಶಿಂಷಾ ನದೀ ಕೊಳ್ಳದಲ್ಲಿ ಕೇಂದ್ರೀಕೃತವಾಗಿರುವುದು ಕಂಡು ಬರುತ್ತದೆ. ಹೆಚ್ಚಿನ ನೆಲೆಗಳು ಪೂರ್ವ ಸಂಸ್ಕೃತಿಯಾದ ಆದಿ ಹಳೆಶಿಲಾಯುಗ ಸಂಸ್ಕೃತಿಯೊಂದಿಗಿರುವುದು ತಿಳಿಯುತ್ತದೆ. ನಿರ್ದಿಷ್ಟ ನೆಲೆಗಳಲ್ಲಿ ಮಾನವನ ಜೀವನ ಕ್ರಮದ ಮುಂದುವರಿಕೆಯನ್ನು ಸೂಚಿಸುತ್ತದೆ.

ದೊರೆತಿರುವ ಮಧ್ಯ ಹಳೆಶಿಲಾಯುಗದ ನೆಲೆಗಳು, ಜೊತೆಗೆ ಇವುಗಳೊಂದಿಗಿರುವ ಆದಿ ಹಳೆಶಿಲಾಯುಗ ಸಂಸ್ಕೃತಿ ನೆಲೆಗಳು ಮತ್ತು ಪ್ರತಿಯೊಂದು ನೆಲೆಯೂ ಇರುವ ಪರಿಸರದ ಹಿನ್ನೆಲೆ ಇವುಗಳ ವಿವರಣೆಯನ್ನು ಕೋಷ್ಟಕ ಸಂಖ್ಯೆ ೫.೨ ರಲ್ಲಿ ನೀಡಲಾಗಿದೆ. ಪ್ರತಿ ನೆಲೆಗಳಲ್ಲಿ ಐದಕ್ಕೂ ಹೆಚ್ಚು ಉಪಕರಣ ದೊರೆತ ನೆಲೆಗಳನ್ವಯದಂತೆ ವೃತ್ತ ನಕ್ಷೆ ರೂಪಿಸಿದ್ದು, ವೃತ್ತ ನಕ್ಷೆ ಸಂಖ್ಯೆ ೫.ಆ ನಲ್ಲಿ ನೀಡಿದೆ. ನೆಲೆಗಳಿರವ ಭೂನಕ್ಷೆ ಪುಟ ಸಂಖ್ಯೆ ೧೦೧ ರಲ್ಲಿ ನೀಡಲಾಗಿದೆ.

ತುಮಕೂರು ಜಿಲ್ಲೆ

ಮಧ್ಯ ಹಳೆ ಶಿಲಾಯುಗ ಸಂಸ್ಕೃತಿ ನೆಲೆ



ಕೋಷ್ಟಕ ಸಂಖ್ಯೆ:೫.೨

| ಕ್ರಮ ಸಂಖ್ಯೆ | ನೆಲೆ | ಆದಿ ಹಳೆಶಿಲಾಯುಗ ಸಂಸ್ಕೃತಿಯೊಂದಿಗಿರುವ ಮಧ್ಯಹಳೆಶಿಲಾಯುಗ ಸಂಸ್ಕೃತಿ ನೆಲೆಗಳು | ಪರಿಸರ |
|---|---|---|---|
| ೧ | ಅಪ್ಪಾನಹಳ್ಳಿ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೨ | ಅವಗ್ಗಲ್ಲು | ✓ | ಬೆಟ್ಟದ ತಪ್ಪಲು. |
| ೩ | ಅಂಕನಬಾವಿ | | ಬಯಲು ಪ್ರದೇಶ. |
| ೪ | ಓಬಳಾಪುರ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೫ | ಕರಡಿ | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೬ | ಕೈಮರ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೭ | ಗಳಿಗೆಕೆರೆ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೮ | ಗುಟ್ಟಿ | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೯ | ದೊಡ್ಡಗುಣಿ | ✓ | ಬೆಟ್ಟದ ತಪ್ಪಲು. |
| ೧೦ | ನಿಡುಗಲ್ಲು | | ಬೆಟ್ಟದ ತಪ್ಪಲು. |
| ೧೧ | ಬೂದಿಗುಡ್ಡ | | ಬೆಟ್ಟದ ತಪ್ಪಲು. |
| ೧೨ | ಬೊಮ್ಮೇನಹಳ್ಳಿ | ✓ | ಬೆಟ್ಟದ ತಪ್ಪಲು. |
| ೧೩ | ಮಾರಶೆಟ್ಟಿಹಳ್ಳಿ | ✓ | ಬೆಟ್ಟದ ತಪ್ಪಲು. |
| ೧೪ | ಮಿಡಿಗೇಶಿ | | ಬೆಟ್ಟದ ತಪ್ಪಲು. |
| ೧೫ | ಮೂಗನಾಯಕನಕೋಟೆ | ✓ | ಬೆಟ್ಟದ ತಪ್ಪಲು. |
| ೧೬ | ಮಂಚಕಲ್‌ಕುಪ್ಪೆ | | ಬೆಟ್ಟದ ತಪ್ಪಲು. |
| ೧೭ | ಮಂಚಲ್ದೊರೆ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೧೮ | ಯಕ್ಕಲಕಟ್ಟೆ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೧೯ | ಯಲ್ಲಪ್ಪನಾಯಕನಹೊಸಕೋಟೆ | ✓ | ಬೆಟ್ಟದ ತಪ್ಪಲು. |
| ೨೦ | ಶಿವಪುರ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರಿ. |
| ೨೧ | ಹರೇನಹಳ್ಳಿ | ✓ | ಬೆಟ್ಟದ ತಪ್ಪಲು. |
| ೨೨ | ಹೊನ್ನೇಮಾರನಹಳ್ಳಿ | ✓ | ಬೆಟ್ಟದ ತಪ್ಪಲು. |

ವೃತ್ತ ನಕ್ಷೆ ಸಂಖ್ಯೆ:೫.೮




**ಮಧ್ಯ ಹಳೆಶಿಲಾಯುಗದ ಉಪಕರಣಗಳು**

ವಿದ್ವಾಂಸರು ಮಧ್ಯ ಹಳೆಶಿಲಾಯುಗದ ನೆಲೆಗಳಲ್ಲಿ ದೊರೆತಿರುವ ಉಪಕರಣಗಳ ವೈವಿಧ್ಯ ಹಾಗೂ ಬಳಸಿರುವ ತಾಂತ್ರಿಕ ವಿಧಾನಗಳನ್ನು ಅನುಸರಿಸಿ ಈ ಸಂಸ್ಕೃತಿಯ ನೆಲೆಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿದ್ದಾರೆ ಮೊದಲನೆಯ ಗುಂಪಿನ ನೆಲೆಗಳಲ್ಲಿ ವಿವಿಧ ಪ್ರಮಾಣಗಳಲ್ಲಿ ಆದಿ ಹಳೆಶಿಲಾಯುಗದ ಉಪಕರಣಗಳಾದ ಕಿರು ಕೈಗೊಡಲಿ, ಮಚ್ಚುಗತ್ತಿ ಮತ್ತು ಚಕ್ರಾಕಾರದ ಉಪಕರಣ ಇವು ದೊರಕುವುದರ ಜೊತೆಗೆ ಮಧ್ಯ ಹಳೆಶಿಲಾಯುಗದ ಚಕ್ಕೆ ಉಪಕರಣಗಳ ಶೇಕಡಾವಾರು ಪ್ರಮಾಣ ಹೆಚ್ಚಾಗಿರುತ್ತದೆ. ಎರಡನೇ ಗುಂಪಿನ ನೆಲೆಗಳಲ್ಲಿ ಆದಿ ಹಳೆಶಿಲಾಯುಗ ಸಂಪ್ರದಾಯದ ಉಪಕರಣಗಳು ದೊರೆಯದೆ ಕೇವಲ ಚಕ್ಕೆ ಉಪಕರಣಗಳೇ ದೊರೆಯುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲೂ ಈ ಎರಡೂ ರೀತಿಯ ನೆಲೆಗಳು ಬೆಳಕಿಗೆ ಬಂದಿವೆ. ಆದಿ ಹಳೆಶಿಲಾಯುಗ ಸಂಪ್ರದಾಯದ ಉಪಕರಣಗಳು ೧೫ ನೆಲೆಗಳಲ್ಲಿ ದೊರೆತಿವೆ. ಅವುಗಳಲ್ಲಿಯೂ ೫ಕ್ಕಿಂತ ಕಡಿಮೆ ಉಪಕರಣಗಳು ೧೦ ನೆಲೆಗಳಲ್ಲೂ, ೫ಕ್ಕಿಂತ ಹೆಚ್ಚು ಉಪಕರಣಗಳು ೭ ನೆಲೆಗಳಲ್ಲೂ ದೊರೆತಿವೆ. ಮೊದಲನೆ ಗುಂಪಿನ ನಿವೇಶನಗಳು ಕಾವೇರಿ ನದಿಯ ವ್ಯಾಪ್ತಿಯಲ್ಲಿ ಬರುವ ಶಿಂಷಾ ನದೀ ಪಾತ್ರದಲ್ಲಿ ಕೇಂದ್ರೀಕೃತವಾಗಿವೆ. ಕೇಂದ್ರ ಪ್ರದೇಶದಿಂದ ದೂರ ಹೋದಂತೆ ಎರಡನೇ ಗುಂಪಿನ ನಿವೇಶನಗಳು ಹೆಚ್ಚಾಗುತ್ತವೆ. ದೊರೆತಿರುವ

ಉಪಕರಣಗಳ ಶೇಕಡಾವಾರು ಪ್ರಮಾಣವನ್ನನುಸರಿಸಿ ಮೊದಲನೇ ಗುಂಪಿನ ನೆಲೆಗಳು ಅಪ್ಪಾನಹಳ್ಳಿಯ ಸುತ್ತಮುತ್ತಲ ಪ್ರದೇಶಗಳಲ್ಲಿ ಹೆಚ್ಚಾಗಿರುವುದನ್ನು ಗಮನಿಸಬಹುದು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಎರಡೂ ಗುಂಪಿನ ಉಪಕರಣಗಳೂ ದೊರೆತಿದ್ದತು ಅವುಗಳ ವೈವಿಧ್ಯ ಹಾಗೂ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೩ ಮತ್ತು ವೃತ್ತ ನಕ್ಷೆ ೫.೩ ರಲ್ಲಿ ನೀಡಿದೆ. ವಿವಿಧ ಮಾದರಿ ಉಪ-ಕರಣಗಳನ್ನು ಪ್ರತ್ಯೇಕವಾಗಿ ವಿವರಿಸಿದೆ.

ಮಧ್ಯ ಹಳೆಶಿಲಾಯುಗದ ಉಪಕರಣ ವೈವಿಧ್ಯ

ಕೋಷ್ಟಕ ಸಂಖ್ಯೆ ೫.೩

| ಕ್ರಮ ಸಂಖ್ಯೆ | ನೆಲೆ | ಕೈಗೊಡಲಿ | | ಚಕ್ರಾಕಾರದ ಉಪಕರಣ | | ಹೆರೆಚಕ್ಕೆ ಮಾದರಿ | | ನೀಳಚಕ್ಕೆ ಮಾದರಿ | ಮೊನೆ | ಬಾಣದ ಮೊನೆ | ಕೊರೆಗ | | ಒಟ್ಟು | ಶೇ |
|---|---|---|---|---|---|---|---|---|---|---|---|---|---|---|
| | | ಉಂಡೆ/ ಶಿಲಾಗಟ್ಟಿ | ಚಕ್ಕೆ | ಉಂಡೆ/ ಶಿಲಾಗಟ್ಟಿ | ಚಕ್ಕೆ | ಉಂಡೆ/ ಶಿಲಾಗಟ್ಟಿ | ಚಕ್ಕೆ | | | | ಉಂಡೆ/ ಶಿಲಾಗಟ್ಟಿ | ಚಕ್ಕೆ | | |
| ೧ | ಅಪ್ಪಾನಹಳ್ಳಿ | ೧ | ೧ | | ೨ | | ೧೫ | ೪ | ೨ | | | ೧ | ೨೬ | ೧೦.೫೬ |
| ೨ | ಅವರ್ಗಲ್ಲು | | | | ೧ | | ೪ | | ೨ | | | ೧ | ೮ | ೩.೨೫ |
| ೩ | ಅಂಕನಬಾವಿ | | | | | ೧ | | | | | | | ೧ | ೦.೪೦ |
| ೪ | ಓಬಳಾಪುರ | | | | | ೧ | ೨ | ೧ | ೧ | | ೧ | | ೬ | ೨.೪೩ |
| ೫ | ಕರಡಿ | | | | | | ೫ | ೨ | ೧ | | | | ೮ | ೩.೨೫ |
| ೬ | ಕೈಮರ | | | ೧ | | | ೭ | ೧ | | ೧ | | | ೧೦ | ೪.೦೬ |
| ೭ | ಗಳಿಗೆಕೆರೆ | | | ೧ | | | ೩ | | | ೧ | | | ೫ | ೨.೦೩ |
| ೮ | ಗುಟ್ಟೆ | | | ೧ | | | ೭ | ೧ | ೧ | | | | ೧೦ | ೪.೦೬ |
| ೯ | ದೊಡ್ಡಗುಣಿ | | | | | ೧ | ೧೨ | ೪ | | | ೧ | | ೧೭ | ೬.೯೧ |
| ೧೦ | ನಿಡುಗಲ್ಲು | | | | | | ೩ | | | ೫ | | | ೮ | ೩.೨೫ |
| ೧೧ | ಬೂದಿಗುಡ್ಡ | | | | | | ೩ | | | | | ೧ | ೫ | ೨.೦೩ |
| ೧೨ | ಬೊಮ್ಮೇನಹಳ್ಳಿ | | | | | | | ೧ | ೧ | | | | ೨ | ೦.೮೧ |
| ೧೩ | ಮಾರಶೆಟ್ಟಹಳ್ಳಿ | ೨ | ೨ | ೧ | | ೧ | ೧೧ | ೫ | ೨ | | | | ೨೪ | ೯.೭೫ |
| ೧೪ | ಮಿಡಿಗೇಶಿ | | | | | | ೪ | | ೩ | ೨ | | | ೯ | ೩.೬೫ |
| ೧೫ | ಮೂಗನಾಯಕನಕೋಟೆ | ೫ | | ೩ | ೧ | ೪ | ೨೨ | ೮ | ೨ | | ೧ | ೧ | ೪೭ | ೧೯.೧೦ |
| ೧೬ | ಮಂಚಕಲ್ ಕುಪ್ಪೆ | | ೧ | ೧ | | | ೧೧ | ೪ | ೧ | | | ೨ | ೨೦ | ೮.೧೩ |
| ೧೭ | ಮಂಚಲ್ದೊರೆ | ೧ | ೧ | ೧ | ೧ | | ೧ | ೧ | | | | | ೬ | ೨.೪೩ |
| ೧೮ | ಯಕ್ಕಲಕಟ್ಟೆ | | | ೨ | | | ೭ | ೨ | | ೨ | | | ೧೩ | ೫.೨೮ |
| ೧೯ | ಯಲ್ಲಪ್ಪನಾಯಕನಹೊಸಕೋಟೆ | | | | | | | ೧ | ೨ | | | | ೩ | ೧.೨೧ |
| ೨೦ | ಶಿವಪುರ | | | | | ೧ | ೪ | | | | | | ೫ | ೨.೦೩ |
| ೨೧ | ಹರೇನಹಳ್ಳಿ | | | ೧ | | | | ೨ | | | | | ೩ | ೧.೨೧ |
| ೨೨ | ಹೊನ್ನೇಮಾರನಹಳ್ಳಿ | ೧ | | ೧ | | | ೪ | | ೧ | ೨ | | ೧ | ೧೦ | ೪.೦೬ |
| | ಒಟ್ಟು | ೧೦ | ೫ | ೧೩ | ೫ | ೯ | ೧೨೫ | ೩೭ | ೧೯ | ೧೩ | ೩ | ೭ | ೨೪೬ | |
| | | ೧೫ | | ೧೮ | | ೧೩೪ | | | | | ೧೦ | | | |
| | ಶೇ | ೬.೦೯ | | ೭.೩೧ | | ೫೪.೪೭ | | ೧೫.೦೪ | ೭.೭೨ | ೫.೨೮ | ೪.೦೬ | | | |

ಉಂಡೆ/ಮೂಲಗಟ್ಟಿ-೩೫ ಶೇ. ೧೪.೨೨

ಚಕ್ಕೆಕಲ್ಲು-೨೧೧ ಶೇ. ೮೫.೭೭

ವೃತ್ತ ನಕ್ಷೆ ೫.೩




**೧ ಕೈಗೊಡಲಿ**

ಮಧ್ಯ ಹಳೆಶಿಲಾಯುಗದ ಉಪಕರಣಗಳ ಸಮೂಹದಲ್ಲಿ ಕೈಗೊಡಲಿ ಗುಂಪಿನ ಒಟ್ಟು ೧೫ ಉಪಕರಣಗಳಿವೆ. (ಶೇ. ೬.೦೯). ಇವುಗಳಲ್ಲಿ ಅದಿರುಯುಕ್ತ ಜಾಸ್ಪರ್ ನೆಲೆಗಳು ಒಂದು, ಕ್ವಾರ್ಟ್ಝೈಟ್ ಶಿಲೆಯ ಎಂಟು ಹಾಗೂ ಉಳಿದವನ್ನು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಿದೆ. ೫ ಉಪಕರಣ (ಶೇ೩೩.೩೩) ಗಳನ್ನು ಲೆವಲ್ಲಾಯ್ಸ್ ಚಕ್ಕೆಗಳಲ್ಲಿ ರೂಪಿಸಿದ್ದರೆ ಉಳಿದ ೧೦ ಉಪಕರಣ (ಶೇ೬೬.೬೬)ಗಳನ್ನು ಸಣ್ಣ ಗಾತ್ರದ ಉಂಡೆಗಲ್ಲು ಅಥವಾ ಮೂಲಗಟ್ಟಿಗಳ ಮೇಲೆ ರೂಪಿಸಿದೆ. ಚಕ್ಕೆಗಳ ಮೇಲೆ ರೂಪಿಸಿರುವ ಉಪಕರಣಗಳಲ್ಲಿ ಬುಡವು ಅಗಲ ಮತ್ತು ದಪ್ಪವಾಗಿದ್ದು ತುದಿಯು ತ್ರಿಭುಜಾಕಾರದಲ್ಲಿದೆ. ಮೂರು ಉಪಕರಣಗಳ ಹಿಂಬದಿ ಸಮತಲವಾಗಿದ್ದರೆ ಉಳಿದರೆಡರಲ್ಲಿ ಉಬ್ಬಿವೆ. ಮುಂಬದಿಯಲ್ಲಿ ವಕ್ರವಾಗಿ ಸಾಗುವ ಉಬ್ಬೇಣು ಎರಡು ಉಪಕರಣಗಳಲ್ಲಿ ಕಂಡು ಬಂದರೆ ಉಳಿದ ಉಪಕರಣಗಳಲ್ಲಿ ಉಬ್ಬೇಣನ್ನು ತೆಗೆದಿದೆ. ಮೂರು ಉಪಕರಣಗಳಲ್ಲಿ ತಾಡನವೇದಿಕೆ ಕಂಡು ಬರುತ್ತದೆ. ಅಡ್ಡ ವಿನ್ಯಾಸದಲ್ಲಿ ೫ ಉಪಕರಣಗಳು ತ್ರಿಭುಜ ಇಲ್ಲವೇ ಸಮಾನಾಂತರ ಚತುರ್ಭುಜಾಕಾರವನ್ನು ಹೊಂದಿವೆ. ಉಂಡೆಗಲ್ಲು ಅಥವಾ ಮೂಲಶಿಲಾಗಟ್ಟಿಗಳ ಮೇಲೆ ರೂಪಿಸಿರುವ ಉಪಕರಣಗಳಲ್ಲಿ ಮೂರರ ಮೇಲ್ತುದಿ ಚೂಪಾಗಿದ್ದು ಉಳಿದವುಗಳು ಅರೆ ವೃತ್ತಾಕಾರದಲ್ಲಿವೆ. ಚೂಪಾದ ತುದಿ ಇರುವ ಕೈಗೊಡಲಿಗಳ ಹಿಂಬದಿ ಹಾಗೂ ಮುಂಬದಿಗಳೆರಡರಲ್ಲಿಯೂ ಉಬ್ಬೇಣು ವಕ್ರರೇಖೆಯಲ್ಲಿ ಸಾಗುತ್ತದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜ ಮತ್ತು ಚತುರ್ಭುಜಾಕಾರವನ್ನು ಕಾಣಬಹುದು. ಮೂಲಗಟ್ಟಿಯಿಂದ ರಚಿತವಾದ ಮೊಂಡು ತುದಿಯ ಏಳೂ ಉಪಕರಣಗಳ ಬುಡ ಮತ್ತು ಮಧ್ಯ ಭಾಗವು ದಪ್ಪವಾಗಿದ್ದು ಒಂದು ಅಥವಾ ಎರಡೂ ಪಾರ್ಶ್ವಗಳಲ್ಲಿ ಹರಿತ ಅಂಚನ್ನು ಹೊಂದಿವೆ. ಎರಡೂ ಬದಿಗಳಿಂದ ಅನುಕ್ರಮ ವಿರುದ್ಧ ಚಕ್ಕೆಗಳನ್ನೆಬ್ಬಿಸಿ ಹರಿತ ಅಲಗನ್ನು ರೂಪಿಸಿದೆ. ಈ ಕಾರಣದಿಂದ ಮಚ್ಚುಗತ್ತಿಯನ್ನಾಗಿ ಉಪಯೋಗಿಸಿರುವ ಸಾಧ್ಯತೆ ಇದೆ. ಎಲ್ಲಾ ಉಪಕರಣಗಳಲ್ಲಿ ಎರಡೂ ಬದಿಗಳಲ್ಲಿ ಉಬ್ಬೇಣು ಪ್ರಧಾನವಾಗಿದ್ದು ಮಧ್ಯದಲ್ಲಿ ದಪ್ಪಗಿವೆ. ಅಡ್ಡವಿನ್ಯಾಸದಲ್ಲಿ ತ್ರಿಭುಜ, ಅಂಡಾಕಾರ ಮತ್ತು ಚತುರ್ಭುಜಾಕಾರಗಳು ಕಂಡು ಬರುತ್ತವೆ. ಒಂದೆರಡು ಉಪಕರಣಗಳಲ್ಲಿ ಮೂಲಶಿಲಾ ತೊಗಟೆಯನ್ನು ಉಳಿಸಿದೆ. ಜಾಸ್ಪರ್ ನಲ್ಲಿ ರಚಿತವಾದ ಒಂದು ಉಪಕರಣದ ಅಂಚುಗಳಲ್ಲಿ ಮಚ್ಚುಗತ್ತಿಯ ಅಲಗನ್ನು ರೂಪಿಸಿದೆ. ಈ ಉಪಕರಣಗಳನ್ನು ಪ್ರಮಾಣಕ್ಕನುಗುಣವಾಗಿ ಮೂರುಗುಂಪುಗಳಾಗಿ ವಿಭಾಗಿಸಬಹುದು. ಮೊದ-

ಲನೇ ಗುಂಪಿನ ೪ ಉಪಕರಣಗಳು ೬೦ ರಿಂದ ೭೦ ಹಾಗೂ ಮೂರನೇ ಗುಂಪಿನ ೩ ಉಪಕರಣಗಳು ೭೦ ರಿಂದ ೭೫ ಮಿ.ಮೀ. ಗೆ ಸೇರುತ್ತವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೪ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೫.೪**

ಕೈಗೊಡಲಿ (ಉಂಡೆ / ಮೂಲ ಶಿಲಾಗಟ್ಟಿ)

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮಿ. | ಅಗಲ ಮಿ.ಮೀ. | ದಪ್ಪ ಮಿ.ಮೀ. |
|---|---|---|---|---|
| ೧ | ಮೂಗನಾಯಕನಕೋಟೆ | ೫೫ | ೪೦ | ೩.೦ |
| ೨ | ಮೂಗನಾಯಕನಕೋಟೆ | ೫೫ | ೫೦ | ೩.೫ |
| ೩ | ಅಪ್ಪಾನಹಳ್ಳಿ | ೬೦ | ೫೦ | ೪೫ |
| ೪ | ಮಾರಶೆಟ್ಟಿಹಳ್ಳಿ | ೬೦ | ೪೫ | ೪೦ |
| ೫ | ಮೂಗನಾಯಕನಕೋಟೆ | ೬೫ | ೪೫ | ೪೦ |
| ೬ | ಮೂಗನಾಯಕನಕೋಟೆ | ೬೫ | ೫೦ | ೪೦ |
| ೭ | ಮಾರಶೆಟ್ಟಿಹಳ್ಳಿ | ೭೦ | ೫೦ | ೨೫ |
| ೮ | ಮೂಗನಾಯಕನ ಕೋಟೆ | ೭೦ | ೫೫ | ೩.೦ |
| ೯ | ಹೊನ್ನೇಮಾರನಹಳ್ಳಿ | ೭೫ | ೫೦ | ೩.೦ |
| ೧೦ | ಮಂಚಲ್ದೊರೆ | ೭೫ | ೫೦ | ೩.೫ |

ಕೈಗೊಡಲಿ (ಚಕ್ಕೆ ಕಲ್ಲು)

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮಿ. | ಅಗಲ ಮಿ.ಮೀ. | ದಪ್ಪ ಮಿ.ಮೀ. |
|---|---|---|---|---|
| ೧ | ಮಂಚಕಲ್‌ಕುಪ್ಪೆ | ೬೫ | ೪೫ | ೨೦ |
| ೨ | ಮಾರಶೆಟ್ಟಿಹಳ್ಳಿ | ೭೦ | ೪೫ | ೨೫ |
| ೩ | ಮಂಚಲ್ದೊರೆ | ೭೦ | ೫೫ | ೩.೫ |
| ೪ | ಮಾರಶೆಟ್ಟಿಹಳ್ಳಿ | ೭೦ | ೬೫ | ೨೫ |
| ೫ | ಅಪ್ಪಾನಹಳ್ಳಿ | ೭೦ | ೫೦ | ೩.೦ |

**೨ ಚಕ್ರಾಕಾರದ ಉಪಕರಣ**

ಇವು ಕೈಗೊಡಲಿ ಗುಂಪಿನ ವಿಶಿಷ್ಟ ಉಪಕರಣಗಳು. ದೊರೆತಿರುವ ಇಂತಹ ೧೮ ಉಪಕರಣ (ಶೇ.೭.೩೧) ಗಳಲ್ಲಿ ಅದಿರುಯುಕ್ತ ಜಾಸ್ಪರ್, ೨ ಅದಿರುಯುಕ್ತ ಕ್ವಾರ್ಟ್ಜ್, ೨ ಕ್ವಾರ್ಟೈಟ್ ಹಾಗೂ ಉಳಿದವು ವಿವಿಧ ಬಣ್ಣದ ಕ್ವಾರ್ಟ್ಜ್ ಶಿಲೆಯವು. ಹೆಚ್ಚೂ ಕಡಿಮೆ ಎಲ್ಲಾ ಉಪಕರಣಗಳೂ ವೃತ್ತಾಕಾರದಲ್ಲಿವೆ. ಪರಿಧಿಯಲ್ಲಿ ತೆಳ್ಳಗಿನ ಹರಿತ ಅಲಗಿದ್ದು ಮಧ್ಯದಲ್ಲಿ ದಪ್ಪಗಿವೆ. ಒಂದೆರಡು ಉಪಕರಣಗಳನ್ನು ಮೊದಲೇ ತಯಾರಿಸಿದ ಮೂಲ ಶಿಲಾಗಟ್ಟಿಯಿಂದ ರೂಪಿಸಿರುವಂತೆ ಕಾಣುತ್ತದೆ. ಉಪಕರಣದ ಮಧ್ಯದಿಂದ ಅಂಚಿನ ಕಡೆಗೆ ಎರಡೂ ಬದಿಗಳಿಂದ ಅನುಕ್ರಮ ವಿರುದ್ಧ ಚಕ್ಕೆಗಳನ್ನೆಬ್ಬಿಸಿ ಈ ಉಪಕರಣಗಳನ್ನು ರೂಪಿಸಲಾಗಿದೆ. ಇದರಿಂದಾಗಿ ಅಲಗು ಸರಳರೇಖೆಯಲ್ಲಿರದೆ ಅಂಕುಡೊಂಕಾಗಿದೆ. ಕೆಲವು ಉಪಕರಣಗಳಲ್ಲಿ ಪರಿಧಿಯ ಸುತ್ತಲೂ ಸೂಕ್ಷ್ಮ ಪುಡಿ ಚಕ್ಕೆಗಳನ್ನೆಬ್ಬಿಸಿ ಅಲಗನ್ನು ರೂಪಿಸಿದೆ. ಇನ್ನು ಕೆಲವು ಉಪಕರಣಗಳನ್ನು ಲೆವಲ್ಲಾಯಸ್ ಮಾದರಿಯ ಮೂಲ ಶಿಲಾಗಟ್ಟಿಯಿಂದ ರೂಪಿಸಿರುವ ಉಪಕರಣಗಳು ಬುಡದಲ್ಲಿ ದಪ್ಪಗಿದ್ದು ತಾಡನ ವೇದಿಕೆಯನ್ನು ಹೊಂದಿರುವುದರಿಂದ ಈ ಜಾಗದಲ್ಲಿ ಹರಿತ ಅಲಗು ಕಾಣುವುದಿಲ್ಲ. ಮತ್ತೆ ಕೆಲವು ಉಪಕರಣಗಳನ್ನು ಸಣ್ಣ ಇಲ್ಲವೇ ಮಧ್ಯಮ ಗಾತ್ರದ ಉಂಡೆಗಲ್ಲುಗಳಿಂದ ಕೆಲವು ಜಾಗಗಳಲ್ಲಿ ಮಾತ್ರ ಚಕ್ಕೆ ತೆಗೆದು ರೂಪಿಸಿದೆ. ಒಂದೆರಡು ಉದಾಹರಣೆಗಳಲ್ಲಿ ಕೇಂದ್ರ ಭಾಗದಲ್ಲಿರುವ ದಪ್ಪನೆಯ ಉಬ್ಬನ್ನು ಚಕ್ಕೆ ತೆಗೆದು ಹಿಡಿತಕ್ಕೆ ಅನುಕೂಲಮಾಡಿದೆ. ಒಂದೆರಡು ಉಪಕರಣಗಳಲ್ಲಿ ಕೇಂದ್ರ ಇಲ್ಲವೆ ಬುಡದಲ್ಲಿ ಶಿಲಾ ತೊಗಟೆ ಉಳಿದುಕೊಂಡಿದೆ. ಅಳತೆ ಪ್ರಮಾಣದಂತೆ ಈ ಉಪಕರಣಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಮೊದಲನೆ ಗುಂಪಿನ ೧೨ ಉಪಕರಣಗಳ ವ್ಯಾಸ ೪೫ ರಿಂದ ೫೫ ಮಿ.ಮೀ. ನಡುವಿ-

ನಲ್ಲೂ ಎರಡನೇ ಗುಂಪಿನ ೩ ಉಪಕರಣಗಳು ೫೫ ರಿಂದ ೬೫ ಮಿ.ಮೀ. ನಡುವೆ ಮತ್ತು ಮೂರನೆ ಗುಂಪಿನ ೩ ಉಪಕರಣಗಳು ೬೫ ರಿಂದ ೭೫ ಮಿ.ಮೀ. ನಡುವಿನವುಗಳಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೫ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೫.೫**

| ಕ್ರಮ ಸಂಖ್ಯೆ | ನೆಲೆ | ವ್ಯಾಸ ಮಿ.ಮೀ. | ದಪ್ಪ ಮಿ.ಮೀ. |
|---|---|---|---|
| ೧ | ಮೂಗನಾಯಕನಕೋಟೆ | ೪೫ | ೨೦ |
| ೨ | ಮೂಗನಾಯಕನಕೋಟೆ | ೪೫ | ೩೦ |
| ೩ | ಕೆಮರ | ೪೫ | ೩೮ |
| ೪ | ಗಳಿಗೆ ಕೆರೆ | ೪೫ | ೩೦ |
| ೫ | ಅಪ್ಪಾನಹಳ್ಳಿ | ೫೦ | ೨೦ |
| ೬ | ಯಕ್ಕಲ ಕಟ್ಟೆ | ೫೦ | ೨೫ |
| ೭ | ಮಾರಶೆಟ್ಟಿಹಳ್ಳಿ | ೫೦ | ೩೦ |
| ೮ | ಮಂಚಲ್ದೊರೆ | ೫೨ | ೨೫ |
| ೯ | ಮಂಚಲ್ದೊರೆ | ೫೫ | ೨೦ |
| ೧೦ | ಅಪ್ಪಾನಹಳ್ಳಿ | ೫೫ | ೨೫ |
| ೧೧ | ಹೊನ್ನೆಮಾರನಹಳ್ಳಿ | ೫೫ | ೩೦ |
| ೧೨ | ಗುಟ್ಟೆ | ೫೫ | ೨೫ |
| ೧೩ | ಮೂಗನಾಯಕನಕೋಟೆ | ೬೦ | ೩೦ |
| ೧೪ | ಹರೇನಹಳ್ಳಿ | ೬೫ | ೩೫ |
| ೧೫ | ಯಕ್ಕಲಕಟ್ಟೆ | ೬೫ | ೨೫ |
| ೧೬ | ಆವರಗಿಲ್ಲು | ೭೦ | ೫೦ |
| ೧೭ | ಮೂಗನಾಯಕನಕೋಟೆ | ೭೦ | ೪೫ |
| ೧೮ | ಮಂಚಕಲ್‌ಕುಪ್ಪೆ | ೭೫ | ೩೫ |

**೩. ಹೆರೆಚಕ್ಕೆ ಉಪಕರಣ**

ಈ ಮೊದಲು ಹೇಳಿದಂತೆ ಬದಲಾದ ವಾತಾವರಣ, ಪ್ರಾಕೃತಿಕ ಪರಿಸರ, ಜೀವಸಂಪತ್ತು ಇವುಗಳಿಗನುಗುಣವಾಗಿ ಮಧ್ಯ ಹಳೆಶಿಲಾಯುಗದ ಮಾನವ ರೂಪಿಸಿಕೊಂಡ ಮಧ್ಯಮ ಇಲ್ಲವೆ ಕಿರುಗಾತ್ರದ ಉಪಕರಣಗಳಲ್ಲಿ ವಿವಿಧ ರೀತಿಯ ಹೆರೆಚಕ್ಕೆಗಳು ಮುಖ್ಯವಾದವು. ಇತರ ರೀತಿಯ ಮೂಲಗಟ್ಟಿ ಮತ್ತು ಚಕ್ಕೆ ಉಪಕರಣಗಳನ್ನು ತಯಾರಿಸಿ ಕಡೆಗೆ ಉಳಿಯುವ ಮೂಲಗಟ್ಟಿ ಅಥವಾ ಚಕ್ಕೆಗಳಿಂದ ಈ ಉಪಕರಣಗಳನ್ನು ತಯಾರಿಸಿದೆ. ಚಕ್ಕೆಯಿಂದ ರೂಪಿಸಿದ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿದ್ದು (೧೨೫ ಶೇ. ೯೩.೨೮) ಮೂಲ ಗಟ್ಟಿಯಲ್ಲಿ ರೂಪಿಸಿರುವ ಉಪಕರಣಗಳು ಕೇವಲ ೯ ಇವೆ(ಶೇ. ೬.೭೧). ಹೆರೆಚಕ್ಕೆ ಮಾದರಿ ಉಪಕರಣಗಳಲ್ಲಿ ದುಂಡು ಹೆರೆಚಕ್ಕೆ ಉಪ ಗುಂಪಿನಲ್ಲಿ ಮಾತ್ರವೇ ಮೂಲಗಟ್ಟಿಯಲ್ಲಿ ರೂಪಿಸಿರುವ ಉಪಕರಣಗಳಿವೆ. ಮಧ್ಯ ಹಳೆಶಿಲಾಯುಗ ಉಪಕರಣ ಸಮೂಹದಲ್ಲಿ ಇವು ಒಟ್ಟು ೧೩೪ ಇದ್ದು (ಶೇ. ೫೪.೪೭), ಅತಿಹೆಚ್ಚು ಶೇಕಡಾವಾರು ಪ್ರಮಾಣದಲ್ಲಿದೆ.

ವಿವಿಧ ಬಣ್ಣಗಳ ಕ್ವಾರ್ಟ್ಸೈಟ್, ಕಡುಕಂದು ಬಣ್ಣದ ಜಾಸ್ಪರ್, ಹಾಲುಗಲ್ಲು ಮತ್ತು ಡೈಕ್ ನಂತಹ ನಯವಾದ ಸಾಂದ್ರಕಣಗಳ ಶಿಲಾ ಮಾದರಿಗಳ ಮೇಲೆ ರಚಿತವಾಗಿರುವ ಈ ಉಪಕರಣಗಳು ಸಹಜವಾಗಿ ಹರಿತವಾದ ಅಲಗನ್ನು ಹೊಂದಿವೆ. ಒಂದೆರಡು ಉದಾಹರಣೆಗಳಲ್ಲಿ ಮೂಲಶಿಲೆಯು ಅತಿ ಕಡಿಮೆ ಪ್ರಮಾಣದಲ್ಲಿ ಮೈಕಾಯುಕ್ತವಾಗಿದೆ.

ಕಾರ್ಯ ನಿರ್ವಹಿಸುವ ಅಲಗನ್ನು ರೂಪಿಸಿರುವ ಭಾಗಗಳನ್ನಾಧರಿಸಿ ಹೆರೆಚಕ್ಕೆಗಳನ್ನು ೫ ಗುಂಪುಗಳಾಗಿ ವಿಭಾಗಿಸಬಹುದು. ಅವುಗಳೆಂದರೆ :

೧ ಒಬ್ಬದಿ ಹೆರೆಚಕ್ಕೆ (ಒಟ್ಟು ಉಪಕರಣ - ೩೬ ಶೇ. ೧೪.೬೩)

೨ ಇಬ್ಬದಿ ಹೆರೆಚಕ್ಕೆ (ಒಟ್ಟು ಉಪಕರಣ - ೩೬ ಶೇ. ೧೪.೬೩)

೩ ದುಂಡು ಹೆರೆಚಕ್ಕೆ (ಒಟ್ಟು ಉಪಕರಣ - ೩೦ ಶೇ. ೧೨.೧೯)

೪ ಒಳಬಾಗಿದ ಅಂಚಿನ ಹೆರೆಚಕ್ಕೆ (ಒಟ್ಟು ಉಪಕರಣ - ೧೩ ಶೇ. ೫.೨೮)

೫ ತುದಿ ಹೆರೆಚಕ್ಕೆ (ಒಟ್ಟು ಉಪಕರಣ - ೧೯ ಶೇ. ೭.೭೨)

ವಿವಿಧ ನೆಲೆಗಳಲ್ಲಿ ದೊರೆತಿರುವ ಹೆರೆಚಕ್ಕೆ ಉಪಕರಣಗಳ ಸಂಖ್ಯೆ ಶೇಕಡಾವಾರು ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೫.೬ ರಲ್ಲಿ ನೀಡಿದೆ. ಪ್ರತಿಯೊಂದು ಉಪಗುಂಪಿನ ಉಪಕರಣಗಳ ವಿಶ್ಲೇಷಣೆಯನ್ನು ಪ್ರತ್ಯೇಕವಾಗಿ ಮಾಡಿದೆ.

ಕೋಷ್ಟಕ ಸಂಖ್ಯೆ ೫.೬

| ಕ್ರಮ ಸಂಖ್ಯೆ | ನೆಲೆ | ಒಬ್ಬದಿ ಹೆರೆಚಕ್ಕೆ | ಇಬ್ಬದಿ ಹೆರೆಚಕ್ಕೆ | ದುಂಡು ಹೆರೆಚಕ್ಕೆ | | ಒಳಬಾಗಿದ ಅಂಚಿನ ಹೆರೆಚಕ್ಕೆ | ತುದಿ ಹೆರೆಚಕ್ಕೆ | ಒಟ್ಟು | | ಒಟ್ಟು | ಶೇ |
|---|---|---|---|---|---|---|---|---|---|---|---|
| | | | | ಉಂಡೆ | ಚಕ್ಕೆ | | | ಉಂಡೆ | ಚಕ್ಕೆ | | |
| ೧ | ಅಪ್ಪಾನ ಹಳ್ಳಿ | ೩ | ೨ | | ೧ | ೪ | ೫ | | ೧೫ | ೧೫ | ೧೧.೧೯ |
| ೨ | ಅವರ್ಗಲ್ಲು | ೧ | | | ೩ | | | | ೪ | ೪ | ೨.೯೮ |
| ೩ | ಅಂಕನಬಾವಿ | | | ೧ | | | | ೧ | | ೧ | ೦.೭೪ |
| ೪ | ಒಬಳಾಪುರ | ೧ | ೧ | ೧ | | | | ೧ | ೨ | ೩ | ೨.೨೩ |
| ೫ | ಕರಡಿ | ೧ | ೧ | | ೨ | | ೧ | | ೫ | ೫ | ೩.೭೩ |
| ೬ | ಕೈಮರ | ೨ | ೨ | | ೨ | ೧ | | | ೭ | ೭ | ೫.೨೨ |
| ೭ | ಗಳಿಗೆಕೆರೆ | ೧ | ೧ | | | | ೧ | | ೩ | ೩ | ೨.೨೩ |
| ೮ | ಗುಟ್ಟೆ | ೩ | ೨ | | | ೧ | ೧ | | ೭ | ೭ | ೫.೨೨ |
| ೯ | ದೊಡ್ಡಗುಣಿ | | ೭ | | ೪ | ೧ | | | ೧೨ | ೧೨ | ೮.೯೩ |
| ೧೦ | ನಿಡುಗಲ್ಲು | | ೩ | ೧ | | | | ೧ | ೩ | ೪ | ೨.೯೮ |
| ೧೧ | ಬೂದಿಗುಡ್ಡ | | | | | ೧ | ೨ | | ೩ | ೩ | ೨.೨೩ |
| ೧೨ | ಬೊಮ್ಮೇನಹಳ್ಳಿ | | | | | | | | | | |
| ೧೩ | ಮಾರಕಟ್ಟುಹಳ್ಳಿ | ೪ | ೩ | ೧ | ೨ | ೨ | | ೧ | ೧೧ | ೧೨ | ೮.೯೫ |
| ೧೪ | ಮಿಡಿಗೇಶಿ | ೧ | ೨ | | ೧ | | | | ೪ | ೪ | ೨.೯೮ |
| ೧೫ | ಮೂಗನಾಯಕನಕೋಟೆ | ೯ | ೫ | ೪ | ೨ | | ೬ | ೪ | ೨೨ | ೨೬ | ೧೯.೪೦ |
| ೧೬ | ಮಂಚಕಲ್‌ಕುಪ್ಪೆ | ೫ | ೨ | | ೧ | ೨ | ೧ | | ೧೧ | ೧೧ | ೮.೨೦ |
| ೧೭ | ಮಂಚಲ್ದೊರೆ | ೧ | | | | | | | ೧ | ೧ | ೦.೭೪ |
| ೧೮ | ಯಕ್ಕಲಕಟ್ಟೆ | ೨ | ೨ | | ೨ | | ೧ | | ೭ | ೭ | ೫.೨೨ |
| ೧೯ | ಯಲ್ಲಪ್ಪನಾಯಕನಹೊಸಕೋಟೆ | | | | | | | | | | |
| ೨೦ | ಶಿವಪುರ | ೧ | ೧ | ೧ | ೧ | | ೧ | ೧ | ೪ | ೫ | ೩.೭೩ |
| ೨೧ | ಹರೇನಹಳ್ಳಿ | | | | | | | | | | |
| ೨೨ | ಹೊನ್ನೇಮಾರನಹಳ್ಳಿ | ೧ | ೨ | | | ೧ | | | ೪ | ೪ | ೨.೯೮ |
| ಒಟ್ಟು | | ೩೬ | ೩೬ | ೯ | ೨೧ | ೧೩ | ೧೯ | ೯ | ೧೨೫ | ೧೩೪ | |
| ಶೇ | | ೨೬.೮೬ | ೨೬.೮೬ | ೨೨ | ೩೮ | ೯.೭೦ | ೧೪.೧೭ | ೬.೭೧ | ೯೩.೨೮ | | |

### ೩.೧ ಒಬ್ಬದಿ ಹೆರೆಚಕ್ಕೆ

ಒಂದೇ ಪಾರ್ಶ್ವದಲ್ಲಿ ಹೆರೆಯುವ ಅಂಚಿನ ಒಬ್ಬದಿ ಹೆರೆಚಕ್ಕೆ ಉಪಕರಣಗಳು ಒಟ್ಟು ೩೬ (ಶೇ. ೨೬.೮೬) ದೊರೆತಿವೆ. ಮಧ್ಯಮ ಗಾತ್ರದ ಚಕ್ಕೆಗಳ ಮೇಲೆ ರೂಪಿಸಿರುವ ಈ ಉಪಕರಣಗಳು ಜಾಸ್ಪರ್ ನಲ್ಲಿ ಒಂದು ಕ್ವಾರ್ಟ್ಸೈಟ್ ನಲ್ಲಿ ಆ ಇದ್ದರೆ ಇನ್ನುಳಿದವು ವಿವಿಧ ವರ್ಣಗಳ ಅದಿರುಯುಕ್ತ ಕ್ವಾರ್ಟ್ಸ್ ಶಿಲೆಗಳಲ್ಲಿವೆ. ಅನಿರ್ದಿಷ್ಟಾಕಾರದ ಉಪಕರಣಗಳೇ ಹೆಚ್ಚಿನ ಸಂಖ್ಯೆಯಲ್ಲಿದ್ದರೂ ಕೆಲವು ತ್ರಿಭುಜ, ಆಯತಾಕಾರ ಮತ್ತು ಅಂಡಾಕಾರದಲ್ಲಿವೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣ-ಗಳೂ ಒರಟಾದ ಪ್ರಾಥಮಿಕ ಚಕ್ಕೆಗಳಿಂದ ಮಾಡಲ್ಪಟ್ಟಿವೆ. ಆದಕಾರಣ ಕೆಲವೇ ಉಪಕರಣಗಳಲ್ಲಿ ಹಿಂಬದಿ ಚಪ್ಪಟೆಯಾಗಿದೆ. ಮುಂಬದಿಯಲ್ಲಿ ಯಾವುದೇ ನಿರ್ದಿಷ್ಟ ಚಕ್ಕೆ ಎಬ್ಬಿಸುವಿಕೆಯ ವಿಧಾನವನ್ನು ಅನುಸರಿಸದಿರುವುದರಿಂದ ಉಬ್ಬೇಣು ಮಧ್ಯ-ದಲ್ಲಿಲ್ಲದೆ ಮುಂಬದಿಯ ಬೇರೆ ಬೇರೆ ಭಾಗಗಳಲ್ಲಿದೆ. ಒಂದೆರಡು ಉಪಕರಣಗಳಲ್ಲಿ ಮಾತ್ರ ಉಬ್ಬೇಣು ಮಧ್ಯದಲ್ಲಿದ್ದು ಲಘುಕೋನದ ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜ, ಅಂಡಾಕಾರ ಮತ್ತು ವಿಷಮ ಬಾಹು ಚತುರ್ಭುಜಗಳು ಕಂಡು ಬರುತ್ತವೆ. ಕೆಲವು ಉಪಕರಣಗಳಲ್ಲಿ ಮಾತ್ರ ಹೊರಮೈ ಶಿಲಾ ತೊಗಟೆ ಕಂಡು ಬರುತ್ತದೆ. ಹೆಚ್ಚಿನ ಉಪಕರಣಗಳನ್ನು ದೀರ್ಘಾಕ್ಷದ ತುದಿಯಿಂದ ಎಬ್ಬಿಸಿದ ಚಕ್ಕೆಗಳಾಗಿದ್ದು ತಾಡನಾ ಶಂಖು ಬುಡದಲ್ಲಿದ್ದರೆ ಉಳಿದವುಗಳಲ್ಲಿ ಪಾರ್ಶ್ವಗಳಲ್ಲಿವೆ. ಗಾತ್ರದ ಅಳತೆಯನ್ನನುಸರಿಸಿ ಈ ಉಪಕರಣಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ಮೊದ-ಲನೆಯ ಗುಂಪಿಗೆ ೪೦ ರಿಂದ ೫೦ ಮಿ.ಮೀ. ನೊಳಗಿನ ಎತ್ತರದಳತೆಯ ಉಪಕರಣಗಳು(೧೬) ಎರಡನೆಯ ಗುಂಪಿಗೆ ೫೦ ರಿಂದ ೬೦ ಮಿ.ಮೀ. ಅಳತೆ ಉಪಕರಣಗಳು(೧೩) ಹಾಗೂ ೬೦ ರಿಂದ ೭೦ ಮಿ.ಮೀ. ಅಳತೆಯ ಉಪಕರಣ (೧೭)ಗಳನ್ನು ಮೂರನೆಯ ಗುಂಪಿಗೂ ಸೇರಿಸಬಹುದು.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೭ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೫.೭

| ಕ್ರಮ ಸಂಖ್ಯೆ | ನೆಲೆ | ಉದ್ದ | ಅಗಲ | ದಪ್ಪ |
|---|---|---|---|---|
| ೧ | ಮೂಗನಾಯಕನಕೋಟೆ | ೪೦ | ೩೫ | ೧೫ |
| ೨ | ಶಿವಪುರ | ೪೦ | ೪೦ | ೨೫ |
| ೩ | ಮಾರಶೆಟ್ಟಿಹಳ್ಳಿ | ೪೦ | ೩೦ | ೨೫ |
| ೪ | ಹೊನ್ನೇಮಾರನಹಳ್ಳಿ | ೪೦ | ೩೦ | ೨೦ |
| ೫ | ಮಂಚಕಲ್‌ಕುಪ್ಪೆ | ೪೫ | ೪೦ | ೨೦ |
| ೬ | ಗುಟ್ಟೆ | ೪೫ | ೪೦ | ೧೫ |
| ೭ | ಗುಟ್ಟೆ | ೪೫ | ೪೦ | ೧೦ |
| ೮ | ಕರಡಿ | ೫೦ | ೪೦ | ೩೫ |
| ೯ | ಮೂಗನಾಯಕನಕೋಟೆ | ೫೦ | ೫೦ | ೨೦ |
| ೧೦ | ಮಾರಶೆಟ್ಟಿಹಳ್ಳಿ | ೫೦ | ೪೫ | ೨೦ |
| ೧೧ | ಯಕ್ಕಲಕಟ್ಟೆ | ೫೦ | ೪೦ | ೨೦ |
| ೧೨ | ಮಾರಶೆಟ್ಟಿಹಳ್ಳಿ | ೫೦ | ೪೩ | ೨೦ |
| ೧೩ | ಮೂಗನಾಯಕನಕೋಟೆ | ೫೦ | ೪೫ | ೨೫ |
| ೧೪ | ಮೂಗನಾಯಕನಕೋಟೆ | ೫೦ | ೪೫ | ೨೦ |
| ೧೫ | ಮೂಗನಾಯಕನಕೋಟೆ | ೫೦ | ೪೦ | ೨೫ |
| ೧೬ | ಕೈಮರ | ೫೦ | ೪೫ | ೨೫ |
| ೧೭ | ಮಾರಶೆಟ್ಟಿಹಳ್ಳಿ | ೫೫ | ೪೦ | ೨೮ |
| ೧೮ | ಗುಟ್ಟೆ | ೫೫ | ೪೫ | ೨೮ |
| ೧೯ | ಮಂಚಕಲ್‌ಕುಪ್ಪೆ | ೫೫ | ೪೮ | ೩೦ |
| ೨೦ | ಮಂಚಕಲ್‌ಕುಪ್ಪೆ | ೬೦ | ೫೦ | ೧೫ |
| ೨೧ | ಮಂಚಕಲ್‌ಕುಪ್ಪೆ | ೬೦ | ೬೦ | ೨೫ |
| ೨೨ | ಕೈಮರ | ೬೦ | ೪೦ | ೨೦ |
| ೨೩ | ಅಪ್ಪಾನಹಳ್ಳಿ | ೬೦ | ೫೦ | ೨೦ |
| ೨೪ | ಅವರಗಲ್ಲು | ೬೦ | ೪೫ | ೨೫ |
| ೨೫ | ಗಳಿಗೆಕೆರೆ | ೬೦ | ೫೦ | ೨೮ |
| ೨೬ | ಮಂಚಕಲ್‌ಕುಪ್ಪೆ | ೬೦ | ೫೦ | ೧೫ |
| ೨೭ | ಅಪ್ಪಾನಹಳ್ಳಿ | ೬೦ | ೫೦ | ೨೫ |
| ೨೮ | ಮಿಡಿಗೇಶಿ | ೬೦ | ೪೫ | ೨೫ |
| ೨೯ | ಓಬಳಾಪುರ | ೬೦ | ೫೦ | ೩೦ |
| ೩೦ | ಮೂಗನಾಯಕನಕೋಟೆ | ೬೫ | ೪೫ | ೧೫ |
| ೩೧ | ಯಕ್ಕಲಕಟ್ಟೆ | ೬೫ | ೫೦ | ೨೫ |
| ೩೨ | ಮಂಚಲ್ದೊರೆ | ೬೫ | ೫೦ | ೨೫ |
| ೩೩ | ಮಂಚಕಲ್‌ಕುಪ್ಪೆ | ೬೫ | ೫೦ | ೨೦ |
| ೩೪ | ಮೂಗನಾಯಕನಕೋಟೆ | ೬೫ | ೫೫ | ೩೦ |
| ೩೫ | ಅಪ್ಪಾನಹಳ್ಳಿ | ೬೫ | ೫೫ | ೨೫ |
| ೩೬ | ಮೂಗನಾಯಕನಕೋಟೆ | ೬೫ | ೫೦ | ೨೫ |

ಒಟ್ಟು ಉಪಕರಣಗಳ ಅಳತೆ ಪ್ರಮಾಣದಂತೆ ಉದ್ದ ಕನಿಷ್ಠ ೪೦ ಗರಿಷ್ಠ ೬೫, ಅಗಲ ಕನಿಷ್ಠ ೩೦ ಗರಿಷ್ಠ ೬೦ ಹಾಗೂ ದಪ್ಪ ಕನಿಷ್ಠ ೧೫, ಗರಿಷ್ಠ ೩೦ ಮಿ.ಮೀ. ಗಳಾಗಿವೆ.

### ೩.೨ ಇಬ್ಬದಿ ಹೆರೆಚಕ್ಕೆ

ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗನ್ನು ಹೊಂದಿರುವ ೩೬ (ಶೀ. ೨೬. ೮೬) ಇಬ್ಬದಿ ಹೆರೆಚಕ್ಕೆಗಳು ದೊರೆತಿವೆ. ಅವುಗಳಲ್ಲಿ ಮೂರು ಜಾಸ್ಪರ್, ಮೂರು ಡೈಕ್, ಎಂಟು ಕ್ವಾರ್ಟ್ಸೈಟ್ ಮತ್ತು ಇಪ್ಪತ್ತೆರಡು ಕ್ವಾರ್ಟ್ಸ್ ಶಿಲೆಗಳಲ್ಲಿವೆ. ಆಕಾರದಲ್ಲಿ ತ್ರಿಭುಜ, ಆಯತ ಮತ್ತು ಅಂಡಾಕಾರಗಳು ಕಂಡು ಬಂದರೂ ಹೆಚ್ಚಿನ ಉಪಕರಣಗಳು ಯಾವುದೇ ನಿರ್ದಿಷ್ಟ ಆಕಾರವನ್ನು ಹೊಂದಿಲ್ಲ. ಕೆಲವು ಉಪಕರಣಗಳು ತೀರಾ ತೆಳ್ಳಗಿದ್ದು ನಿಯಮಿತ ಬಲಪ್ರಯೋಗದಿಂದ ಚಕ್ಕೆ ತೆಗೆದಿರುವುದು ಕಂಡು ಬರುತ್ತದೆ. ಈ ಕಾರಣದಿಂದ ಇಂತಹ ಚಕ್ಕೆಗಳ ಹಿಂಬದಿ ಹೆಚ್ಚು ಸಮತಲವಾಗಿವೆ. ದಪ್ಪ ಚಕ್ಕೆ ಉಪಕರಣಗಳಲ್ಲಿ ಹಿಂಬದಿ ಹೆಚ್ಚು ಸಮತಲವಾಗಿದೆ. ದಪ್ಪ ಚಕ್ಕೆಗಳಲ್ಲಿ ಮಧ್ಯದ ಉಬ್ಬೇಣು ಪ್ರಮುಖವಾಗಿದ್ದು ಅಂಚಿನತ್ತ ಚಕ್ಕೆ ಎಬ್ಬಿಸಿರುವುದು ಕಾಣುತ್ತದೆ. ಕೆಲವೊಂದು ಉಪಕರಣಗಳಲ್ಲಿ ಉಬ್ಬೇಣನ್ನು ಚಕ್ಕೆ ಎಬ್ಬಿಸಿ ತೆಗೆಯಲಾಗಿದ್ದು ಹಿಡಿಯಲು ಅನುಕೂಲವಾಗುವಂತೆ ತಗ್ಗು ಮೂಡಿಸಿದೆ. ತ್ರಿಭುಜಾಕೃತಿಯ ಒಂದೆರಡು ಉಪಕರಣಗಳಲ್ಲಿ ಮೂರೂ ಭುಜಗಳನ್ನು ಹರಿತ ಗೊಳಿಸಿದೆ. ಹೆಚ್ಚಿನ ಉಪಕರಣಗಳಲ್ಲಿ ದೀರ್ಘಾಕ್ಷದ ತುದಿಯಲ್ಲಿ ಚಕ್ಕೆ ಎಬ್ಬಿಸಿರುವುದರಿಂದ ತಾಡನಾ ಶಂಖು ಬುಡದಲ್ಲಿದ್ದರೆ ಒಂದೆರಡು ಉಪ-ಕರಣಗಳಲ್ಲಿ ಪಾರ್ಶ್ವಗಳಲ್ಲಿವೆ.

ಅಳತೆಯ ಪ್ರಮಾಣದ ಆಧಾರಗಳ ಮೇಲೆ ಈ ಉಪಕರಣಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬ-ಹುದು. ಮೊದಲನೆಯ ಗುಂಪಿನ ಉಪಕರಣಗಳು ಎತ್ತರದಲ್ಲಿ ೪೦ ರಿಂದ ೫೦ ಮಿ.ಮೀ. (೧೪), ಎರಡನೇ ಗುಂಪಿನ ಉಪಕರಣಗಳು ೫೦ ರಿಂದ ೭೦ ಮಿ.ಮೀ. (೨೦) ಹಾಗೂ ಮೂರನೇ ಗುಂಪಿನ ಉಪಕರಣಗಳು ೭೦ ರಿಂದ ೯೦ ಮಿ.ಮೀ. (೨) ನಲ್ಲಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೮ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೫.೮

| ಕ್ರಮ ಸಂಖ್ಯೆ | ನೆಲೆ | ಉದ್ದ | ಅಗಲ | ದಪ್ಪ |
|---|---|---|---|---|
| ೧ | ದೊಡ್ಡಗುಣಿ | ೪೫ | ೪೫ | ೧೫ |
| ೨ | ದೊಡ್ಡಗುಣಿ | ೪೫ | ೨೮ | ೧೦ |
| ೩ | ಗಳಿಗೆರೆ | ೪೫ | ೪೦ | ೧೦ |
| ೪ | ಅಪ್ಪಾನಹಳ್ಳಿ | ೪೫ | ೪೫ | ೨೦ |
| ೫ | ಗುಳ್ಳೆ | ೪೫ | ೪೫ | ೨೦ |
| ೬ | ನಿಡುಗಲ್ಲು | ೪೫ | ೪೦ | ೧೫ |
| ೭ | ಯಕ್ಕಲಕಟ್ಟೆ | ೪೫ | ೪೦ | ೨೫ |
| ೮ | ದೊಡ್ಡಗುಣಿ | ೪೫ | ೪೦ | ೧೦ |
| ೯ | ದೊಡ್ಡಗುಣಿ | ೫೦ | ೪೦ | ೧೦ |
| ೧೦ | ಮೂಗನಾಯಕನಕೋಟೆ | ೫೦ | ೪೦ | ೨೫ |
| ೧೧ | ಯಕ್ಕಲಕಟ್ಟೆ | ೫೦ | ೪೦ | ೨೦ |
| ೧೨ | ಓಬಳಾಪುರ | ೫೦ | ೪೫ | ೨೫ |
| ೧೩ | ಕೈಮರ | ೫೫ | ೪೫ | ೨೫ |
| ೧೪ | ಮೂಗನಾಯಕನಕೋಟೆ | ೫೫ | ೫೦ | ೩೦ |
| ೧೫ | ದೊಡ್ಡಗುಣಿ | ೬೦ | ೪೫ | ೨೦ |
| ೧೬ | ಹೊನ್ನೇಮಾರನಹಳ್ಳಿ | ೬೦ | ೫೦ | ೨೦ |
| ೧೭ | ಮಂಚಕಲ್‌ಕುಪ್ಪೆ | ೬೦ | ೫೦ | ೧೫ |
| ೧೮ | ದೊಡ್ಡಗುಣಿ | ೬೦ | ೫೦ | ೧೫ |
| ೧೯ | ಹೊನ್ನೇಮಾರನಹಳ್ಳಿ | ೬೦ | ೫೦ | ೨೦ |
| ೨೦ | ಮಾರಬ್ಬಿಹಳ್ಳಿ | ೬೦ | ೫೫ | ೨೫ |
| ೨೧ | ನಿಡುಗಲ್ಲು | ೬೦ | ೫೦ | ೧೫ |
| ೨೨ | ಕೈಮರ | ೬೦ | ೫೫ | ೧೫ |
| ೨೩ | ಮಾರಬ್ಬಿಹಳ್ಳಿ | ೬೦ | ೫೫ | ೨೦ |
| ೨೪ | ಅಪ್ಪಾನಹಳ್ಳಿ | ೬೦ | ೬೦ | ೨೦ |
| ೨೫ | ಶಿವಪುರ | ೬೦ | ೫೦ | ೨೦ |
| ೨೬ | ನಿಡುಗಲ್ಲು | ೬೦ | ೫೦ | ೩೦ |
| ೨೭ | ಮೂಗನಾಯಕನಕೋಟೆ | ೬೫ | ೫೦ | ೧೫ |
| ೨೮ | ಮಾರಬ್ಬಿಹಳ್ಳಿ | ೬೮ | ೬೦ | ೧೫ |
| ೨೯ | ಮೂಗನಾಯಕನಕೋಟೆ | ೭೦ | ೭೦ | ೨೦ |
| ೩೦ | ಕರಡಿ | ೭೦ | ೬೦ | ೧೮ |
| ೩೧ | ಗುಳ್ಳೆ | ೭೦ | ೫೦ | ೨೦ |
| ೩೨ | ಮಿಡಿಗೇಶಿ | ೭೦ | ೬೫ | ೨೦ |
| ೩೩ | ಮಿಡಿಗೇಶಿ | ೭೦ | ೬೫ | ೨೦ |
| ೩೪ | ಮಂಚಕಲ್‌ಕುಪ್ಪೆ | ೮೫ | ೫೫ | ೨೦ |
| ೩೫ | ದೊಡ್ಡಗುಣಿ | ೮೫ | ೫೫ | ೨೦ |
| ೩೬ | ಮೂಗನಾಯಕನಕೋಟೆ | ೯೦ | ೬೦ | ೨೦ |

ಒಟ್ಟು ಉಪಕರಣಗಳ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೪೫ ಗರಿಷ್ಠ ೯೦, ಅಗಲ ಕನಿಷ್ಠ ೨೮, ಗರಿಷ್ಠ ೭೦ ಮತ್ತು ದಪ್ಪ ಕನಿಷ್ಠ ೧೦ ಗರಿಷ್ಠ ೩೦ ಮಿ.ಮೀ. ಆಗಿವೆ.

**೩.೩ ದುಂಡು ಹೆರೆಚಕ್ಕೆ**

ಹೆರೆಚಕ್ಕೆ ಗುಂಪಿನಲ್ಲಿ ಈ ಉಪಕರಣಗಳು ಒಟ್ಟು ೩೦ (ಶೇ. ೨೨.೩೦) ಇವೆ. ಇವುಗಳಲ್ಲಿ ೯ ಮೂಲ ಗಟ್ಟಿ-ಯಲ್ಲಿ ರೂಪಿಸಿದ್ದು, ಉಳಿದವನ್ನು ತೆಳ್ಳನೆಯ ಚಕ್ಕೆಯಲ್ಲಿ ರೂಪಿಸಿದೆ.

ಮೂಲಗಟ್ಟಿ ದುಂಡು ಹೆರೆಚಕ್ಕೆ : ಈ ಗುಂಪಿನ ೯ ಉಪಕರಣ (ಶೇ. ೩೦) ಗಳಿವೆ. ಇತರ ಚಕ್ಕೆ ಉಪಕರಣಗಳನ್ನು ತಯಾ-ರಿಸಲು ಚಕ್ಕೆಗಳನ್ನೆಬ್ಬಿಸಿ ಮೂಲಗಟ್ಟಿಗಳಲ್ಲಿ ಹರಿತವಾದ ಅಂಚುಳ್ಳ ಪರಿಧಿಯನ್ನು ಹೊಂದಿರುವ ಮೂಲಗಟ್ಟಿಗಳನ್ನು ಸ್ವಲ್ಪ ಮಟ್ಟಿಗೆ ಚಕ್ಕೆ ತೆಗೆದು ಈ ಉಪಕರಣಗಳನ್ನು ಮಾಡಿದೆ. ಆಮೆಯಾಕಾರದ ಮೂಲಗಟ್ಟಿಯನ್ನು ತಯಾರಿಸಿಕೊಂಡು ಅದ-ರಿಂದ ಚಂದ್ರಾಕೃತಿಯ ಉಪಕರಣಗಳ ತಯಾರಿಕೆಗೆ ಚಕ್ಕೆಗಳನ್ನೆಬ್ಬಿಸಿ ಉಳಿದ ಮೂಲಗಟ್ಟಿಯ ಭಾಗಗಳಿಂದಲೂ ಈ ಉಪಕ-

ರಣವನ್ನು ರೂಪಿಸಿರುವುದು ಕಾಣುತ್ತದೆ. ಆ ಕಾರಣದಿಂದಲೇ ಕೆಲವು ಉಪಕರಣಗಳಲ್ಲಿ ಮೂಲ ಶಿಲಾ ತೊಗಟೆಯ ಭಾಗಗಳು ಉಳಿದಿವೆ. ಹಿಂಬದಿಯಲ್ಲಿ ಹೆಚ್ಚು ಕಡಿಮೆ ಸಮತಲವಿದ್ದು ಸ್ವಲ್ಪ ಮಟ್ಟಿಗೆ ತಾಡನ ಶಂಖು ಮತ್ತು ಉಬ್ಬುಗಳು ಉಳಿದಿವೆ. ಕೆಲವು ಉಪಕರಣಗಳಲ್ಲಿ ತಾಡನ ಶಂಖುವನ್ನು ತೆಗೆಯಲಾಗಿದ್ದು ಹಿಡಿತಕ್ಕೆ ಸಿಗುವಂತೆ ಮಾಡಿಕೊಳ್ಳಲಾಗಿದೆ. ಕೆಲವು ಉಪಕರಣಗಳ ಒಂದು ತುದಿಯಲ್ಲಿ ಮೊದಲೇ ತಯಾರಿಸಿದ ತಾಡನ ವೇದಿಕೆಯೂ ಕಾಣುತ್ತದೆ. ಎರಡು ಉಪಕರಣಗಳನ್ನು ಕಂದು ಮತ್ತು ಹಸಿರು ಬಣ್ಣದ ಜಾಸ್ಪರ್ ನಲ್ಲಿ, ಮೂರನ್ನು ಹಾಲುಗಲ್ಲು ಮತ್ತು ಉಳಿದವನ್ನು ಕ್ವಾರ್ಟ್ಸೈಟ್‌ನಲ್ಲಿ ಮಾಡಿದೆ.

ಒಟ್ಟು ಉಪಕರಣಗಳ ಪ್ರಮಾಣವನ್ನನುಸರಿಸಿ ಎರಡು ಗುಂಪುಗಳನ್ನಾಗಿ ಮಾಡಬಹುದು. ಮೊದಲನೆಯ ಗುಂಪಿನವು ೪೫ರಿಂದ ೫೦ ಮಿ.ಮೀ. ವ್ಯಾಸ ಹೊಂದಿದ್ದರೆ ಎರಡನೇ ಗುಂಪಿನವು ೬೦ ರಿಂದ ೭೦ ಮಿ.ಮೀ. ವ್ಯಾಸ ಹೊಂದಿವೆ. ಇವುಗಳ ದಪ್ಪ ೨೫ ರಿಂದ ೩೦ ಮಿ.ಮೀ. ಗಳಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೯ಎ ರಲ್ಲಿ ನೀಡಿದೆ.

ಚಕ್ಕೆ ದುಂಡು ಹೆರೆಚಕ್ಕೆ : ಈ ಗುಂಪಿನ ೨೧ ಉಪಕರಣ (ಶೇ. ೭೦) ದೊರೆತಿದ್ದು ಅವುಗಳಲ್ಲಿ ಮೂರು ಜಾಸ್ಪರ್, ಒಂದು ಡೈಕ್, ನಾಲ್ಕು ಕ್ವಾರ್ಟ್ಸ್‌ಟ್ ಮತ್ತು ಉಳಿದವು ವಿವಿಧ ಬಣ್ಣಗಳ ಕ್ವಾರ್ಟ್ಸ್ ಶಿಲೆಯಲ್ಲಿವೆ. ತೆಳ್ಳನೆಯ ಚಕ್ಕೆಗಳಲ್ಲಿ ಮಧ್ಯದಿಂದ ಸುತ್ತಲೂ ಚಕ್ಕೆ ತೆಗೆದು ಈ ಉಪಕರಣವನ್ನು ರೂಪಿಸಿದೆ. ಹೆಚ್ಚಿನವು ಹೆಚ್ಚು ಕಡಿಮೆ ದುಂಡಾಗಿದ್ದರೂ ಒಂದೆರಡು ಉಪಕರಣಗಳು ಆಯತಾಕಾರ ಮತ್ತು ಅಂಡಾಕಾರದಲ್ಲಿವೆ. ಹೆಚ್ಚಿನ ಉಪಕರಣಗಳ ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಕೆಲವು ಉಪಕರಣಗಳಲ್ಲಿ ತಾಡನ ಶಂಖುವನ್ನು ತೆಗೆದು ಸಮತಲಗೊಳಿಸಿದೆ. ಆಮೆಯಾಕಾರದ ಮೂಲಗಟ್ಟಿಯಿಂದ ಎಬ್ಬಿಸಿದ ಚಕ್ಕೆಗಳ ಮುಂಬದಿಯು ಹೆಚ್ಚು ಕಡಿಮೆ ಸಮತಲವಾಗಿದ್ದು ಒಂದೆರಡು ಉಪಕರಣಗಳಲ್ಲಿ ಮಧ್ಯದ ಉಬ್ಬೇಣು ಎದ್ದು ಕಾಣುತ್ತದೆ. ಕೆಲವು ಉಪಕರಣಗಳಲ್ಲಿ ಮೂಲಶಿಲಾ ತೊಗಟೆ ಅಲ್ಲಲ್ಲಿ ಕಂಡು ಬರುತ್ತದೆ. ಅರ್ಧಕ್ಕೂ ಹೆಚ್ಚು ಸಂಖ್ಯೆಯ ಉಪಕರಣಗಳ ಅಂಚಿನ ಒಂದು ಭಾಗ ಸ್ವಲ್ಪ ದಪ್ಪವಾಗಿದ್ದು ಅಲ್ಲಿ ತಾಡನ ವೇದಿಕೆಯನ್ನು ಕಾಣಬಹುದು. ಹೆಚ್ಚಿನ ಉಪಕರಣಗಳು ಸವೆತಕ್ಕೊಳಗಾಗಿವೆ.

ಒಟ್ಟು ಉಪಕರಣಗಳ ಪ್ರಮಾಣದಂತೆ ಇವುಗಳನ್ನು ಎರಡು ಗುಂಪುಗಳಾಗಿ ವಿಭಾಗಿಸಬಹುದು. ೪೦ ರಿಂದ ೫೦ ಮಿ.ಮೀ. ವ್ಯಾಸ ಉಳ್ಳ ೬ ಉಪಕರಣಗಳು ಮೊದಲನೇ ಗುಂಪಿಗೂ, ೫೦ ರಿಂದ ೬೦ ಮಿ.ಮೀ. ವ್ಯಾಸ ಉಳ್ಳ ೧೫ ಉಪಕರಣಗಳು ಎರಡನೇ ಗುಂಪಿಗೂ ಸೇರುತ್ತವೆ. ಹಾಗೂ ಇವುಗಳ ದಪ್ಪವು ೧೦ ರಿಂದ ೨೫ ಮಿ.ಮೀ. ಆಗಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೯ಎ ಮತ್ತು ೫.೯ಬಿ ರಲ್ಲಿ ನೀಡಿದೆ.

### ಮೂಲಗಟ್ಟಿ /ದುಂಡು ಹೆರೆಚಕ್ಕೆ

**ಕೋಷ್ಟಕ ಸಂಖ್ಯೆ ೫.೯ಎ**

| ಕ್ರಮ ಸಂಖ್ಯೆ | ನೆಲೆ | ವ್ಯಾಸ ಮಿ.ಮೀ | ದಪ್ಪ ಮಿ.ಮೀ |
|---|---|---|---|
| ೧ | ಕೈಮರ | ೪೦ | ೧೦ |
| ೨ | ಕರಡಿ | ೪೦ | ೧೫ |
| ೩ | ಮೂಗನಾಯಕನಕೋಟೆ | ೪೫ | ೨೦ |
| ೪ | ಯಕ್ಕಲಕಟ್ಟೆ | ೪೫ | ೫೦ |
| ೫ | ಮೂಗನಾಯಕನಕೋಟೆ | ೪೫ | ೫೦ |
| ೬ | ದೊಡ್ಡಗುಣಿ | ೪೫ | ೫೦ |
| ೭ | ದೊಡ್ಡಗುಣಿ | ೧೫ | ೧೫ |
| ೮ | ದೊಡ್ಡಗುಣಿ | ೧೫ | ೨೦ |
| ೯ | ದೊಡ್ಡಗುಣಿ | ೧೫ | ೧೫ |
| ೧೦ | ಮಂಚಕಲ್‌ಕುಪ್ಪೆ | ೫೦ | ೨೦ |
| ೧೧ | ಕರಡಿ | ೫೫ | ೨೦ |
| ೧೨ | ಅಪ್ಪಾನಹಳ್ಳಿ | ೫೫ | ೧೦ |
| ೧೩ | ಮಾರಶೆಟ್ಟಹಳ್ಳಿ | ೫೫ | ೨೦ |
| ೧೪ | ಶಿವಪುರ | ೫೫ | ೨೦ |
| ೧೫ | ಅವರ್ಗಲ್ಲು | ೫೫ | ೨೦ |
| ೧೬ | ಮಾರಶೆಟ್ಟಹಳ್ಳಿ | ೫೮ | ೧೫ |
| ೧೭ | ಅವರ್ಗಲ್ಲು | ೫೮ | ೨೦ |
| ೧೮ | ಮಿಡಿಗೇಶಿ | ೬೦ | ೧೫ |
| ೧೯ | ಯಕ್ಕಲಕಟ್ಟೆ | ೬೦ | ೨೫ |
| ೨೦ | ಅವರ್ಗಲ್ಲು | ೬೦ | ೨೦ |
| ೨೧ | ಕೈಮರ | ೬೦ | ೨೦ |

### ಚಕ್ಕೆ ದುಂಡು ಹೆರೆಚಕ್ಕೆ

**ಕೋಷ್ಟಕ ಸಂಖ್ಯೆ ೫.೯ಬಿ**

| ಕ್ರಮ ಸಂಖ್ಯೆ | ನೆಲೆ | ವ್ಯಾಸ ಮಿ.ಮೀ. | ದಪ್ಪ ಮಿ.ಮೀ. |
|---|---|---|---|
| ೧. | ಬೂದಿಗುಡ್ಡ | ೪೫ | ೨೦ |
| ೨. | ಶಿವಪುರ | ೪೫ | ೨೦ |
| ೩. | ಮೂಗನಾಯಕನಕೋಟೆ | ೪೫ | ೨೫ |
| ೪. | ಒಬಳಾಪುರ | ೫೦ | ೨೫ |
| ೫. | ಮೂಗನಾಯಕನಕೋಟೆ | ೫೦ | ೨೮ |
| ೬. | ಮಾರಶೆಟ್ಟಹಳ್ಳಿ | ೫೦ | ೨೫ |
| ೭. | ಮೂಗನಾಯಕನಕೋಟೆ | ೬೦ | ೨೫ |
| ೮. | ಅವರ್ಗಲ್ಲು | ೬೦ | ೩೦ |
| ೯. | ಮೂಗನಾಯಕನಕೋಟೆ | ೭೦ | ೨೫ |

**೩.೪ ಒಳಬಾಗಿದ ಅಂಚಿನ ಹೆರೆಚಕ್ಕೆ**

ಪಾರ್ಶ್ವ ಹೆರೆಚಕ್ಕೆಗಳ ಗುಂಪಿಗೆ ಸೇರುವ ಒಳಬಾಗಿದ ಅಂಚಿನ ಹೆರೆಚಕ್ಕೆಗಳು ಒಟ್ಟು ೧೩ (ಶೇ. ೯.೭೦) ದೊರೆತಿವೆ. ಇವುಗಳ ವಿಶೇಷವೆಂದರೆ ಹರಿತ ಅಲಗಿರುವ ಒಂದು ಅಥವಾ ಎರಡೂ ಅಂಚುಗಳು ಕೋನದಲ್ಲಿ ಇಲ್ಲವೇ ವಕ್ರ ರೇಖೆಯಲ್ಲಿ ಒಳಬಾಗಿರುತ್ತವೆ. ಸಾಧಾರಣವಾಗಿ ಈ ಉಪಕರಣಗಳನ್ನು ಮರದ ರೆಂಬೆಯ ತೊಗಟೆ ಅಥವಾ ಮೂಳೆಗಳನ್ನು ಹೆರೆಯಲು ಉಪಯೋಗಿಸಲಾಗುತ್ತದೆ. ದೊರೆತಿರುವ ಉಪಕರಣಗಳಲ್ಲಿ ಅದಿರುಯುಕ್ತ ಜಾಸ್ಪರ್ ಒಂದು, ಜಾಸ್ಪರ್ ಒಂದು ಮತ್ತು ಉಳಿದವು ವಿವಿಧ ಬಣ್ಣಗಳ ಕ್ವಾರ್ಟ್ಸ್ ಶಿಲೆಯಲ್ಲಿವೆ.

ಮಧ್ಯಮ ಮತ್ತು ಕಿರುಗಾತ್ರದ ಚಕ್ಕೆಗಳ ಒಂದು ಅಥವಾ ಎರಡು ಅಂಚುಗಳಲ್ಲಿ ಹರಿತವಾದ ಮತ್ತು ಒಳ-ಬಾಗಿದ ಕಚ್ಚುಗಳನ್ನುಂಟುಮಾಡಿ ಈ ಉಪಕರಣಗಳನ್ನು ರೂಪಿಸಿದೆ. ಕಾರ್ಯ ನಿರ್ವಹಿಸುವ ಅಲಗಿರುವ ಅಂಚು ನಿಮ್ನವಾ-ಗಿದ್ದು ಉಳಿದ ಅಂಚುಗಳು ಸರಳರೇಖೆಯಲ್ಲಿರುತ್ತವೆ. ಆಕಾರದಲ್ಲಿ ಇವು ಸಮಾನಾಂತರ ಪಾರ್ಶ್ವಗಳಿರುವ ಆಯತಾಕಾರದ ನೀಳಚಕ್ಕೆ, ಅರ್ಧ ಚಂದ್ರಾಕೃತಿಯವರೆಗೆ ವಿವಿಧ ಆಕಾರಗಳಲ್ಲಿವೆ. ಹೆಚ್ಚಿನ ಉಪಕರಣಗಳಲ್ಲಿ ಹಿಂಬದಿ ಸಮತಲ ಇಲ್ಲವೆ ತಾಡನ ಉಬ್ಬಿನಿಂದಾಗಿ ಸ್ವಲ್ಪ ಪೀನವಾಗಿದ್ದರೆ ಇನ್ನೂ ಕೆಲವು ಉಪಕರಣಗಳಲ್ಲಿ ಟೊಳ್ಳಾಗಿದೆ. ಮುಂಬದಿಯಲ್ಲಿ ಪ್ರಮುಖ-ವಾದ ಉಬ್ಬೇಣು ಮತ್ತು ಉಬ್ಬೇಣನ್ನು ತೆಗೆದಿರುವ ಚಕ್ಕೆ ಕಲೆಗಳು ಕಾಣುತ್ತವೆ. ಒಂದೆರಡು ಉಪಕರಣಗಳಲ್ಲಿ ಮೂಲಶಿಲಾ ತೊಗಟೆಯ ಅಂಶ ಉಳಿದಿದೆ. ಈ ಉಪಕರಣಗಳಲ್ಲಿ ಒಂದೆರಡು ಅಂತ್ಯ ಹಳೆಶಿಲಾಯುಗ ಮತ್ತು ನಂತರದ ಸಂಸ್ಕೃತಿಗಳ-ಲ್ಲಿನ ವಿಶಿಷ್ಟ ಉಪಕರಣಗಳಾದ ಅರ್ಧ ಚಂದ್ರಾಕೃತಿ ಮತ್ತು ಕೈಚಾಕು ನೀಳಚಕ್ಕೆ (Pen Knife) ಗಳ ಸಾದೃಶ್ಯವನ್ನು ಪಡೆ-ದಿರುವುದು ಗಮನಾರ್ಹ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೦ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೫.೧೦**

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧ | ಅಪ್ಪಾನಹಳ್ಳಿ | ೩೫ | ೨೫ | ೧೫ |
| ೨ | ದೊಡ್ಡಗುಣಿ | ೩೮ | ೨೫ | ೨೦ |
| ೩ | ಬೂದಿಗುಡ್ಡ | ೪೫ | ೨೫ | ೧೫ |
| ೪ | ಅಪ್ಪಾನಹಳ್ಳಿ | ೪೫ | ೩೫ | ೧೫ |
| ೫ | ಹೊನ್ನೇಮಾರನಹಳ್ಳಿ | ೫೦ | ೩೫ | ೨೦ |
| ೬ | ಮಂಚಕಲ್‌ಕುಪ್ಪೆ | ೫೦ | ೫೦ | ೨೦ |
| ೭ | ಅಪ್ಪಾನಹಳ್ಳಿ | ೫೦ | ೩೫ | ೧೫ |
| ೮ | ಮಾರಶೆಟ್ಟಿಹಳ್ಳಿ | ೫೦ | ೫೫ | ೧೦ |
| ೯ | ಅಪ್ಪಾನಹಳ್ಳಿ | ೫೦ | ೩೫ | ೨೦ |
| ೧೦ | ಮಾರಶೆಟ್ಟಿಹಳ್ಳಿ | ೫೫ | ೩೫ | ೨೫ |
| ೧೧ | ಮಂಚಕಲ್‌ಕುಪ್ಪೆ | ೫೫ | ೪೫ | ೨೦ |
| ೧೨ | ಕೈಮರ | ೮೦ | ೪೫ | ೨೫ |
| ೧೩ | ಗುಟ್ಟೆ | ೮೫ | ೫೦ | ೩೫ |

**೩.೫ ತುದಿ ಹೆರೆಚಕ್ಕೆ**

ಈ ಗುಂಪಿಗೆ ಸೇರುವ ೧೯ ಉಪಕರಣ (ಶೀ. ೧೪.೧೬) ಇದ್ದು, ಅವುಗಳಲ್ಲಿ ಜಾಸ್ಪರ್ ನ ಒಂದು, ಕ್ವಾರ್ಟ್ಸೈಟ್ ನ ಒಂದು ಹಾಗೂ ಉಳಿದವು ವಿವಿಧ ಬಣ್ಣಗಳ ಕ್ವಾರ್ಟ್ಸ್ ಶಿಲೆಯಲ್ಲಿವೆ. ಸಣ್ಣ ಮತ್ತು ಮಧ್ಯಮ ಗಾತ್ರದ ಚಕ್ಕೆಗಳ ಒಂದು ತುದಿಯಲ್ಲಿ ಅಂಚಿನತ್ತ ಚಕ್ಕೆ ಎಬ್ಬಿಸಿ ಹರಿತ ಅಲಗನ್ನು ರೂಪಿಸಿದೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳ ಹಿಂಬದಿ ಸಮತಲ ಅಥವಾ ನಿಮ್ನ ರೀತಿಯದು. ಮುಂಬದಿಯಲ್ಲಿ ಒಂದೆರಡು ಉಪಕರಣಗಳಲ್ಲಿ ಎತ್ತರದ ಉಬ್ಬೇಣು ಮತ್ತು ಉಬ್ಬೇ-ಣನ್ನು ತೆಗೆದು ಹಾಕಿರುವ ಚಕ್ಕೆ ಕಲೆಗಳು ಕಂಡು ಬರುತ್ತವೆ. ಒಂದೆರಡು ಉಪಕರಣಗಳ ಬುಡದಲ್ಲಿ ಮತ್ತು ಮುಂಬದಿಯಲ್ಲಿ

ಮೂಲ ಶಿಲಾ ತೊಗಟೆ ಉಳಿದಿದೆ. ಇವು ವಿಷಮ ತ್ರಿಭುಜ, ಆಯತ, ವೃತ್ತ ಮತ್ತು ಇತರ ಜ್ಯಾಮಿತೀಯವಲ್ಲದ ಆಕಾರಗಳನ್ನು ಹೊಂದಿವೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೧ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೫.೧೧

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧ | ಮೂಗನಾಯಕನಕೋಟೆ | ೪೦ | ೪೦ | ೨೫ |
| ೨ | ಬೂದಿಗುಡ್ಡ | ೪೦ | ೩೫ | ೧೫ |
| ೩ | ಅಪ್ಪಾನಹಳ್ಳಿ | ೪೫ | ೩೩ | ೧೦ |
| ೪ | ಗಳಿಗೆಕೆರೆ | ೪೫ | ೪೦ | ೧೮ |
| ೫ | ಕರಡಿ | ೪೫ | ೩೫ | ೨೦ |
| ೬ | ಅಪ್ಪಾನಹಳ್ಳಿ | ೫೦ | ೩೫ | ೧೫ |
| ೭ | ಮೂಗನಾಯಕನಕೋಟೆ | ೫೦ | ೪೫ | ೨೦ |
| ೮ | ಯಕ್ಕಲಕಟ್ಟೆ | ೫೦ | ೪೫ | ೨೫ |
| ೯ | ಅಪ್ಪಾನಹಳ್ಳಿ | ೫೦ | ೪೦ | ೧೦ |
| ೧೦ | ಮೂಗನಾಯಕನಕೋಟೆ | ೫೫ | ೫೦ | ೧೫ |
| ೧೧ | ಮೂಗನಾಯಕನಕೋಟೆ | ೫೫ | ೪೫ | ೨೦ |
| ೧೨ | ಗುಟ್ಟೆ | ೫೫ | ೫೦ | ೧೫ |
| ೧೩ | ಅಪ್ಪಾನಹಳ್ಳಿ | ೫೫ | ೪೫ | ೩೦ |
| ೧೪ | ಮಂಚಕಲ್‌ಕುಪ್ಪೆ | ೫೫ | ೫೦ | ೨೦ |
| ೧೫ | ಅಪ್ಪಾನಹಳ್ಳಿ | ೬೦ | ೫೦ | ೨೦ |
| ೧೬ | ಶಿವಪುರ | ೬೦ | ೫೦ | ೨೫ |
| ೧೭ | ಮೂಗನಾಯಕನಕೋಟೆ | ೬೫ | ೬೦ | ೨೫ |
| ೧೮ | ಬೂದಿಗುಡ್ಡ | ೭೦ | ೬೦ | ೨೫ |
| ೧೯ | ಮೂಗನಾಯಕನಕೋಟೆ | ೭೦ | ೬೦ | ೨೦ |

**೪ ಸಾಮಾನ್ಯ ಮೊನೆ**

ದೊರೆತಿರುವ ಉಪಕರಣಗಳಲ್ಲಿ ಒಟ್ಟು ೧೯ ಮೊನೆಗಳಿದ್ದು (ಶೇ. ೭.೭೨) ಕ್ರಮವಾಗಿ ಡೈಕ್ ನಲ್ಲಿ ಎರಡು, ಡಾಲರೈಟ್ ನಲ್ಲಿ ಎರಡು, ಕ್ವಾರ್ಟ್ಸೈಟ್ ನಲ್ಲಿ ಎರಡು ಮತ್ತು ಉಳಿದವು ವಿವಿಧ ಬಣ್ಣಗಳ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿತವಾಗಿವೆ. ಆಕಾರದಲ್ಲಿ ಇವು ವಿಷಮ ತ್ರಿಭುಜ, ಅಸಮ ಚತುರ್ಭುಜ, ಸಮಬಾಹು ಚತುರ್ಭುಜ ಮತ್ತು ಅಂಡಾಕೃತಿಯಲ್ಲಿವೆ. ಒಂಬತ್ತು ಉಪಕರಣಗಳನ್ನು ವಿವಿಧ ಗಾತ್ರದ ನೀಳಚಕ್ಕೆಗಳ ಮೇಲ್ತುದಿಯನ್ನು ಒಂದೇ ಕಡೆಯಿಂದ ಲಘುಕೋನದಲ್ಲಿ ಕತ್ತರಿಸಿ ರೂಪಿಸಲಾಗಿದೆ. ಈ ಗುಂಪಿನ ೫ ಉಪಕರಣಗಳಲ್ಲಿ ಈ ರೀತಿ ಕತ್ತರಿಸಿದ ಕೋನವು ತೀರಾ ಕಡಿಮೆಯಾಗಿರುವುದರಿಂದ ಮೊನೆಯು ಉದ್ದವಾದ ಕರ್ಣದ ಒಂದು ತುದಿಯಲ್ಲಿ ರೂಪುಗೊಂಡಿದೆ. ಹೀಗಾಗಿ ಸಾಮಾನ್ಯವಾಗಿ ಈ ಒಂಬತ್ತೂ ಉಪಕರಣಗಳಲ್ಲಿ ಮೊನೆಯು ಮೇಲ್ತುದಿಯ ಮಧ್ಯದಲ್ಲಿ ಇಲ್ಲದೆ ಒಂದು ಅಂಚಿಗೆ ಹೊಂದಿಕೊಂಡಂತೆ ಇದೆ. ಎರಡು ಉಪಕರಣಗಳಲ್ಲಿ ನೀಳ-

ಚಕ್ಕೆಯನ್ನು ಎರಡೂ ಪಾರ್ಶ್ವಗಳಿಂದ ಲಘುಕೋನದಲ್ಲಿ ಕತ್ತರಿಸಿ ಒಂದು ಅಥವಾ ಎರಡೂ ಬದಿಯಲ್ಲಿ ಮರುಚಕ್ಕೆ ಎಬ್ಬಿಸಿ ಮೊನಚು ತುದಿ ರೂಪಿಸಿದೆ.

ಆರು ಉಪಕರಣಗಳಲ್ಲಿ ತ್ರಿಭುಜಾಕೃತಿಯಲ್ಲಿಯೇ ಇರುವ ಈ ಪ್ರಾಥಮಿಕ ಚಕ್ಕೆಗಳನ್ನಾಯ್ದು ಅಲ್ಪ ಸ್ವಲ್ಪ ಕಿರು ಮರು ಚಕ್ಕೆಗಳನ್ನೂ ಎಬ್ಬಿಸಿ ಮೊನೆಯನ್ನು ಮೂಡಿಸಿದೆ. ಈ ಆರೂ ಉಪಕರಣಗಳಲ್ಲಿ ಮೊನೆಯು ಉಪಕರಣದ ಮಧ್ಯದಲ್ಲಿದೆ.

ಪ್ರಾಥಮಿಕ ಚಕ್ಕೆಗಳ ಮೇಲೆ ಮೂಡಿರುವ ಹೆಚ್ಚಿನ ಉಪಕರಣಗಳಲ್ಲಿ ಹಿಂಬದಿ ಸಮತಲವಾಗಿದ್ದರೆ ಉಳಿದ-ವುಗಳಲ್ಲಿ ಪೀನತೆ ಇಲ್ಲವೆ ನಿಮ್ನತೆ ಇದೆ. ಮುಂಬದಿಯಲ್ಲಿ ಹೆಚ್ಚು ಕಡಿಮೆ ಉಲ್ಲಾ ಉಪಕರಣಗಳಲ್ಲಿ ಅಂಕು ಡೊಂಕಾಗಿ ಸಾಗುವ ಮಧ್ಯ ಉಬ್ಬೇಣು ಇದ್ದು ಕೆಲವು ಉಪಕರಣಗಳಲ್ಲಿ ಅದನ್ನು ತೆಗೆದು ಹಾಕಲಾಗಿದೆ. ಹೀಗಾಗಿ ಹೆಚ್ಚಿನ ಉಪಕರಣ-ಗಳು ತ್ರಿಭುಜ ಇಲ್ಲವೇ ಚತುರ್ಭುಜಾಕಾರದ ಅಡ್ಡ ವಿನ್ಯಾಸವನ್ನು ಹೊಂದಿವೆ. ಡೈಕ್ ಶಿಲೆಯಲ್ಲಿ ರೂಪಿಸಿರುವ ಉಪಕರಣ-ಗಳ ಮೇಲೆ ದಪ್ಪ ನೈಸರ್ಗಿಕ ಪೊರೆ ಇದೆ. ಕೆಲವು ಉಪಕರಣದ ಪಾರ್ಶ್ವ, ಮುಂಬದಿ ಮತ್ತು ಬುಡಗಳಲ್ಲಿ ಮೂಲಶಿಲಾ ತೊಗಟೆ ಉಳಿದಿವೆ. ಅಳತೆಯನ್ವಯದಂತೆ ಈ ಉಪಕರಣಗಳನ್ನು ಮೂರು ಗುಂಪುಗಳಾಗಿ ವಿಭಾಗಿಸಬಹುದು. ೪೦ ರಿಂದ ೫೦ ಮಿ.ಮೀ.ನ ೫ ಉಪಕರಣಗಳು, ೫೦ ರಿಂದ ೭೦ ಮಿ.ಮೀ.ನ ೧೧ ಉಪಕರಣಗಳು ಹಾಗೂ ೭೦ ರಿಂದ ೯೦ ಮಿ.ಮೀ. ನ ೨ ಉಪಕರಣಗಳು ಕ್ರಮವಾಗಿ ಮೊದಲು, ಎರಡು ಮತ್ತು ಮೂರನೇ ಗುಂಪಿಗೆ ಸೇರುತ್ತವೆ. ಒಟ್ಟು ಉಪಕರಣ-ಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೨ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೫.೧೨

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧ | ಅಪ್ಪಾನಹಳ್ಳಿ | ೪೫ | ೪೫ | ೨೫ |
| ೨ | ಗುಟ್ಟೆ | ೪೫ | ೪೦ | ೧೫ |
| ೩ | ಕರಡಿ | ೪೫ | ೪೫ | ೧೦ |
| ೪ | ಅವರ್ಗಲ್ಲು | ೪೫ | ೪೫ | ೨೦ |
| ೫ | ಹೊನ್ನೇಮಾರನಹಳ್ಳಿ | ೫೦ | ೪೫ | ೧೨ |
| ೬ | ಯಲಪ್ಪನಯಕನಹೊಸಕೋಟೆ | ೫೦ | ೫೦ | ೧೫ |
| ೭ | ಓಬಳಾಪುರ | ೫೫ | ೫೦ | ೧೫ |
| ೮ | ಮಂಚಕಲ್‌ಕುಪ್ಪೆ | ೫೫ | ೪೫ | ೧೫ |
| ೯ | ಮಾರಕೆಟ್ಟಹಳ್ಳಿ | ೫೫ | ೪೫ | ೧೫ |
| ೧೦ | ಅವರ್ಗಲ್ಲು | ೬೦ | ೫೦ | ೨೨ |
| ೧೧ | ಮೂಗನಾಯಕನಕೋಟೆ | ೬೦ | ೪೫ | ೨೦ |
| ೧೨ | ಮಿಡಿಗೇಶಿ | ೬೦ | ೬೦ | ೨೦ |
| ೧೩ | ಮಿಡಿಗೇಶಿ | ೬೦ | ೫೦ | ೨೦ |
| ೧೪ | ಯಲಪ್ಪನಯಕನಹೊಸಕೋಟೆ | ೬೫ | ೫೫ | ೩೦ |
| ೧೫ | ಮಾರಕೆಟ್ಟಹಳ್ಳಿ | ೬೫ | ೫೦ | ೩೦ |
| ೧೬ | ಅಪ್ಪಾನಹಳ್ಳಿ | ೬೫ | ೪೦ | ೨೦ |
| ೧೭ | ಬೊಮ್ಮೇನಹಳ್ಳಿ | ೭೦ | ೬೫ | ೨೫ |
| ೧೮ | ಮೂಗನಾಯಕನಕೋಟೆ | ೮೦ | ೬೫ | ೨೫ |
| ೧೯ | ಮಿಡಿಗೇಶಿ | ೯೦ | ೬೫ | ೨೫ |

**೫ ಬಾಣದ ಮೊನೆ**

ಮಧ್ಯ ಹಳೆಶಿಲಾಯುಗದ ಉಪಕರಣ ಸಮೂಹಕ್ಕೆ ಸೇರ್ಪಡೆಗೊಂಡ ವಿಶಿಷ್ಟ ಉಪಕರಣ ಬಾಣದ ಮೊನೆ. ವಿಶೇಷ ಪರಿಶ್ರಮದಿಂದ ರೂಪಿಸಿರುವ ಇಂತಹ ಒಟ್ಟು ಉಪಕರಣ ೧೩ ( ಶೇ. ೫.೨೮) ದೊರೆತಿದ್ದು ಅವುಗಳಲ್ಲಿ ೩ ಡೈಕ್, ೫ ಡಾಲರೈಟ್ ಹಾಗೂ ಉಳಿದ ೫ ಕ್ವಾರ್ಟ್ಸ್ ಶಿಲೆಯಲ್ಲೂ ಇವೆ. ನೀಳಗತ್ತಿಯಂತಹ, ತಳ್ಳನೆಯ, ಉದ್ದವಾದ ಚಕ್ಕೆಗಳಿಂದ ಈ ಉಪಕರಣವನ್ನು ರೂಪಿಸಿದೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳ ಹಿಂಬದಿ ಸಮತಲವಾಗಿದ್ದು ತಾಡನ ಉಬ್ಬನ್ನು ಪ್ರದರ್ಶಿಸುತ್ತದೆ. ಡಾಲರೈಟ್ ನಲ್ಲಿರುವ ಮೂರು ಉಪಕರಣಗಳಲ್ಲಿ ಮಾತ್ರ ಮುಂಬದಿಯಲ್ಲಿ ಮಧ್ಯ ಉಬ್ಬೇಣು ಪ್ರಮುಖವಾಗಿದ್ದು ಮಧ್ಯದಿಂದ ಎರಡೂ ಬದಿಗೆ ಆಳವಾದ ಚಕ್ಕೆಗಳನ್ನೆಬ್ಬಿಸಿ ಪಾರ್ಶ್ವಗಳನ್ನು ಹರಿತವಾಗಿಸಿದೆ. ಒಂದು ಉಪಕರಣದಲ್ಲಿ ಉಬ್ಬೇಣನ್ನು ತೆಗೆದು ಉಪಕರಣವನ್ನು ತೆಳ್ಳಗಾಗಿಸಿದೆ. ಕೆಲವು ಉಪಕರಣಗಳು ಎಲೆಯಾಕಾರದಲ್ಲಿದ್ದರೆ ಇನ್ನು ಕೆಲವು ತ್ರಿಭುಜಾಕಾರದಲ್ಲಿವೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜ ಮತ್ತು ಆಯತಾಕಾರಗಳು ಕಾಣುತ್ತವೆ. ಒಂದೆರಡು ಉಪಕರಣಗಳಲ್ಲಿ ಈಟಿ ಅಥವಾ ಬಾಣದ ತುದಿಗೆ ಜೋಡಿಸಲು ಅನುಕೂಲವಾಗುವಂತೆ ಹಿಡಿಕೆಗಳನ್ನು ರೂಪಿಸಿದೆ. ಡೈಕ್ ನ ಉಪಕರಣಗಳಲ್ಲಿ ದಪ್ಪ ನೈಸರ್ಗಿಕ ಪೊರೆ ಇದೆ. ಉಳಿದ ಉಪಕರಣಗಳಲ್ಲಿ ಮೂಲ ಶಿಲಾಗಟ್ಟಿಯ ಭಾಗವನ್ನು ಸ್ವಲ್ಪ ಉಳಿಸಿದೆ. ಅಳತೆ ಪ್ರಮಾಣಕ್ಕನುಗುಣವಾಗಿ ಇವುಗಳನ್ನು ಮೂರು ಗುಂಪು ಮಾಡಬಹುದು. ಮೊದಲನೇ ಗುಂಪಿಗೆ ೪೫ ರಿಂದ ೬೦ ಮಿ.ಮೀ. ಉದ್ದದ ೫ ಉಪಕರಣ,

ಎರಡನೇ ಗುಂಪಿಗೆ ೭೦ ರಿಂದ ೮೫ ಮಿ.ಮೀ.ನ ೪ ಉಪಕರಣ ಹಾಗೂ ೮೫ರಿಂದ ೧೧೦ ಮಿ.ಮೀ.ನ ೪ ಉಪಕರಣ ಮೂರನೇ ಗುಂಪಿಗೆ ಸೇರುತ್ತವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೩ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೫.೧೩**

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧. | ಯಕ್ಕಲಕಟ್ಟೆ | ೪೫ | ೪೫ | ೧೫ |
| ೨. | ಯಕ್ಕಲಕಟ್ಟೆ | ೪೫ | ೪೦ | ೨೦ |
| ೩. | ದೊಡ್ಡಗುಣಿ | ೫೦ | ೩೫ | ೧೦ |
| ೪. | ಕೈಮರ | ೫೦ | ೩೫ | ೧೦ |
| ೫. | ಹೊನ್ನೆಮಾರನಹಳ್ಳಿ | ೫೦ | ೩೫ | ೧೫ |
| ೬. | ಗಳಿಗೆಕೆರೆ | ೬೫ | ೫೦ | ೨೦ |
| ೭. | ನಿಡುಗಲ್ಲು | ೬೫ | ೫೦ | ೨೦ |
| ೮. | ನಿಡುಗಲ್ಲು | ೭೦ | ೪೦ | ೨೦ |
| ೯. | ನಿಡುಗಲ್ಲು | ೮೦ | ೪೦ | ೨೦ |
| ೧೦. | ಹೊನ್ನೆಮಾರನಹಳ್ಳಿ | ೮೫ | ೫೫ | ೨೦ |
| ೧೧. | ಮಿಡಿಗೇಶಿ | ೯೦ | ೭೦ | ೨೦ |
| ೧೨. | ನಿಡುಗಲ್ಲು | ೯೫ | ೫೫ | ೨೫ |
| ೧೩. | ಮಿಡಿಗೇಶಿ | ೧೧೦ | ೬೫ | ೨೫ |

**೬ ಕೊರೆಗ**

ಮಧ್ಯ ಹಳೆಶಿಲಾಯುಗದ ನೀಳಗತ್ತಿ ಹಾಗೂ ಹೆರೆಚಕ್ಕೆ ಚಕ್ಕೆಗಳಿಂದ ರೂಪಿಸಿದ ಮೊನೆ ಗುಂಪಿನ ವಿಶಿಷ್ಟ ಉಪಕರಣ ಕೊರೆಗ. ದೊರೆತಿರುವ ಒಟ್ಟು ೧೦ ಉಪಕರಣ (ಶೇ. ೪.೦೬)ಗಳಲ್ಲಿ ಮೂರನ್ನು ಮೂಲಗಟ್ಟಿಗಳ ಮೇಲೂ ಉಳಿದವನ್ನು ಚಕ್ಕೆಗಳ ಮೇಲೂ ತಯಾರಿಸಿದೆ. ಮೂಲ ಶಿಲಾಗಟ್ಟಿಯಲ್ಲಿ ರೂಪಿಸಿದ ಉಪಕರಣಗಳಲ್ಲಿ ಒಂದು ಡೈಕ್ ಉಳಿದೆರಡು ಕ್ವಾರ್ಟ್ಸ್ ಶಿಲೆಯಲ್ಲಿವೆ. ಮೂರು ಉಪಕರಣಗಳಲ್ಲಿ ತ್ರಿಭುಜಾಕಾರದ ಮೂಲಗಟ್ಟಿ ಶಿಲೆಯನ್ನು ಆಯ್ದುಕೊಂಡು ಹಿಂಬದಿಯಲ್ಲಿ ದಪ್ಪ ಚಕ್ಕೆಯನ್ನೆಬ್ಬಿಸಿ ಸ್ವಲ್ಪ ಮಟ್ಟಿಗೆ ಸಮತಲವನ್ನು ಉಂಟು ಮಾಡಿದೆ. ಮುಂಬದಿಯಲ್ಲಿ ಮಧ್ಯದಿಂದ ಎರಡೂ ಪಾರ್ಶ್ವಗಳಿಗೆ ಚಕ್ಕೆ ಎಬ್ಬಿಸಿ ತ್ರಿಭುಜಾಕಾರದ ಹೆರೆಚಕ್ಕೆಯಂತೆ ಮಾಡಿ ಒಂದು ತುದಿಯಲ್ಲಿ ಹಿಂಬದಿ ಅಥವಾ ಮುಂಬದಿಯಿಂದ ಒಂದೊಂದು ಕಿರುಚಕ್ಕೆ ಎಬ್ಬಿಸಿ ಉದ್ದೇಶಿತ ಚಾಚು ಮೊನೆಯನ್ನು ರೂಪಿಸಿದೆ. ಚಾಚು ಮೊನೆಯನ್ನು ಹೆಚ್ಚು ಬಲಪಡಿಸಲು ಎರಡೂ ಬದಿಗಳಲ್ಲಿ ಕಚ್ಚುಗಳನ್ನು ಉಂಟುಮಾಡಿದೆ.

ನೀಳ ಚಕ್ಕೆಯ ಮೇಲೆ ರೂಪಿಸಿದ ಏಳೂ ಉಪಕರಣಗಳಲ್ಲಿ ಒಂದು ಜಾಸ್ಪರ್, ಒಂದು ಡೈಕ್, ಮತ್ತು ೫ ಕ್ವಾರ್ಟ್ಸ್ ಶಿಲೆಗಳಲ್ಲಿವೆ. ಈ ಗುಂಪಿನ ಎರಡು ಉಪಕರಣಗಳಲ್ಲಿ ನೀಳಗತ್ತಿಯ ಒಂದು ತುದಿಯಲ್ಲಿ ಲಘುಕೋನದಲ್ಲಿ ಕತ್ತರಿಸಿ

ಉದ್ದೇಶಿತ ಮೊನೆಯನ್ನು ಸಾಧಿಸಿರುವುದರಿಂದ ಮೊನೆಯು ಒಂದು ಪಾರ್ಶ್ವಕ್ಕೆ ಹೊಂದಿ ಕೊಂಡಂತೆ ಇದೆ. ಈ ಮೊನೆಯನ್ನು ಬಲಗೊಳಿಸಲು ಪಾರ್ಶ್ವದಲ್ಲಿ ಪುಡಿ ಚಕ್ಕೆಗಳನ್ನೆಬ್ಬಿಸಿದೆ. ಉಳಿದ ೫ ಮಾದರಿಗಳಲ್ಲಿ ಒಂದು ತುದಿಯಲ್ಲಿ ಎರಡೂ ಪಾರ್ಶ್ವಗಳಿಂದ ಲಘುಕೋನದಲ್ಲಿ ಕತ್ತರಿಸಿ ಮೊನೆಯನ್ನು ಉಪಕರಣದ ಮಧ್ಯದಲ್ಲಿ ರೂಪಿಸಿದೆ. ಉಪಯುಕ್ತತೆಯನ್ನು ಹೆಚ್ಚಿಸಲು ಎರಡೂ ಬದಿಗಳಲ್ಲಿ ಮತ್ತು ಪಾರ್ಶ್ವಗಳಲ್ಲಿ ಪುಡಿ ಚಕ್ಕೆಗಳನ್ನೂ ಎಬ್ಬಿಸಿದೆ. ಎಲ್ಲಾ ಉಪಕರಣಗಳ ಹಿಂಬದಿ ಹೆಚ್ಚು ಕಡಿಮೆ ಸಮತಲದಲ್ಲಿದೆ. ಕೆಲವು ಉಪಕರಣಗಳಲ್ಲಿ ತಾಡನ ಶಂಖು ಮೊನೆಯ ವಿರುದ್ಧ ತುದಿಯಲ್ಲಿದ್ದರೆ ಇನ್ನು ಕೆಲವು ಪಾರ್ಶ್ವದಲ್ಲಿವೆ. ಡೈಕ್ ನಲ್ಲಿ ರಚಿತವಾದ ಉಪಕರಣದಲ್ಲಿ ದಪ್ಪ ನೆಸರ್ಗಿಕ ಪೊರೆ ಇದೆ. ಇನ್ನುಳಿದ ಉಪಕರಣಗಳಲ್ಲಿ ಮೂಲ ಶಿಲಾ ತೊಗಟೆ ಅಲ್ಲಲ್ಲಿ ಕಂಡು ಬರುತ್ತದೆ. ಉಪಕರಣಗಳ ಗಾತ್ರವನ್ನನುಸರಿಸಿ ಮೂರು ಗುಂಪುಗಳಾಗಿ ವಿಂಗಡಿಸಬಹುದು. ಮೊದಲನೆ ಗುಂಪಿನಲ್ಲಿ ೩ ಉಪಕರಣಗಳಿದ್ದು ಇವುಗಳ ಎತ್ತರ ೪೦ ರಿಂದ ೫೦, ಎರಡನೇ ಗುಂಪಿನ ೩ ಉಪಕರಣಗಳು ೫೦ ರಿಂದ ೬೫ ಹಾಗೂ ಮೂರನೇ ಗುಂಪಿನ ೪ ಉಪಕರಣಗಳು ೬೫ ರಿಂದ ೮೦ ಮಿ.ಮೀ.ಗಳಲ್ಲಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೪ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೫.೧೪

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧. | ಹೊನ್ನೆಮಾರನಹಳ್ಳಿ | ೪೩ | ೪೦ | ೨೦ |
| ೨. | ಗಳಿಗೆಕೆರೆ | ೪೫ | ೩೮ | ೨೦ |
| ೩. | ಮೂಗನಾಯಕನಕೋಟೆ | ೪೫ | ೪೫ | ೨೦ |
| ೪. | ಮಂಚಕಲ್‌ಕುಪ್ಪೆ | ೫೫ | ೪೫ | ೧೦ |
| ೫. | ಮೂಗನಾಯಕನಕೋಟೆ | ೬೦ | ೪೫ | ೨೫ |
| ೬. | ಮಂಚಕಲ್‌ಕುಪ್ಪೆ | ೬೫ | ೪೫ | ೧೫ |
| ೭. | ಅವಗ್ಗಲ್ಲು | ೬೮ | ೫೦ | ೨೦ |
| ೮. | ಅಪ್ಪಾನಹಳ್ಳಿ | ೭೦ | ೪೫ | ೧೫ |
| ೯. | ದೊಡ್ಡಗುಣಿ | ೭೦ | ೫೫ | ೩೦ |
| ೧೦. | ಬೂದಿಗುಡ್ಡ | ೮೦ | ೬೫ | ೨೦ |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೪೩ ಗರಿಷ್ಠ ೮೦, ಅಗಲ ಕನಿಷ್ಠ ೩೮ ಗರಿಷ್ಠ ೬೫ ಮತ್ತು ದಪ್ಪ ಕನಿಷ್ಠ ೧೦ ಗರಿಷ್ಠ ೩೦ ಮಿ.ಮೀ. ಗಳಾಗಿವೆ.

**೬ ನೀಳಚಕ್ಕೆ ಉಪಕರಣಗಳು**

ಮಧ್ಯ ಹಳೆಶಿಲಾಯುಗದಲ್ಲಿ ಆರಂಭವಾದ ಒಂದು ವಿಶಿಷ್ಟ ಉಪಕರಣ ನೀಳಚಕ್ಕೆ. ಇಂತಹ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿ ದೊರಕುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇಂತಹ ಒಟ್ಟು ೩೭ (ಶೇ. ೧೫.೦೪)

ಉಪಕರಣಗಳು ದೊರೆತಿದ್ದು ಅವುಗಳ ರೂಪಣಾ ವಿಧಾನ ಹಾಗೂ ನಿರ್ವಹಿಸುವ ಕಾರ್ಯಕ್ಕನುಗುಣವಾಗಿ ಇವುಗಳನ್ನು ಮೂರು ಉಪ ಗುಂಪುಗಳಾಗಿ ವಿಂಗಡಿಸಿಕೊಳ್ಳಬಹುದು. ಅವುಗಳೆಂದರೆ :

೧. ನೀಳಚಕ್ಕೆಯಂತಹ ಚಕ್ಕೆ (ಒಟ್ಟು ಉಪಕರಣ- ೧೮ ಶೇ. ೪೮.೬೪)

೨. ಒಬ್ಬದಿ ನೀಳಚಕ್ಕೆ (ಒಟ್ಟು ಉಪಕರಣ- ೧೨ ಶೇ. ೩೨.೪೩)

೩. ಕೈಬಾಕು ನೀಳಚಕ್ಕೆ (ಒಟ್ಟು ಉಪಕರಣ- ೭ ಶೇ. ೧೮.೯೧)

ಈ ಉಪಗುಂಪಿನ ಉಪಕರಣಗಳು, ದೊರೆತಿರುವ ನೆಲೆ, ಉಪಕರಣಗಳ ಸಂಖ್ಯೆ ಮತ್ತು ನೀಳಚಕ್ಕೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣ ಇವುಗಳನ್ನು ಕೋಷ್ಟಕ ಸಂಖ್ಯೆ ೫.೧೫ ರಲ್ಲಿ ನೀಡಿದೆ. ಪ್ರತಿ ಉಪಗುಂಪಿನ ಉಪಕರಣಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದೆ.

ಕೋಷ್ಟಕ ಸಂಖ್ಯೆ ೫.೧೫

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆಯಂತಹ ಚಕ್ಕೆ | ಒಬ್ಬದಿ ನೀಳಚಕ್ಕೆ | ಕೈಬಾಕು ನೀಳಚಕ್ಕೆ | ಒಟ್ಟು | ಶೇ |
|---|---|---|---|---|---|---|
| ೧ | ಅಪ್ಪಾನಹಳ್ಳಿ | ೨ | ೨ | | ೪ | ೧೦.೮೧ |
| ೨ | ಅವಗ್ಗಲ್ಲು | | | | | |
| ೩ | ಅಂಕನಬಾವಿ | | | | | |
| ೪ | ಓಬಳಾಪುರ | | ೧ | | ೧ | ೨.೭೦ |
| ೫ | ಕರಡಿ | | ೧ | ೧ | ೨ | ೫.೪೦ |
| ೬ | ಕೈಮರ | | ೧ | | ೧ | ೨.೭೦ |
| ೭ | ಗಳಿಗೆರೆ | | | | | |
| ೮ | ಗುಟ್ಟಿ | | ೧ | | ೧ | ೨.೭೦ |
| ೯ | ದೊಡ್ಡಗುಣಿ | ೧ | ೧ | ೨ | ೪ | ೧೦.೮೧ |
| ೧೦ | ನಿಡುಗಲ್ಲು | | | | | |
| ೧೧ | ಬೂದಿಗುಡ್ಡ | | | | | |
| ೧೨ | ಬೊಮ್ಮೇನಹಳ್ಳಿ | ೧ | | | ೧ | ೨.೭೦ |
| ೧೩ | ಮಾರಕಟ್ಟೆಹಳ್ಳಿ | ೪ | ೧ | | ೫ | ೧೩.೫೧ |
| ೧೪ | ಮಿಡಿಗೇಶಿ | | | | | |
| ೧೫ | ಮೂಗನಾಯಕನಕೋಟೆ | ೭ | | ೧ | ೮ | ೨೧.೬೨ |
| ೧೬ | ಮಂಚಕಲ್‌ಕುಪ್ಪೆ | ೧ | ೧ | ೨ | ೪ | ೧೦.೮೧ |
| ೧೭ | ಮಂಚಲಿದ್ದಾರೆ | | ೧ | | ೧ | ೨.೭೦ |
| ೧೮ | ಯಕ್ಕಲಕಟ್ಟೆ | ೨ | | | ೨ | ೫.೪೦ |
| ೧೯ | ಯಲಪ್ಪನಾಯಕನಹೊಸಕೋಟೆ | | ೧ | | ೧ | ೨.೭೦ |
| ೨೦ | ಶಿವಪುರ | | | | | |
| ೨೧ | ಹರೇನಹಳ್ಳಿ | | ೧ | ೧ | ೨ | ೫.೪೦ |
| ೨೨ | ಹೊನ್ನೆಮಾರನಹಳ್ಳಿ | | | | | |
| ಒಟ್ಟು | | ೧೮ | ೧೨ | ೭ | ೩೭ | |
| ಶೇ | | ೪೮.೬೪ | ೩೨.೪೩ | ೧೮.೯೧ | ೯೯.೯೮ | |

## ೬.೧ ನೀಳಚಕ್ಕೆಯಂತಹ ಚಕ್ಕೆ

ಈ ಗುಂಪಿನ ಒಟ್ಟು ೧೮ (ಶೇ. ೪೮.೬೪) ಉಪಕರಣಗಳು ದೊರೆತಿದ್ದು ಇವುಗಳಲ್ಲಿ ಒಂದು ಜಾಸ್ಪರ್, ಮೂರು ಡೈಕ್, ನಾಲ್ಕು ಕ್ವಾರ್ಟ್ಸೈಟ್ ಮತ್ತು ಉಳಿದ ಹತ್ತು ಕ್ವಾರ್ಟ್ಸನ ವಿವಿಧ ಬಣ್ಣದ ಶಿಲೆಗಳಲ್ಲಿವೆ. ಹೆಚ್ಚಿನ ಉಪಕರಣಗಳು ಆಯತಾಕಾರದಲ್ಲಿದ್ದು ಕೆಲವು ಚೂಪಾದ ಮೇಲ್ತುದಿಯನ್ನು ಹೊಂದಿವೆ. ಅದರಂತೆಯೇ ಹೆಚ್ಚು ಸಂಖ್ಯೆಯ ಉಪಕರಣಗಳ ಕೆಳತುದಿಯ ಮಧ್ಯ ಅಥವಾ ಕೊನೆಯಲ್ಲಿ ಚಕ್ಕೆ ಎಬ್ಬಿಸಿರುವುದರಿಂದ ತಾಡನ ಶಂಖು ಬುಡದ ಮಧ್ಯ ಇಲ್ಲವೆ ತುದಿಗಳಲ್ಲಿ-ದ್ದರೆ, ಇನ್ನೂ ಕೆಲವು ಉಪಕರಣಗಳಲ್ಲಿ ಇದು ಪಾರ್ಶ್ವದ ಮಧ್ಯದಲ್ಲಿದೆ, ಹೀಗಾಗಿ ಕೆಲವೇ ಉಪಕರಣಗಳ ಹಿಂಬದಿ ಸಮತ-ಲವಾಗಿದ್ದರೆ ಉಳಿದವುಗಳ ಎರಡೂ ಬದಿಗೆ ಉಬ್ಬೇಣು ಕಾಣುತ್ತದೆ. ಅಡ್ಡ ವಿನ್ಯಾಸದಲ್ಲಿ ವಿವಿಧ ರೀತಿಯ ತ್ರಿಭುಜ, ಅಂಡಾಕೃತಿ ಮತ್ತು ಚತುರ್ಭುಜಾಕೃತಿಗಳು ಕಂಡು ಬರುತ್ತವೆ. ಅನೇಕ ಉಪಕರಣಗಳಲ್ಲಿ ಮೂಲ ಶಿಲಾ ತೊಗಟೆ ಉಳಿದಿದೆ. ಡೈಕ್ ಶಿಲೆಯ ಉಪಕರಣಗಳು ಹೆಚ್ಚಿನ ನೈಸರ್ಗಿಕ ಪೊರೆಯಿಂದ ಕೂಡಿವೆ. ಆಯತಾಕಾರದ ಉಪಕರಣಗಳಲ್ಲಿ ಮಾತ್ರ ಅಲಗುಗಳು ಹೆಚ್ಚು ಕಡಿಮೆ ಸಮಾನಾಂತರವಾಗಿದ್ದರೆ ಕೆಲವು ಉಪಕರಣಗಳಲ್ಲಿ ಅಲಗುಗಳು ಮೊನೆಯಲ್ಲಿ ಸೇರುತ್ತವೆ. ಇನ್ನೂ ಕೆಲವು ಉಪಕರಣಗಳಲ್ಲಿ ಮೇಲ್ತುದಿ ಮುರಿದಿವೆ. ಅಳತೆ ಪ್ರಮಾಣಕ್ಕನುಗುಣವಾಗಿ ಈ ಉಪಕರಣಗಳನ್ನು ಮೂರು ಗುಂಪು-ಗಳಾಗಿ ವರ್ಗೀಕರಿಸಬಹುದು. ಮೊದಲನೆಯ ಗುಂಪಿನ ಸಣ್ಣ ಗಾತ್ರದ ೧೦ ಉಪಕರಣಗಳು ೫೦ ರಿಂದ ೬೦, ಮಧ್ಯಮ ಗಾತ್ರದ ಎರಡನೇ ಗುಂಪಿನ ೫ ಉಪಕರಣಗಳು ೬೦ ರಿಂದ ೭೫ ಹಾಗೂ ದೊಡ್ಡ ಗಾತ್ರದ ಮೂರನೇ ಗುಂಪಿನ ೩ ಉಪಕ-ರಣಗಳು ೭೫ರಿಂದ ೯೦ ಮಿ.ಮೀ. ಎತ್ತರದವುಗಳಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೬ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೫.೧೬**

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧ | ಬೊಮ್ಮೇನಹಳ್ಳಿ | ೫೨ | ೪೦ | ೨೦ |
| ೨ | ಮಾರಶೆಟ್ಟಿಹಳ್ಳಿ | ೫೩ | ೪೦ | ೧೦ |
| ೩ | ಮಾರಶೆಟ್ಟಿಹಳ್ಳಿ | ೫೫ | ೩೫ | ೨೦ |
| ೪ | ಮಂಚಕಲ್ ಕುಪ್ಪೆ | ೫೫ | ೩೫ | ೧೮ |
| ೫ | ಮಾರಶೆಟ್ಟಿಹಳ್ಳಿ | ೫೮ | ೨೮ | ೧೫ |
| ೬ | ಮೂಗನಾಯಕನಕೋಟೆ | ೬೦ | ೪೦ | ೧೦ |
| ೭ | ಮೂಗನಾಯಕನಕೋಟೆ | ೬೦ | ೭೦ | ೨೦ |
| ೮ | ಮೂಗನಾಯಕನಕೋಟೆ | ೬೦ | ೪೫ | ೧೦ |
| ೯ | ಯಕ್ಕಲಕಟ್ಟೆ | ೬೦ | ೪೦ | ೨೦ |
| ೧೦ | ಮೂಗನಾಯಕನಕೋಟೆ | ೬೦ | ೪೦ | ೨೫ |
| ೧೧ | ದೊಡ್ಡಗುಣಿ | ೬೫ | ೫೦ | ೨೦ |
| ೧೨ | ಮೂಗನಾಯಕನಕೋಟೆ | ೭೦ | ೪೦ | ೧೫ |
| ೧೩ | ಅಪ್ಪಾನಹಳ್ಳಿ | ೭೦ | ೬೦ | ೨೦ |
| ೧೪ | ಮೂಗನಾಯಕನಕೋಟೆ | ೭೫ | ೫೫ | ೨೦ |
| ೧೫ | ಮಾರಶೆಟ್ಟಿಹಳ್ಳಿ | ೭೫ | ೫೦ | ೩೦ |
| ೧೬ | ಅಪ್ಪಾನಹಳ್ಳಿ | ೮೦ | ೫೫ | ೧೫ |
| ೧೭ | ಮೂಗನಾಯಕನಕೋಟೆ | ೮೫ | ೫೦ | ೧೫ |
| ೧೮ | ಯಕ್ಕಲಕಟ್ಟೆ | ೯೦ | ೫೫ | ೨೫ |

## ೭.೨ ಒಬ್ಬದಿ ನೀಳಚಕ್ಕೆ

ಒಂದೇ ಪಾರ್ಶ್ವದಲ್ಲಿ ಹರಿತ ಅಲಗುಳ್ಳ ಇಂತಹ ನೀಳಚಕ್ಕೆಗಳು ೧೨ ಇದ್ದು (ಶೀ. ೩.೨.೪೩), ಅವುಗಳಲ್ಲಿ ಒಂದು ಕ್ವಾರ್ಟ್ಸೈಟ್, ಒಂದು ಆದಿರುಯುಕ್ತ ಜಾಸ್ಪರ್, ಒಂದು ಡಾಲರೈಟ್ ಮತ್ತು ಉಳಿದ ಒಂಬತ್ತು ವಿವಿಧ ಬಣ್ಣಗಳ ಕ್ವಾರ್ಟ್ಸ್ ಶಿಲೆಗೆ ಸೇರುತ್ತವೆ. ಮೂಲ ಶಿಲೆಯಿಂದತುದಿ ಹಾಗೂ ಅಂಚು ತೆಗೆದ ಪ್ರಾಥಮಿಕ ಚಕ್ಕೆಗಳಿಂದ ರೂಪಿಸಿದ ಈ ಉಪ-ಕರಣಗಳ ಹಿಂಬದಿಯು ತಾಡನ ಶಂಖು ಮತ್ತು ಉಬ್ಬಿನಿಂದಾಗಿ ಸಮತಲವನ್ನು ಹೊಂದಿಲ್ಲ. ಹೆಚ್ಚಿನ ಉಪಕರಣಗಳಲ್ಲಿ ಮುಂಬದಿಯ ಮಧ್ಯ ಅಥವಾ ಪಕ್ಕದಿಂದ ಚಕ್ಕೆಯನ್ನೆಬ್ಬಿಸಿ ಒಂದೇ ಬದಿಗೆ ಹರಿತ ಅಲಗನ್ನು ರೂಪಿಸಿದೆ. ಹೀಗಾಗಿ ಉಬ್ಬೇಣು ಪ್ರಮುಖವಾಗಿ ಕಾಣುತ್ತದೆ. ಆಕಾರದಲ್ಲಿ ಆಯತಾಕಾರದ ಉಪಕರಣಗಳು ಹೆಚ್ಚಾಗಿವೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜ, ಆಯತ, ಅಂಡಾಕೃತಿ ಮತ್ತು ಚತುರ್ಭುಜಗಳು ಕಾಣುತ್ತವೆ. ಹೆಚ್ಚಿನ ಉಪಕರಣಗಳು ಸವಕಳಿಗೀಡಾಗಿದ್ದರೆ ಕೆಲವು ಉಪಕರಣಗಳ ಅಲಗು ಸಾಕಷ್ಟು ಹರಿತವಾಗಿದೆ. ಹೆಚ್ಚಿನ ಉಪಕರಣಗಳಲ್ಲಿ ತಾಡನ ವೇದಿಕೆ ಹಾಗೂ ಬುಡ ಮತ್ತು ಮುಂಬ-ದಿಗಳಲ್ಲಿ ಮೂಲ ಶಿಲಾ ತೊಗಟೆ ಕಾಣುತ್ತದೆ. ಉಪಕರಣಗಳ ಪ್ರಮಾಣದನ್ವಯದಂತೆ ಮೂರು ಗುಂಪುಗಳಾಗಿ ಮಾಡಬಹು-ದು. ಮೊದಲನೆ ಗುಂಪಿನ ೫ ಉಪಕರಣಗಳು ೫೦ ರಿಂದ ೫೫, ಎರಡನೇ ಗುಂಪಿನ ೩ ಉಪಕರಣಗಳು ೫೫ ರಿಂದ ೬೫ ಹಾಗೂ ಮೂರನೆ ಗುಂಪಿನ ೪ ಉಪಕರಣಗಳು ೭೦ ರಿಂದ ೭೮ ಮಿ.ಮೀ.ನವುಗಳಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೭ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ೫.೧೭

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧ | ಕರಡಿ | ೫೦ | ೩೫ | ೧೫ |
| ೨ | ಮಾರಶೆಟ್ಟಿಹಳ್ಳಿ | ೫೦ | ೪೫ | ೨೦ |
| ೩ | ಗುಟ್ಟಿ | ೫೫ | ೪೦ | ೧೮ |
| ೪ | ಅಪ್ಪಾನಹಳ್ಳಿ | ೫೫ | ೫೫ | ೨೦ |
| ೫ | ಮಂಚಕಲ್‌ಕೊಪ್ಪೆ | ೫೫ | ೪೫ | ೧೮ |
| ೬ | ಅಪ್ಪಾನಹಳ್ಳಿ | ೬೦ | ೫೦ | ೧೦ |
| ೭ | ದೊಡ್ಡಗಣಿ | ೬೫ | ೪೫ | ೨೦ |
| ೮ | ಕೈಮರ | ೬೫ | ೪೫ | ೨೦ |
| ೯ | ಹರೇನಹಳ್ಳಿ | ೭೦ | ೪೦ | ೨೫ |
| ೧೦ | ಮಂಚಲ್ದೊರೆ | ೭೫ | ೬೦ | ೨೫ |
| ೧೧ | ಯಲಪ್ಪನಾಯಕನಹೊಸಕೋಟೆ | ೭೫ | ೫೦ | ೨೦ |
| ೧೨ | ಒಬಳಾಪುರ | ೭೮ | ೪೦ | ೨೦ |

### ೬.೩ ಕೈಚಾಕು ನೀಳಚಕ್ಕೆ

ನೀಳಚಕ್ಕೆ ಗುಂಪಿಗೆ ಸೇರುವ ಇಂತಹ ವಿಶೇಷ ರೀತಿಯ ಉಪಕರಣಗಳು ೭ ಇದ್ದು (ಶೇ. ೧೮.೯೧) ಎರಡು ಜಾಸ್ಪರ್, ಇನ್ನುಳಿದವು ಕ್ವಾರ್ಟ್ಸ್ ಗುಂಪಿನ ಶಿಲೆಗಳಲ್ಲಿ ರೂಪಿತವಾಗಿವೆ. ಒಬ್ಬದಿ ನೀಳಚಕ್ಕೆಯಂತೆಯೇ ರೂಪಿತವಾದ ಈ ಉಪಕರಣದ ಒಂದು ಅಂಚಿನ ಮೇಲ್ಭಾಗವನ್ನು ಹರಿತ ಗೊಳಿಸಿದ್ದು, ಮೇಲ್ತುದಿ ಮತ್ತು ಇನ್ನೊಂದು ಪಾರ್ಶ್ವದಲ್ಲೂ ಒರ-ಟಾಗಿ ಚಕ್ಕೆಗಳನ್ನೆಬ್ಬಿಸಿ ಹಿಡಿತಕ್ಕೆ ಅನುಕೂಲವಾಗುವಂತೆ ರೂಪಿಸಿದೆ. ಮೇಲ್ನೋಟಕ್ಕೆ ಇವು ವಿಷಮ ತ್ರಿಭುಜಾಕಾರ, ಅಂಡಾ-ಕಾರ, ಮತ್ತು ಅರ್ಧ ಚಂದ್ರಾಕೃತಿಗಳಲ್ಲಿವೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜ ಹಾಗೂ ಚತುರ್ಭುಜಾಕಾರದಲ್ಲಿ ಕಾಣುತ್ತವೆ. ಹೆಚ್ಚಿನ ಉಪಕರಣಗಳಲ್ಲಿ ತಾಡನ ಶಂಖು ಉಳಿದಿರುವ ದಪ್ಪನೆಯ ಬುಡದಲ್ಲಿ ಹಿಡಿತ ಚಕ್ಕೆಯನ್ನು ರೂಪಿಸಿದೆ. ಚಾಕುವಿನ ಹರಿತ ಅಲಗನ್ನು ವಕ್ರ ರೇಖೆಯಲ್ಲಿ ಬಾಗಿಸಿ ಇಲ್ಲವೆ ಮೊನಚಾದ ತುದಿಯಂತೆ ರೂಪಿಸಿ ಉಪಕರಣದ ಉಪಯುಕ್ತತೆಯನ್ನು ಹೆಚ್ಚಿ-ಸಿದೆ. ಹಿಂಬದಿಯಲ್ಲಿ ತಾಡನ ಶಂಖು ಮತ್ತು ಉಬ್ಬನ್ನು ಉಳಿಸಿಕೊಂಡಿರುವುದರಿಂದ ಸಮತಲವಾಗಿಲ್ಲ. ಮುಂಬದಿಯಲ್ಲಿ ವಕ್ರರೇಖೆಯಲ್ಲಿ ಸಾಗುವ ಮಧ್ಯ ಉಬ್ಬೇಣುಕಾಣುತ್ತದೆ. ಕೆಲವು ಉಪಕರಣಗಳಲ್ಲಿ ಮೂಲ ಶಿಲಾ ತೊಗಟೆಯನ್ನು ಉಳಿಸಿದೆ. ಈ ಉಪರಕಣಗಳನ್ನು ಅಳತೆಯನ್ವಯದಂತೆ ಎರಡು ಗುಂಪುಗಳಾಗಿ ವಿಭಾಗಿಸಬಹುದು. ಮೊದನೆಯ ಗುಂಪಿನಲ್ಲಿ ೪ ಉಪಕರಣವಿದ್ದು ೬೦ ರಿಂದ ೬೫ ಮಿ.ಮೀ. ಹಾಗೂ ಎರಡನೇ ಗುಂಪಿನಲ್ಲಿ ೩ ಉಪಕರಣವಿದ್ದು ೬೫ ರಿಂದ ೮೦ ಮಿ.ಮೀ. ಎತ್ತರವಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೫.೧೮ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೫.೧೮

| ಕ್ರಮ ಸಂಖ್ಯೆ | ನೆಲೆ | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ |
|---|---|---|---|---|
| ೧ | ಹರೇನಹಳ್ಳಿ | ೬೦ | ೫೦ | ೨೦ |
| ೨ | ಮಂಚಕಲ್‌ಕುಪ್ಪೆ | ೬೫ | ೪೦ | ೨೦ |
| ೩ | ದೊಡ್ಡಗುಣಿ | ೬೫ | ೪೫ | ೨೦ |
| ೪ | ಕರಡಿ | ೬೫ | ೪೦ | ೨೫ |
| ೫ | ದೊಡ್ಡಗುಣಿ | ೭೦ | ೫೦ | ೨೫ |
| ೬ | ಮಂಚಕಲ್‌ಕುಪ್ಪೆ | ೭೦ | ೩೦ | ೩೦ |
| ೭ | ಮೂಗನಾಯಕನಕೋಟೆ | ೮೦ | ೪೦ | ೪೦ |

### ತಾಂತ್ರಿಕತೆ

ಮಧ್ಯ ಹಳೆಶಿಲಾಯುಗವು ಮುಖ್ಯವಾಗಿ ಚಕ್ಕೆ ಉಪಕರಣಗಳ ಸಂಸ್ಕೃತಿ. ಮಧ್ಯಮ ಹಾಗೂ ಕಿರುಗಾತ್ರದ ಮತ್ತು ವಿವಿಧ ಆಕಾರದ ಚಕ್ಕೆಗಳ ಮೇಲೆ ಈ ಕಾಲದ ಉಪಕರಣಗಳೆಲ್ಲಾ ರೂಪುಗೊಂಡಿರುವುದು. ಸಹಜವಾಗಿ ಉದ್ದೇಶಿತ

ಆಕಾರ ಹಾಗೂ ಗಾತ್ರದ ಚಕ್ಕೆಗಳನ್ನು ನೀಡುವ ಸೂಕ್ತ ವಿಧಾನಗಳನ್ನೂ ಬಳಸಿಕೊಂಡಿದೆ. ಬಹುತೇಕ ನೆಲೆಗಳಲ್ಲಿ ಉತ್ತಮ ಚಕ್ಕೆ ನೀಡುವ ಗುಣ ಹೊಂದಿರುವ ಚಾಲ್ಸಿಡೋನಿ, ಅಗೇಟ್, ಜಾಸ್ಪರ್, ಚರ್ಟ್ ಹಾಗೂ ಸಿಸ್ಟ್ ಗುಂಪಿನ ಶಿಲಾ ಮಾದರಿಗಳನ್ನು ಬಳಸಲು ಆರಂಭವಾದುದು ಈ ಕಾಲದಲ್ಲಿಯೇ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿಯೂ ಮೊದಲೇ ಉಪಯೋಗವಾಗು-ತ್ತಿದ್ದ ಕ್ವಾರ್ಟ್ಸೈಟ್ ಶಿಲೆಯನ್ನು ಹೆಚ್ಚಾಗಿಯೂ, ಅಲ್ಪಪ್ರಮಾಣದಲ್ಲಿ ಸ್ಥಳೀಯವಾಗಿ ದೊರೆಯುವ ಜಾಸ್ಪರ್, ಅದಿರುಯುಕ್ತ ಜಾಸ್ಪರ್, ಕ್ವಾರ್ಟ್ಸ್, ಡೈಕ್ ಮುಂತಾದ ನಯಕಣಗಳ ಶಿಲೆಗಳನ್ನು ಅಲ್ಪ ಪ್ರಮಾಣದಲ್ಲಿ ಉಪಯೋಗಿಸಿದೆ.

ಆದಿ ಹಳೆಶಿಲಾಯುಗದಲ್ಲಿ ಬಳಕೆಯಲ್ಲಿದ್ದ ಚಕ್ಕೆ ತೆಗೆಯುವ ವಿಧಾನಗಳೆಲ್ಲವೂ ಈ ಕಾಲದಲ್ಲಿಯೂ ಹೆಚ್ಚು ಕಡಿಮೆ ಮುಂದುವರಿಯುತ್ತವೆ. ಆದರೆ ಕಲ್ಲಿನಿಂದ ಕಲ್ಲಿಗೆ ಬಡಿದು ದಪ್ಪ ಚಕ್ಕೆ ತೆಗೆಯುವ ವಿಧಾನವನ್ನು ಹೆಚ್ಚಾಗಿ ಮೂಲ ಶಿಲಾಗಟ್ಟಿಯ ನಿರುಪಯುಕ್ತ ಭಾಗಗಳನ್ನು ತೆಗೆದುಹಾಕಲು ಮಾತ್ರವೇ ಬಳಸಿರಬೇಕು. ಹೆಚ್ಚಿನ ಶಕ್ತಿ ವ್ಯಯ ಮಾಡದೆ ಸ್ವಲ್ಪ ಮಟ್ಟಿಗೆ ನಿಯಂತ್ರಿತ ಬಲ ಪ್ರಯೋಗದಿಂದ ಕಡಿಮೆ ಗಾತ್ರದ ಪ್ರಾಥಮಿಕ ಚಕ್ಕೆಯಲ್ಲಿಯೇ ಉದ್ದೇಶಿತ ಆಕಾರ ಮತ್ತು ಅಲ-ಗುಗಳನ್ನು ಹೊಂದಿರುವಂತಹ ಚಕ್ಕೆಗಳನ್ನು ತೆಗೆಯಬಹುದಾದ ಕಲ್ಲು-ಸುತ್ತಿಗೆ ವಿಧಾನವನ್ನು ಹೆಚ್ಚಾಗಿ ಬಳಸಿದೆ. ಮಧ್ಯಮ ಹಾಗೂ ಕಿರುಗಾತ್ರದ ತೆಳ್ಳನೆಯ ತುದಿ ಹಾಗೂ ಬದಿ ಚಕ್ಕೆಗಳನ್ನೂ ವಿಶಿಷ್ಟ ಉದ್ದೇಶಕ್ಕೆ ಬಳಸಿಕೊಂಡಿರುವುದು ಕಾಣುತ್ತದೆ. ನೀಳಚಕ್ಕೆ ಗುಂಪಿನ ಉಪಕರಣಗಳನ್ನು ರೂಪಿಸಲು ತುದಿ ಚಕ್ಕೆಗಳನ್ನು ಹೆರೆಚಕ್ಕೆ, ಮೊನೆ ಗುಂಪಿನ ಮಾದರಿಗಳನ್ನು ರಚಿಸಲು ಬದಿ ಚಕ್ಕೆಗಳನ್ನು ಬಳಸಿದೆ. ದುಂಡಾದ ಹೆರೆಚಕ್ಕೆ ಮೂಲ ಶಿಲಾಗಟ್ಟಿ ಹೆರೆಚಕ್ಕೆ ಮತ್ತು ದುಂಡಾದ ಉಪಕರಣಗಳನ್ನು ತಯಾ-ರಿಸಲು ಲೆವಲ್ಲಾಯಸ್ ಮತ್ತು ಮೌಸ್ಟೀರಿಯನ್ ಮೂಲಗಟ್ಟಿ ಮತ್ತು ಚಕ್ಕೆಗಳನ್ನು ಹೆಚ್ಚಾಗಿ ಉಪಯೋಗಿಸಿರುವುದು ಕಂಡು ಬರುತ್ತದೆ. ಇದರಿಂದ ಕಾವೇರಿ ಉತ್ತರ ದಂಡೆಯ ಮಧ್ಯ ಹಳೆಶಿಲಾಯುಗದ ಮಾನವನಿಗೆ ಅಂತ್ಯ ಅಶ್ಯೂಲಿಯನ್ ಕಾಲ-ಕ್ಕಾಗಲೇ ಮೊದಲೇ ತಯಾರಿಸಿದ ನಿರ್ದಿಷ್ಟ ಆಮೆಯ ಆಕಾರದ ಮೂಲ ಗಟ್ಟಿಗಳನ್ನು ರೂಪಿಸಿ ಸ್ವಲ್ಪ ಮಟ್ಟಿಗೆ ನಿಯಂತ್ರಿತ ಬಲ ಪ್ರಯೋಗ ಮಾಡಿ ದುಂಡನೆಯ ಉಪಕರಣಗಳನ್ನು ತಯಾರಿಸುವ ತಂತ್ರದ ಪರಿಚಯವಿದ್ದುದು ತಿಳಿಯುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ಚಕ್ಕೆ ಉಪಕರಣಗಳಲ್ಲಿ ಮಧ್ಯಮ ಗಾತ್ರದ ಪ್ರಾಥಮಿಕ ಚಕ್ಕೆಗಳಲ್ಲಿ ದ್ವಿತೀಯ ಶ್ರೇಣಿಯ ಚಕ್ಕೆಗಳನ್ನೆಬ್ಬಿಸಿರುವುದು ಕಡಿಮೆ. ಆದರೆ ಕಿರುಗಾತ್ರದ ಉಪಕರಣಗಳಲ್ಲಿ ಅದರಲ್ಲಿಯೂ ಜಾಸ್ಪರ್, ಡೈಕ್ ಹಾಗೂ ಕ್ವಾರ್ಟ್ಸ್ ಗುಂಪಿನ ಮಾದರಿಗಳಲ್ಲಿ ಮರು ಚಕ್ಕೆ ಮತ್ತು ಪುಡಿ ಚಕ್ಕೆ ಕೆಲಸಗಳು ಹೆಚ್ಚಾಗಿ ಕಂಡು ಬರು-ತ್ತದೆ. ಇವು ಸಹ ಕಾರ್ಯನಿರ್ವಹಿಸುವ ಅಲಗು ಅಥವಾ ಮೊನೆಯಿರುವ ಭಾಗಗಳಲ್ಲಿ ಹೆಚ್ಚು. ಈ ಪ್ರದೇಶದಲ್ಲಿ ಇಂತಹ ಮೃದು ಶಿಲೆಗಳು ದೊರಕುವುದು ಕಡಿಮೆಯಾಗಿರುವುದು ಇದಕ್ಕೆ ಕಾರಣವಾಗಿರಬೇಕು.

**ಪರಿಶೀಲನೆ**

ಮೊದಲನೆಯದಾಗಿ ಈ ಸಂಸ್ಕೃತಿಯ ನೆಲೆಗಳ ಬಗ್ಗೆ ಗಮನಿಸಬಹುದಾದ ಅಂಶಗಳೆಂದರೆ, ಈ ನೆಲೆಗಳ ಸಂಖ್ಯೆ ಸ್ವಲ್ಪ ಹೆಚ್ಚಳವಿರುವುದು(ಕೋಷ್ಟಕ ಸಂಖ್ಯೆ ೫.೨ ಮತ್ತು ಭೂ ನಕ್ಷೆ ಪುಟ ಸಂಖ್ಯೆ ೧೦೧).

ಎರಡನೆಯದಾಗಿ ಅಪ್ಪಾನಹಳ್ಳಿ, ಅವರ‍್ಗಲ್ಲು, ಓಬಳಾಪುರ, ಕೈಮರ, ಗಳಿಗೆಕೆರೆ, ದೊಡ್ಡಗುಣಿ, ಬೊಮ್ಮೇನ-ಹಳ್ಳಿ, ಮಾರಶೆಟ್ಟಿಹಳ್ಳಿ, ಮೂಗನಾಯಕನಕೋಟೆ, ಮಂಚಲ್ದೊರೆ, ಯಕ್ಕಲಕಟ್ಟೆ, ಯಲ್ಲಪ್ಪನಾಯಕನಹೊಸಕೋಟೆ, ಶಿವಪುರ ಹರೆನಹಳ್ಳಿ ಹೊನ್ನೇಮಾರನಹಳ್ಳಿ ಮೊದಲಾದ ೧೫ ಆದಿ ಹಳೆಶಿಲಾಯುಗದ ನೆಲೆಗಳಲ್ಲಿಯೇ ಮಧ್ಯಹಳೆ ಶಿಲಾಯುಗದ ನೆಲೆಗಳಿರುವುದು.

ಮೂರನೆಯದಾಗಿ ಈ ನೆಲೆಗಳಲ್ಲಿಯ ಬಹಳಷ್ಟು ಉಪಕರಣಗಳನ್ನು ಆದಿಹಳೆಶಿಲಾಯುಗದಲ್ಲಿ ಬಳಸಿದ ಕ್ವಾರ್ಟ್ಜ್ (೧೩೦ ಶೇ.೫೨-೮೪) ಮತ್ತು ಕ್ವಾರ್ಟ್ಜೈಟ್( ೯೪೭ಶೇ ೧೯.೧೦) ಶಿಲೆಯನ್ನು ಬಳಸಿರುವುದು.

ನಾಲ್ಕನೆಯದಾಗಿ ಈ ಶಿಲೆಗಳಲ್ಲದೆ ಆದಿರುಯುಕ್ತ ಕ್ವಾರ್ಟ್ಜ್ ೨೦ಶೇ. ೧೧.೭೮ ಜಾಸ್ಪರ್ ೧೪ಶೇ. ೫.೭೯ ಡಾಲರೈಟ್ ೧೪ ಶೇ. ೧.೬೨ ಶಿಲೆಗಳನ್ನು ಬಳಸಿ ಉಪಕರಣಗಳನ್ನು ಮಾಡಲಾಗಿದೆ.

ಈ ನೆಲೆಗಳಲ್ಲಿ ಒಂದು ವಿಶಿಷ್ಟ ಸಂಗತಿ ಇದೆ. ಆದಿ ಹಳೆಶಿಲಾಯುಧ ಮಾದರಿಯ ಕಿರುಗಾತ್ರದ ಕೈಗೊಡಲಿ ಮತ್ತು ಚಕ್ರಾಕಾರದ ಉಪಕರಣಗಳಿವೆ. ಇವುಗಳನ್ನೂ ಕ್ವಾರ್ಟ್ಜ್ ಮತ್ತು ಕ್ವಾರ್ಟ್ಜೈಟ್ ಶಿಲೆಯಲ್ಲಿ ರೂಪಿಸಿದೆ. ಇತರ ಶಿಲೆಯಲ್ಲಿ ರೂಪಿಸಿದ ಉಪಕರಣಗಳೆಂದರೆ ಹೆರೆಚಕ್ಕೆ, ಮೊನೆ, ಬಾಣದಮೊನೆ ಕೊರೆಗ, ನೀಳಚಕ್ಕೆ, ಮೊದಲಾದವು.

ಕೃಷ್ಣಾ ನದೀ ಬಯಲಿನ ಸಾಲ್ವಡಗಿ ಮೊದಲಾದ ಪ್ರದೇಶಗಳಲ್ಲಿ ವಿವಿಧ ಪ್ರಕಾರದ ಜಾಸ್ಪರ್ ಶಿಲೆಯ ಉಪ-ಕರಣಗಳಿವೆ. ಇದಕ್ಕೆ ಕಾರಣ ಜಾಸ್ಪರ್ ಉತ್ತಮ ಜಾತಿಯ ಶಿಲೆಯಾಗಿದುದರಿಂದ ಬೇಕಾದ ಆಕೃತಿಗಳನ್ನು ಪಡೆಯಲು ಸಾಧ್ಯ. ಆದರೆ ತುಮಕೂರು ಜಿಲ್ಲಾ ಪ್ರದೇಶದ ಜಾಸ್ಪರ್ ಕಲ್ಲು ಸಾಲ್ವಡಗಿ ಪ್ರದೇಶದ ಕಲ್ಲಿನಷ್ಟು ಉತ್ತಮ ವರ್ಗದ್ದಲ್ಲ. ಇದಾ-ಗಲೀ ಡೈಕ್ ಮೊದಲಾದ ಕಲ್ಲುಗಳು ಬೇಕಾದ ಉದ್ದೇಶಿತ ಆಕೃತಿಗಳನ್ನು ತಯಾರಿಸಲು ಅಷ್ಟಾಗಿ ಯೊಗ್ಯವಾಗಿಲ್ಲ.

ಬಹುಶಃ ಉತ್ತಮ ಜಾತಿಯ ಜಾಸ್ಪರ್ ನಲ್ಲಿ ಚಕ್ಕೆ ಉಪಕರಣಗಳನ್ನು ಮಾಡಲು ಉಪಯೋಗಿಸಿದ್ದಿರಬಹು-ದಾದ ಲಿವೆಲ್ವಾ ತಂತ್ರವನ್ನೂ ಉಪಯೋಗಿಸಿ ಕಲ್ಲುಗಳಲ್ಲಿ ಅಂತಹುದೇ ಉಪಕರಣಗಳನ್ನು ರೂಪಿಸಿರುವುದು ಕಷ್ಟ.

ಪ್ರಾಯಶಃ ಆದಿ ಹಳೆಶಿಲಾಯುಗದ ನೀಳಕೋಲು ಸುತ್ತಿಗೆ ತಂತ್ರದಿಂದ ಎಬ್ಬಿಸಿದ ಸಣ್ಣಸಣ್ಣ ಚಕ್ಕೆಗಳನ್ನೇ ಉಪಕರಣಗಳನ್ನಾಗಿ ಮಾಡಿದಂತೆ ತೋರುತ್ತದೆ. ಈ ಕಲ್ಲುಗಳಲ್ಲಿ ಸೂಕ್ಷ್ಮವಾಗಿ ಪುಡಿ ಚಕ್ಕೆಗಳನ್ನು ಎಬ್ಬಿಸುವುದು ಕಷ್ಟ. ಹಾಗಿದ್ದರೂ ಇತರ ಪ್ರಕಾರದ ಕಲ್ಲುಗಳನ್ನು ಉಪಕರಣ ಮಾಡಲು ಉಪಯೋಗಿಸಿರುವುದು ಗಮನಾರ್ಹ.

**ಆಯ್ದ ಉಪಕರಣಗಳ ವಿವರಣೆ**

**ಕೈಗೊಡಲಿ**

೧. ಮಂಚಲ್ದೊರೆ:- ಕ್ವಾರ್ಟ್ಸೈಟ್ ಶಿಲೆ. ಉದ್ದ ೭೫ ಅಗಲ ೫೦ ದಪ್ಪ ೩೫ ಮಿ.ಮೀ. ಎಲೆಯಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬು ಇದೆ. ಸಣ್ಣಸಣ್ಣ ಚಕ್ಕೆಕಲೆ ಇದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ತೆಳುವಾಗಿದ್ದು ಅಲಗು ಮೊಂಡಾಗಿದೆ. ಉಪಕರಣದ ಮಧ್ಯದಲ್ಲಿ ಎರಡೂ ಪಾರ್ಶ್ವಗಳಲ್ಲೂ ಸಣ್ಣಸಣ್ಣಚಕ್ಕೆ ತೆಗೆದು ಹಿಡಿಕೆಗೆ ಸೇರಿಸುವಂತೆ ಮಾಡಿದೆ. ಹಿಂಬದಿ ಸಮತಲ ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-೧ ನಕ್ಷೆ-೫೩(ಸಾಂಕಳಿಯಾ:೧೯೭೪;೧೯೨)

೨. ಮೂಗನಾಯಕನಕೋಟೆ:- ಕ್ವಾರ್ಟ್ಸ್ ಶಿಲೆ ಉದ್ದ ೭೦ ಅಗಲ ೫೫ ದಪ್ಪ ೩೦ ಮಿ.ಮೀ. ಅಸಮ ಆಯತಾಕಾರ, ಮುಂಬದಿ ಮಧ್ಯ ಉಬ್ಬೇಣು ಇದೆ. ಹಲವು ಚಕ್ಕೆ ತೆಗೆದು ಅಲಗು ಮೂಡಿಸಿದೆ. ಮೊಂಡು ಮೇಲ್ತುದಿ ಇದೆ. ಕೆಳತುದಿ ಹರಿತವಾಗಿದೆ. ಹಿಂಬದಿ ಅಸಮತಲವಾಗಿದೆ. ಚಕ್ಕೆ ಕಲೆ ಇದೆ ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ನಿಮ್ನವಾಗಿದೆ. ಮೂಲಶಿಲಾ ತೊಗಟೆ ಮುಂಬದಿಯ ಕೆಳತುದಿಯಲ್ಲಿದೆ.
ಸಾಮ್ಯ:-೬ ನಕ್ಷೆ ೩.೧(ರಾಜು.ಡಿ.ಆರ್:೧೯೮೮)

೩. ಹೋನ್ನೇಮಾರನಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೭೫ ಅಗಲ ೫೦ ದಪ್ಪ ೩೦ ಮಿ.ಮೀ. ಅಸಮ ಆಯತಾಕಾರ, ಮುಂಬದಿ ಮಧ್ಯ ಉಬ್ಬೇಣು ಇದೆ, ಸಣ್ಣಸಣ್ಣ ಚಕ್ಕೆ ತೆಗೆದು ಅಲಗು ಮೂಡಿಸಿದೆ. ಮೊಂಡು ತುದಿಯನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲಿ ಅಲಗು ಇದೆ ಹಿಂಬದಿ ಅಸಮತಲವಾಗಿದ್ದು ಮಧ್ಯ ಉಬ್ಬು ಇದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ-೧ ನಕ್ಷೆ-೩.೧ (ಸಾಂಕಳಿಯಾ.ಎಚ್.ಡಿ :೧೯೭೪;೩೩)

೪. ಮೂಗನಾಯಕನಕೋಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೫೫ ಅಗಲ ೫೦ ದಪ್ಪ ೩೫ ಮಿ.ಮೀ. ಅಸಮ ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದು ಅಲಗು ಮೂಡಿಸಿದೆ. ಮೇಲ್ತುದಿ ಅಲಗಿದೆ. ಕೆಳತುದಿ ದಪ್ಪವಾಗಿ ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದೆ. ಹಿಂಬದಿ ಪೀನವಾಗಿದೆ. ಅಡ್ಡ ವಿನ್ಯಾಸದಲ್ಲಿ ಅಂಡಾಕಾರ.
ಸಾಮ್ಯ:-ಸಂಖ್ಯೆ ೧೯೫. ನಕ್ಷೆ ೪೬C. ಸಂಗನಕಲ್ಲು (ಸಾಂಕಳಿಯಾ.ಎಚ್.ಡಿ.೧೯೭೪; ೧೭೩ )
(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ )

೫.. ಅಪ್ಪಾನಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೮೦ ಅಗಲ ೫೦ ದಪ್ಪ ೩೦ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿಯಲ್ಲಿ ಹಲವು ಚಕ್ಕೆ ತೆಗೆದಿದೆ. ಹರಿತ ಅಲಗಿದೆ. ಮಧ್ಯ ಉಬ್ಬೇಣು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ವಕ್ರರೇಖೆಯ ಅಲಗು ಇದೆ. ಹಿಂಬದಿ ನಿಮ್ನವಾಗಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ೨, ನಕ್ಷೆ ೫೩(ಸಾಂಕಳಿಯಾ.ಎಚ್.ಡಿ:೧೯೭೪;೧೯೨)









ಗಾತ್ರ- ೧:೦.೫ ೩




**ಚಕ್ರಾಕಾರದ ಉಪಕರಣ**

೬. ಮೂಗನಾಯಕನಕೋಟೆ:- ಕ್ವಾರ್ಟ್ಸ್ ಶಿಲೆ ವ್ಯಾಸ. ೬೫ ದಪ್ಪ ೨೫ ಮಿ.ಮೀ. ವೃತ್ತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ಬದಿಯಲ್ಲಿ ಪರಿಧಿಯ ಸುತ್ತ ಸಣ್ಣಸಣ್ಣ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಹರಿತ ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಹೀನವಾಗಿದೆ. ಅಲ್ಲಲ್ಲಿ ಮೂಲಶಿಲಾ ತೊಗಟೆ ಅಂಶ ಉಳಿದಿದೆ.

ಸಾಮ್ಯ:- ಸಂಖ್ಯೆ-೨ ನಕ್ಷೆ-೫೩(ಸಾಂಕಳಿಯ:೧೯೭೪;೧೯೨)

೭. ಯಕ್ಕಲಕಟ್ಟೆ:- ಕ್ವಾರ್ಟ್ಸ್ ಶಿಲೆ. ವ್ಯಾಸ ೬೫ ದಪ್ಪ ೨೫ ಮಿ.ಮೀ. ವೃತ್ತಾಕಾರ ಎರಡೂ ಬದಿಗಳಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದು ಪರಿಧಿಯ ಸುತ್ತ ಹರಿತ ಅಲಗು ರೂಪಿಸಿದೆ. ಪರಿಧಿಯ ಒಂದು ಕಡೆ ಮೊನೆ ರೂಪಿಸಿದೆ. ಎರಡೂ ಬದಿ ಮಧ್ಯ ಉಬ್ಬು ಇದೆ. ಹರಿತ ಅಲಗು ವಕ್ರರೇಖೆಯಲ್ಲಿದೆ.

ಸಾಮ್ಯ:- ಸಂಖ್ಯೆ-೮೮ ನಕ್ಷೆ-೨೦. ಕೃಷ್ಣ ಬೇಸಿನ್(ಪಪ್ಪು.ಆರ್.ಎಸ್:೧೯೭೪;೭೯).

೮. ಅವರ್ಗಲ್ಲು:- ಬಿಳಿ ಕ್ವಾರ್ಟ್ಸ್ ಶಿಲೆ. ವ್ಯಾಸ ೭೦ ದಪ್ಪ ೫೦ ಮಿ.ಮೀ. ಅಸಮ ವೃತ್ತಾಕಾರ ಮುಂಬದಿ ಮಧ್ಯ ಉಬ್ಬು ಇದೆ. ಹಲವು ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಬುಡದಲ್ಲಿ ದಪ್ಪವಾಗಿದ್ದು ಹಿಂಬದಿಯಲ್ಲಿ ತಾಡನ ವೇದಿಕೆ ಇದೆ. ಸಮತಲವಾಗಿದೆ.

ಸಾಮ್ಯ:-ಸಂಖ್ಯೆ ೫ ನಕ್ಷೆ ೫೦ ಬುಂದೇಲ್ ಖಂಡ (ಸಾಂಕಳಿಯಾ.ಎಚ್.ಡಿ: ೧೯೭೪;೧೮೪)

೯. ಅಪ್ಪಾನಹಳ್ಳಿ:- ನಸು ಹಳದಿ ಬಣ್ಣದ ಕ್ವಾರ್ಟ್ಸ್ ಶಿಲೆ. ವ್ಯಾಸ ೫೫ ದಪ್ಪ ೨೫ ಮಿ.ಮೀ. ಅಸಮ ವೃತ್ತಾಕಾರ. ಎರಡೂ ಬದಿ ಪರಿಧಿಯ ಸುತ್ತಾ ಸಣ್ಣಸಣ್ಣ ಚಕ್ಕೆ ತೆಗೆದುಹರಿತ ಅಲಗನ್ನು ರೂಪಿಸಿದೆ. ಮಧ್ಯ ಉಬ್ಬೇಣು ಮತ್ತು ಚಕ್ಕೆಕಲೆ ಇದೆ. ಹರಿತ ಅಲಗು ವಕ್ಯರೇಖೆಯಲ್ಲಿದೆ. ಮೂಲಶಿಲಾತೊಗಟೆ ಅಲ್ಲಲ್ಲಿ ಇದೆ.

ಸಾಮ್ಯ:- ಸಂಖ್ಯೆ- ೯.ನಕ್ಷೆ. ೨೦ ಕೃಷ್ಣಾ ಬೇಸಿನ್. (ಪಪ್ಪು.ಎರ್.ಎಸ್:೧೯೭೪;೭೯)

೧೦. ಮಂಚಲ್ದೊರೆ:- ನಸು ಗೆಂಪು ಬಣ್ಣದ ಕ್ವಾರ್ಟ್ಸ್‌ಶಿಲೆ. ವ್ಯಾಸ ೫೫ ದಪ್ಪ ೨೦ ಮಿ.ಮೀ. ಅಸಮ ವೃತ್ತಾಕಾರ. ಮುಂಬದಿಯಲ್ಲಿ ಉಬ್ಬಿದೆ. ಮೂಲಶಿಲಾ ತೊಗಟೆ ಅಂಶವಿದೆ. ಹಲವು ಚಕ್ಕೆ ತೆಗೆದು ಪರಿಧಿಯ ಸುತ್ತಲೂ ಹರಿತ ಅಲಗು ಮೂಡಿಸಿದೆ. ಮೇಲ್ತುದಿಯಲ್ಲಿ ಮೊನೆ ಇದೆ ಹಿಂಬದಿ ನಿಮ್ನವಾಗಿದ್ದು ತಾಡನ ಕಂಖು ಇದೆ.

ಸಾಮ್ಯ:- ಸಂಖ್ಯೆ- ೫ ನಕ್ಷೆ-೩.೧(ರಾಜು.ಡಿ.ಆರ್: ೧೯೮೮;೩೩)








ಗಾತ್ರ-೧:೦.೫



**ಹೆರೆಚಕ್ಕೆ ಉಪಕರಣ**

**ಒಬ್ಬದಿ ಹೆರೆಚಕ್ಕೆ**

೧೧. ಯಕ್ಕಲಕಟ್ಟೆ:- ಬಿಳಿ ಕ್ವಾರ್ಟ್ಸ್‌ಶಿಲೆ. ಉದ್ದ ೬೫ ಅಗಲ ೫೦ ದಪ್ಪ ೨೫ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಉಬ್ಬಿದೆ. ಚಕ್ಕೆ ತೆಗೆದಿದೆ. ಎರಡೂ ಪಾರ್ಶ್ವದಲ್ಲಿ ಸಣ್ಣ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಮೇಲ್ತುದಿ ಮತ್ತು ಬಲಪಾರ್ಶ್ವಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ತಾಡನ ವೇದಿಕೆ ಇದೆ. ಹಿಡಿಕೆಗೆ ತಕ್ಕಂತೆ ಅಲ್ಲಲ್ಲಿ ಚಕ್ಕೆ ತೆಗೆದು ರೂಪಿಸಿಕೊಳ್ಳಲಾಗಿದೆ. ಮೂಲಶಿಲಾ ತೊಗಟೆ ಅಲ್ಪ ಪ್ರಮಾಣದಲ್ಲಿದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೦ ನಕ್ಷೆ-೨೧ ಕೃಷ್ಣಾ ಬೇಸಿನ್(ಪಪ್ಪು.ಆರ್.ಎಸ್:೧೯೬೪;೯೨).

೧೨. ಮೂಗನಾಯಕನಕೋಟೆ:- ಜಾಸ್ಪರ್ ಶಿಲೆ. ಉದ್ದ ೬೦ ಅಗಲ ೫೦ ದಪ್ಪ ೨೫ ಮಿ.ಮೀ. ಅನಿರ್ಧಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಚಕ್ಕೆ ಕಲೆಗಳಿವೆ. ಎಡ ಪಾರ್ಶ್ವದಲ್ಲಿ ಅಲಗನ್ನು ಮೂಡಿಸಿದೆ. ಪುಡಿ ಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡಾಗಿದ್ದು ಬಲ ಪಾರ್ಶ್ವ ಅಲಗನ್ನು ಹೊಂದಿದೆ. ಹಿಂಬದಿ ಸಮತಲವಾಗಿದೆ. ತಾಡನ ವೇದಿಕೆ ಇದೆ.
ಸಾಮ್ಯ:- ಸಂಖ್ಯೆ-೧೨ ನಕ್ಷೆ- ೨೧ ಕೃಷ್ಣಾ ಬೇಸಿನ್(ಪಪ್ಪು.ಆರ್.ಎಸ್:೧೯೬೬;೯೨)

೧೪. ಮಾರಶೆಟ್ಟಿಹಳ್ಳಿ:- ಕ್ವಾರ್ಟ್ಸೈಟ್ ಶಿಲೆ .ಉದ್ದ ೫೫ ಅಗಲ ೪೦ ದಪ್ಪ ೨೮ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಮೇಲ್ತುದಿ ದಪ್ಪವಾಗಿದ್ದು ಮೊಂಡಾಗಿದೆ. ಕೆಳತುದಿ ತೆಳ್ಳಗಿದ್ದು ಮೊಂಡಾಗಿದೆ. ಬಲಪಾರ್ಶ್ವ ಹೊಂದಿದೆ. ಎಡಪರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದೆ. ತಾಡನವೇದಿಕೆ ಇದೆ.
ಸಾಮ್ಯ:-ಅಪರೂಪದ ಉಪಕರಣ. (ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೧೫. ಮೂಗನಾಯಕನಕೋಟೆ:- ನಸು ಗೆಂಪು ಕ್ವಾರ್ಟ್ಸ್ ಶಿಲೆ ಉದ್ದ ೫೦ ಅಗಲ ೪೫ ದಪ್ಪ ೨೦ಮಿ.ಮೀ. ಅಸಮ ವೃತ್ತಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಚಕ್ಕೆಕಲೆ ಇದೆ ಸಣ್ಣಸಣ್ಣ ಚಕ್ಕೆ ತೆಗೆದು ಅಲಗು ಮೂಡಿಸಿದೆ. ಹಿಡಿಕೆಗೆ ತಕ್ಕಂತೆ ಮೇಲ್ತುದಿ ಮತ್ತು ಮುಂಬದಿಯಲ್ಲಿ ಚಕ್ಕೆ ತೆಗೆದಿದೆ. ಬಲಪಾರ್ಶ್ವದಲ್ಲಿಹರಿತ ಅಲಗು ಇದೆ. ಹಿಂಬದಿ ಸಮತಲವಾಗಿದೆ. ಕೆಳತುದಿಯಲ್ಲಿತಾಡನ ವೇದಿಕೆ ಇದೆ. ಮೂಲ ಶಿಲಾ ತೊಗಟೆ ಅಂಶವಿದೆ.

ಸಾಮ್ಯ:-ಸಂಖ್ಯೆ.೬ ನಕ್ಷೆ ೪೩ ಕೌಡಿವಿಲ್ಲಿ (ಸಾಂಕಳಿಯಾ.ಎಚ್.ಡಿ:೧೯೭೪;೧೬೧ ) (ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೧೬. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸೈಟ್ ಶಿಲೆ. ಉದ್ದ ೪೫ ಅಗಲ ೪೦ ದಪ್ಪ ೨೦.ಮಿ.ಮೀ. ಆಯತಾಕಾರ. ಮುಂಬದಿ ಎರಡೂ ಕಡೆ ಚಕ್ಕೆ ತೆಗೆದಿದೆ. ಮಧ್ಯ ಉಬ್ಬೇಣು ನೇರವಾಗಿದೆ. ಮೇಲ್ತುದಿ ದಪ್ಪವಾಗಿದ್ದು ಮೊಂಡಾಗಿದೆ. ಕೆಳತುದಿ ಮೊಂಡಾಗಿದೆ. ಎಡಪಾರ್ಶ್ವ ಹರಿತವಾಗಿದೆ. ಹಿಂಬದಿ ಅಸಮತಲವಾಗಿದೆ. ಮೂಲಶಿಲಾ ತೊಗಟೆ ಅಂಶವಿದೆ. ಅಡ್ಡವಿನ್ಯಾಸದಲ್ಲಿ ಕಂಸಾಕಾರ.

ಸಾಮ್ಯ:- ಸಂಖ್ಯೆ-೧೪ ನಕ್ಷೆ- ೨೨ ಕೃಷ್ಣ ಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪)


೧೧


೧೨


೧೩


೧೬

ಗಾತ್ರ-೧:೦.೫



ಇಬ್ಬದಿ ಹೆರೆಚಕ್ಕೆ

೧೭. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ ಉದ್ದ ೮೫ ಅಗಲ ೫೫ ದಪ್ಪ ೨೦ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡಾಗಿದೆ. ಕೆಳತುದಿ ಹರಿತವಾಗಿದೆ. ಪಾರ್ಶ್ವಗಳಲ್ಲಿ ಹರಿತ ಅಲಗಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:-(ಸಂಖ್ಯೆ- ೧೪ ನಕ್ಷೆ -೨೨ ಕೃಷ್ಣಾ ಬೇಸಿನ್)(ಪಪ್ಪು.ಆರ್.ಎಸ್:೧೯೭೪;೯೪) (ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೧೮. ಮೂಗನಾಯಕನಕೋಟೆ:- ಕ್ವಾರ್ಟ್ಸೈಟ್ ಶಿಲೆ. ಉದ್ದ ೭೦ ಅಗಲ ೭೦ ದಪ್ಪ ೨೦ ಮಿ.ಮೀ. ತ್ರಿಭುಜಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬು ಇದೆ. ಸಣ್ಣಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಹರಿತ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ವಕ್ರ ರೇಖೆಯಲ್ಲಿದೆ. ಪುಡಿಗೆಲಸ ಮಾಡಿದೆ. ಕೆಳತುದಿ ಕಂಸಾಕಾರದ ಅಲಗನ್ನು ಹೊಂದಿದೆ. ಹಿಂಬದಿ ತಾಡನ ವೇದಿಕೆ ಇದೆ. ಹೆಚ್ಚು ಕಡಿಮೆ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ-೧ ನಕ್ಷೆ-೫೧ (ಸಾಂಕಳಿಯಾ.ಎಚ್.ಡಿ:೧೯೭೪;೧೮೬)

೧೯. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೭೦ ಅಗಲ೫೦ ದಪ್ಪ ೧೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಸಣ್ಣ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಮೇಲ್ತುದಿ ದಪ್ಪವಾಗಿದೆ. ಕೆಳ ತುದಿ ಹರಿತವಾಗಿದೆ. ನಿಮ್ನ ಅಲಗನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದೆ. ಹಿಂಬದಿ ಹೀನವಾಗಿದೆ. ತಾಡನ ವೇದಿಕೆ ಮತ್ತು ಶಂಖು ಇದೆ.

ಸಾಮ್ಯ:- ಸಂಖ್ಯೆ-೩ ನಕ್ಷೆ-೪೬ (ಸಾಂಕಳಿಯಾಎಚ್.ಡಿ:೧೯೭೪;೧೬೫)

೨೦. ದೊಡ್ಡಗುಣಿ:- ಬಿಳಿ ಕ್ವಾರ್ಟ್ಜ್ ಶಿಲೆ. ಉದ್ದ ೬೦ ಅಗಲ ೫೦ ದಪ್ಪ ೧೫ ಮಿ.ಮೀ. ಅಸಮ ಆಯತಾಕಾರ. ಮುಂಬದಿಯ ಬಲಭಾಗದಲ್ಲಿ ಉಬ್ಬೇಣು ನೇರವಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದೆ. ಪುಡಿಗೆಲಸ ಮಾಡಿದೆ. ಮೇಲ್ತುದಿ ಮೊಂಡಾಗಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಚಕ್ಕೆ ಕಲೆಗಳಿವೆ.
ಸಾಮ್ಯ:- ಸಂಖ್ಯೆ- ೧೧ ನಕ್ಷೆ - ೪೪ (ಸಾಂಕಳಿಯಾ.ಎಚ್.ಡಿ:೧೯೭೪;೧೬.೨)

೨೧. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೬೦ ಅಗಲ ೪೫ ದಪ್ಪ ೨೦ ಮಿ.ಮೀ. ಅಂಡಾಕಾರ. ಮುಂಬದಿಮಧ್ಯ ಉಬ್ಬು ಇದೆ. ಚಕ್ಕೆ ಕಲೆಗಳಿವೆ. ಮೇಲ್ತುದಿ ಮತ್ತು ಕೆಳತುದಗಿಗಲಲ್ಲಿ ಮೊನೆ ಇದೆ. ಸಣ್ಣಸಣ್ಣ ಚಕ್ಕೆ ತೆಗೆದು ಹರಿತ ಅಲಗನ್ನು ಎರಡೂ ಪಾರ್ಶ್ವಗಳಲ್ಲೂ ರೂಪಿಸಿದೆ. ಹಿಂಬದಿ ಸಮತಲವಾಗಿದೆ.
ಸಾಮ್ಯ:- ಸಂಖ್ಯೆ - ೩೪ ಪ್ಲೇಟ್ - XVIII a ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)




ಗಾತ್ರ-೧:೦.೫




**ದುಂಡು ಹೆರೆಚಕ್ಕೆ**

೨೨. ಮೂಗನಾಯಕನಕೋಟೆ:- ಕ್ವಾರ್ಟ್ಸ ಶಿಲೆ. ವ್ಯಾಸ ೬೦ ದಪ್ಪ ೨೫ ಮಿ.ಮೀ. ಅಸಮ ವೃತ್ತಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ತೆಗೆದು ಪರಿಧಿಯ ಸುತ್ತಲೂ ಹರಿತ ಅಲಗನ್ನುರೂಪಿಸಿದೆ. ಸಣ್ಣಸಣ್ಣ ಚಕ್ಕೆ ತೆಗೆದಿರುವುದರಿಂದ ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ಕಲೆಗಳಿವೆ.
ಸಾಮ್ಯ:-ಸಂಖ್ಯೆ- ೧೪ ನಕ್ಷೆ- ೨೨ ಕೃಷ್ಣಾ ಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪) (ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೨೩. ಮೂಗನಾಯಕನಕೋಟೆ:- ಕ್ವಾರ್ಟ್ಸ ಶಿಲೆ. ವ್ಯಾಸ ೬೦ ದಪ್ಪ ೨೫ ಮಿಮೀ. ಅಸಮ ವೃತ್ತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದು ಪರಿಧಿಯ ಸುತ್ತ ಹರಿತ ಅಲಗನ್ನು ಮೂಡಿಸಿದೆ. ಹರಿತ ಅಲಗು ವಕ್ರರೇಖೆಯಲ್ಲಿದೆ. ಪುಡಿಗೆಲಸಮಾಡಿದೆ. ಹಿಂಬದಿ ಮಧ್ಯ ಉಬ್ಬು ಇದೆ.
ಸಾಮ್ಯ:- ಸಂಖ್ಯೆ-೧೯ ನಕ್ಷೆ- ೪.೧೫ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೫)

೨೪. ಅವರ್ಗಲ್ಲು:- ಹರಳುಯುಕ್ತ ಕ್ವಾರ್ಟ್ಸ್‌ಶಿಲೆ. ವ್ಯಾಸ ೭೦ ದಪ್ಪ ೨೦ ಮಿ.ಮೀ. ವೃತ್ತಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಮೇಲರ್ಧ ಭಾಗದ ಸುತ್ತಲೂ ಹರಿತ ಅಲಗಿದೆ. ಉಳಿದ ಭಾಗ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಮೂಲಶಿಲೆ ಉತ್ತಮ ಗುಣಮಟ್ಟದ್ದಲ್ಲ.

ಸಾಮ್ಯ:- ಸಂಖ್ಯೆ - ೧೭ ನಕ್ಷೆ - ೨೨ ಕೃಷ್ಣಾಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪)

೨೫. ಕೈಮರ:- ಕ್ವಾರ್ಟ್ಸ್‌ಶಿಲೆ. ವ್ಯಾಸ ೭೦ ದಪ್ಪ ೨೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ತೆಗೆದು ಎಡ ಮತ್ತು ಬಲಪಾರ್ಶ್ವಗಳಲ್ಲಿ ಅಲಗು ರೂಪಿಸಿದೆ. ಮೇಲ್ತುದಿ ಮೊನೆ ಇದೆ. ಕೆಲತುದಿ ದಪ್ಪವಾಗಿದ್ದು ಮೊಂಡಾಗಿದೆ. ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಸಮತಲ.

ಸಾಮ್ಯ:- ಸಂಖ್ಯೆ - ೧೮ ನಕ್ಷೆ - ೨೨ ಕೃಷ್ಣಾಬೇಸಿನ್ (ಪಪ್ಪು.ಆರ್.ಎಸ್:೧೯೭೪;೨೨)

೨೬. ದೊಡ್ಡಗುಣಿ:- ಕ್ವಾರ್ಟ್ಸ್‌ಶಿಲೆ. ವ್ಯಾಸ ೪೫ ದಪ್ಪ ೧೫ ಮಿಮೀ. ಅಸಮ ವೃತ್ತಾಕಾರ. ಮುಂಬದಿ ಮಧ್ಯದಲ್ಲಿ ಚಕ್ಕೆ ಕಲೆ ಇದೆ. ಎರಡೂ ಪಾರ್ಶ್ವಗಳತ್ತ ಮೂಲಶಿಲಾ ತೊಗಟೆ ಹೊಂದಿದ್ದು ಹರಿತ ಅಲಗಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ತೆಳ್ಳಗಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ತಾಡನವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯಾ - ೨೦ ನಕ್ಷೆ - ೪.೧೫ ಕಲ್ಲಡಗಿ ಬೇಸಿನ್ (ಪ್ಪು.ಆರ್.ಎಸ್.;೧೯೯೪;೪೫೦)




ಗಾತ್ರ-೧:೦.೫




**ಒಳಬಾಗಿದ ಅಂಚಿನ ಹೆರೆಚಕ್ಕೆ**

೨೭. ಗುಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೮೫ ಅಗಲ ೫೦ ದಪ್ಪ ೩೫ ಮಿಮೀ. ಅರ್ಧಚಂದ್ರಾಕೃತಿ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಹರಿತ ಅಲಗು ಒಳಬಾಗಿದೆ. ಅಲಗು ಭಾಗದಲ್ಲಿ ಪುಡಿಚಕ್ಕೆ ತೆಗೆದಿದೆ. ಕೆಳತುದಿ ವೃತ್ತಾಕಾರವಾದ ಹರಿತ ಅಲಗನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಮೊನೆ ರೂಪಿಸಿದೆ. ಹಿಂಬದಿ ಪೀನವಾಗಿದೆ. ಚಕ್ಕೆ ಕಲೆ ಇದೆ.

ಸಾಮ್ಯ:- ಸಂಖ್ಯೆ - ೫ ನಕ್ಷೆ - ೪೭ ಎ (ಸಾಂಕಳಿಯಾ.ಎಚ್.ಡಿ:೧೯೭೪;೧೭೭)

೨೮. ಮಾರಶೆಟ್ಟಿಹಳ್ಳಿ:- ಕಂದುಹಸಿರು ಬಣ್ಣದ ಕ್ವಾರ್ಟ್ಸೈಟ್ ಶಿಲೆ. ಉದ್ದ ೬೦ ಅಗಲ ೫೫ ದಪ್ಪ ೧೦ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಉಬ್ಬು ಇದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡಾಗಿದ್ದು ಎಡಭಾಗದಲ್ಲಿ ಮೊನೆ ರೂಪಿಸಿದೆ. ಕೆಳತುದಿ ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಅಲಗು ರೂಪಿಸಲು ಪುಡಿ ಚಕ್ಕೆ ತೆಗೆದು ಒಳಬಾಗಿದ ಹರಿತ ಅಲಗು ರೂಪಿಸಿದೆ. ಬಲಪಾರ್ಶ್ವದ ಅಲಗು ಫೀನವಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೧೯ ನಕ್ಷೆ- ೨೨ ಕೃಷ್ಣಾ ಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪) (ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೨೯. ಅಪ್ಪಾನಹಳ್ಳಿ:- ತಿಳಿ ಹಸಿರು ಬಣ್ಣದ ಕ್ವಾರ್ಟ್ಸ್‌ಶಿಲೆ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದು ಉಪಕರಣ ರೂಪಿಸಿದೆ. ಮೇಲ್ತುದಿ ತೆಳುವಾಗಿದ್ದು ಅಲಗು ಇದೆ. ಕೆಳತುದಿ ತೆಳುವಾಗಿದ್ದು ಮಧ್ಯದಲ್ಲಿ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಹರಿತವಾದ ಒಳಬಾಗಿದ ಅಲಗು ಇದೆ. ಹಿಂಬದಿ ಫೀನವಾಗಿದೆ. ತಾಡನ ವೇದಿಕೆ ಮತ್ತು ಶಂಖುವಿದೆ.

ಸಾಮ್ಯ:- ಸಂಖ್ಯೆ - ೧೧ ನಕ್ಷೆ - ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೭)

೩೦. ಅಪ್ಪಾನಹಳ್ಳಿ:- ಕ್ವಾರ್ಟ್ಸ್‌ಶಿಲೆ. ಉದ್ದ ೬೦ ಅಗಲ ೩೫ ದಪ್ಪ ೧೫ ಮಿ.ಮೀ. ಅರ್ಧಚಂದ್ರಾಕಾರ. ಮುಂಬದಿ ಚಕ್ಕೆ ಕಲೆಗಳಿದ್ದು ನಿಮ್ನವಾಗಿದೆ. ಮೇಲ್ತುದಿ ಅಲಗು ರೂಪಿಸಲು ಆಳಚಕ್ಕೆ ತೆಗೆದಿದೆ. ಒಳ ಬಾಗಿದ ಅಲಗು ಇದೆ. ಕೆಳತುದಿ ಅರ್ಧ ವೃತ್ತಾಕಾರವಿದ್ದು ಚಕ್ಕೆ ತೆಗೆದು ಅಲಗು ರೂಪಿಸಿದೆ. ಮಧ್ಯದಲ್ಲಿ ಮೊನೆ ಇದೆ. ಎಡಪಾರ್ಶ್ವದಲ್ಲಿಯೂ ಮೊನೆ ಇದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳ್ಳಗಿದ್ದು ಅಲಗನ್ನು ಹೊಂದಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಮೂಲಶಿಲಾ ತೊಗಟೆ ಅಂಶ ಅಲ್ಲಲ್ಲಿ ಇದೆ. ಬೆರಳಿಡಿಕೆಗೆ ಹೊಂದುವಂತೆ ಚಕ್ಕೆ ತೆಗೆದಿದೆ.

ಸಾಮ್ಯ:- ಸಂಖ್ಯೆ - ೨೦ ನಕ್ಷೆ - ೨೨ ಕೃಷ್ಣಾಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪)

೩೧. ಬೂದಿಗುಡ್ಡ:- ಅದಿರುಯುಕ್ತ ಜಾಸ್ಪರ್‌ಶಿಲೆ. ಉದ್ದ ೪೫ ಅಗಲ ೩೫ ದಪ್ಪ ೧೫ ಮಿಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಸಮತಲವಾಗಿದೆ. ಮೇಲ್ತುದಿ ಆಳಚಕ್ಕೆ ತೆಗೆದು ಒಳಬಾಗಿದ ಅಲಗು ರೂಪಿಸಿದೆ. ಪುಡಿಗೆಲಸ ಮಾಡಿದ್ದು ಅಲಗು ವಕ್ರ ರೇಖೆಯಲ್ಲಿದೆ. ಎರಡೂ ಪಾರ್ಶ್ವಗಳೂ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ ೨೨ ನಕ್ಷೆ - ೨೨ ಕೃಷ್ಣಾ ಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪)
















ಗಾತ್ರ-೧:೦.೫

೩.೨. ಅಪ್ಪಾನಹಳ್ಳಿ:- ಕ್ವಾರ್ಟ್ಜ಼ ಶಿಲೆ. ಉದ್ದ ೬೦ ಅಗಲ ೫೦ ದಪ್ಪ ೨೦ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿ ತೆಳುವಾಗಿದ್ದು ವಕ್ರರೇಖೆಯ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎಡಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಬಲಪಾರ್ಶ್ವದ ಮೇಲ್ಭಾಗ ತೆಳ್ಳಗಿದ್ದು ಅಲಗನ್ನು ಹೊಂದಿದೆ. ಹಿಂಬದಿ ಪೀನವಾಗಿದೆ. ಚಕ್ಕೆ ಕಲೆಗಳಿವೆ. ತಾಡನ ವೇದಿಕೆ ಮತ್ತು ಶಂಖುವಿದೆ. ಅಡ್ಡವಿನ್ಯಾಸದಲ್ಲಿ ಆಯತಾಕಾರ.
ಸಾಮ್ಯ:- ಸಂಖ್ಯೆ - ೧೪ ನಕ್ಷೆ - ೨೨ ಕೃಷ್ಣಾಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪)

೩.೩. ಮೂಗನಾಯಕನಕೋಟೆ:- ಕ್ವಾರ್ಟ್ಜ಼ ಶಿಲೆ. ಉದ್ದ ೫೫ ಅಗಲ ೪೫ ದಪ್ಪ ೨೦ ಮಿಮೀ. ಆಯತಾಕಾರ. ಮುಂಬದಿಯ ಮೇಲ್ಭಾಗದಲ್ಲಿ ಚಕ್ಕೆ ತೆಗೆದ ಕಲೆ ಇದ್ದು ಮೇಲ್ತುದಿಯಲ್ಲಿ ಅಲಗು ಮೂಡಿಸಿದೆ. ಕೆಳಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಬಲಪಾರ್ಶ್ವದ ಅಂಚು ದಪ್ಪವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಆಳಚಕ್ಕೆತೆಗೆದು ಹರಿತ ಅಲಗನ್ನು ರೂಪಿಸಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಮೂಲಶಿಲಾತೊಗಟೆ ಅಂಶವಿದೆ. ಹಿಂಬದಿ ಪೀನವಾಗಿದ್ದು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸದಲ್ಲಿ ಆಯತಾಕಾರ.
ಸಾಮ್ಯ:- ಸಂಖ್ಯೆ- ೬ ನಕ್ಷೆ- ೫೨ ಕಚ್(ಗುಜರಾತ್)(ಸಾಂಕಳಿಯಾ.ಎಚ್.ಡಿ:೧೯೭೪;೧೯೦)(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೩.೪. ಗಳಿಗೆಕೆರೆ:- ಬಿಳಿ ಕ್ವಾರ್ಟ್ಜ಼ ಶಿಲೆ. ಉದ್ದ ೪೫ ಅಗಲ ೪೦ ದಪ್ಪ ೧೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಸಮತಲವಿದ್ದು ಎಡಪಾರ್ಶ್ವಕ್ಕೆ ಮತ್ತು ಮೇಲ್ತುದಿಗೆ ಚಕ್ಕೆ ತೆಗೆದ ಕಲೆಗಳಿವೆ. ಮೇಲ್ತುದಿ ಚಿಕ್ಕ ಚಿಕ್ಕ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಮಧ್ಯ ಭಾಗ ನಿಮ್ನವಾಗಿದೆ. ಕೆಳತುದಿಯಲ್ಲಿ ಮೊನೆ ಇದೆ. ಹಿಂಬದಿ ಅಸಮತಲ ಚಕ್ಕೆ ಕಲೆಗಳಿವೆ.
ಸಾಮ್ಯ:- ಸಂಖ್ಯೆ - ೧೪ ನಕ್ಷೆ - ೩.೧ (ರಾಜು.ಡಿ.ಆರ್:೧೯೮೮)

೩.೫. ಅಪ್ಪಾನಹಳ್ಳಿ:- ಕ್ವಾರ್ಟ್ಜ಼ ಶಿಲೆ. ಉದ್ದ ೫೦ ಅಗಲ ೩೫ ದಪ್ಪ ೧೫ ಮಿ.ಮೀ. ಹೆಚ್ಚು ಕಡಿಮೆ ಅಂಡಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು, ಮೇಲರ್ಧ ಭಾಗದಲ್ಲಿ ಚಿಕ್ಕಚಿಕ್ಕ ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಉಳಿದ ಭಾಗ ದಪ್ಪವಾಗಿದ್ದು ಮೊಂಡಾಗಿದೆ. ಮುಂಬದಿಯ ಮಧ್ಯದಲ್ಲಿ ಸಮಣ್ಣ ಚಕ್ಕೆ ತೆಗೆದು ಬೆರಳಿಡಿಕೆಗೆ ಅಲುಕೂಲವಾಗಿರುವಂತೆ ಮಾಡಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಚಕ್ಕೆ ಕಲೆಗಳಿವೆ.
ಸಾಮ್ಯ:- ಸಂಖ್ಯೆ - ೧೬ ಪ್ಲೇಟ್ - VIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩.೬. ಅಪ್ಪಾನಹಳ್ಳಿ:- ಕ್ವಾರ್ಟ್ಜ಼ ಶಿಲೆ. ಉದ್ದ ೪೫ ಅಗಲ ೩೩ ದಪ್ಪ ೧೦ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಕೆಳತುದಿಯಲ್ಲಿ ಉಬ್ಬೇಣು ಇದ್ದು ಮೇಲ್ತುದಿಯತ್ತ ಚಕ್ಕೆಕಲೆಸಾಗಿದೆ. ಮೇಲ್ತುದಿ ಅಗಲ ಹರಿತ ಅಲಗನ್ನು ಹೊಂದಿದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದು. ಮಧ್ಯದಲ್ಲಿ ಮೊನೆರೂಪಿಸಿದೆ. ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಾಗಿದ್ದು ಆಳ ಚಕ್ಕೆ ತೆಗೆದಿದೆ. ಮೊನೆ ಇದೆ. ಹಿಂಬದಿ ಹಚ್ಚು ಕಡಿಮೆ ಸಮತಲವಾಗಿದೆ. ಅಲ್ಲಲ್ಲಿ ಪುಡಿಗೆಲಸ ಮಾಡಿದೆ.
ಸಾಮ್ಯ:- ಸಂಖ್ಯೆ- ೨೯ ಪ್ಲೇಟ್ XVIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯ.ಆರ್ :೧೯೭೫)









ಗಾತ್ರ-೧:೦.೫ ೩.೫

**ಮೊನೆ ಮಾದರಿ**

**ಸಾಮಾನ್ಯ ಮೊನೆ**

೩೭. ಅವರಗಲ್ಲು:- ಕ್ವಾರ್ಟ್ಜ಼ಶಿಲೆ. ಉದ್ದ ೬೦ ಅಗಲ ೫೦ ದಪ್ಪ ೨೨ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಎರಡು ಆಳಚಕ್ಕೆ ತೆಗೆದು ಮೇಲ್ತುದಿಯಲ್ಲಿ ಮೊನೆ ಮೂಡಿಸಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗು ದೀರ್ಘ ವೃತ್ತಾಕಾರದಲ್ಲಿದೆ. ಪುಡಿಗೆಲಸ ಮಾಡಿದೆ. ಬಲ-ಪಾರ್ಶ್ವ ಮೊಂಡಾಗಿದೆ. ಕೆಳತುದಿ ತೆಳ್ಳಗಿದ್ದು ಅಲಗನ್ನು ಹೊಂದಿದೆ. ಹಿಂಬದಿ ನಿಮ್ನವಾಗಿದೆ. ತಾಡನವೇದಿಕೆ ಮತ್ತು ಶಂಖುವಿದೆ.
ಸಾಮ್ಯ:- ಸಂಖ್ಯೆ - ೧೫ ನಕ್ಷೆ - ೧೫ ಕಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೭೪;೪೫)

೩೮. ಮಂಚಕಲ್‌ಕುಪ್ಪೆ:- ಕ್ವಾರ್ಟ್ಜ಼ಶಿಲೆ. ಉದ್ದ ೫೫ ಅಗಲ ೪೫ ದಪ್ಪ ೧೫ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಸಣ್ಣಸಣ್ಣ ಚಕ್ಕೆ ತೆಗೆದು ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ಮತ್ತು ಮೇಲ್ತುದಿಯಲ್ಲಿ ಮೊನೆ ಮೂಡಿಸಿದೆ. ಕೆಳತುದಿ ಮೊಂಡಾಗಿದೆ. ಮೂಲ ಶಿಲಾ ತೊಗಟೆ ಅಂಶವಿದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವಿದೆ.
ಸಾಮ್ಯ:- ಸಂಖ್ಯೆ - ೨೫ ನಕ್ಷೆ - ೨೨ ಕೃಷ್ಣಾಬೇಸಿನ್ (ಪಪ್ಪು.ಆರ್.ಎಸ್:೧೯೭೪;೯೪)

೩೯. ಅಪ್ಪಾನಹಳ್ಳಿ:- ಕ್ವಾರ್ಟ್ಜ಼ಶಿಲೆ. ಉದ್ದ ೪೫ ಅಗಲ ೪೫ ದಪ್ಪ ೨೫ ಮಿ.ಮೀ. ತ್ರಿಭುಜಾಕಾರ. ಮಧ್ಯ ಉಬ್ಬೇಣು ಇದ್ದು ಚಕ್ಕೆ ತೆಗೆದು ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ಮತ್ತು ಮೇಲ್ತುದಿಯಲ್ಲಿ ಮೊನೆ ಮೂಡಿಸಿದೆ. ಕೆಳತುದಿ ದಪ್ಪವಿದ್ದು ದೀರ್ಘ ವೃತ್ತಾಕಾರವಾಗಿದೆ. ಹಿಂಬದಿ ಅಸಮತಲವಾಗಿದ್ದು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ - ೧೭ ನಕ್ಷೆ - ೪.೧೫ ಕಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೫)

೪೦. ಕರಡಿ:- ಕ್ವಾರ್ಟ್ಜ಼ಶಿಲೆ. ಉದ್ದ ೪೫ ಅಗಲ ೪೫ ದಪ್ಪ ೧೦ ಮಿ.ಮೀ. ಚತುರ್ಭುಜಾಕಾರ. ಮುಂಬದಿಯಲ್ಲಿ ಅಲಗಿನ ಹತ್ತಿರ ಉಬ್ಬು ಇದ್ದು ಮೂಲಶಿಲಾ ತೊಗಟೆ ಅಂಶವಿದೆ. ಮೇಲ್ತುದಿಯ ಮೊನೆಯ ಎರಡೂ ಬದಿ ಪುಡಿಗೆಲಸ ಮಾಡಿದೆ. ಎರಡೂ ಪಾರ್ಶ್ವಗಳೂ ದಪ್ಪವಾಗಿದ್ದು ಮೊಂಡಾಗಿವೆ. ಕೆಳತುದಿಯಲ್ಲಿ ಮೊಂಡು ಅಲಗು ಇದೆ. ಹಿಂಬದಿ ಸಮತಲವಾಗಿದೆ.
ಸಾಮ್ಯ:- ಸಂಖ್ಯೆ - ೧೭ ನಕ್ಷೆ - ೪.೧೫ ಕಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೫)

೪೧. ಹೊನ್ನೇಮಾರನಹಳ್ಳಿ:- ಕ್ವಾರ್ಟ್ಜ಼ಶಿಲೆ. ಉದ್ದ ೫೦ ಅಗಲ ೪೫ ದಪ್ಪ ೧೨ ಮಿಮೀ. ಚತುರ್ಭುಜಾಕಾರ. ಮುಂಬದಿ ಸಮತಲವಾಗಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಇದೆ. ಎಡಪಾರ್ಶ್ವದ ಮೇಲ್ಭಾಗದಲ್ಲಿ ಹರಿತ ಅಲಗಿದ್ದು ಪುಡಿಗೆಲಸದಿಂದಾಗಿ ವಕ್ರರೇಖೆಯಲ್ಲಿದೆ. ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವದ ಮೇಲ್ಭಾಗ ದಪ್ಪಗಿದ್ದು ಮೊಂಡಾಗಿದೆ. ಕೆಳಭಾಗ ಹರಿತವಾಗಿದೆ. ಕೆಳತುದಿ ಮೊನೆ ಇದೆ. ಹಿಂಬದಿ ಪೀನವಾಗಿದೆ. ಚಕ್ಕೆ ಕಲೆ ಇದೆ.
ಸಾಮ್ಯ:- ಸಂಖ್ಯೆ - ೧೭ ನಕ್ಷೆ - ೬.೧ (ಡಿ.ಆರ್.ರಾಜು:೧೯೮೮;೩೩)







೩೭ ೩೮ ೩೯ ೪೦ ೪೧

ಗಾತ್ರ-೧:೦.೫




**ಬಾಣದ ಮೊನೆ**

೪೨. ಮಿಡಿಗೇಶಿ:- ಡೈಕ್ ಶಿಲೆ. ಉದ್ದ ೧೧೦ ಅಗಲ ೬೫ ದಪ್ಪ ೨೫ ಮಿಮೀ. ತ್ರಿಭುಜಾಕಾರ. ಮುಂಬದಿಯಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿದ್ದು ಹಿಡಿಕೆಯ ಗೂಟ ಹೊಂದಿದೆ. ಎರಡೂ ಪಾರ್ಶ್ವದಲ್ಲೂ ಹರಿತ ಅಲಗಿದ್ದು ಪುಡಿಗೆಲಸ ಮಾಡಿದೆ. ಹಿಂಬದಿ ಸಮತಲವಾಗಿದ್ದು ಕೆಳತುದಿಯಲ್ಲಿ ತಾಡನವೇದಿಕೆ ಮತ್ತು ಶಂಖು ಇದೆ. ನೈಸರ್ಗಿಕ ಹಳದಿ ಪೊರೆ ಇದೆ.
ಸಾಮ್ಯ:- ಸಂಖ್ಯೆ - ೨ ನಕ್ಷೆ - ೩೬ (ಸಾಂಕಳಿಯಾ.ಎಚ್.ಡಿ:೧೯೬೪;೧೫೧)

೪೩. ನಿಡುಗಲ್ಲು:- ಡಾಲರೈಟ್ ಶಿಲೆ. ಉದ್ದ ೯೫ ಅಗಲ ೫೫ ದಪ್ಪ ೨೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಬಲ ಮತ್ತು ಎಡ ಪಾರ್ಶ್ವಗಳಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಮೇಲ್ತುದಿ ಹರಿತ ಮೊನೆ ಹೊಂದಿದೆ. ಕೆಳ ತುದಿಯಲ್ಲಿ ಹಿಡಿಕೆಯ ಗೂಟವಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖು ಮತ್ತು ವೇದಿಕೆಯನ್ನು ಹೊಂದಿದೆ.
ಸಾಮ್ಯ:- ಸಂಖ್ಯೆ - ೬ ನಕ್ಷೆ - ೩೬ (ಸಾಂಕಳಿಯಾ.ಎಚ್.ಡಿ:೧೯೬೪;೧೫೧)

೪೪. ಹೊನ್ನೇಮಾರನಹಳ್ಳಿ:- ಡೈಕ್‌ಶಿಲೆ. ಉದ್ದ ೮೫ ಅಗಲ ೫೫ ದಪ್ಪ ೨೦ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ಬದಿಗೂ ಚಕ್ಕೆ ತೆಗೆದಿದೆ. ಎರಡೂ ಪಾರ್ಶ್ವಗಳು ಹರಿತ ಅಲಗನ್ನು ಹೊಂದಿವೆ. ಮೇಲ್ತುದಿ ಮೊನೆ ಇದೆ. ಕೆಳತುದಿ ತೆಳ್ಳಗಿದ್ದು ಹಿಡಿಕೆಯನ್ನು ಹೊಂದಿದೆ. ಹಿಂಬದಿ ನಿಮ್ನವಾಗಿದೆ. ನೈಸರ್ಗಿಕ ಪೊರೆ ಇದೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ - ೨ ನಕ್ಷೆ - ೫೨ (ಸಾಂಕಳಿಯಾ.ಎಚ್.ಡಿ:೧೯೬೪;೧೮೯)

೪೫. ಕೈಮರ:- ಕ್ವಾರ್ಟ್ಜ್‌ಶಿಲೆ. ಉದ್ದ ೫೦ ಅಗಲ ೩೫ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಕೆಳಭಾಗ ದಪ್ಪವಿದ್ದು ಬಲಭಾಗದಲ್ಲಿ ಉಬ್ಬೇಣು ಇದೆ. ಬಲಬದಿಗೆ ಆಳಚಕ್ಕೆ ತೆಗೆದು ಅಲಗು ಮೂಡಿಸಿದೆ. ಎಡಪಾರ್ಶ್ವಕ್ಕೆ ಚಕ್ಕೆ ತೆಗೆದು ತೆಳುವಾಗಿದ್ದು ಅಲಗಿದೆ. ಪುಡಿಗೆಲಸ ಮಾಡಿ ಗರಗಸ ಮೂಡಿಸಿದೆ. ಮೇಲ್ತುದಿ ಮೊನೆ ಇದ್ದು ಮೊಂಡಾಗಿದೆ. ಹಿಂಬದಿ ದಪ್ಪವಾಗಿದ್ದು ವೃತ್ತಾಕಾರದಲ್ಲಿದೆ. ಹಿಂಬದಿ ಸಮತಲವಿದ್ದು ತಾಡನವೇದಿಕೆ ಮತ್ತು ಶಂಖುವಿದೆ. ಮೂಲಶಿಲಾ ತೊಗಟೆ ಅಂಶವಿದೆ.
ಸಾಮ್ಯ:- ಸಂಖ್ಯೆ - ೪ ನಕ್ಷೆ - ೩೬ (ಸಾಂಕಳಿಯಾ.ಎಚ್.ಡಿ:೧೯೬೪;೧೫೧)

೪೬. ಹೊನ್ನೇಮಾರನಹಳ್ಳಿ:- ಕ್ವಾರ್ಟ್ಜ್‌ಶಿಲೆ. ಉದ್ದ ೫೦ ಅಗಲ ೩೫ ದಪ್ಪ ೧೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಚಕ್ಕೆ ಕಲೆಗಳಿವೆ. ಎಡಪಾರ್ಶ್ವಕ್ಕೆ ಚಕ್ಕೆ ತೆಗೆದು ಅಲಗನ್ನು ರೂಪಿಸಿದೆ. ಪುಡಿಗೆಲಸ ಮಾಡಿ ಗರಗಸವನ್ನು ರೂಪಿಸಿದೆ. ಬಲಪಾರ್ಶ್ವದಲ್ಲಿ ಮೂಲಶಿಲಾ ತೊಗಟೆ ಇದೆ. ಮೇಲ್ತುದಿ ಮೊನೆ ಇದ್ದು ಪುಡಿಗೆಲಸ ಮಾಡಿದೆ. ಕೆಳತುದಿ ತೆಳುವಾಗಿದ್ದು ಹಿಡಿಕೆಗೆ ಚಕ್ಕೆ ತೆಗೆದಿದೆ. ಹಿಂಬದಿ ಪೀನವಾಗಿದೆ.
ಸಾಮ್ಯ:- ಸಂಖ್ಯೆ- ೧೫ ನಕ್ಷೆ- ೩.೧ (ರಾಜು.ಡಿ.ಆರ್:೧೯೮೮;೩೩)












ಗಾತ್ರ-೧:೦.೫



**ಕೊರೆಗ**

೪೭. ಬೂದಿಗುಡ್ಡ:- ಡೈಕ್‌ಶಿಲೆ. ಉದ್ದ ೮೦ ಅಗಲ ೭೫ ದಪ್ಪ ೨೦ ಮಿಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಕೆಳತುದಿಯಿಂದ ಚಾಚು ಮೊನೆಯ ತುದಿವರೆಗೂ ಇದೆ. ಚಕ್ಕೆ ಕಲೆ ಇದೆ. ಉಪಕರಣದ ಪರಿಧಿಯ ಸುತ್ತಲೂ ಹರಿತ ಅಲಗು ಇದೆ. ಮೊನೆಯ ತುದಿ ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಚಾಚು ಮೊನೆಯ ಬದಿಗಳಲ್ಲಿ ಚಕ್ಕೆಗಳನ್ನು ತೆಗೆದಿದೆ.

ಸಾಮ್ಯ:- ಸಂಖ್ಯೆ - ೪ ನಕ್ಷೆ - ೪೫ ಸಾಂಕಳಿಯಾ;೧೯೭೪;೧೭೪

ಸಂಖ್ಯೆ - ೩೩ ನಕ್ಷೆ - ೨೪ ಕೃಷ್ಣಾಬೇಸಿನ್ (ಪಪ್ಪು.ಆರ್.ಎಸ್:೧೯೭೪;೧೦೧)

೪೮. ಅಪ್ಪಾನಹಳ್ಳಿ:- ಕ್ವಾರ್ಟ್ಸ್‌ಶಿಲೆ. ಉದ್ದ ೭೦ ಅಗಲ ೪೫ ದಪ್ಪ ೧೫ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಬಲ-ಪಾರ್ಶ್ವದಲ್ಲಿ ಚಾಚು ಮೊನೆಯ ತುದಿವರೆಗೂ ಸಾಗಿದೆ. ಬಲಪಾರ್ಶ್ವಕ್ಕೆ ಆಳಚಕ್ಕೆ ತೆಗೆದು ಹರಿತ ಅಲಗನ್ನು ಗರಗಸದಂತೆ ಮೂಡಿಸಿದೆ. ಎಡ-ಪಾರ್ಶ್ವದ ಮೇಲ್ಭಾಗ ಹರಿತ ಅಲಗನ್ನು ಹೊಂದಿದೆ. ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಮೇಲ್ತುದಿಯಲ್ಲಿ ಬಲಕ್ಕೆ ಚಾಚು ಮೊನೆ ರೂಪಿಸಿದೆ. ತುದಿ ಮುರಿದಿದೆ. ಹಿಂಬದಿ ಸಮತಲ ತಾಡನ ಶಂಖು ಮತ್ತು ವೇದಿಕೆ ಇದೆ.

ಸಾಮ್ಯ:- ಸಂಖ್ಯೆ - ೭ ನಕ್ಷೆ - ೩೮ (ಸಾಂಕಳಿಯಾ.ಎಚ್.ಡಿ:೧೯೭೪;೧೫೩)

೪೯. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್‌ಶಿಲೆ. ಉದ್ದ ೭೫ ಅಗಲ ೪೫ ದಪ್ಪ ೧೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಮೇಲ್ತುದಿಯ ಮಧ್ಯದಲ್ಲಿ ಚಾಚು ಮೊನೆ ಇದೆ. ಬಲ ಮತ್ತು ಎಡಪಾರ್ಶ್ವದ ಮೇಲರ್ಧ ಭಾಗ ಹರಿತವಾಗಿದೆ. ಉಳಿದ ಭಾಗ ಮೊಂಡಾಗಿದೆ. ಕೆಳತುದಿ ನಿಮ್ನವಾಗಿದ್ದು ಹಿಡಿಕೆಗೆ ಅನುಕೂಲವಾಗುವಂತೆ ಚಕ್ಕೆ ತೆಗೆದಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ - ೩೮ ನಕ್ಷೆ - ೫೩ ನಾಗಾರ್ಜುನಕೊಂಡ ( ಸುಬ್ರಹ್ಮಣ್ಯಂ.;೧೯೭೪)

೫೦. ಮೂಗನಾಯಕನಕೋಟೆ:- ಅದಿರುಯುಕ್ತ ಜಾಸ್ಪರ್‌ಶಿಲೆ. ಉದ್ದ ೭೦ ಅಗಲ ೪೫ ದಪ್ಪ ೨೦ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಮಧ್ಯದಲ್ಲಿ ಚಾಚು ಮೊನೆ ಇದ್ದು ಚೂಪಾಗಿದೆ. ಎಡಪಾರ್ಶ್ವದ ಮೇಲ್ಬದಿಯಲ್ಲಿ ಮತ್ತೊಂದು ಮೊನೆ ಇದ್ದು ಮೊಂಡಾಗಿದೆ. ಹಿಂಬದಿ ಸಮತಲ. ತಾಡನ ವೇದಿಕೆ ಮತ್ತು ಶಂಖು ಇದೆ. ಅಲ್ಲಲ್ಲಿ ಪುಡಿಗೆಲಸ ಮಾಡಿದೆ.

ಸಾಮ್ಯ:- ಸಂಖ್ಯೆ - ೪೪ ನಕ್ಷೆ - ೩೮ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

ಸಂಖ್ಯೆ - ೪೩ ನಕ್ಷೆ - VI (ಪೂಣಚ್ಚ:೧೯೯೦;೨೭೭)

ಸಂಖ್ಯೆ - ೧೮ ನಕ್ಷೆ - ೪.೧೫ ಕಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೫)
















ಗಾತ್ರ-೧:೦.೫








**ವೀಳಚಕ್ಕೆ ಉಪಕರಣ**

**ಒಬ್ಬದಿ ವೀಳಚಕ್ಕೆ**

೫೨. ಹರೇನಹಳ್ಳಿ:- ಅದಿರುಯುಕ್ತ ಜಾಸ್ಪರ್‌ಶಿಲೆ. ಉದ್ದ ೭೦ ಅಗಲ ೪೦ ದಪ್ಪ ೨೫ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಬುಡದಿಂದ ಮೇಲಿನವರೆಗೂ ವಕ್ರವಾಗಿ ಸಾಗಿದೆ. ಮೇಲ್ತುದಿಯಲ್ಲಿ ಮೊನೆ ಇದೆ. ಕೆಳತುದಿ ಹರಿತ ಅಲಗಿದ್ದು ನಿಮ್ನವಾಗಿದೆ. ಎಡ-ಬದಿಗೆ ಮೊನೆ ರೂಪಿತವಾಗಿದೆ. ಬಲಪಾರ್ಶ್ವದ ಅರ್ಧ ಭಾಗ ಮೊಂಡಾಗಿದ್ದು ಉಳಿದ ಭಾಗ ಹರಿತವಾಗಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದ್ದು ಪುಡಿಚಕ್ಕೆ ತೆಗೆದಿರುವುದರಿಂದ ವಕ್ರ ರೇಖೆಯಲ್ಲಿದೆ. ಹಿಂಬದಿ ಅಸಮತಲ. ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕೃತಿ.

ಸಾಮ್ಯ:- ಸಂಖ್ಯೆ - ೪೮ ಪ್ಲೇಟ್- XVIII B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ:೧೯೭೫)

೫೩. ಅಪ್ಪಾನಹಳ್ಳಿ:- ಕ್ವಾರ್ಟ್ಸ್‌ಶಿಲೆ. ಉದ್ದ ೭೦ ಅಗಲ ೫೦ ದಪ್ಪ ೧೦ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮೇಲ್ಮಧ್ಯ ಸಮತಲ-ವಾಗಿದ್ದು ಎರಡೂ ಬದಿಗೆ ಚಕ್ಕೆ ತೆಗೆದ ಕಲೆ ಇದೆ. ಮೇಲ್ತುದಿ ಮೊಂಡಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಪುಡಿಗೆಲಸ ಮಾಡಿ-ದೆ. ಎಡಪಾರ್ಶ್ವ ತೆಳುವಾಗಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ತಾಡನವೇದಿಕೆ ಮತ್ತು ಶಂಖುವಿದೆ.

ಸಾಮ್ಯ:- ಸಂಖ್ಯೆ - ೧೭ ನಕ್ಷೆ - ೩.೧ (ರಾಜು.ಡಿ.ಆರ್:೧೯೮೮;೩೩)

೫೪. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್‌ಶಿಲೆ. ಉದ್ದ ೫೫ ಅಗಲ ೪೫ ದಪ್ಪ ೧೮ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಉಬ್ಬೇಣು ಬಲಬದಿಗಿದೆ. ಆಳಚಕ್ಕೆ ತೆಗೆದಿದೆ. ಉಳಿದ ಭಾಗ ಮೂಲಶಿಲಾ ತೊಗಟೆ ಹೊಂದಿದೆ. ಮೇಲ್ತುದಿಯಲ್ಲಿ ಎರಡೂ ಆಳಚಕ್ಕೆ ತೆಗೆದು ಮೊನೆ ಮೂಡಿಸಿದೆ. ಕೆಳತುದಿ ದಪ್ಪವಾಗಿದೆ. ಚಬಲಪಾರ್ಶ್ವ ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದೆ. ಹಿಂಬದಿಯ ಬಲಬದಿಯಲ್ಲಿ ತೆಳು ಚಕ್ಕೆ ತೆಗೆದಿದೆ. ಉಳಿದ ಭಾಗ ಮೂಲಶಿಲಾ ತೊಗಟೆ ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ - ೨೬೧ ನಕ್ಷೆ - ೪೬ ಸಿ (ಸಾಂಕಳಿಯಾ.ಎಚ್.ಡಿ:೧೯೬೪;೧೬೨)

೫೫. ಗುಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೫೫ ಅಗಲ ೪೫ ದಪ್ಪ ೧೮ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಉಬ್ಬೇಣು ಬಲಬದಿಗಿದ್ದು ಎಡಕ್ಕೆ ತೆಳುಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಬಲಬದಿಯಲ್ಲಿ ಮೂಲ ಶಿಲಾ ತೊಗಟೆ ಇದೆ. ಮೇಲ್ತುದಿ ಮತ್ತು ಕೆಳತುದಿ ದಪ್ಪವಾಗಿದ್ದು ಮೊಂಡು ಮೊನೆಗಳಿವೆ. ಹಿಂಬದಿ ಪೀನವಾಗಿದೆ. ಅಲಗು ಭಾಗದಲ್ಲಿ ಚಕ್ಕೆ ತೆಗೆದಿದೆ.
ಸಾಮ್ಯ:- ಸಂಖ್ಯೆ - ೬ ನಕ್ಷೆ - ೪೪ (ಸಾಂಕಳಿಯಾ.ಎಚ್.ಡಿ:೧೯೬೪;೧೬೨)

೫೬. ಕರಡಿ:- ಕಂದು ಬಣ್ಣದ ಕ್ವಾರ್ಟ್ಸೈಟ್‌ಶಿಲೆ. ಉದ್ದ ೫೦ ಅಗಲ ೩೫ ದಪ್ಪ ೧೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು-ಇದ್ದು ಬಲಬದಿಯಿಂದ ಎಡಬದಿಗೆ ತೆಳುಚಕ್ಕೆ ತೆಗೆದು ಎಡಪಾರ್ಶ್ವದಲ್ಲಿ ಹರಿತ ಅಲಗನ್ನು ಮೂಡಿಸಿದೆ. ಮೇಲ್ತುದಿ ದಪ್ಪವಿದ್ದು ಮೊನೆ ಇದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ತಾಡನ ವೇದಿಕೆ ಮತ್ತು ಶಂಖುವಿದೆ.
ಸಾಮ್ಯ:- ಸಂಖ್ಯೆ - ೫೮ ಪ್ಲೇಟ್ - XVIII B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ:೧೯೬೫)






## ವೀಳಚಕ್ಕೆಯಂತಹ ಚಕ್ಕೆ

೫೭. ಅಪ್ಪಾನಹಳ್ಳಿ:- ಕ್ವಾರ್ಟ್ಜ್‌ಶಿಲೆ. ಉದ್ದ ೮೦ ಅಗಲ ೫೫ ದಪ್ಪ ೧೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣಿದ್ದು ಎರಡು ದೊಡ್ಡ ಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡಾಗಿದ್ದು ಅರ್ಧ ಭಾಗ ಹಾಳಾಗಿದೆ. ಎಡಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗಿದ್ದು ವಕ್ರರೇಖೆಯಲ್ಲಿದೆ. ಪುಡಿಗೆಲಸ ಮಾಡಿದೆ. ಕೆಳತುದಿ ಮಧ್ಯದಲ್ಲಿ ಮೊನೆ ಇದೆ. ಹಿಂಬದಿ ಅಸಮತಲವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.
ಸಾಮ್ಯ:- ಸಂಖ್ಯೆ - ೩ ನಕ್ಷೆ - ೫೦ (ಸಾಂಕಳಿಯಾ.ಎಚ್.ಡಿ:೧೯೬೪;೧೮೪)

೫೮. ಮೂಗನಾಯಕನಕೋಟೆ:- ಡೈಕ್‌ಶಿಲೆ. ಉದ್ದ ೭೦ ಅಗಲ ೪೦ ದಪ್ಪ ೧೫ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿಯ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿ ಕೆಳತುದಿಯಿಂದ ಮೇಲ್ತುದಿಯವರೆಗೂ ಸಾಗಿದೆ.ಚ ಬಲಪಾರ್ಶ್ವದಲ್ಲಿ ಚಕ್ಕೆ ತೆಗೆದು ಅಲಗು ವಕ್ರವಾಗಿದ್ದು ಮೊಂಡಾಗಿದೆ. ಎಡಪಾಶರ್ಶ್ವದಲ್ಲಿ ಮೂಲಶಿಲಾ ತೊಗಟೆ ಇರುವ ದೀರ್ಘ ವೃತ್ತಾಕಾರದ ಅಲಗು ಇದೆ. ಮೇಲ್ತುದಿ ಮತ್ತು ಕೆಳತುದಿಗಳೂ ಮೊಂಡಾಗಿವೆ. ಹಿಂಬದಿ ಸಮತಲ ನೈಸರ್ಗಿಕ ಪೊರೆ ಇದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ - ೨೮೯ ನಕ್ಷೆ - ೪೬ ಸಿ ( ಸಾಂಕಳಿಯಾ ಎಚ್.ಡಿ:೧೯೬೪;೧೬೦)

೫೯. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್‌ಶಿಲೆ. ಉದ್ದ ೬೫ ಅಗಲ ೫೦ ದಪ್ಪ ೨೦ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಪರಿಧಿಯ ಎಲ್ಲ ಬದಿಗೂ ಚಕ್ಕೆ ತೆಗೆದ ಕಲೆ ಇದೆ. ಮೇಲ್ತುದಯಲ್ಲಿಎರಡೂ ಚಕ್ಕೆ ತೆಗೆದುಚ ಹರಿತ ಅಲಗು ಮೂಡಿಸಿದೆ. ಕೆಳತುದಿ-ಯಲ್ಲಿ ಒಂದು ಚಕ್ಕೆ ತೆಗೆದುಚ ಹರಿತ ಅಲಗು ಮೂಡಿಸಿದೆ. ಬಲಪಾರ್ಶ್ವಕ್ಕೆ ಒಂದು ಚಕ್ಕೆ ತೆಗೆದು ಅಲಗು ಮೂಡಿಸಿದೆ. ಎಡಪಾರ್ಶ್ವಕ್ಕೆ ಆಳ-ಚಕ್ಕೆ ತೆಗೆದು ಅಲಗು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ತಾಡನ ವೇದಿಕೆ ಮತ್ತು ಶಂಕುವಿದೆ.
ಸಾಮ್ಯ:- ಸಂಖ್ಯೆ - ೮ ನಕ್ಷೆ - ೫೨ (ಸಾಂಕಳಿಯಾ.ಎಚ್.ಡಿ:೧೯೬೪;೧೯೦)

೬೦. ಮೂಗನಾಯಕನಕೋಟೆ:- ಕ್ವಾರ್ಟ್ಜ್‌ಶಿಲೆ. ಉದ್ದ ೭೦ ಅಗಲ ೪೦ ದಪ್ಪ ೧೦ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ತೆಳುವಾಗಿದ್ದು ಅಲಗನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗು ನಿಮ್ನವಾಗಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದ್ದು ದೀರ್ಘ ವೃತ್ತಾಕಾರವಾಗಿ ಸಾಗಿದೆ.
ಸಾಮ್ಯ:- ಸಂಖ್ಯೆ - ೪ ನಕ್ಷೆ - ೫೦ (ಸಾಂಕಳಿಯಾ.ಎಚ್.ಡಿ:೧೯೬೪;೧೮೪)

೬೧. ಮಾರಶೆಟ್ಟಿಹಳ್ಳಿ:- ಕ್ವಾರ್ಟ್ಜ್‌ಶಿಲೆ. ಉದ್ದ ೫೫ ಅಗಲ ೩೫ ದಪ್ಪ ೨೦ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣಿದ್ದು ಚಕ್ಕೆ ಕಲೆ-ಗಳಿವೆ. ಮೇಲ್ತುದಿ ಅಲಗು ಮೊಂಡಾಗಿದ್ದು ಮಧ್ಯ ಭಾಗ ಮುರಿದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವ ಅಲಗನ್ನು ಹೊಂದಿದೆ. ಬಲಪಾರ್ಶ್ವದ ಅಲಗು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ - ೫ ನಕ್ಷೆ - ೫೨ (ಸಾಂಕಳಿಯಾ.ಎಚ್.ಡಿ:೧೯೬೪;೧೯೦)




೫೭



೫೮




೫೯

ಗಾತ್ರ-೧:೦.೫







**ಕೈಚಾಕು ನೀಳಚಕ್ಕೆ**

೬೨. ಮೂಗನಾಯಕನಕೋಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೮೦ ಅಗಲ ೪೦ ದಪ್ಪ ೪೦ ಮಿ.ಮೀ. ಆಕಾರ. ಮುಂಬದಿ ಚಕ್ಕೆ ತೆಗೆದಿದೆ. ಎಡಪಾರ್ಶ್ವ ದಪ್ಪವಾಗಿದ್ದು ಮೂಲಶಿಲಾ ತೊಗಟೆ ಅಂಶವಿದೆ. ಹಿಂಬದಿ ಅಸಮತಲ. ಸಣ್ಣ ಸಣ್ಣ ಚಕ್ಕೆ ಕಲೆಗಳಿವೆ. ಕೆಳತುದಿ ಮೊನೆಯಂತಿದೆ.
ಸಾಮ್ಯ:- ಸಂಖ್ಯೆ - ೧೨ ನಕ್ಷೆ - ೩.೧ (ರಾಜು.ಡಿ.ಆರ್:೧೯೮೮;೩೩)

೬೩. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್‌ಶಿಲೆ. ಉದ್ದ ೬೦ ಅಗಲ ೩೦ ದಪ್ಪ ೩೦ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ಬದಿಕೂ ತೆಳು ಚಕ್ಕೆ ತೆಗೆದಿದೆ. ಮೇಲ್ತುದಿ ಎಡಕ್ಕೆ ಮೊನೆ ಮೂಡಿಸಿದೆ. ಉಳಿದ ಭಾಗ ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಪುಡಿಗೆಲಸ ಮಾಡಿರುವುದರಿಂದ ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿಯಲ್ಲಿ ಮಧ್ಯ ಉಬ್ಬೇಣು ಇದ್ದು ಬಲಭಾಗಕ್ಕೆ ಚಕ್ಕೆ ತೆಗೆದಿದೆ. ಎಡಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ.
ಸಾಮ್ಯ:- ಸಂಖ್ಯೆ - ೨ ನಕ್ಷೆ - ೫.೨ (ಸಾಂಕಳಿಯಾ.ಎಚ್.ಡಿ:೧೯೬೪;೧೯೦)

೬೪. ಹರೇನಹಳ್ಳಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೬೦ ಅಗಲ ೫೦ ದಪ್ಪ ೨೦ ಮಿ.ಮೀ. ಅಸಮ ಆಯತಾಕಾರ. ಮುಂಬದಿಯಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡಾಗಿದೆ. ಎಡಕ್ಕೆ ಮೊನೆ ಇದ್ದು ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಪುಡಿಗೆಲಸ ಮಾಡಿದೆ. ಬಲಪಾರ್ಶ್ವ ತೆಳುವಾಗಿದ್ದು ಅಲಗನ್ನು ಹೊಂದಿದೆ. ಕೆಳತುದಿ ಮೊಂಡಾಗಿದ್ದು ಬೆರಳಿಡಿಕೆಗೆ ಚಕ್ಕೆ ತೆಗೆದಂತಿದೆ. ಹಿಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ಕಲೆ ಇದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ - ೩ ನಕ್ಷೆ - ೫.೩ (ಸಾಂಕಳಿಯಾ.ಎಚ್.ಡಿ:೧೯೬೪;೧೯೨)

೬೫. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್‌ಶಿಲೆ. ಉದ್ದ ೬೦ ಅಗಲ ೫೦ ದಪ್ಪ ೨೫ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯದಲ್ಲಿ ಎಡಭಾಗಕ್ಕೆ ತೆಳುಚಕ್ಕೆ ತೆಗೆದಿದೆ. ಬಲಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಮೇಲ್ತುದಿ ದಪ್ಪವಾಗಿದ್ದು ಸಣ್ಣ ಚಕ್ಕೆ ತೆಗೆದು ಬೆರಳಿಡಿಕೆಗೆ ಸರಿ ಹೊಂದುವಂತೆ ಮಾಡಿದೆ. ಎಡ ತುದಿಯಲ್ಲಿ ಕೊಕ್ಕಿನಂತೆ ರೂಪಿಸಿದೆ. ಎಡಪಾರ್ಶ್ವದಲ್ಲಿ ನಿಮ್ನ ಹರಿತ ಅಲಗು ಇದೆ. ಪುಡಿಗೆಲಸ ಮಾಡಿದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ಚಕ್ಕೆ ಕಲೆ ಇದೆ. ಮೂಲಶಿಲಾ ತೊಗಟೆ ಅಂಶವಿದೆ.
ಸಾಮ್ಯ:- ಸಂಖ್ಯೆ - ೯ ನಕ್ಷೆ - ೫.೨ (ಸಾಂಕಳಿಯಾ.ಎಚ್.ಡಿ:೧೯೬೪;೧೮೯)

ಅಧ್ಯಾಯ ಆರು

# ಅಂತ್ಯ ಹಳೆಶಿಲಾಯುಗ ಸಂಸ್ಕೃತಿ

೧೮೮೪ ರಲ್ಲಿಯೇ ರಾಬರ್ಟ್ ಬ್ರೂಸ್ ಫೂಟ್‌ರವರು ಬಿಲ್ಲಸ್ವರ್ಗನಲ್ಲಿ (ಫೂಟ್,೧೯೧೬;೧೧೮-೧೧೯ ಮತ್ತು ೧೯೦-೯೧) ದೊರೆತ ಮೂಳೆಯ ಉಪಕರಣಗಳನ್ನು ಯೂರೋಪಿನ ಅಂತ್ಯ ಹಳೆಶಿಲಾಯುಗ ಸಂದರ್ಭ ಮ್ಯಾಗ್ಡ ಲೀನಿಯನ್ ಉಪಕರಣಗಳೊಂದಿಗೆ ಹೋಲಿಸಿದ್ದರೂ, ಇತರ ಸಾಂದರ್ಭಿಕ ಆಧಾರಗಳ ಅಭಾವದಿಂದ ಈ ಹಂತವನ್ನು ನಿರ್ದಿಷ್ಟವಾಗಿ ಗುರುತಿಸಲು ಸಾಧ್ಯವಾಗಿರಲಿಲ್ಲ. ಒಂದೆರಡು ದಶಕಗಳ ನಂತರ ಬರ್‌ಕಿಟ್ ಮತ್ತು ಕಮ್ಮೆಡ್ ಅವರ ಸಂಗ್ರಹ-ದಲ್ಲಿದ್ದ ತೃತೀಯ ಶ್ರೇಣಿಯ ಉಪಕರಣಗಳೆಂದು ಗುರುತಿಸಲಾಗಿದ್ದ ನೀಳಚಕ್ಕೆ ಮತ್ತು ಕೊರೆಯುಳಿ ಮಾದರಿಗಳು ದಕ್ಷಿಣ ಭಾರತದಲ್ಲಿ ಅಂತ್ಯ ಹಳೆಶಿಲಾಯುಗದ ಅಸ್ತಿತ್ವದ ಸಾಧ್ಯತೆಯನ್ನು ಸ್ಪಷ್ಟಪಡಿಸಿದವು. (ಕಮ್ಮೆಡ್ ಮತ್ತು ಬರ್ಕಿಟ್;೧೯೩೦). ಆದರೆ ಈ ಆಧಾರಗಳನ್ನು ಸಮರ್ಥಿಸುವಂತಹ ಹೆಚ್ಚಿನ ಮಾಹಿತಿಗಳನ್ನು ನಂತರದ ಪುರಾತತ್ವ ಅಧ್ಯಯನಗಳು ನೀಡಲಿಲ್ಲ. ಕಾಂದಿವಿಲ್ಲಿ, ಗಿಡ್ಡಲೂರು ಮತ್ತು ನೇವಾಸದಲ್ಲಿ ಅನುಕ್ರಮವಾಗಿ ಕೆ.ಆರ್.ಯು.ಟಾಡ್ (೧೯೩೯), ಜೂನರ್ (೧೯೫೦) ಹಾಗೂ ಸಾಂಕಳಿಯಾ (೧೯೫೬) ಅವರು ಅಧ್ಯಯನ ನಡೆಸಿ ಈ ಸಂಸ್ಕೃತಿಯ ಅಸ್ತಿತ್ವದ ಬಗೆಗೆ ಮಂಡಿಸಿದ ಅಭಿಪ್ರಾ-ಯಗಳನ್ನು ಅವು ನಿರ್ದಿಷ್ಟ ಸ್ತರಗಳಲ್ಲಿ ದೊರಕಿಲ್ಲವೆಂಬ ಕಾರಣದಿಂದ ಗಂಭೀರವಾಗಿ ಪರಿಗಣಿಸಲಿಲ್ಲ.

ಹಾಗಿದ್ದರೂ ಕಳೆದ ಮೂರು ದಶಕಗಳಲ್ಲಿ ನಡೆದಿರುವ ಅನೇಕ ಪ್ರಮುಖ ಸ್ಥಳಪರಿಶೋಧನೆ ಹಾಗೂ ಉತ್ಖನ-ನಗಳಿಂದ ಭಾರತದ ಅಂತ್ಯ ಹಳೆಶಿಲಾಯುಗ ಸಂಸ್ಕೃತಿಗೆ ಸಂಬಂಧಪಟ್ಟ ಅನೇಕ ಮಾಹಿತಿಗಳು ಬೆಳಕಿಗೆ ಬಂದಿವೆ. ಉತ್ಖನ-ನಗಳು ನಿರೂಪಿಸಿರುವಂತೆ ಈ ಸಂಸ್ಕೃತಿಯು ಮಧ್ಯ ಹಳೆಶಿಲಾಯುಗ ಮತ್ತು ಸೂಕ್ಷ್ಮ ಶಿಲಾಯುಗಗಳ ನಡುವಿನ ಕಾಲಮಾ-ನದಲ್ಲಿ ಅಸ್ತಿತ್ವದಲ್ಲಿದ್ದಿತ್ತೆಂದು ಸ್ಪಷ್ಟವಾಗಿದೆ. ಅಂತಹ ಪ್ರಮುಖ ನೆಲೆಗಳಲ್ಲಿ ಆಂಧ್ರ ಪ್ರದೇಶದ ಕರ್ನೂಲ್ ಜಿಲ್ಲೆಯ ನೆಲೆಗಳು(ಐಸಾಕ್;೧೯೬೦) ನಾಗಾರ್ಜುನ ಕೊಂಡ (ಸೌಂದರರಾಜನ್.ಎ.ಇಂ-೧೪:೧೯೫೮;೪೯-೧೧೩) ರೇಣಿಗುಂಟ (ಮೂರ್ತಿ;೧೯೬೬ ಮತ್ತು ೧೯೭೦;೧೦೬-೧೨೬)ವೇಮುಲ (ರೆಡ್ಡಿ;೧೯೭೦:೨೨೬-೨೩೪) ಮುಚ್ಚಟ್ಲ ಚಿಂತಾಮಣಿ ಗವಿ (ಮೂರ್ತಿ:೧೯೭೪;೧೯೬-೨೩೦) ಗಂಜಾಂಕೊಳ್ಳದ ನಿವೇಶನಗಳು (.ರಾಜು.ಡಿ.ಆರ್:೧೯೮೮) ಮಹಾರಾಷ್ಟ್ರದ ಪಾಟ್ನೆ (ಸಾಲಿ:೧೯೮೫;೧೨೭-೧೪೫), ನೇವಾಸ ಇನಾಂಗಾಂ(ಧವಳಿಕರ್.ಎಂ.ಕೆ:೧೯೭೮), ಖೇಡಾ (ಇಂ.ಆ.ರಿ:೧೯೬೨-೩), ನಾಂದೇಡ್(ಇಂ.ಆ.ರಿ:೧೯೬೪-೬೫;೨೬), ಶಂಕರತೀರ್ಥ(ಇಂ.ಆ.ರಿ:೧೯೭೫-೭೬). ಗುಜರಾತಿನ ಧವಲಪುರಿ (ಇಂ.ಆ.ರಿ:೧೯೭೫-೭೬), ಚಿರ್ಕಿ(ಕಾರ್ವಿನಸ್:೧೯೭೦;೧೬೯-೭೬), ವಿಸಾದಿ(ಅಲ್ಚಿನ್:೧೯೭೪),

ರಾಜಾಸ್ಥಾನದ ಬುಧ ಪುಷ್ಕರ್(ಅಲ್ಚಿನ್:೧೯೭೨;೫೪೧-೫೭೪), ಮಧ್ಯ ಪ್ರದೇಶದ ರೇವಾ ಜಿಲ್ಲೆಯ ನೆಲೆಗಳು (ಇಂ.ಆ.ರಿ:೧೯೭೫-೭೬;೨೫-೨೭), ಬನ್ಸೇರ್ ಮತ್ತು ವೈನ್‌ಗಂಗಾ, ಬಿಂಬೇಟ್ಕಾ, ಉತ್ತರ ಪ್ರದೇಶದ ಬೇಲಾನ್ ಮತ್ತು ಸೋನ್ ನದೀ ಕಣಿವೆಗಳಲ್ಲಿನ ನೆಲೆಗಳು(ಮಿಶ್ರ:೧೯೭೭) ಬಿಹಾರದ ಸಿಂಗ್‌ಭೂಮ್ (ಘೋಷ್: ೧೯೭೦) ಮತ್ತು ದೇಕು-ಲಿಯಾ (ಇಂ.ಆ.ರಿ: ೧೯೬೫-೬೬) ಮುಂತಾದವು.

ಮೇಲೆ ಹೇಳಿದ ಯಾವುದೇ ನೆಲೆಗಳನ್ನು ಐರೋಪ್ಯ ದೇಶಗಳಲ್ಲಿ ಬೆಳಕಿಗೆ ಬಂದಿರುವ ನೆಲೆಗಳೊಂದಿಗೆ ಉಪಕರಣಗಳ ಸಾದೃಶ್ಯದ ಹೊರತಾಗಿ ಇನ್ನಾವುದೇ ರೀತಿಯಲ್ಲಿ ಹೋಲಿಸಲು ಸಾಧ್ಯವಿಲ್ಲದಿರುವುದು ಗಮನಾರ್ಹ ಅಂಶ. ಏಕೆಂದರೆ ಐರೋಪ್ಯ ದೇಶದ ಅಂತ್ಯ ಹಳೆಶಿಲಾಯುಗ ಸಂಸ್ಕೃತಿಯಲ್ಲಿ ಅತ್ಯಂತ ಪರಿಷ್ಕೃತ ಶಿಲೋಪಕರಣಗಳ ಜೊತೆಗೆ ಮೂಳೆಗಳಲ್ಲಿ ಮಾಡಿರುವ ಉಪಕರಣಗಳು, ಅಲಂಕರಣಗಳುಳ್ಳ ಮೂಳೆಯ ಚೂರುಗಳು ಹಾಗೂ ವರ್ಣ ಚಿತ್ರಗಳು ಆ ಸಂಸ್ಕೃತಿಯ ಪ್ರಧಾನ ಲಕ್ಷಣಗಳು. ಭಾರತದಲ್ಲಿ ಈ ಲಕ್ಷಣಗಳು ಕಂಡು ಬಂದಿದ್ದರೂ ಅವು ಅಷ್ಟೊಂದು ಪರಿಷ್ಕೃತ ರೀತಿ-ಯವುಗಳಲ್ಲ. ಉದಾಹರಣೆಗೆ ಬಿಲ್ಲಸ್ವರ್ಗಂ ಗವಿಯಲ್ಲಿ ಫೂಟ್‌ರವರು ಮೂಳೆಯ ಉಪಕರಣಗಳನ್ನು ಈ ಮೊದಲೇ ಕಂಡು ಹಿಡಿದಿದ್ದರು (ಫೂಟ್ ಆರ್.ಬಿ.೧೯೧೬). ಈಚೆಗೆ ಮುಚ್ಚಟ್ಲ ಚಿಂತಾಮಣಿ ಗವಿಯಲ್ಲಿ ನಡೆದ ಉತ್ಖನನದಲ್ಲಿ (ಮೂರ್ತಿ: ೧೯೭೦) ಇಂತಹುದೇ ಮೂಳೆ ಉಪಕರಣಗಳು ವೈಜ್ಞಾನಿಕವಾಗಿ ಪ್ರತ್ಯೇಕಿಸ ಬಹುದಾದ ಸ್ತರದಲ್ಲಿ ಬೆಳಕಿಗೆ ಬಂದಿವೆ. ಅದ-ರಂತೆಯೇ ಪಾಟ್ಣೆಯಲ್ಲಿ ನಡೆದ ಉತ್ಖನನದಲ್ಲಿ ಅಂತ್ಯ ಹಳೆಶಿಲಾಯುಗದ ಸ್ತರಗಳಲ್ಲಿ ದೊರೆತಿರುವ ಗೆರೆಗಳಿರುವ ಉಷ್ಟ್ರ ಪಕ್ಷಿಯ ತತ್ತಿಯ ಚೂರುಗಳು ಮತ್ತು ಮೂಳೆಯಿಂದ ಮಾಡಿದ ಮಣಿ ಇವು ಅಂತ್ಯ ಹಳೆಶಿಲಾಯುಗದ ಕಲೆಗೆ ಸಂಬಂಧಿ-ಸಿದ ಸ್ಪಷ್ಟ ಉದಾಹರಣೆಗಳಾಗಿವೆ(ಸಾಲಿ: ೧೯೮೫). ಮಧ್ಯಪ್ರದೇಶದ ಭೋಪಾಲ್ ಬಳಿಯ ನಿವೇಶನದಲ್ಲಿ ಉಷ್ಟ್ರ ಪಕ್ಷಿಯ ಅಲಂಕೃತ ತತ್ತಿಯ ಬಾಗಗಳು ಬೆಳಕಿಗೆ ಬಂದಿವೆ(ಸಾಲಿ:೧೯೮೫). ಅಲ್ಲದೆ ಕಾಲಮಾನದ ದೃಷ್ಟಿಯಿಂದಲೂ ಭಾರತದ ನೆಲೆಗಳು ಐರೋಪ್ಯ ದೇಶದ ನೆಲೆಗಳಿಗಿಂತ ಈಚಿನವು.

**ಕರ್ನಾಟಕದಲ್ಲಿ ಅಂತ್ಯ ಹಳೆಶಿಲಾಯುಗ ಸಂಸ್ಕೃತಿ**

ಈ ಶತಮಾನದ ಮೊದಲರ್ಧ ಭಾಗದವರೆಗೆ ಕರ್ನಾಟಕದ ಪ್ರಾಗಿತಿಹಾಸದ ಅಧ್ಯಯನದಲ್ಲಿ ಅಂತ್ಯ ಹಳೆ-ಶಿಲಾಯುಗ ಹಂತವನ್ನು ಅಸ್ಪಷ್ಟ ಹಾಗೂ ಸಂದೇಹಾಸ್ಪದ ಹಂತವೆಂದೇ ತಿಳಿಯಲಾಗಿತ್ತು. ೧೯೫೬ ರವರೆಗೆ ಕೇವಲ ಹತ್ತು ನೆಲೆಗಳು ಕರ್ನಾಟಕದಲ್ಲಿ ದೊರೆತಿದ್ದವು. ೧೯೫೭ರಲ್ಲಿ ಸುಂದರ ಅವರು ಬಿಜಾಪುರ ಜಿಲ್ಲೆ ಸಾಲ್ವಡಗಿಯ ಉಪಕರಣ ಉತ್ಪಾಧನಾ ಕೇಂದ್ರದಲ್ಲಿ ಅಂತ್ಯ ಹಳೆಶಿಲಾಯುಗದ ಅತ್ಯಂತ ಪ್ರಾತಿನಿಧಿಕ ಉಪಕರಣವಾದ ಚರ್ಟ್‌ಶಿಲೆಯಲ್ಲಿ

ರೂಪಿತವಾದ, ನೀಳಚಕ್ಕೆಗಳನ್ನು ಗುರುತಿಸಿದ್ದರು(ಇಂ.ಆ.ರಿ:೧೯೬೦-೬೧;೨೮). ಆಕೃತಿ ಹಾಗೂ ತಂತ್ರಜ್ಞಾನದ ಆಧಾರದ ಮೇಲೆ ಶೇಷಾದ್ರಿಯವರು (೧೯೬೧;೧-೫) ಬೆಳಕಿಗೆ ಬಂದಿದ್ದ ನೆಲೆಗಳ ಅಧ್ಯಯನ ಕೈಗೊಂಡು ಕರ್ನಾಟಕದಲ್ಲಿ ಅಂತ್ಯ ಹಳೆಶಿಲಾಯುಗದ ಅಸ್ತಿತ್ವವನ್ನು ಹೆಚ್ಚುಕಡಿಮೆ ಸ್ಥಾಪಿಸಿದರು. ಅದೇ ಸುಮಾರಿಗೆ ಭಾರತೀಯ ಪುರಾತತ್ವ ಸರ್ವೇಕ್ಷಣಾಲಯ-ದವರು ಕೈಗೊಂಡ ಕ್ಷೇತ್ರಕಾರ್ಯದ ಫಲವಾಗಿ ಬೆಂಗಳೂರು ಜಿಲ್ಲೆ ಸೂಡಸಂದ್ರ ಮತ್ತು ಸಿದ್ಧಾಪುರ (ಇಂ.ಆ.ರಿ: ೧೯೫೯-೬೦;೩೪), ಬಿಜಾಪುರ ಜಿಲ್ಲೆಯ ಅಡವಿ ಹುಲ್ಲಾಗಲ್, ಅರಸನಾಳ್, ಶಿವಪುರ, ಸಿದ್ಧಾಪುರ (ಇಂ.ಆ.ರಿ:೧೯೫೯-೬೦;೩೪) ಬಣ್ಣಿ, ದೇವೂರು, ಕೋಪ್ ಮತ್ತು ಸಿರೋಲ್ (ಇಂ.ಆರ್.ರಿ.೧೯೬೨-೬೩;೧೬) ರಾಯಚೂರು ಜಿಲ್ಲೆಯ ಹಿರೇಬೆನಕಲ್ (ಇಂ.ಆರ್.ರಿ.-೧೯೬೭-೬೮;೬೭) ಮತ್ತು ಧಾರವಾಡ ಜಿಲ್ಲೆಯ ನಲ್ವಗಲ್ ಮತ್ತು ನಂದಿಹರಳಹಳ್ಳಿ (ಇಂ.ಆರ್.ರಿ.೧೯೬೦-೬೧;೨೮) ನೆಲೆಗಳು ಬೆಳಕಿಗೆ ಬಂದವು. ಹಾಗಿದ್ದರೂ ಕರ್ನಾಟಕದ ಸಂದರ್ಭದಲ್ಲಿ ಆದಿ ಹಾಗೂ ಮಧ್ಯ ಹಳೆಶಿಲಾಯುಗದ ಅಧ್ಯಯನಕ್ಕೆ ದೊರಕಿದಷ್ಟು ಮಹತ್ವ ಅಂತ್ಯ ಹಳೆಶಿಲಾಯುಗದ ಅಧ್ಯಯನಕ್ಕೆ ದೊರಕಲಿಲ್ಲವೆಂದೇ ಹೇಳಬೇಕು. ಕೋವಳ್ಳಿ ನೆಲೆಯಲ್ಲಿ ಪಪ್ಪುರವರ ಶೋಧದಿಂದ ಅಂತ್ಯಹಳೆಶಿಲಾಯುಗದ ಉಪಕರಣ-ಗಳು ಮಧ್ಯಹಳೆಶಿಲಾಯುಗದ ಉಪಕರಣ ಗಳಿಗಿಂತ ವಿಭಿನ್ನ ಸ್ತರದಲ್ಲಿ ದೊರಕಿದವು.(ಪಪ್ಪು.ಆರ್.ಎಸ್:೧೯೯೪೦. ಸಂಗ-ನಕಲ್ಲಿ ಉತ್ಖನನದಲ್ಲಿ ಟ್ರಾಪ್ ಶಿಲೆಯಲ್ಲಿ ರೂಪಿಸಿದ ಅಂತ್ಯ ಹಳೆಶಿಲಾಯುಗದ ಉಪಕರಣಗಳು, ಸೂಕ್ಷ್ಮ ಶಿಲಾ ಉಪಕರ-ಣಗಳು ದೊರೆತ ಪದರುಗಳ ಪೂರ್ವಭಾವಿ ಪದರುಗಳಲ್ಲಿ ದೊರಕಿದುದರಿಂದ ಮೊದಲ ಬಾರಿಗೆ ಅಂತ್ಯ ಹಳೆಶಿಲಾಯುಗದ ಕಾಲಮಾನವು ಹೆಚ್ಚು ಕಡಿಮೆ ನಿರ್ಧಾರವಾದಂತಾಯಿತು (ಸಾಂಕಳಿಯಾ: ೧೯೬೯)

ಗುಲ್ಬರ್ಗ ಜಿಲ್ಲೆಯ ಶೋರಾಪುರ ತಾಲ್ಲೂಕಿನ ಹುಣಸಗಿಯಲ್ಲಿ ಅಂತ್ಯ ಹಳೆಶಿಲಾಯುಗದ ಬಹುತೇಕ ಎಲ್ಲಾ ಉಪಕರಣ ವೈವಿಧ್ಯಗಳೂ ಬೆಳಕಿಗೆ ಬಂದವು (ಪದ್ದಯ್ಯ:೧೯೭೦;೧೬೫-೧೯೦).

ಕಳೆದೆರಡು ದಶಕಗಳಲ್ಲಿ ನಡೆದಿರುವ ಸ್ಥಳ ಪರಿಶೋಧನೆಯಿಂದ ಇನ್ನಷ್ಟು ಹೆಚ್ಚಿನ ಅಂತ್ಯ ಹಳೆಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿವೆ. ಇವುಗಳಲ್ಲಿ ಮುಖ್ಯವಾದವುಗಳೆಂದರೆ ಮಾಂಜರಾ ಕೊಳ್ಳದ ಬಳ್ಳೂರ, ಡೋಣಿ ಕೊಳ್ಳದ ಇಂಗ-ಳೇಶ್ವರ (ಷಡಕ್ಷರಯ್ಯ; ೧೯೯೫; ೮೭-೧೦೬). ಮತ್ತು ತುಂಗಾಕೊಳ್ಳದ ತಕ್ಕನಹಳ್ಳಿ (ಪೂಣಚ್ಚ: ೧೯೯೦;೨೭೧-೩೦೩) ಹೀಗಾಗಿ ಅಂತ್ಯ ಹಳೆಶಿಲಾಯುಗ ಸಂಸ್ಕೃತಿಯು ನಿರ್ದಿಷ್ಟಸ್ತರದಲ್ಲಿ ಕರ್ನಾಟಕದಲ್ಲಿಯೂ. ಇರುವುದು ತಿಳಿದು ಬರುತ್ತದೆ.

**ಪರಿಸರ ಮತ್ತು ಶಿಲಾಮಾದರಿ**

ಈ ಪ್ರದೇಶದ ಅಂತ್ಯ ಹಳೆಶಿಲಾಯುಗ ಸಂಸ್ಕೃತಿಯ ಪರಿಸರವನ್ನು ಪರಿಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗದಿದ್ದರೂ ಈಗಾಗಲೇ ತಿಳಿದು ಬಂದಿರುವಂತೆ ಈ ಹಿಂದಿನ ಎರಡೂ ಸಾಂಸ್ಕೃತಿಕ ಹಂತಗಳ ಮುಂದುವರಿಕೆಯಾಗಿದ್ದು ಅಲ್ಪ ಸ್ವಲ್ಪ ಬದಲಾವಣೆಯಾಗಿರುವಂತೆ ತಿಳಿಯುತ್ತದೆ. ಮುಖ್ಯವಾಗಿ ತಿಳಿದು ಬರುವಂತೆ ದಟ್ಟ ಅರಣ್ಯ ಕಡಿಮೆಯಾಗುತ್ತ ಬಂದಿರುವುದು ದೊಡ್ಡ ಗಾತ್ರದ ಪ್ರಾಣಿಗಳ ಸಂಖ್ಯೆ ಇಳಿಮುಖವಾಗಿರುವುದು ಕಂಡುಬರುತ್ತದೆ. ಈ ವಿಷಯವನ್ನು ಸಮರ್ಥಿಸಲು ಪ್ರಮುಖವಾಗಿ ನಮಗೊದಗುವ ಶಿಲೋಪಕರಣಗಳು ಮುಖ್ಯವಾದವುಗಳಾಗಿವೆ. ಪರಿಸರದಲ್ಲಿಯೂ ಅಲ್ಪ ಸ್ವಲ್ಪ ಬದಲಾವಣೆ ಆಗಿರುವುದು ತಿಳಿದು ಬರುತ್ತವೆ.

ಸ್ಥಳೀಯವಾಗಿಯೇ ದೊರಕುವ ವಿವಿಧ ಮಾದರಿಯ ಫೆಲ್ಸಪರ್, ಉತ್ತಮ ಜಾತಿಯ ಜಾಸ್ಪರ್, ಅದಿರುಯಕ್ತ ಜಾಸ್ಪರ್, ಅದಿರುಯುಕ್ತ ಕ್ವರ್ಟ್ಸ್ ಮತ್ತು ಕ್ವಾರ್ಟ್ಸ್ ಶಿಲೆಗಳನ್ನು ಉಪಯೋಗಿಸಿ ಅತ್ಯುತ್ತಮ ಶಿಲೋಪಕರಣಗಳನ್ನು ಸಿದ್ಧಗೊಳಿಸಿದೆ. ದೊರಕುವ ಅತಿ ಸಾಮಾನ್ಯ ಮಾದರಿಯ ಅರೆ ಪ್ರಶಸ್ತ ಶಿಲೆಗಳನ್ನೇ ಉಪಯೋಗಿಸಿ ಶಿಲೋಪಕರಣಗಳನ್ನು ರೂಪಿಸಲಾಗಿದೆ. ಅದೇ ರೀತಿ ಯಾವುದೇ ಶಿಲಾ ಮಾದರಿಗಳನ್ನು ಹೊರಗಿನಿಂದ ಆಮದು ಮಾಡಿಕೊಂಡಿರುವಂತೆ ಕಂಡು ಬರುವುದಿಲ್ಲ. ಸ್ಥಳೀಯವಾಗಿಯೇ ಹೆಚ್ಚಾಗಿ ದೊರಕುವ ಕ್ವಾರ್ಟ್ಸ್ ಶಿಲೆ, ಪಾರದರ್ಶಕ ಕಲ್ಲು, ಹಾಲ್ಗಲ್ಲು, ಜಾಸ್ಪರ್ ಮತ್ತು ಅದಿರುಯಕ್ತ ಜಾಸ್ಪರ್ ಶಿಲಾಮಾದರಿಗಳನ್ನು ಬಳಸಲಾಗಿದೆ.

ಜನಸಾಂದ್ರತೆಯು ಹೆಚ್ಚಾದಂತೆ ತಿಳಿಯುತ್ತದೆ. ಅಲ್ಲದೆ ಹೆಚ್ಚು ನೆಲೆಗಳು (ಒಟ್ಟು ೫೦) ಬೆಳಕಿಗೆ ಬಂದಿದ್ದು ಉಪಕರಣಗಳ ತಯಾರಿಕೆಯ ಪ್ರಮಾಣದಲ್ಲಿಯೂ ಹೆಚ್ಚಳ ಉಂಟಾಗಿರುವುದು ತಿಳಿಯುತ್ತದೆ. ಹೆಚ್ಚಿನ ಈ ನೆಲೆಗಳು ಪೂರ್ವ ಕಾಲಮಾನದ ಆದಿ ಮತ್ತು ಮಧ್ಯ ಹಳೆಶಿಲಾಯುಗ ಸಂಸ್ಕೃತಿಗಳಿರುವ ನೆಲೆಗಳಲ್ಲಿಯೇ ಮುಂದುವರಿದ ಹಂತದ ನೆಲೆಗಳು ಕೆಲವಿದ್ದರೆ ಮತ್ತೆ ಕೆಲವು ಈ ಹಂತದಿಂದ ಆರಂಭವಾಗಿ ಮುಂದಿನ ಸಾಂಸ್ಕೃತಿಕ ಹಂತಗಳ ಮುಂದುವರಿಕೆಯನ್ನು ಸೂಚಿಸುತ್ತವೆ.

ದೊರೆತಿರುವ ಒಟ್ಟು ಉಪಕರಣಗಳ ಶಿಲಾ ಮಾದರಿಯನ್ನು ಕೋಷ್ಟಕ ಸಂಖ್ಯೆ ೭.೧ನಲ್ಲಿ ನೀಡಿದೆ. ಇವುಗಳ ಶೇಕಡವಾರು ಪ್ರಮಾಣದಂತೆ ವೃತ್ತನಕ್ಷೆ ರೂಪಿಸಿದ್ದು, ವೃತ್ತನಕ್ಷೆ ಸಂಖ್ಯೆ ೭.೮ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧

| | ಕ್ವಾರ್ಟ್ಜ್ | ಅದಿರುಯಕ್ತ ಕ್ವಾರ್ಟ್ಜ್ | ಜಾಸ್ಪರ್ | ಅದಿರುಯಕ್ತ ಜಾಸ್ಪರ್ | ಡೈಕ್ | ಫೆಲ್ಸಪರ್ | ಒಟ್ಟು |
|---|---|---|---|---|---|---|---|
| ಉಪಕರಣ ಸಂಖ್ಯೆ | ೪೭೬ | ೮೯ | ೮೦ | ೪೦ | ೭ | ೫ | ೬೯೭ |
| ಶೇ. | ೬೮.೨೯ | ೧೨.೭೯ | ೧೧.೪೮ | ೫.೭೪ | ೧.೦೦ | ೦.೭೧ | |

ವೃತ್ತನಕ್ಷೆ ಸಂಖ್ಯೆ ೬.ಅ




**ಅಂತ್ಯ ಹಳೆಶಿಲಾಯುಗದ ನೆಲೆಗಳು.**

ಪ್ರಸ್ತುತ ಸ್ಥಳ ಪರಿಶೋಧನೆಯಲ್ಲಿ ಅಂತ್ಯ ಹಳೆಶಿಲಾಯುಗದ ಒಟ್ಟು ೫೦ ನೆಲೆಗಳನ್ನು ಸಂಶೋಧಿಸಲಾಗಿದ್ದು, ಕೆಲವು ನೆಲೆಗಳಲ್ಲಿ ಆದಿ ಹಳೆಶಿಲಾಯುಗ ಮತ್ತು ಮಧ್ಯ ಹಳೆಶಿಲಾಯುಗದ ಉಪಕರಣಗಳೂ ದೊರೆತಿವೆ. ನೆಲೆಗಳಿರುವ ಸ್ಥಳ, ಅಂತ್ಯ ಹಳೆಶಿಲಾಯುಗದ ಅವಶೇಷಗಳೊಳಗೊಂಡಂತೆ ಅಧ್ಯಯನ ಸ್ಥಳಗಳಲ್ಲಿ ಬೆಳಕಿಗೆ ಬಂದಿರುವ ಸಾಂಸ್ಕೃತಿಕ ಆನುಪೂರ್ವಿ ಮತ್ತು ನೆಲೆಯ ಪರಿಸರ ಇವುಗಳನ್ನು ಕೋಷ್ಟಕ ಸಂಖ್ಯೆ ೬.೨ ನಲ್ಲಿ ನೀಡಿದೆ.ಪ್ರತಿ ನೆಲೆಯಲ್ಲಿ ದೊರೆತ ಒಟ್ಟು ಒಪಕರಣಗಳ ಪ್ರಮಾಣದಂತೆ ವೃತ್ತ ನಕ್ಷೆಯನ್ನು ರೂಪಿಸಿದ್ದು ವಿವರಣೆಯನ್ನು ವೃತ್ತನಕ್ಷೆ ಸಂಖ್ಯೆ ೬.ಆ ರಲ್ಲಿ ನೀಡಿದೆ. ನೆಲೆಗಳನ್ನು ಭೂನಕ್ಷೆ ಪುಟ ಸಂಖ್ಯೆ ೧೪೯ ರಲ್ಲಿ ನೀಡಿದೆ.

ಮೇಲೆ ತಿಳಿಸಿದ ೫೦ ನೆಲೆಗಳಲ್ಲಿ ಮೂಗನಾಯಕನಕೋಟೆ ಪರಿಸರದಲ್ಲಿ ಬರುವ ನೆಲೆಗಳ ಬಗೆಗೆ ವಿವರಣೆ ನೀಡಬೇಕಾಗುತ್ತದೆ. ಮೂಗನಾಯಕನ ಕೋಟೆ ಬಳಿ ಇರುವ ಗುಡ್ಡವು ಸುಮಾರು ೨ ಚದರ ಕಿಲೋಮೀಟರ್ ನಷ್ಟು ಸ್ಥಳದಲ್ಲಿ ಹರಡಿದೆ. ಸಹಜವಾಗಿ ಇದರ ಸುತ್ತಣ ವಿವಿಧ ಭಾಗಗಳು ಬೇರೆ ಬೇರೆ ಹಳ್ಳಿಗಳ ವ್ಯಾಪ್ತಿಯಲ್ಲಿ ಬರುತ್ತವೆ. ಹೀಗಾಗಿ ಮೂಗನಾಯಕನಕೋಟೆ ಸುತ್ತಮುತ್ತಲ ಪ್ರದೇಶದಲ್ಲಿ ಬೇರೆ ಬೇರೆ ಗ್ರಾಮಗಳ ಪರಿಮಿತಿಯೊಳಗೆ ಬರುವ ೧೨ ಅಂತ್ಯ ಹಳೆಶಿಲಾಯುಗದ ನೆಲೆಗಳಿವೆ. ಆದರೆ ಈ ಹನ್ನೆರಡೂ ನೆಲೆಗಳಲ್ಲಿ ದೊರೆತಿರುವ ಉಪಕರಣಗಳು ಉಪಯೋಗಿಸಿರುವ ಮೂಲ ಶಿಲಾ ಸಾಮಗ್ರಿಗಳು ಮತ್ತು ನೆಲೆಗಳಿರುವ ಭೌಗೋಳಿಕ ಪರಿಸರ ಇವುಗಳಲ್ಲಿ ಯಾವುದೇ ಗಮನಾರ್ಹ ವ್ಯತ್ಯಾಸಗಳು ಕಂಡು

ಬಂದಿರುವುದಿಲ್ಲ. ಆದ ಕಾರಣ ಬೆಳಕಿಗೆ ಬಂದಿರುವ ೧೨ ನೆಲೆಗಳನ್ನು ಮೂಗನಾಯಕನಕೋಟೆ ಉತ್ತರ, ಪೂರ್ವ, ದಕ್ಷಿಣ ಮತ್ತು ಪಶ್ಚಿಮ ಎಂದು ನಾಲ್ಕು ಭಾಗಗಳಾಗಿ ಮಾಡಿಕೊಂಡು ಪರಿಶೀಲಿಸಲಾಗಿದೆ.

ಮೂಗನಾಯಕನಕೋಟೆ ಉತ್ತರ ನೆಲೆಯ ಅಡಿಯಲ್ಲಿ ಹೊಸಕೆರೆ ನೆಲೆ, ಮೂಗನಾಯಕನಕೋಟೆ ಪೂರ್ವ ನೆಲೆಯಡಿಯಲ್ಲಿ ಮೂಗನಾಯಕನಕೋಟೆ, ಮುದಿಪುರ ಮತ್ತು ಸಾಕಸಂದ್ರ ನೆಲೆಗಳು, ಮೂಗನಾಯಕನಕೋಟೆ ದಕ್ಷಿಣ ನೆಲೆಯಡಿ ತ್ಯಾಗಟೂರು, ಸೌರನಕೋಟೆ ಮತ್ತು ಅದ್ದಗೆರೆ ನೆಲೆಗಳು ಹಾಗೂ ಮೂಗನಾಯಕನಕೋಟೆ ಪಶ್ಚಿಮ ನೆಲೆಯ ಅಡಿಯಲ್ಲಿ ಬಂಡನಹಳ್ಳಿ, ಬಣ್ಣಿಗಾನಹಳ್ಳಿ, ಬೋಗಸಂದ್ರ, ವೀರಾಪುರ ಮತ್ತು ಜೋಗಿಹಳ್ಳಿ ನೆಲೆಗಳು ಬರುತ್ತವೆ.

**ಅಂತ್ಯ ಹಳೆಶಿಲಾಯುಗದ ನೆಲೆ**

**ಕೊಷ್ಟಕ ಸಂಖ್ಯೆ ೬.೨**

| ಕ್ರಮ ಸಂಖ್ಯೆ | ನೆಲೆ | ಅಂತ್ಯ ಹಳೆಶಿಲಾಯುಗ ನೆಲೆಯೊಂದಿಗಿರುವ ಆದಿಹಳೆ ಶಿಲಾಯುಗದ ನೆಲೆಗಳು | ಅಂತ್ಯ ಹಳೆಶಿಲಾಯುಗ ನೆಲೆಯೊಂದಿಗಿರುವ ಮಧ್ಯಹಳೆ ಶಿಲಾಯುಗದ ನೆಲೆಗಳು | ಅಂತ್ಯ ಹಳೆಶಿಲಾಯುಗ ನೆಲೆಯೊಂದಿಗಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು | ನೆಲೆಯ ಪರಿಸರ | |
|---|---|---|---|---|---|---|
| ೧ | ಅದ್ದಗೆರೆ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ದಕ್ಷಿಣ ಎಂದು ಪರಿಶೀಲಿಸಿದೆ. |
| ೨ | ಅಪ್ಪಾನಹಳ್ಳಿ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೩ | ಅವರ್ಗಲ್ಲು | ✓ | ✓ | ✓ | ಬೆಟ್ಟದ ತಪ್ಪಲು | |
| ೪ | ಅಂಕನಬಾವಿ | | ✓ | ✓ | ಬಯಲು ಪ್ರದೇಶ | |
| ೫ | ಇರಕಸಂದ್ರಕಾಲೋನಿ | | | ✓ | ಬೆಟ್ಟದ ತಪ್ಪಲು | |
| ೬ | ಊನಗನಾಲ | | | ✓ | ಬಯಲು ಪ್ರದೇಶ | |
| ೭ | ಓಬಳಾಪುರ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೮ | ಕರಡಿ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೯ | ಕಾರೇಕುರ್ಚಿ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೧೦ | ಕಾವಲಹಟ್ಟಿ | | | ✓ | ಬಯಲು ಪ್ರದೇಶ | |
| ೧೧ | ಕೈವಾರ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೧೨ | ಗಳಿಗೆರೆ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೧೩ | ಗುಟ್ಟೆ | | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೧೪ | ಗುರಮ್ಮನಹಟ್ಟಿ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೧೫ | ಗೊಲ್ಲರಹಟ್ಟಿ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೧೬ | ಚಿಕ್ಕೇಗೌಡನರೊಪ್ಪ | ✓ | | ✓ | ಬೆಟ್ಟದ ತಪ್ಪಲು | |
| ೧೭ | ಜೋಗಿಹಳ್ಳಿ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ. |
| ೧೮ | ಧರ್ಮಾಪುರ | | | ✓ | ಬೆಟ್ಟದ ತಪ್ಪಲು | |
| ೧೯ | ತ್ಯಾಗಟೂರು | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ದಕ್ಷಿಣ ಎಂದು ಪರಿಶೀಲಿಸಿದೆ. |
| ೨೦ | ದೊಡ್ಡಗುಣಿ | ✓ | ✓ | ✓ | ಬೆಟ್ಟದ ತಪ್ಪಲು | |
| ೨೧ | ನಾಗಲಾಪುರ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೨೨ | ನಿಡಗಲ್ಲು | | ✓ | ✓ | ಬೆಟ್ಟದ ತಪ್ಪಲು | |
| ೨೩ | ಬಣ್ಣಿಗಾನಹಳ್ಳಿ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೨೪ | ಬೊಮ್ಮೇನಹಳ್ಳಿ | ✓ | ✓ | ✓ | ಬೆಟ್ಟದ ತಪ್ಪಲು | |
| ೨೫ | ಬೋಗಸಂದ್ರ | | | ✓ | ಬೆಟ್ಟದ ತಪ್ಪಲು | |
| ೨೬ | ಬಂಡನಹಳ್ಳಿ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ. |
| ೨೭ | ಮಧುಗಿರಿ | | | ✓ | ಬೆಟ್ಟದ ತಪ್ಪಲು | |
| ೨೮ | ಮಾರಕಟ್ಟನಹಳ್ಳಿ | ✓ | ✓ | | ಬೆಟ್ಟದ ತಪ್ಪಲು | |
| ೨೯ | ಮಿಡಿಗೇಶಿ | | ✓ | ✓ | ಬೆಟ್ಟದ ತಪ್ಪಲು | |
| ೩೦ | ಮುದಿಪುರ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪೂರ್ವ ಎಂದು ಪರಿಶೀಲಿಸಿದೆ. |
| ೩೧ | ಮೂಗನಾಯಕನಕೋಟೆ | ✓ | ✓ | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪೂರ್ವ ಎಂದು ಪರಿಶೀಲಿಸಿದೆ. |
| ೩೨ | ಮಂಚಕಲ್‌ಕುಪ್ಪೆ | | ✓ | ✓ | ಬೆಟ್ಟದ ತಪ್ಪಲು | |
| ೩೩ | ಮಂಚಲ್ದೊರೆ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೩೪ | ಯರ್ಗಲಹಟ್ಟಿ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೩೫ | ಯಲ್ಲಾಪುರ | | | ✓ | ಬಯಲು ಪ್ರದೇಶ | |
| ೩೬ | ವೀರಾಪುರ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೩೭ | ಯಲ್ಲಪ್ಪನಾಯಕನಹೊಸಕೋಟೆ | ✓ | ✓ | | ಬೆಟ್ಟದ ತಪ್ಪಲು | |
| ೩೮ | ಶಿವಪುರ | ✓ | ✓ | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೩೯ | ಶೆಟ್ಟಿಹಳ್ಳಿ | | | ✓ | ಬೆಟ್ಟದ ತಪ್ಪಲು | |
| ೪೦ | ಸಾಕಸಂದ್ರ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪೂರ್ವ ಎಂದು ಪರಿಶೀಲಿಸಿದೆ. |
| ೪೧ | ಸಾಲುಹಟ್ಟಿ | | | ✓ | ಬಯಲು ಪ್ರದೇಶ | |
| ೪೨ | ಸಿದ್ದೇನಹಳ್ಳಿ | | | ✓ | ಬೆಟ್ಟದ ತಪ್ಪಲು | |
| ೪೩ | ಸೌರನಕೋಟೆ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೪೪ | ಹರೇನಹಳ್ಳಿ | ✓ | ✓ | ✓ | ಬೆಟ್ಟದ ತಪ್ಪಲು | |
| ೪೫ | ಹಿಮಗಿರಿ | | | ✓ | ಬೆಟ್ಟದ ತಪ್ಪಲು | |
| ೪೬ | ಹಿರೇಹಳ್ಳಿ | | | ✓ | ಬೆಟ್ಟದ ತಪ್ಪಲು | |
| ೪೭ | ಹೊಂಬಿನಹಟ್ಟಿ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ | |
| ೪೮ | ಹೊನ್ನೆಮಾರನಹಳ್ಳಿ | ✓ | ✓ | ✓ | ಬೆಟ್ಟದ ತಪ್ಪಲು | |
| ೪೯ | ಹೊಸಕೆರೆ | | | ✓ | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಉತ್ತರ ಎಂದು ಪರಿಶೀಲಿಸಿದೆ |
| ೫೦ | ಹೊಸಹಳ್ಳಿ | | | ✓ | ಬಯಲು ಪ್ರದೇಶ | |

ವೃತ್ತ ನಕ್ಷೆ ಸಂಖ್ಯೆ ೬.ಆ



## ಅಂತ್ಯ ಹಳೆಶಿಲಾಯುಗದ ಶಿಲೋಪಕರಣಗಳ ವೈವಿಧ್ಯ

ಅಂತ್ಯ ಹಳೆಶಿಲಾಯುಗದ ಒಟ್ಟು ೫೦ ನೆಲೆಗಳು ದೊರಕಿದ್ದು ಪ್ರತಿಯೊಂದು ನೆಲೆಯಲ್ಲಿಯೂ ವಿವಿಧ ಮಾದರಿಯ ಉಪಕರಣಗಳು ದೊರೆತಿವೆ. ಇಂತಹ ಒಟ್ಟು ೬೯೭ ಉಪಕರಣಗಳಿವೆ. ಈ ನಿವೇಶನಗಳಿಂದ ಸಂಗ್ರಹಿಸಿದ ಮೂಲ ಶಿಲಾಗಟ್ಟಿಗಳು, ನಿರುಪಯುಕ್ತ ಚಕ್ಕೆಗಳು ಮುಂತಾದ ತ್ಯಾಜ್ಯ ವಸ್ತುಗಳನ್ನು ಇಲ್ಲಿ ಪರಿಗಣಿಸಿಲ್ಲ. ಈ ಉಪಕರಣಗಳಲ್ಲಿ ಈಗಾಗಲೇ ತಿಳಿದಿರುವ ಇತರ ನೆಲೆಗಳಲ್ಲಿ ಸಾಧಾರಣವಾಗಿ ದೊರಕುವ ಎಲ್ಲಾ ಉಪಕರಣಗಳೂ ದೊರೆತಿವೆ.

ಶಿಲಾಯುಗ ಸಂಸ್ಕೃತಿಯ ಉಗಮ ಮತ್ತು ಬೆಳವಣಿಗೆಯಲ್ಲಿ ಅಂತ್ಯ ಹಳೆಶಿಲಾಯುಗವು ಪ್ರಮುಖ ಘಟ್ಟ-ವಾಗಿದೆ. ಆ ಕಾಲಕ್ಕೆ ಬದಲಾದ ಪ್ರಾಕೃತಿಕ ಪರಿಸರ, ಜೀವ ಸಂಪತ್ತು ಮತ್ತು ಅವುಗಳ ಬೇಟೆಗಾಗಿ ವಿವಿಧ ಮಾದರಿಯ ಹೊಸ ಉಪಕರಣಗಳನ್ನು ರೂಪಿಸಿಕೊಳ್ಳುವುದರಲ್ಲಿ ಅಂತ್ಯ ಹಳೆಶಿಲಾಯುಗದ ಮಾನವ ಹೆಚ್ಚಿನ ಜಾಣ್ಮೆಯನ್ನು ತೋರಿರು-ವುದು ಕಂಡು ಬರುತ್ತದೆ. ಹೊಸ ವಾತಾವರಣಕ್ಕೆ ಹೊಂದಿಕೊಳ್ಳುವಂತಹ ವಿಶೇಷ ರೀತಿಯ ಸೂಕ್ಷ್ಮಶಿಲೋಪಕರಣಗಳನ್ನು ತಯಾರಿಸಲು ಅತ್ಯಂತ ಅವಶ್ಯಕವಾಗಿದ್ದ ವಿಶಿಷ್ಟ ಶಿಲಾ ಮಾದರಿಗಳ ಪರಿಚಯ ಅವನ ಸಹಾಯಕ್ಕೆ ಒದಗಿರಬೇಕು. ಒಂದು

ರೀತಿಯಲ್ಲಿ ಮಧ್ಯ ಹಳೆಶಿಲಾಯುಗದಲ್ಲಿ ಆರಂಭವಾದ ಚಕ್ಕೆ ಉಪಕರಣಗಳ ಸಂಪ್ರದಾಯ ಈ ಕಾಲದಲ್ಲಿ ಪರಿಪೂರ್ಣತೆ-ಯನ್ನು ಪಡೆಯಿತು. ನೀಳಚಕ್ಕೆಗಳನ್ನು ಉಪಯೋಗಿಸಿ ಹೊಸ ಹೊಸ ಉಪಕರಣಗಳನ್ನು ತಯಾರಿಸುವುದರಲ್ಲಿ ಆದಿ ಹಳೆ-ಶಿಲಾಯುಗದ ಮಾನವ ತನ್ನ ತಾಂತ್ರಿಕತೆಯ ಪರಿಪೂರ್ಣತೆಯನ್ನು ಪ್ರದರ್ಶಿಸಿರುವುದನ್ನು ಕಾಣಬಹುದು. ಅಂತ್ಯ ಹಳೆಶಿ-ಲಾಯುಗದ ಉಪಕರಣಗಳನ್ನು ಕಾರ್ಯಸಾಧಕ ತುದಿಯನ್ನು ಅನುಸರಿಸಿ ಮೂರು ಮುಖ್ಯ ಗುಂಪುಗಳಾಗಿ ವಿಭಾಗಿಸಲಾಗು-ತ್ತದೆ (ಪದ್ದಯ್ಯ:೧೯೭೦:೧೭೨-೧೮೫), (೧)ಅಲಗಿನ ಉಪಕರಣಗಳು, (೨)ಅಲಗಿಲ್ಲದ ಉಪಕರಣಗಳು ಮತ್ತು (೩)ಸಂಯುಕ್ತ ಉಪಕರಣಗಳು. ಅಲಗಿನ ಉಪಕರಣಗಳಲ್ಲಿ ಕಾರ್ಯ ನಿರ್ವಹಿಸುವ ಅಲಗು ಮೇಲ್ತುದಿಯಲ್ಲಿ ಅಥವಾ ಪಾರ್ಶ್ವಗಳಲ್ಲಿ ಇರುತ್ತದೆ. ಅಲಗಿಲ್ಲದ ಉಪಕರಣಗಳಲ್ಲಿ ಮುಖ್ಯವಾಗಿ ಮೊನೆಯುಳ್ಳ ಉಪಕರಣಗಳು ಅಂದರೆ ವಿವಿಧ ರೀತಿಯ ಮೊನೆಗಳು, ಕೊರೆಗ, ಬಾಣದ ಮೊನೆ ಮುಂತಾದವು ಸೇರುತ್ತವೆ. ಮೂರನೇ ಗುಂಪಿನ ಉಪಕರಣಗಳಲ್ಲಿ ಈ ಎರಡೂ ರೀತಿಯ ಉಪಕರಣಗಳನ್ನು ಸಂಯೋಜಿಸಿ ರೂಪಿಸಿರುವ ಮಿಶ್ರ ರೀತಿಯ ಉಪಕರಣಗಳಿರುತ್ತವೆ. ಸಂಖ್ಯೆಯ ದೃಷ್ಟಿಯಿಂದ ಅಂತ್ಯ ಹಳೆಶಿಲಾಯುಗದ ಉಪಕರಣಗಳು ಮೊದಲ ಗುಂಪಿನ ಉಪಕರಣಗಳು ಎಂದರೆ ವಿವಿಧ ರೀತಿಯ ನೀಳಚಕ್ಕೆ, ಹೆರೆಚಕ್ಕೆ ಮತ್ತು ವಿಶಿಷ್ಟ ರೀತಿಯ ಕೊರೆಯುಳಿ ಮುಂತಾದ ಉಪಕರಣಗಳು ಅತಿಹೆಚ್ಚು ಶೇಕಡಾವಾರು ಪ್ರಮಾ-ಣದಲ್ಲಿರುತ್ತವೆ. ಈ ಹಿನ್ನೆಲೆಯಲ್ಲಿ ದೊರೆತಿರುವ ಉಪಕರಣಗಳನ್ನು ನೀಳಚಕ್ಕೆ ಮಾದರಿ, ಹೆರೆಚಕ್ಕೆ ಮಾದರಿ, ಮೊನೆ ಮಾದ-ರಿ, ಕೊರೆಗ, ಕೊರೆಯುಳಿ, ಅರ್ಧಚಂದ್ರಾಕೃತಿ ಮತ್ತು ಬಾಣದಮೊನೆ ಎಂದು ವಿಭಾಗಿಸಲಾಗಿದೆ.

ಅಧ್ಯಯನ ಪ್ರದೇಶದ ಪ್ರತಿಯೊಂದು ನೆಲೆಗಳಲ್ಲಿ ದೊರೆತಿರುವ ಒಟ್ಟು ಉಪಕರಣಗಳು ಅವುಗಳ ವೈವಿಧ್ಯ ಮತ್ತು ಶೇಕಡಾವಾರು ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೬.೩ ರಲ್ಲಿ ನೀಡಲಾಗಿದೆ. ಮತ್ತು ಅವುಗಳ ವಿವರಣೆಯನ್ನು ವಿಶ್ಲೇಷಿ-ಸಲಾಗಿದೆ. ಒಟ್ಟು ಉಪಕರಣಗಳ ವಿವಿಧ ಮಾದರಿ ಉಪಕರಣಗಳ ಪ್ರಮಾಣದಂತೆ ವೃತ್ತ ನಕ್ಷೆ ರೂಪಿಸಿದ್ದು ವಿವರಣೆಯನ್ನು ವೃತ್ತನಕ್ಷೆ ೬.೨ ರಲ್ಲಿ ನೀಡಿದೆ.

## ಅಂತ್ಯಹಳೆ ಶಿಲಾಯುಗದ ಉಪಕರಣಗಳ ವೈವಿಧ್ಯ

ಕೋಷ್ಟಕ ಸಂಖ್ಯೆ ೬.೩

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆ ಮಾದರಿ Blade | ಹೆರೆಚಕ್ಕೆ ಮಾದರಿ Scraper | ಮೊನೆ ಮಾದರಿ Point | ಕೊರೆಗ Borer | ಕೊರೆಯುಳಿ Burin | ಅರ್ಧಚಂದ್ರಾಕೃತಿ Lunate | ಬಾಣದ ಮೊನೆ Arrow head | ಒಟ್ಟು | ಶೇ. |
|---|---|---|---|---|---|---|---|---|---|---|
| ೧ | ಅಪ್ಪಾನಹಳ್ಳಿ | ೩ | ೩ | ೫ | ೧ | | | | ೧೨ | ೧.೭೨ |
| ೨ | ಅವರ್ಗಲ್ಲು | ೧ | ೪ | ೧ | ೧ | | | | ೭ | ೧.೦೦ |
| ೩ | ಅಂಕನಬಾವಿ | ೬ | ೩ | ೧ | | | | | ೧೦ | ೧.೪೩ |
| ೪ | ಇರಕಸಂದ್ರಕಾಲೋನಿ | | ೧ | | | | | | ೨ | ೨.೨೮ |
| ೫ | ಉನಗನಾಲ | ೩ | ೨ | | | | | | ೫ | ೦.೭೧ |
| ೬ | ಓಬಳಾಪುರ | ೧೦ | ೮ | ೫ | ೨ | | | | ೨೫ | ೩.೫೮ |
| ೭ | ಕರಡಿ | ೭ | ೫ | ೧ | ೧ | | | ೧ | ೧೪ | ೨.೦೦ |
| ೮ | ಕಾರೇಕುರ್ಚಿ | ೫ | ೪ | | | | | | ೯ | ೧.೨೯ |
| ೯ | ಕಾವಲಹಟ್ಟಿ | ೨ | ೩ | ೨ | ೧ | | | | ೮ | ೧.೧೪ |
| ೧೦ | ಕೈಮರ | ೧೦ | ೧೦ | ೫ | ೩ | | ೧ | | ೨೯ | ೪.೧೬ |
| ೧೧ | ಗಳಿಗಿಕೆರೆ | ೫ | ೧ | ೧೨ | | | ೧ | | ೪೨ | ೬.೦೨ |
| ೧೨ | ಗುಟ್ಟಿ | ೪ | ೮ | ೧ | | | | | ೧೩ | ೧.೮೬ |
| ೧೩ | ಗುರಮ್ಮನಹಟ್ಟಿ | ೭ | ೧೫ | ೬ | | | ೨ | | ೩೦ | ೪.೩೦ |
| ೧೪ | ಗೊಲ್ಲರಹಟ್ಟಿ | ೧ | ೪ | | | | | | ೫ | ೦.೭೧ |
| ೧೫ | ಚಿಕ್ಕಗೌಡನಹೊಪ್ಪ | ೫ | ೨ | | | | ೧ | | ೮ | ೧.೧೪ |
| ೧೬ | ಗಡಾಪುರ | ೫ | ೫ | ೧ | | | ೧ | ೧ | ೧೩ | ೧.೮೬ |
| ೧೭ | ದೊಡ್ಡಗುಣಿ | ೧೬ | ೧೦ | ೫ | ೫ | ೨ | ೧ | ೩ | ೪೨ | ೬.೦೨ |
| ೧೮ | ನಾಗಲಾಪುರ | ೩ | ೨ | | | | | | ೫ | ೦.೭೧ |
| ೧೯ | ನಿಡುಗಲ್ಲು | ೨ | | ೩ | | | | ೧ | ೬ | ೦.೮೬ |
| ೨೦ | ಬೊಮ್ಮೇನಹಳ್ಳಿ | ೩ | ೩ | ೩ | | | | | ೯ | ೧.೨೯ |
| ೨೧ | ಮಧುಗಿರಿ | ೨ | ೪ | ೧ | | | ೨ | | ೯ | ೧.೨೯ |
| ೨೨ | ಮಾರಕಟ್ಟೆಹಳ್ಳಿ | ೭ | ೪ | ೩ | | | | ೧ | ೧೫ | ೨.೧೫ |
| ೨೩ | ಮಿಡಿಗೇಶಿ | | ೧ | | ೧ | | ೧ | | ೩ | ೦.೪೩ |
| ೨೪ | ಮೂಗನಾಯಕನಕೋಟೆ ಉತ್ತರ | ೪ | ೯ | ೬ | | ೩ | | | ೨೨ | ೩.೧೫ |
| ೨೫ | ಮೂಗನಾಯಕನಕೋಟೆ ಪೂರ್ವ | ೧೫ | ೭ | ೯ | ೨ | ೧ | | ೧ | ೩೫ | ೫.೦೨ |
| ೨೬ | ಮೂಗನಾಯಕನಕೋಟೆ ದಕ್ಷಿಣ | ೩೧ | ೨೯ | ೧೨ | ೨ | ೨ | ೧ | ೨ | ೭೯ | ೧೧.೩೩ |
| ೨೭ | ಮೂಗನಾಯಕನಕೋಟೆ ಪಶ್ಚಿಮ | ೧೧ | ೧೨ | | ೩ | ೨ | | | ೨೮ | ೪.೦೧ |
| ೨೮ | ಮಂಚಕಲ್‌ಕುಪ್ಪೆ | ೫ | ೭ | ೩ | ೨ | | ೧ | ೧ | ೧೯ | ೨.೭೨ |
| ೨೯ | ಮಂಚಲದೊರೆ | ೨ | | | | | | | ೨ | ೦.೨೮ |
| ೩೦ | ಯಕ್ಕಲಕಟ್ಟೆ | ೧೩ | ೨೦ | ೧೪ | | | ೧ | | ೪೮ | ೬.೮೮ |
| ೩೧ | ಯಲ್ಲಾಪುರ | ೧೦ | ೧೦ | ೪ | | | ೧ | ೧ | ೨೬ | ೩.೭೩ |
| ೩೨ | ಯಲ್ಲಪ್ಪನಾಯಕಹೊಸಕೋಟೆ | ೨ | | | | | | | ೨ | ೦.೨೮ |
| ೩೩ | ಶಿವಪುರ | ೯ | ೬ | ೬ | ೧ | | ೧ | | ೨೩ | ೩.೨೯ |
| ೩೪ | ಶೆಟ್ಟಿಹಳ್ಳಿ | ೧ | ೩ | | | | | ೨ | ೬ | ೦.೮೬ |
| ೩೫ | ಸಾಲುಹಟ್ಟಿ | ೩ | ೧ | | ೧ | | ೧ | | ೬ | ೦.೮೬ |
| ೩೬ | ಸಿದ್ದೇಹಳ್ಳಿ | ೫ | ೪ | | | | ೧ | | ೧೦ | ೧.೪೩ |
| ೩೭ | ಹರೇನಹಳ್ಳಿ | | ೩ | ೨ | | | | | ೫ | ೦.೭೧ |
| ೩೮ | ಹಿಮಗಿರಿ | ೫ | ೫ | ೨ | | ೧ | | | ೧೩ | ೧.೮೬ |
| ೩೯ | ಹಿರೇಹಳ್ಳಿ | ೪ | ೫ | | | | | | ೯ | ೧.೨೯ |
| ೪೦ | ಹೂವಿನಹಟ್ಟಿ | ೪ | ೨ | ೨ | | ೪ | | | ೧೨ | ೧.೭೨ |
| ೪೧ | ಹೊನ್ನೇಮಾರನಹಳ್ಳಿ | ೧೦ | ೧೮ | ೭ | ೨ | | | | ೨೭ | ೩.೮೭ |
| ೪೨ | ಹೊಸಹಳ್ಳಿ | | ೩ | | | | ೧ | | ೪ | ೦.೫೭ |
| | ಒಟ್ಟು | ೨೫೮ | ೨೪೭ | ೧೧೫ | ೨೯ | ೧೬ | ೧೮ | ೧೪ | ೬೯೭ | |
| | ಶೇ. | ೩೭.೦೧ | ೩೫.೪೩ | ೧೬.೪೯ | ೪.೧೬ | ೨.೨೯ | ೨.೫೮ | ೨.೦೦ | [illegible] | |

ವೃತ್ತನಕ್ಷೆ ಸಂಖ್ಯೆ ೭.೩




**ಅಂತ್ಯ ಹಳೆಶಿಲಾಯುಗದ ಉಪಕರಣಗಳ ವಿಶ್ಲೇಷಣೆ**

**೧. ನೀಳಚಕ್ಕೆ ಉಪಕರಣಗಳು**

ಅಂತ್ಯ ಹಳೆಶಿಲಾಯುಗದ ಉಪಕರಣ ಸಮೂಹದಲ್ಲಿ ನೀಳಚಕ್ಕೆ ಗುಂಪು ಅತ್ಯಂತ ಪ್ರಮುಖವಾಗಿದ್ದು ಪ್ರಸ್ತುತ ಉಪಕರಣ ಸಮೂಹದಲ್ಲಿ ಈ ಗುಂಪಿಗೆ ಸೇರಿದ ೨೫೮ ಉಪಕರಣಗಳಿವೆ. ಅಲಗನ್ನು ರೂಪಿಸಿರುವ ವಿಧಾನ, ಪಾರ್ಶ್ವಗಳು ಮತ್ತು ದರ್ಜೆ ಇವುಗಳನ್ನನುಸರಿಸಿ ಈ ಗುಂಪಿನ ಉಪಕರಣಗಳನ್ನು ಆರು ಉಪಗುಂಪುಗಳಾಗಿ ವಿಂಗಡಿಸಬಹು-ದಾಗಿದೆ. ಅವುಗಳೆಂದರೆ

೧. ನೀಳಚಕ್ಕೆಯಂತಹ ಚಕ್ಕೆ ಉಪಕರಣ- ೮೩ ಶೇ. ೩೨.೧೭ Bladish flake
೨. ಒಬ್ಬದಿ ನೀಳಚಕ್ಕೆ ಉಪಕರಣ- ೫೦ ಶೇ. ೨೧.೩೧ Single sided blade (Backed)
೩. ಇಬ್ಬದಿ ನೀಳಚಕ್ಕೆ ಉಪಕರಣ- ೮೦ ಶೇ. ೩೧.೦೦ Paralel sided blade
೪. ಕಚ್ಚುಳ್ಳ ನೀಳಚಕ್ಕೆ ಉಪಕರಣ- ೧೦ ಶೇ. ೩.೮೭ Notched blade
೫. ಕೈಚಾಕು ನೀಳಚಕ್ಕೆ ಉಪಕರಣ- ೨೦ ಶೇ. ೭.೭೫ Pen knife blade
೬. ಮೊನೆ ಸಹಿತ ನೀಳಚಕ್ಕೆ ಉಪಕರಣ- ೧೦ ಶೇ. ೩.೮೭ Point cum blade

ಈ ಉಪಗುಂಪಿನ ಉಪಕರಣಗಳು ದೊರೆತಿರುವ ನೆಲೆ, ಉಪಕರಣಗಳ ಸಂಖ್ಯೆ ಮತ್ತು ನೀಳಚಕ್ಕೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣ ಇವುಗಳನ್ನು ಕೋಷ್ಟಕ ಸಂಖ್ಯೆ ೭.೪ ರಲ್ಲಿ ನೀಡಿದೆ. ಪ್ರತಿ ಉಪಗುಂಪಿನ ಉಪಕರಣಗ-ಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದೆ. ನೀಳಚಕ್ಕೆ ಉಪಕರಣಗಳ ವಿವಿಧ ಮಾದರಿಗಳನ್ವಯದಂತೆ ವೃತ್ತ ನಕ್ಷೆ ರೂಪಿಸಿದ್ದು, ವಿವರ-ಣೆಯನ್ನು ವೃತ್ತ ನಕ್ಷೆ ೭.೫ ರಲ್ಲಿ ನೀಡಿದೆ.

## ಅಂತ್ಯ ಹಳೆಶಿಲಾಯುಗದ ನೀಳಚಕ್ಕೆ ಮಾದರಿ ಉಪಕರಣಗಳ ವೈವಿಧ್ಯ

### ಕೋಷ್ಟಕ ಸಂಖ್ಯೆ ೬.೪

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆಯಂತಹ ಚಕ್ಕೆ Bladeish flake | ಒಬ್ಬದಿ ನೀಳಚಕ್ಕೆ Backed blade | ಇಬ್ಬದಿ ನೀಳಚಕ್ಕೆ Paralel S.blade | ಕಚ್ಚುಳ್ಳ ನೀಳಚಕ್ಕೆ Notched | ಕೈಚಾಕು ನೀಳಚಕ್ಕೆ Pen knife | ಮೊನೆ ಸಹಿತ ನೀಳಚಕ್ಕೆ Point cum blade | ಒಟ್ಟು | ಶೇ |
|---|---|---|---|---|---|---|---|---|---|
| ೧. | ಅಪ್ಪಾನಹಳ್ಳಿ | ೧ | ೧ | ೧ | | | | ೩ | ೧.೧೬ |
| ೨. | ಆವರ್ಗಲ್ಲು | | | ೧ | | | | ೧ | ೦.೩೮ |
| ೩ | ಅಂಕನಬಾವಿ | ೩ | ೧ | ೨ | | | | ೬ | ೨.೩೨ |
| ೪ | ಇರಕಸಂದ್ರಕಾಲೋನಿ | | | | | | | | |
| ೫ | ಉನಗನಾಲ | ೧ | | | | | ೨ | ೩ | ೧.೧೬ |
| ೬ | ಒಬಳಾಪುರ | ೩ | ೩ | ೨ | | ೨ | | ೧೦ | ೩.೮೭ |
| ೭ | ಕರಡಿ | | ೨ | ೪ | | | ೬ | ೬ | ೨.೩೨ |
| ೮ | ಕಾರೇಕುರ್ಚಿ | ೨ | | ೩ | | | | ೫ | ೧.೯೩ |
| ೯ | ಕಾವಲಹಟ್ಟಿ | | ೨ | | | ೨ | | ೨ | ೦.೭೭ |
| ೧೦ | ಕೈಮರ | ೪ | ೨ | ೩ | | ೧ | | ೧೦ | ೩.೮೭ |
| ೧೧ | ಗಳಿಗೆಕೆರೆ | ೩ | ೧೩ | ೬ | | | ೧ | ೨೩ | ೮.೯೧ |
| ೧೨ | ಗುಟ್ಟೆ | ೧ | | ೩ | | | | ೪ | ೧.೫೫ |
| ೧೩ | ಗುರವ್ವನಕಟ್ಟೆ | ೧ | ೧ | ೨ | | ೨ | ೧ | ೭ | ೨.೭೧ |
| ೧೪ | ಗೊಲ್ಲರಹಟ್ಟಿ | ೧ | | | | | | ೧ | ೦.೩೮ |
| ೧೫ | ಚಿಕ್ಕೇಗೌಡನರೊಪ್ಪ | ೧ | ೧ | | | ೨ | ೧ | ೫ | ೧.೯೩ |
| ೧೬ | ಢಣಾಪುರ | ೫ | | | | | | ೫ | ೧.೯೩ |
| ೧೭ | ದೊಡ್ಡಗುಣಿ | ೪ | ೫ | ೬ | ೧ | | | ೧೬ | ೬.೨೦ |
| ೧೮ | ನಾಗಲಾಪುರ | | ೧ | ೧ | | | ೧ | ೩ | ೧.೧೬ |
| ೧೯ | ನಿಡುಗಲ್ಲು | | | ೨ | | | | ೨ | ೦.೭೭ |
| ೨೦ | ಬೊಮ್ಮೇನಹಳ್ಳಿ | ೩ | | | | | | ೩ | ೧.೧೬ |
| ೨೧ | ಮಧುಗಿರಿ | | | ೧ | | ೧ | | ೨ | ೦.೭೭ |
| ೨೨ | ಮಾರಶೆಟ್ಟಿಹಳ್ಳಿ | ೨ | ೨ | ೨ | ೧ | | | ೭ | ೨.೭೧ |
| ೨೩ | ಮಿಡಿಗೇಶಿ | | | | | | | | |
| ೨೪ | ಮೂಗನಾಯಕನಕೋಟೆ ಉತ್ತರ | ೧ | | ೨ | | | ೧ | ೪ | ೧.೫೫ |
| ೨೫ | ಮೂಗನಾಯಕನಕೋಟೆ ಪೂರ್ವ | ೪ | ೭ | ೧ | ೧ | ೧ | ೧ | ೧೫ | ೫.೮೧ |
| ೨೬ | ಮೂಗನಾಯಕನಕೋಟೆ ದಕ್ಷಿಣ | ೧೦ | ೬ | ೧೧ | ೩ | | ೧ | ೩೧ | ೧೨.೦೧ |
| ೨೭ | ಮೂಗನಾಯಕನಕೋಟೆ ಪಶ್ಚಿಮ | ೪ | ೨ | ೨ | | ೨ | ೧ | ೧೧ | ೪.೨೬ |
| ೨೮ | ಮಂಚಕಲ್‌ಕುಪ್ಪೆ | ೨ | ೧ | ೧ | | ೧ | | ೫ | ೧.೯೩ |
| ೨೯ | ಮಂಚಲ್ಲೊರೆ | | | ೨ | | | | ೨ | ೦.೭೭ |
| ೩೦ | ಯಕ್ಕಲಕಟ್ಟೆ | ೨ | ೪ | ೫ | | ೨ | | ೧೩ | ೩.೪೮ |
| ೩೧ | ಯಲ್ಲಾಪುರ | | ೩ | ೪ | ೧ | ೨ | | ೧೦ | ೩.೮೭ |
| ೩೨ | ಯಲ್ಲಪ್ಪನಾಯಕಹೊಸಕೋಟೆ | | ೧ | ೧ | | | | ೨ | ೦.೭೭ |
| ೩೩ | ಶಿವಪುರ | ೩ | ೧ | ೨ | ೧ | ೨ | | ೯ | ೩.೪೮ |
| ೩೪ | ಶೆಟ್ಟಿಹಳ್ಳಿ | | ೧ | | | | | ೧ | ೦.೩೮ |
| ೩೫ | ಸಾಲುಕಟ್ಟೆ | ೨ | ೧ | | | | | ೩ | ೧.೧೬ |
| ೩೬ | ಸಿದ್ಲೇಹಳ್ಳಿ | ೨ | ೧ | ೧ | | ೧ | | ೫ | ೧.೯೩ |
| ೩೭ | ಹರೇನಹಳ್ಳಿ | | | | | | | | |
| ೩೮ | ಹಿಮಗಿರಿ | ೪ | | ೧ | | | | ೫ | ೧.೯೩ |
| ೩೯ | ಹಿರೇಹಳ್ಳಿ | ೩ | ೧ | | | | | ೪ | ೧.೫೫ |
| ೪೦ | ಹೂವಿನಕಟ್ಟೆ | ೩ | | ೧ | | | | ೪ | ೧.೫೫ |
| ೪೧ | ಹೊನ್ನೇಮಾರನಹಳ್ಳಿ | ೫ | ೩ | ೨ | | | | ೧೦ | ೩.೮೭ |
| ೪೨ | ಹೊಸಹಳ್ಳಿ | | | | | | | | |
| | ಒಟ್ಟು | ೮೩ | ೫೫ | ೮೦ | ೧೦ | ೨೦ | ೧೦ | ೨೫೮ | |
| | ಶೇ | ೩೨.೧೭ | ೨೧.೩೧ | ೩೧.೦೦ | ೩.೮೭ | ೭.೭೫ | ೩.೮೭ | ೯೯.೯ | |

### ವೃತ್ತ ನಕ್ಷೆ ಸಂಖ್ಯೆ ೬.ಈ



### ೧.೧ ನೀಳಚಕ್ಕೆಯಂತಹ ಚಕ್ಕೆ

ನೀಳಚಕ್ಕೆ ಗುಂಪಿನಲ್ಲಿ ಅತಿ ಹೆಚ್ಚು ಪ್ರಮಾಣದಲ್ಲಿ ದೊರಕುವ ಈ ಉಪಕರಣಗಳು ಸುಧಾರಿತ ನೀಳಚಕ್ಕೆಗಳನ್ನು ರೂಪಿಸುವ ವಿವಿಧ ಹಂತಗಳಲ್ಲಿ ಪ್ರಾಯಶ: ಮೊದಲ ಹಂತವನ್ನು ತಿಳಿಸುತ್ತವೆ. ಇಂತಹ ಒಟ್ಟು ೮೩ ಉಪಕರಣಗಳು ದೊರೆತಿವೆ (ಶೇ:೩೨.೧೬). ಯಾವುದೇ ವಿಶೇಷ ಆಕಾರಕ್ಕೊಳಪಡದ ಈ ಉಪಕರಣಗಳ ಒಂದು ಬದಿ ಅಥವಾ ಎರಡೂ ಬದಿಗೆ ಸ್ವಲ್ಪ ಮಟ್ಟಿಗೆ ಹರಿತವಾದ ಅಲಗಿದೆ. ಹಿಂಬದಿಯು ಹೆಚ್ಚು ಕಡಿಮೆ ಸಮತಲದಲ್ಲಿದ್ದು ತಾಡನ ಶಂಖು ಮತ್ತು ಉಬ್ಬುಗಳನ್ನು ಚೆನ್ನಾಗಿ ತೋರಿಸುತ್ತವೆ. ಮುಂಬದಿಯಲ್ಲಿ ಚಕ್ಕೆಕಲೆಗಳು ಮತ್ತು ಉಬ್ಬೇಣು ಸಹ ಕಂಡುಬರುತ್ತವೆ. ಹೊರಮೈ ತೊಗಟೆಯ ಅಂಶ ಕೆಲವು ಉಪಕರಣಗಳಲ್ಲಿ ಮಾತ್ರ ಅಲ್ಲಲ್ಲಿ ಕಂಡು ಬರುತ್ತದೆ. ಆಕಾರದಲ್ಲಿ ಅಂಕು ಡೊಂಕಾದ ತ್ರಿಕೋಣ, ತ್ರಾಪಿಜ್ಯ ಮತ್ತು ಅರ್ಧ ಚಂದ್ರಾಕಾರಗಳನ್ನು ಹೊಂದಿವೆ.ದೊರೆತ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೫ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೬.೫**

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೦-೩೦ | ೨೯ | ೧೦-೨೦ | ೫೨ | ೫-೧೦ | ೩೦ |
| ೩೦-೪೦ | ೪೩ | ೨೦-೩೦ | ೨೧ | ೧೦-೧೫ | ೩೮ |
| ೪೦-೫೦ | ೧೧ | ೩೦-೪೦ | ೧೦ | ೧೨-೨೦ | ೧೫ |
| ಒಟ್ಟು | ೮೩ | | ೮೩ | | ೮೩ |

### ೧.೨ ಒಬ್ಬದಿ ನೀಳಚಕ್ಕೆ

ಒಂದು ಪಾರ್ಶ್ವದಲ್ಲಿ ಮಾತ್ರ ಹರಿತ ಅಲಗಿದ್ದು ಇನ್ನೊಂದು ಪಾರ್ಶ್ವವನ್ನು ಒತ್ತಿ ಹಿಡಿಯುವ ಅನುಕೂಲಕ್ಕಾಗಿ ಮೊಂಡಾಗಿಸಿರುವ ಇಂತಹ ಉಪಕರಣಗಳು ಒಟ್ಟು ೫೫ (ಶೇ. ೨೧.೩೧) ಇವೆ. ಉಳಿದೆಲ್ಲಾ ಅಂಶಗಳೂ ಸಮಾನಾಂತರ ಪಾರ್ಶ್ವಗಳ ನೀಳಚಕ್ಕೆಯಂತೆಯೇ ಇವೆ. ಸಾಧಾರಣವಾಗಿ ಒಟ್ಟು ವಿನ್ಯಾಸ ಆಯತಾಕಾರದಲ್ಲಿದ್ದರೆ ಕೆಲವು ಉಪಕರಣಗಳಲ್ಲಿ ತುದಿ ಮೊಂಡಾಗಿದೆ. ಅಡ್ಡವಿನ್ಯಾಸವು ಯಾವುದೇ ಜ್ಯಾಮಿತೀಯ ಆಕೃತಿ ಹೊಂದಿರದೆ ಅಂಕುಡೊಂಕಾಗಿವೆ. ಹೆಚ್ಚಿನ ಉಪಕರಣಗಳನ್ನು ಪ್ರಾಥಮಿಕ ಚಕ್ಕೆಯಿಂದ ಮಾಡಿದೆ. ಹರಿತ ಅಲಗು ಸಾಮಾನ್ಯವಾಗಿ ಸರಳರೇಖೆಯಲ್ಲಿದ್ದರೂ ಕೆಲವು ವಕ್ರರೇಖೆಯಲ್ಲಿಯೂ ಇವೆ. ಹೊರಮೈ ತೊಗಟೆ ಅಂಶ ಹೆಚ್ಚಿನ ಉಪಕರಣಗಳಲ್ಲಿ ಉಳಿದಿವೆ. ದೊರೆತ ಉಪಕರಣಗಳ ಅಳತೆ ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೬.೬ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೬

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೩೦-೪೦ | ೨೯ | ೧೦-೨೦ | ೨೫ | ೫-೧೦ | ೧೯ |
| ೪೦-೫೦ | ೨೨ | ೨೦-೩೦ | ೧೮ | ೧೦-೧೫ | ೨೬ |
| ೫೦-೬೦ | ೪ | ೩೦-೪೦ | ೧೨ | ೧೫-೨೦ | ೧೦ |
| ಒಟ್ಟು | ೫೫ | | ೫೫ | | ೫೫ |

## ೧.೨ ಇಬ್ಬದಿ ನೀಳಚಕ್ಕೆ

ನೀಳಚಕ್ಕೆ ಗುಂಪಿನ ವಿಶಿಷ್ಟ ಉಪಕರಣವಾದ ಇವು ಅತಿ ಹೆಚ್ಚು ಸಂಖ್ಯೆಯಲ್ಲಿದ್ದು ಒಟ್ಟು ೮೦ (ಶೇ.೩೧.೦೦) ಇವೆ. ಬಹುತೇಕ ಅಲಗುಗಳು ಸಮಾನಾಂತರ ತುದಿಯಲ್ಲಿ ಮೊನಚಾಗುತ್ತದೆ. ಕೆಲವು ಉಪಕರಣಗಳಲ್ಲಿ ಬುಡದ ಅಗಲವೇ ಕಮ್ಮಿ ಇದ್ದು ಮೇಲ್ತುದಿಯು ಹೆಚ್ಚು ಅಗಲವಾಗಿದ್ದು ಸರಳರೇಖೆ, ವಕ್ರರೇಖೆ, ಮೊನೆ ಹಾಗೂ ದುಂಡ-ನೆಯ ಆಕಾರದಲ್ಲಿವೆ ಸಾಧಾರಣವಾಗಿ ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದ್ದು, ಬುಡದಲ್ಲಿ ತಾಡನ ಶಂಖು ಪ್ರಮುಖ-ವಾಗಿದೆ. ಹೆಚ್ಚಿನ ಉದಾಹರಣೆಗಳಲ್ಲಿ ನೀಳವಾದ ಪ್ರಾಥಮಿಕ ಚಕ್ಕೆಗಳನ್ನೇ ಬಳಸಿದೆ. ಮುಂಬದಿಯ ಮಧ್ಯದಲ್ಲಿ ಚಕ್ಕೆಗಳನ್ನೆ-ಬ್ಬಿಸಿರುವ ವಿಧಾನವನ್ನನುಸರಿಸಿ, ಎದ್ದುಕಾಣುವ, ಉಬ್ಬೇಣು ಸರಳರೇಖೆಯ ರೂಪದಲ್ಲಿ ಅಥವಾ ಅಂಕುಡೊಂಕಾಗಿದೆ. ಹೆಚ್ಚಿನ ಉದಾಹರಣೆಗಳಲ್ಲಿ ತ್ರಿಭುಜಾಕಾರದ ಅಡ್ಡ ವಿನ್ಯಾಸ ಬುಡದಿಂದ ತುದಿಯವರೆಗೂ ಕಂಡುಬರುತ್ತಿದ್ದರೆ ಒಂದೆರಡರಲ್ಲಿ ಮಾತ್ರ ನಿಮ್ನೋನ್ನತವಾಗಿರುವುದು ಕಂಡುಬರುತ್ತದೆ. ಕೆಲವು ಉಪಕರಣಗಳಲ್ಲಿ ಹೊರಮೈ ತೊಗಟೆ ಉಳಿದುಕೊಂಡಿದೆ. ಹೆಚ್ಚಿನ ಮಾದರಿಗಳಲ್ಲಿ ಮೊದಲೇ ರೂಪಿಸಿದ ತಾಡನ ವೇದಿಕೆ ಕಾಣುತ್ತದೆ. ಇವುಗಳ ಅಳತೆ ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೬.೭ ರಲ್ಲಿ ಕೊಡಲಾಗಿದೆ.

ಕೋಷ್ಟಕ ಸಂಖ್ಯೆ ೬.೭

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೦-೩೦ | ೧೭ | ೧೦-೨೦ | ೩೦ | ೫-೧೦ | ೪೨ |
| ೩೦-೪೦ | ೩೪ | ೨೦-೩೦ | ೩೫ | ೧೦-೨೦ | ೩೮ |
| ೪೦-೫೦ | ೧೯ | ೩೦-೪೦ | ೧೫ | | |
| ೫೦-೬೦ | ೧೦ | | | | |
| ಒಟ್ಟು | ೮೦ | | ೮೦ | | ೮೦ |

**೧.೪ ಕಚ್ಚುಳ್ಳ ನೀಳಚಕ್ಕೆ**

ನೀಳಚಕ್ಕೆಯ ಹರಿತವಾದ ಒಂದು ಅಥವಾ ಎರಡು ಪಾರ್ಶ್ವಗಳಲ್ಲಿ ಕಚ್ಚುಗಳನ್ನು ಹೊಂದಿರುವ ಇಂತಹ ಒಟ್ಟು ೧೦ (ಶೀ.೩.೮೭) ಉಪಕರಣಗಳಿವೆ. ಮೂಲ ನೀಳಚಕ್ಕೆಯ ಅಲಗು ಹೆಚ್ಚಿನ ಉಪಯೋಗದಿಂದ ಮೊನಚು ಕಡಿ-ಮೆಯಾದಾಗ ಮುಂಬದಿಯಿಂದ, ಹಿಂಬದಿಯಿಂದ ಅಥವಾ ಎರಡೂ ಬದಿಗಳಿಂದ ಕಿರುಚಕ್ಕೆಗಳನ್ನೆಬ್ಬಿಸಿ ಅಥವಾ ಕೊಳವೆ-ಯಾಕಾರದ ಸುತ್ತಿಗೆಯಿಂದ ಬಡಿದು ಈ ಕಚ್ಚುಗಳನ್ನು ಮೂಡಿಸಿದೆ. ಇದರಿಂದಾಗಿ ಚಕ್ಕೆಯ ಅಂಚುಗಳು ಗರಗಸದಂತೆ ಕೆಲಸ ಮಾಡುತ್ತವೆ. ದೊರೆತ ಕೆಲವೊಂದು ಉಪಕರಣಗಳಲ್ಲಿ ಹೊರಮೈ ತೊಗಟೆ ಅಂಶವಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೮ .ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೮**

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೩೦-೩೫ | ೩ | ೧೦-೨೦ | ೫ | ೫-೧೦ | ೫ |
| ೩೫-೪೦ | ೩ | ೨೦-೩೦ | ೩ | ೧೦-೨೦ | ೫ |
| ೪೦-೪೫ | ೪ | ೩೦-೪೦ | ೩ | | |
| ಒಟ್ಟು | ೧೦ | | ೧೦ | | ೧೦ |

**೧.೫ ಕೈಚಾಕು ನೀಳಚಕ್ಕೆ**

ಅಂತ್ಯ ಹಳೆಶಿಲಾಯುಗದ ನೀಳಚಕ್ಕೆ ಗುಂಪಿನ ವಿಶಿಷ್ಟ ಉಪಕರಣವಾದ ಇವು ಪ್ರಸ್ತುತ ಒಟ್ಟು ೨೦ (ಶೀ. ೭.೭೫) ದೊರಕಿವೆ. ಇವುಗಳಲ್ಲೊಂದು ಜಾಸ್ಪರ್ ಶಿಲೆಯಲ್ಲಿದ್ದರೆ ಉಳಿದವು ಕ್ವಾರ್ಟ್ಜ಼ಶಿಲೆಯಲ್ಲಿವೆ. ಎಲ್ಲಾ ಉಪಕರಣಗಳಲ್ಲಿ ಸಾಧಾರಣವಾಗಿ ಕಂಡುಬರುವ ಲಕ್ಷಣಗಳೆಂದರೆ ಮೇಲ್ತುದಿ ಚೂಪಾಗಿರುವುದು. ಒಂ[illegible] ಬದಿಯಲ್ಲಿ ವಕ್ರರೇಖೆಯಲ್ಲಿ ಸಾಗುವ ಹರಿತ ಅಲಗಿರುವುದು ಮತ್ತು ಇನ್ನೊಂದು ಬದಿ ದಪ್ಪವಾಗಿದ್ದು ಬೆರಳಿನಿಂದ ಒತ್ತಿ ಹಿಡಿಯಲು ಅನುಕೂಲವಾಗು-ವಂತೆ ಚಕ್ಕೆ ಕಲೆಗಳನ್ನು ತೆಗೆದಿರುವುದು. ಸಾದಾರಣವಾಗಿ ಹಿಂಬದಿ ಸಮತಲದಲ್ಲಿದ್ದರೆ ಮುಂಬದಿಯಲ್ಲಿ ಒಂದೇ ಚಕ್ಕೆ ಅಥವಾ ಹಲವಾರು ಚಕ್ಕೆಗಳನ್ನು ತೆಗೆದು ಹರಿತ ಅಲಗನ್ನು ರೂಪಿಸಿದೆ.

ದೊರೆತಿರುವ ಉಪಕರಣಗಳನ್ನು ಆಕೃತಿ ಹಾಗೂ ಅಲಗು ರೂಪಿಸಿರುವ ವಿಧಾನವನ್ನನುಸರಿಸಿ ಮೂರು ಗುಂಪುಗಳಾಗಿ ವಿಂಗಡಿಸಬಹುದು. ಪಾರ್ಶ್ವ ಹೆರೆಗತ್ತಿಯಂತಹ ಅರ್ಧಚಂದ್ರಾಕೃತಿ ಉಪಕರಣಗಳು ಯಾವುದೇ ಆಕಾರಕ್ಕೆ ಹೊಂದದ ಉಪಕರಣಗಳು ಮತ್ತು ಹೆಚ್ಚು ಕಡಿಮೆ ಸಮಾನಾಂತರ ಪಾರ್ಶ್ವಗಳುಳ್ಳ ಉಪಕರಣಗಳು.

ಮೊದಲನೆಯ ಮಾದರಿಯ ಒಂಬತ್ತು ಉಪಕರಣಗಳಿದ್ದು ಅವುಗಳಲ್ಲಿ ನಾಲ್ಕನ್ನು ಸ್ವಲ್ಪದಪ್ಪವಾದ ಚಕ್ಕೆಗಳ ವೇಲೆ ರೂಪಿಸಿದೆ. ಸಮತಲ ಹಿಂಬದಿ, ಕೋನದಲ್ಲಿ ಚಕ್ಕೆ ತೆಗೆದು ಹರಿತಗೊಳಿಸಿದ ಒಂದು ಪಾರ್ಶ್ವ, ಮೊನೆಯಂತಹ ಮೇಲ್ತುದಿ ಇವು ಎದ್ದು ಕಾಣುತ್ತವೆ. ದಪ್ಪ ಚಕ್ಕೆಗಳಲ್ಲಿ ಬುಡದ ಭಾಗವು ದಪ್ಪವಿದ್ದು, ತಾಡನ ವೇದಿಕೆಯನ್ನು ಮಾಡಿಕೊಂಡಿ-ರುವುದು ಕಾಣುತ್ತದೆ. ಸುಮಾರು ಎಲ್ಲಾ ಉದಾಹರಣೆಗಳಲ್ಲಿ ಮೇಲ್ತುದಿ ಚೂಪಾಗಿದ್ದು ಅಲ್ಲಿಂದಲೇ ಹರಿತ ಅಲಗು ಆರಂಭ-ವಾಗಿದೆ. ಒಂದು ಉದಾಹರಣೆಯಲ್ಲಿ ಮೇಲ್ತುದಿಯನ್ನು ತುದಿ ಹೆರೆಗತ್ತಿಯಂತೆ ರೂಪಿಸಿದೆ. ಕೆಳತುದಿಯನ್ನು ತೆಳ್ಳಗಾಗಿಸಿ ಸಣ್ಣಗಾತ್ರದ ಉಪಕರಣಗಳಲ್ಲಿ ಗೂಟದಂತೆ ಮಾಡಿರುವುದು ಕಾಣುತ್ತದೆ.

ಎರಡನೆ ಮಾದರಿಯ ಮೂರು ಉಪಕರಣಗಳು ದೊರೆತಿದ್ದು ಮೇಲ್ತುದಿ ಅಲಗು ರೂಪಣಾ ವಿಧಾನದಲ್ಲಿ ಮೇಲೆ ಹೇಳಿದ ಲಕ್ಷಣಗಳನ್ನೇ ತೋರಿಸುತ್ತವೆ. ಆದರೆ ಉಪಕರಣದ ಮೊನೆಯನ್ನು ಕೊಕ್ಕಿನಂತೆ ರೂಪಿಸಿದೆ. ಇನ್ನೊಂದರ ಹರಿತ ಅಲಗು ವಕ್ರರೀತಿಯಲ್ಲಿ ಸಾಗುತ್ತದೆ. ಸಾಕಷ್ಟು ತೆಳ್ಳನೆಯ ನೀಳಚಕ್ಕೆಗಳ ಮೇಲೆ ರೂಪಿತವಾಗಿರುವ ಮೂರನೇ ಮಾದರಿ ಉಪಕರಣಗಳ ಎರಡೂ ಪಾರ್ಶ್ವಗಳು ಹರಿತವಾಗಿದ್ದು ಹರಿತ ಅಲಗುಗಳು ಮೊನೆಯಂತಹ ಮೇಲ್ತುದಿಯಲ್ಲಿ ಸೇರುತ್ತವೆ. ಹಿಡಿಯಲು ಅನುಕೂಲವಾಗುವಂತೆ ಅಥವಾ ಮೂಳೆ ಅಥವಾ ಮರದ ಹಿಡಿಕೆಗೆ ಜೋಡಿಸಲು ಅನುಕೂಲವಾ-ಗುವಂತೆ ಕೆಳಭಾಗವನ್ನು ರೂಪಿಸಿರುವುದು ಗಮನಾರ್ಹ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆ ಯನ್ನು ಕೋಷ್ಟಕ ಸಂಖ್ಯೆ ೬.೯ ರಲ್ಲಿ ನಡಿದೆ.

ಕೋಷ್ಟಕ ಸಂಖ್ಯೆ ೬.೯

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೩೦-೪೦ | ೧೦ | ೧೦-೧೫ | ೧೦ | ೫-೧೦ | ೬ |
| ೪೦-೫೦ | ೫ | ೧೫-೨೦ | ೫ | ೧೦-೧೫ | ೫ |
| ೫೦-೬೦ | ೫ | ೨೦-೨೫ | ೫ | ೧೫-೨೦ | ೯ |
| ಒಟ್ಟು | ೨೦ | | ೨೦ | | ೨೦ |

### ೧.೬ ಮೊನೆಯಂತಿರುವ ನೀಳಚಕ್ಕೆ

ಮೊಂಡಾದ ಅಲಗಿನ ನೀಳಚಕ್ಕೆಯ ಒಂದು ಅಥವಾ ಎರಡೂ ಬದಿಗಳನ್ನು ಲಘುಕೋನದಲ್ಲಿ ತುಂಡು ಮಾಡಿ ಮೊನೆ-ಯನ್ನು ರೂಪಿಸಿದೆ. ಬಹುಶಃ ಮುರಿದು ನಿರುಪಯುಕ್ತವಾದ ನೀಳಚಕ್ಕೆಗಳಿಂದ ರೂಪಿತವಾದ ಈ ಉಪಕರಣಗಳು ಯಾವುದೇ ನಿರ್ದಿಷ್ಟ ಆಕಾರದಲ್ಲಿಲ್ಲ. ಉಳಿದ ಎಲ್ಲಾ ಲಕ್ಷಣಗಳಲ್ಲಿಯೂ ನೀಳಚಕ್ಕೆಯನ್ನು ಹೋಲುತ್ತವೆ. ಒಟ್ಟು ಉಪಕರಣ ೧೦ (ಶೇ. ೩.೮೭.) ಇದ್ದು ಅವುಗಳ ಅಳತೆ ಉದ್ದ ಕನಿಷ್ಠ ೨೨ ಗರಿಷ್ಠ ೬, ಅಗಲ ಕನಿಷ್ಠ ೧೩ ಗರಿಷ್ಠ ೩೩ ಮತ್ತು ದಪ್ಪ ೩ ರಿಂದ ೧೦ ಮಿ.ಮೀ.ಗಳಿವೆ.

೨. ಹೆರೆಚಕ್ಕೆ ಉಪಕರಣ

ನೀಳಚಕ್ಕೆ ಗುಂಪಿನ ತರುವಾಯ ಅಂತ್ಯಹಳೆಯ ಶಿಲಾಯುಗ ಉಪಕರಣಗಳಲ್ಲಿ ಹೆರೆಚಕ್ಕೆ ಗುಂಪಿನ ಉಪಕರಣಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಪ್ರಸ್ತುತ ಈ ಗುಂಪಿನ ಉಪಕರಣಗಳು ಒಟ್ಟು ೨೪೭ ( ಶೇ. ೩೫.೪೩) ಇವೆ. ಉಪಕರಣಗಳ ಆಕಾರ, ಹೆರೆಯುವ ಅಲಗು, ಇರುವ ಪಾರ್ಶ್ವ, ತಯಾರಿಸಲು ಉಪಯೋಗಿಸಿದ ಮೂಲಶಿಲೆ, ಸ್ವರೂಪ ಮುಂತಾದವುಗಳನ್ನಾಧರಿಸಿ ಹೆರೆಚಕ್ಕೆ ಗುಂಪಿನ ಉಪಕರಣಗಳನ್ನು ಐದು ಉಪಗುಂಪುಗಳಾಗಿ ವಿಭಾಗಿಸಬಹುದು. ಅವುಗಳೆಂದರೆ,

| | |
|---|---|
| ೧. ಒಬ್ಬದಿ ಹೆರೆಚಕ್ಕೆ | ಉಪಕರಣ- ೧೩೮ ಶೇ. ೫೫.೮೭ Single Sided Scraper |
| ೨. ತುದಿ ಹೆರೆಚಕ್ಕೆ | ಉಪಕರಣ- ೩೬ ಶೇ. ೧೫.೭೮ End Scraper |
| ೩. ದುಂಡು ಹೆರೆಚಕ್ಕೆ | ಉಪಕರಣ- ೩೪ ಶೇ. ೬.೭೧ Round Sraper |
| ೪. ಒಳಬಾಗಿದ ಅಂಚಿನ ಹೆರೆಚಕ್ಕೆ | ಉಪಕರಣ- ೨೫ ಶೇ. ೧೦.೧೨ Hallow Scraper |
| ೫. ಹೆಬ್ಬೆಟ್ಟುಗುರಿನಂತಿರುವ ಹೆರೆಚಕ್ಕೆ | ಉಪಕರಣ- ೨೧ ಶೇ. ೮.೫೦ Thumb Nail Scraper |

ಪ್ರತಿ ಉಪ ಗುಂಪಿನ ಉಪಕರಣಗಳು ದೊರೆತಿರುವ ನೆಲೆ, ಉಪಕರಣಗಳ ಸಂಖ್ಯೆ ಮತ್ತು ಹೆರೆಚಕ್ಕೆಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣ. ಇವುಗಳನ್ನು ಕೋಷ್ಟಕ ಸಂಖ್ಯೆ ೭.೧೦ ರಲ್ಲಿ ನೀಡಿದೆ. ಪ್ರತಿ ಉಪ ಗುಂಪಿನ ಉಪಕರಣಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದೆ. ದೊರೆತ ಉಪಕರಣಗಳ ಅನ್ವಯದಂತೆ ವೃತ್ತ ನಕ್ಷೆಯನ್ನು ರೂಪಿಸಿ ವೃತ್ತನಕ್ಷೆ ೭.ಉ ರಲ್ಲಿ ನೀಡಿದೆ.

ವೃತ್ತ ನಕ್ಷೆ ಸಂಖ್ಯೆ ೭.ಉ



## ಕೋಷ್ಟಕ ಸಂಖ್ಯೆ ೬.೧೦

| ಕ್ರಮ ಸಂಖ್ಯೆ | ನೆಲೆ | ಪಾರ್ಶ್ವ ಹೆರೆಗತ್ತಿ Side scraper | ತುದಿ ಹೆರೆಗತ್ತಿ End scraper | ದುಂಡು ಹೆರೆಗತ್ತಿ Round scraper | ಒಳಬಾಗಿದ ಅಂಚಿನ ಹೆರೆಗತ್ತಿ Hollow scraper | ಹೆಬ್ಬೆಟ್ಟು ಗುರಿನಂತಿರುವ ಹೆರೆಗತ್ತಿ Thumbnail scraper | ಒಟ್ಟು | ಶೇ |
|---|---|---|---|---|---|---|---|---|
| ೧. | ಅಪ್ಪಾನಹಳ್ಳಿ | ೩ | | | | | ೩ | ೧.೨೧ |
| ೨. | ಅವರ್ಗಿಲ್ಲು | ೪ | | | | | ೪ | ೧.೬೧ |
| ೩ | ಅಂಕನಬಾವಿ | ೨ | | ೧ | | | ೩ | ೧.೨೧ |
| ೪ | ಇರಕಸಂದ್ರಕಾಲೋನಿ | | ೧ | | | | ೧ | ೦.೪೦ |
| ೫ | ಉನಗನಾಲ | ೨ | | | | | ೨ | ೦.೮೦ |
| ೬ | ಓಬಳಾಪುರ | ೬ | | | ೨ | | ೮ | ೩.೨೩ |
| ೭ | ಕರಡಿ | ೨ | ೨ | | ೧ | | ೫ | ೨.೦೨ |
| ೮ | ಕಾರೇಕುರ್ಚಿ | ೩ | | | | ೧ | ೪ | ೧.೬೧ |
| ೯ | ಕಾವಲಹಟ್ಟಿ | | | ೧ | ೧ | ೧ | ೩ | ೧.೨೧ |
| ೧೦ | ಕೈಮರ | ೭ | ೨ | ೧ | | | ೧೦ | ೪.೦೪ |
| ೧೧ | ಗಳಿಗೆಕೆರೆ | ೭ | | ೩ | ೧ | ೧ | ೧೨ | ೪.೮೫ |
| ೧೨ | ಗುಟ್ಟಿ | ೩ | ೩ | ೧ | ೧ | | ೮ | ೩.೨೩ |
| ೧೩ | ಗುರಮ್ಮನಕಟ್ಟೆ | ೫ | ೬ | ೧ | ೧ | ೨ | ೧೫ | ೬.೦೭ |
| ೧೪ | ಗೊಲ್ಲರಹಟ್ಟಿ | ೧ | ೨ | | | ೧ | ೪ | ೧.೬೧ |
| ೧೫ | ಚಿಕ್ಕೇಗೌಡನರೊಪ್ಪ | ೨ | | | | | ೨ | ೦.೮೦ |
| ೧೬ | ಧನಾಪುರ | ೨ | ೧ | ೧ | | ೧ | ೫ | ೨.೦೨ |
| ೧೭ | ದೊಡ್ಡಗುಣಿ | ೬ | ೧ | ೧ | ೨ | | ೧೦ | ೪.೦೪ |
| ೧೮ | ನಾಗಲಾಪುರ | ೧ | ೧ | | | | ೨ | ೦.೮೦ |
| ೧೯ | ನಿಡುಗಲ್ಲು | | | | | | | |
| ೨೦ | ಬೊಮ್ಮೇನಹಳ್ಳಿ | ೩ | | | | | ೩ | ೧.೨೧ |
| ೨೧ | ಮಧುಗಿರಿ | ೨ | ೧ | ೧ | | | ೪ | ೧.೬೧ |
| ೨೨ | ಮಾರಶೆಟ್ಟಿಹಳ್ಳಿ | ೩ | | ೧ | | | ೪ | ೧.೬೧ |
| ೨೩ | ಮಿಡಿಗೇಶಿ | ೧ | | | | | ೧ | ೦.೪೦ |
| ೨೪ | ಮೂಗನಾಯಕನಕೋಟೆ ಉತ್ತರ | ೨ | ೧ | ೩ | ೧ | ೨ | ೯ | ೩.೬೪ |
| ೨೫ | ಮೂಗನಾಯಕನಕೋಟೆ ಪೂರ್ವ | ೪ | | ೧ | ೨ | | ೭ | ೨.೮೩ |
| ೨೬ | ಮೂಗನಾಯಕನಕೋಟೆ ದಕ್ಷಿಣ | ೧೮ | ೨ | ೧ | ೫ | ೩ | ೨೯ | ೧೧.೭೪ |
| ೨೭ | ಮೂಗನಾಯಕನಕೋಟೆ ಪಶ್ಚಮ | ೩ | ೬ | ೧ | | ೨ | ೧೨ | ೪.೮೫ |
| ೨೮ | ಮಂಚಕಲ್‌ಕುಪ್ಪೆ | ೪ | ೨ | | ೧ | | ೭ | ೨.೮೩ |
| ೨೯ | ಮಂಚಲದೊರೆ | | | | | | | |
| ೩೦ | ಯಕ್ಕಲಕಟ್ಟೆ | ೧೧ | ೪ | ೩ | ೨ | | ೨೦ | ೮.೦೯ |
| ೩೧ | ಯಲ್ಲಾಪುರ | ೭ | ೧ | | ೨ | | ೧೦ | ೪.೦೪ |
| ೩೨ | ಯಲ್ಲಪ್ಪನಾಯಕಹೊಸಕೋಟೆ | | | | | | | |
| ೩೩ | ಶಿವಪುರ | ೪ | | ೧ | | ೧ | ೬ | ೨.೪೨ |
| ೩೪ | ಶೆಟ್ಟಿಹಳ್ಳಿ | ೧ | | ೧ | ೧ | | ೩ | ೧.೨೧ |
| ೩೫ | ಸಾಲುಹಟ್ಟಿ | ೧ | | | | | ೧ | ೦.೪೦ |
| ೩೬ | ಸಿದ್ಧೇಹಳ್ಳಿ | ೩ | ೧ | | | | ೪ | ೧.೬೧ |
| ೩೭ | ಹರೇನಹಳ್ಳಿ | ೧ | | | ೨ | | ೩ | ೧.೨೧ |
| ೩೮ | ಹಿಮಗಿರಿ | ೨ | ೨ | | | ೧ | ೫ | ೨.೦೨ |
| ೩೯ | ಹಿರೇಹಳ್ಳಿ | ೨ | | | | ೩ | ೫ | ೨.೦೨ |
| ೪೦ | ಹೂವಿನಹಟ್ಟಿ | ೧ | | | | ೧ | ೨ | ೦.೮೦ |
| ೪೧ | ಹೊನ್ನೆಮಾರನಹಳ್ಳಿ | ೮ | | | | | ೮ | ೩.೨೩ |
| ೪೨ | ಹೊಸಹಳ್ಳಿ | ೧ | | | | ೧ | ೩ | ೧.೨೧ |
| | ಒಟ್ಟು | ೧೩೮ | ೩೯ | ೨೪ | ೨೫ | ೨೧ | ೨೪೭ | |
| | ಶೇ | ೫೫.೮೭ | ೧೫.೭೮ | ೯.೭೧ | ೧೦.೧೨ | ೮.೫೦ | ೯೯.೯೮ | |

## ೨.೧ ಒಬ್ಬದಿ ಹೆರೆಚಕ್ಕೆ

ಸಣ್ಣ ಅಥವಾ ಮಧ್ಯಮ ಗಾತ್ರದ ಪ್ರಾಥಮಿಕ ಚಕ್ಕೆಗಳ ಒಂದು ಅಥವಾ ಎರಡೂ ಪಾರ್ಶ್ವಗಳಲ್ಲಿ ಮರು ಚಕ್ಕೆಗಳನ್ನೆಬ್ಬಿಸಿ ರೂಪಿಸಿರುವ ಇಂತಹ ಹೆರೆಗತ್ತಿಗಳು ಒಟ್ಟು ೧೩೮ ( ಶೇ. ೫೫.೮೭) ಇವೆ. ಪ್ರಾಥಮಿಕ ಚಕ್ಕೆಯ ಲಕ್ಷಣಗಳನ್ನನುಸರಿಸಿ ಉಪಕರಣದ ಹಿಂಬದಿ, ಸಮತಲ ಇಲ್ಲವೇ ತಾಡನಶಂಖುವನ್ನು ಹೊಂದಿವೆ. ಮೇಲ್ಬದಿಯಲ್ಲಿ ಮರುಚಕ್ಕೆಯ ಕಲೆಗಳು, ಉಬ್ಬೇಣು ಅಥವಾ ಮಧ್ಯ-ಉಬ್ಬನ್ನು ಕಾಣಬಹುದು. ಕೆಲವು ಉದಾಹರಣೆಗಳಲ್ಲಿ ದ್ವಿತೀಯ ಶ್ರೇಣಿಯ ಚಕ್ಕೆ ತೆಗೆದು ಅಲಗನ್ನು ಹರಿತಗೊಳಿಸಿರುವುದು ಕಾಣುತ್ತದೆ. ಒಟ್ಟು ಉಪಕರಣಗಳ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೧೧ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೧

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೦-೩೦ | ೩೫ | ೧೦-೨೦ | ೨೧ | ೫-೧೦ | ೨೦ |
| ೩೦-೪೦ | ೬೩ | ೨೦-೩೦ | ೬೨ | ೧೦-೧೫ | ೪೮ |
| ೪೦-೫೫ | ೩೯ | ೩೦-೪೫ | ೫೫ | ೧೫-೨೦ | ೭೦ |
| ಒಟ್ಟು | ೧೩೮ | | ೧೩೮ | | ೧೩೮ |

ವಿಶ್ಲೇಷಣೆಯಂತೆ ಉಪಕರಣಗಳ ಉದ್ದ ಕನಿಷ್ಠ ೫ ಗರಿಷ್ಠ ೨೨ ಅಗಲ ಕನಿಷ್ಠ ೧೮ ಗರಿಷ್ಠ ೪೫ ಮತ್ತು ದಪ್ಪ ಕನಿಷ್ಠ ೬ ಗರಿಷ್ಠ ೧೮ ಮಿ.ಮೀ. ಗಳಲ್ಲಿವೆ.

## ೨.೨ ತುದಿ ಹೆರೆಚಕ್ಕೆ

ಹೆರೆಚಕ್ಕೆ ಸಮೂಹದಲ್ಲಿ ಈ ಗುಂಪಿನ ೩೯ (ಶೇ.೧೫.೭೮) ಉಪಕರಣಗಳಿವೆ. ಕಿರು ಅಥವಾ ಮಧ್ಯಮ ಗಾತ್ರದ ಚಕ್ಕೆಗಳ ಒಂದು ತುದಿಯಲ್ಲಿ ಮರುಚಕ್ಕೆಗಳನ್ನೆಬ್ಬಿಸಿ ಹರಿತ ಅಲಗನ್ನು ರೂಪಿಸಿದೆ. ಅಂಡ, ಆಯತ ಮತ್ತು ತ್ರಿಭುಜಾಕಾರಗಳಲ್ಲಿವೆ. ಕೆಲವು ಉಪಕರಣಗಳು ಹಿಂಬದಿಯಲ್ಲಿ ಸಮತಲ ಹೊಂದಿವೆ. ಮುಂಬದಿಯಲ್ಲಿ ಚಕ್ಕೆಕಲೆ ಮತ್ತು ಉಬ್ಬೇಣು ಕಾಣುತ್ತದೆ. ಕೆಲವು ಉಪಕರಣಗಳಲ್ಲಿ ಮೂಲ ಶಿಲಾ ತೊಗಟೆಯಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೧೨ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೨

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೦-೩೦ | ೧೨ | ೧೫-೨೫ | ೯ | ೫-೧೦ | ೧೧ |
| ೩೦-೪೦ | ೧೮ | ೨೫-೩೫ | ೧೩ | ೧೦-೧೫ | ೧೭ |
| ೪೦-೫೦ | ೯ | ೩೫-೪೦ | ೧೭ | ೧೫-೨೦ | ೧ |
| ಒಟ್ಟು | ೩೯ | | ೩೯ | | ೩೯ |

ಈ ಉಪಕರಣಗಳಲ್ಲಿ ಉದ್ದವು ಕನಿಷ್ಠ ೨೧ ಮಿ.ಮೀ. ಗರಿಷ್ಠ ೪೯ ಮಿ.ಮೀ. ಅಗಲ ಕನಿಷ್ಠ ೧೮ ಗರಿಷ್ಠ ೩೮ ಮತ್ತು ದಪ್ಪ ಕನಿಷ್ಠ ೫ ಗರಿಷ್ಠ ೧೮ ಮಿ.ಮೀ. ಗಳಾಗಿವೆ.

### ೨.೩ ದುಂಡು ಹೆರೆಚಕ್ಕೆ

ಮಧ್ಯಮ ಗಾತ್ರದ ಉಂಡೆಕಲ್ಲು ಅಥವಾ ಚಕ್ಕೆಯ ಮೇಲೆ ರೂಪಿಸಿದ ಈ ಉಪಕರಣ ೨೪ (ಶೇ. ೯.೭೧) ಇವೆ. ಸಾಧಾರಣವಾಗಿ ವೃತ್ತಾಕ್ಕಾರದಲ್ಲಿದ್ದರೂ, ಅಂಡಾಕಾರ, ವಿಷಮ ತ್ರಿಭುಜ ಮತ್ತು ಎಲೆಯಾಕಾರದಲ್ಲಿಯೂ ಇವೆ. ಹಿಂಬದಿ ಸಾಧಾರಣವಾಗಿ ಸಮತಲದಲ್ಲಿದ್ದು ಚಕ್ಕೆ ಉಪಕರಣಗಳಲ್ಲಿ ಶಂಖು ಮುಖ್ಯವಾಗಿ ಎದ್ದು ಕಾಣುತ್ತದೆ. ಮುಂಬದಿ-ಯಲ್ಲಿ ಕೆಲವು ಉಪಕರಣ ಮಧ್ಯ ಉಬ್ಬನ್ನು ಹೊಂದಿದ್ದರೆ ಮತ್ತೆ ಕೆಲವು ಉಬ್ಬೇಣನ್ನು ಹೊಂದಿವೆ. ಮೇಲ್ಮುಖದಿಂದ ಮಾತ್ರವೇ ಚಕ್ಕೆಗಳನ್ನು ತೆಗೆದು ಉಪಕರಣಗಳನ್ನು ರೂಪಿಸಿವೆ. ಕೆಲವು ಚಕ್ಕೆ ಉಪಕರಣಗಳ ಹೊರಮೈ ತೊಗಟೆ ಕಂಡು ಬರುತ್ತದೆ. ಕೆಲವು ಉಪಕರಣಗಳ ಕೆಳತುದಿಯಲ್ಲಿ ಅಸ್ಪಷ್ಟವಾದ ಗೂಟದಂತಹ ಮುಂಚಾಚು ಕಾಣಬಹುದು. ಒಟ್ಟು ಉಪಕ-ರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೩ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೧೩

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|
| ೨೦-೩೦ | ೯ | ೫-೧೦ | ೧೧ |
| ೩೦-೪೦ | ೧೧ | ೧೦-೧೫ | ೧೩ |
| ೪೦-೫೦ | ೪ | | |
| ಒಟ್ಟು | ೨೪ | | ೨೪ |

### ೨.೪ ಒಳಬಾಗಿದ ಅಂಚಿನ ಹೆರೆಚಕ್ಕೆ

ಹೆಸರು ಸೂಚಿಸುವಂತೆ ಒಂದು ಅಥವಾ ಎರಡೂ ಪಾರ್ಶ್ವಗಳು ನಿಮ್ನ ರೂಪದಲ್ಲಿ ಒಳಬಾಗಿದ್ದು, ಕೋಲು, ಮೂಳೆ ಮುಂತಾದವುಗಳನ್ನು ಹೆರೆಯಲು ಉಪಯೋಗಿಸುತ್ತಿದ್ದ ಇಂತಹ ಉಪಕರಣಗಳು ಒಟ್ಟು ೨೫ (ಶೇ. ೧೦.೧೨) ಇವೆ. ಸಣ್ಣ ಅಥವಾ ಮಧ್ಯಮ ಗಾತ್ರದ, ಮೊದಲಿಗೆ ನೀಳಚಕ್ಕೆಯಂತೆ ಉಪಯೋಗಿಸಿರಬಹುದಾದ ಚಕ್ಕೆಗಳ ಮತ್ತು ನಿರು-ಪಯುಕ್ತ ಚಕ್ಕೆಗಳ ಒಂದು ಅಥವಾ ಎರಡೂ ಬದಿಯಿಂದ ಚಕ್ಕೆಗಳನ್ನೆಬ್ಬಿಸಿ ಹರಿತ ಅಲಗನ್ನು ರೂಪಿಸಿದೆ. ಕೆಲವು ಉಪಕರ-ಣಗಳ ಹಿಂಬದಿ ಸಮತಲವಾಗಿದ್ದರೆ ಮತ್ತೆ ಹಲವು ನಿಮ್ನ ಸಮತಲವಾಗಿವೆ. ವಿನ್ಯಾಸದಲ್ಲಿ ಆಯತ, ಅರ್ಧಚಂದ್ರಾಕೃತಿ, ಅರ್ಧವೃತ್ತ, ತ್ರಿಭುಜಾಕಾರಗಳ ಮತ್ತು ಯಾವುದೇ ನಿರ್ದಿಷ್ಟ ಆಕಾರವಿಲ್ಲದ ಉಪಕರಣಗಳೂ ಇವೆ. ಕೆಲವು ಉಪಕರಣಗಳ ಹೊರ ಅಂಚು ಒಳ ಅಂಚಿಗೆ ಸಮಾನಾಂತರವಾಗಿ ಉಬ್ಬಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೪ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೪

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೧೫-೨೫ | ೫ | ೧೫-೨೫ | ೭ | ೫-೧೦ | ೭ |
| ೨೫-೩೫ | ೧೦ | ೨೫-೩೫ | ೧೨ | ೧೦-೧೫ | ೧೦ |
| ೩೫-೪೫ | ೧೦ | ೩೫-೪೫ | ೪ | ೧೮-೨೦ | ೬ |
| ಒಟ್ಟು | ೨೫ | | ೨೫ | | ೫೨ |

**೨.೫ ಹೆಬ್ಬೆಟ್ಟು ಉಗುರಿನಂತಿರುವ ಹೆರೆಚಕ್ಕೆ**

ಇದು ಅಂತ್ಯ ಹಳೆಶಿಲಾಯುಗದ ಹೆರೆಚಕ್ಕೆ ಗುಂಪಿನ ವಿಶೇಷ ಉಪಕರಣವಾಗಿದ್ದು ಒಟ್ಟು ೨೧ (ಶೇ. ೮.೫೦) ಇವೆ. ಕಿರು ನೀಳೆಚಕ್ಕೆಗಳನ್ನೆಬ್ಬಿಸಿರುವ ಸಣ್ಣಗಾತ್ರದ ಮೂಲಗಟ್ಟಿ ಅಥವಾ ಮಧ್ಯಮ ಗಾತ್ರದ ಚಕ್ಕೆಗಳಿಂದ ರೂಪಿಸಿದೆ. ಸಾಧಾರಣವಾಗಿ ಹಿಂಬದಿ ಸಮತಲದಲ್ಲಿದ್ದು ಮುಂಬದಿಯಲ್ಲಿ ಕಿರು ಚಕ್ಕೆಗಳನ್ನೆಬ್ಬಿಸಿ ತುದಿ, ಅಂಚು ಅಥವಾ. ಪರಿಧಿಯ ಸುತ್ತಲೂ ಹರಿತ ಅಲಗನ್ನು ರೂಪಿಸಿದೆ. ಹೆಬ್ಬೆರಳನ್ನು ಒತ್ತಿ ಉಪಯೋಗಿಸಲು ಅನುಕೂಲವಾಗುವಂತೆ ರೂಪಿಸ-ಲಾಗಿದೆ. ವೃತ್ತ, ಅಂಡ, ಆಯತ ಮತ್ತು ತ್ರಿಭುಜಾಕಾರಗಳಲ್ಲಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆನ್ನು ಕೋಷ್ಟಕ ಸಂಖ್ಯೆ೬.೧೫ಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೫

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೦-೨೫ | ೧೧ | ೨೦-೨೫ | ೧೨ | ೫-೧೦ | ೧೪ |
| ೨೫-೩೦ | ೭ | ೨೫-೩೦ | ೭ | ೧೦-೧೫ | ೭ |
| ಒಟ್ಟು | ೨೧ | | ೨೧ | | ೨೧ |

**೩. ಮೊನೆ ಉಪಕರಣಗಳು**

ಹೆರೆಚಕ್ಕೆ ಗುಂಪಿನ ತರುವಾಯ ಅಂತ್ಯ ಹಳೆಶಿಲಾಯುಗದ ಉಪಕರಣಗಳಲ್ಲಿ ಮೊನೆ ಗುಂಪಿನ ಉಪಕರಣ-ಗಳು ಮೂರನೇ ಸ್ಥಾನದಲ್ಲಿವೆ. ಪ್ರಸ್ತುತ ಈ ಗುಂಪಿನ ಉಪಕರಣಗಳು ಒಟ್ಟು ೧೧೫ (ಶೇ. ೧೬.೪೯)ಇವೆ. ಸಾಧಾರಣವಾಗಿ ನೀಳಚಕ್ಕೆಯ ಮೇಲ್ತುದಿಯಲ್ಲಿ ಒಂದು ಅಥವಾ ಎರಡೂ ಬದಿಗಳಿಂದ ಲಘುಕೋನದಲ್ಲಿ ಕತ್ತರಿಸಿ ಮೊನೆಯನ್ನು ಮೂಡಿಸಿ-ರಲಾಗುತ್ತದೆ. ಅದೆ ರೀತಿ ತ್ರಿಭುಜಾಕಾರದ ಹೆರೆಚಕ್ಕೆ ಮತ್ತು ಇಬ್ಬದಿ ಹೆರೆಚಕ್ಕೆಗಳನ್ನು ಕತ್ತರಿಸಿಯೂ ಇಂತಹ ಮೊನೆಗಳನ್ನು ರೂಪಿಸಿರುತ್ತದೆ. ಕೆಲವೊಮ್ಮೆ ಸೂಕ್ತ ಆಕಾರದ ಪ್ರಾಥಮಿಕ ಚಕ್ಕೆಯಿಂದಲೇ ಮೊನೆಯನ್ನು ರೂಪಿಸಿರುವುದೂ ಉಂಟು. ಕೆಲವು ವಿಶೇಷ ಉಪಯೋಗಕ್ಕಾಗಿ ಕೊಕ್ಕು ಮುಂತಾದವುಗಳನ್ನು ಮೂಡಿಸಿರುತ್ತದೆ. ಹೀಗೆ ಆಕಾರ ಉಪಯೋಗ ಮತ್ತು ಮೊನೆಯ ರೀತಿ ಇವುಗಳನ್ನಾಧರಿಸಿ ಮೊನೆಯ ಗುಂಪುಗಳನ್ನು ಒಟ್ಟು ೫ ಉಪಗುಂಪುಗಳಾಗಿ ವಿಭಾಗಿಸಬಹುದು.

ಅವುಗಳೆಂದರೆ:

೧. ಸಾಮಾನ್ಯ ಮೊನೆ ಉಪಕರಣ -೩೬ ಶೇ.೩೧.೩೦ Simple Point

೨. ತ್ರಿಭುಜಾಕಾರದ ಮೊನೆ ಉಪಕರಣ -೨೧ ಶೇ. ೧೮.೨೬ Triangular Point

೩. ಎಲೆಯಾಕಾರದ ಮೊನೆ ಉಪಕರಣ -೩೦ ಶೇ. ೨೬.೦೮ Leaf Shaped Point

೪. ಕೊಕ್ಕುಳ್ಳ ಮೊನೆ ಉಪಕರಣ -೭ ಶೇ. ೬.೦೮ Beaked Point

೫. ಕಚ್ಚುಳ್ಳ ಮೊನೆ ಉಪಕರಣ -೨೧ ಶೇ. ೧೮.೨೬ Notched Point

ಈ ಉಪಗುಂಪಿನ ಉಪಕರಣಗಳು, ದೊರೆತಿರುವ ನೆಲೆ, ಉಪಕರಣಗಳ ಸಂಖ್ಯೆ ಮತ್ತು ಮೊನೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣ ಇವುಗಳನ್ನು ಕೋಷ್ಟಕ ಸಂಖ್ಯೆ ೬.೧೬ ರಲ್ಲಿ ನೀಡಿದೆ ಪ್ರತಿ ಗಂಪಿನ ಉಪಕರಣಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದೆ. ದೊರೆತ ಒಟ್ಟು ಉಪಕರಣಗಳ ಅನ್ವಯದಂತೆ ವೃತ್ತ ನಕ್ಷೆ ರೂಪಿಸಿ, ವೃತ್ತ ನಕ್ಷೆ ೬.೮೫ ರಲ್ಲಿ ನೀಡಿದೆ

ಅಂತ್ಯ ಹಳೆಯಶಿಲಾಯುಗದ ಮೊನೆ ಮಾದರಿ ಉಪಕರಣಗಳ ವೈವಿಧ್ಯ

ವೃತ್ತ ನಕ್ಷೆ ಸಂಖ್ಯೆ ೬.೮೫



ಕೋಷ್ಟಕ ಸಂಖ್ಯೆ ೬.೧೬

| ಕ್ರಮ ಸಂಖ್ಯೆ | ನೆಲೆ | ಸಾಮಾನ್ಯ ಮೊನೆ Simple point | ತ್ರಿಭುಜಾಕಾರದ ಮೊನೆ Triangular point | ಎಲೆಯಾಕಾರದ ಮೊನೆ Leaf shaped point | ಕೊಕ್ಕು ಮೊನೆ Beaked point | ಕಚ್ಚುಳ್ಳ ಮೊನೆ Notched Point | ಒಟ್ಟು | ಶೇ |
|---|---|---|---|---|---|---|---|---|
| ೧. | ಅಪ್ಪಾನಹಳ್ಳಿ | ೩ | ೧ | ೧ | | | ೫ | ೪.೩೪ |
| ೨. | ಆವರ್ಗಲ್ಲು | | | ೧ | | | ೧ | ೦.೮೭ |
| ೩ | ಅಂಕನಬಾವಿ | | ೧ | | | | ೧ | ೦.೮೭ |
| ೪ | ಇರಕಸಂದ್ರಕಾಲೋನಿ | | | | | | | |
| ೫ | ಉನಗನಾಲ | | | | | | | |
| ೬ | ಓಬಳಾಪುರ | ೧ | | ೩ | | ೧ | ೫ | ೪.೩೪ |
| ೭ | ಕರಡಿ | | | | ೧ | | ೧ | ೦.೮೭ |
| ೮ | ಕಾರೇಕುರ್ಚಿ | | | | | | | |
| ೯ | ಕಾವಲಹಟ್ಟಿ | | ೧ | ೧ | | | ೨ | ೧.೭೩ |
| ೧೦ | ಕೈಮರ | ೧ | ೨ | ೨ | | | ೫ | ೪.೩೪ |
| ೧೧ | ಗಳಿಗೆರೆ | ೫ | | | | | ೫ | ೪.೩೪ |
| ೧೨ | ಗುಟ್ಟೆ | | | ೧ | | | ೧ | ೦.೮೭ |
| ೧೩ | ಗುರಮ್ಮನಕಟ್ಟೆ | ೧ | ೩ | ೨ | | | ೬ | ೫.೨೧ |
| ೧೪ | ಗೊಲ್ಲರಹಟ್ಟಿ | | | | | | | |
| ೧೫ | ಚಿಕ್ಕೇಗೌಡನರೊಪ್ಪ | | | | | | | |
| ೧೬ | ಢಣಾಪುರ | | | | | ೧ | ೧ | ೦.೮೭ |
| ೧೭ | ದೊಡ್ಡಗುಣಿ | ೧ | | ೨ | | ೨ | ೫ | ೪.೩೪ |
| ೧೮ | ನಾಗಲಾಪುರ | | | | | | | |
| ೧೯ | ನಿಡುಗಲ್ಲು | | ೧ | ೧ | | ೧ | ೩ | ೨.೬೦ |
| ೨೦ | ಬೊಮ್ಮೇನಹಳ್ಳಿ | | ೨ | | | ೧ | ೩ | ೨.೬೦ |
| ೨೧ | ಮಧುಗಿರಿ | ೧ | | | | | ೧ | ೦.೮೭ |
| ೨೨ | ಮಾರಶೆಟ್ಟಿಹಳ್ಳಿ | ೨ | | | | ೧ | ೩ | ೨.೬೦ |
| ೨೩ | ಮಿಡಿಗೇಶಿ | | | | | | | |
| ೨೪ | ಮೂಗನಾಯಕನಕೋಟೆ ಉತ್ತರ | ೨ | ೨ | ೨ | | | ೬ | ೫.೨೧ |
| ೨೫ | ಮೂಗನಾಯಕನಕೋಟೆ ಪೂರ್ವ | | ೩ | ೨ | ೧ | ೩ | ೯ | ೭.೮೨ |
| ೨೬ | ಮೂಗನಾಯಕನಕೋಟೆ ದಕ್ಷಿಣ | ೫ | | ೧ | ೩ | ೩ | ೧೨ | ೧೦.೪೩ |
| ೨೭ | ಮೂಗನಾಯಕನಕೋಟೆ ಪಶ್ಚಿಮ | | | | | | | |
| ೨೮ | ಮಂಚಕಲ್‌ಕುಪ್ಪೆ | ೨ | | | | ೧ | ೩ | ೨.೬೦ |
| ೨೯ | ಮಂಚಲ್ದೊರೆ | | | | | | | |
| ೩೦ | ಯಕ್ಕಲಕಟ್ಟೆ | ೫ | ೪ | ೧ | | ೪ | ೧೪ | ೧೨.೧೭ |
| ೩೧ | ಯಲ್ಲಾಪುರ | ೩ | | | | ೧ | ೪ | ೩.೪೭ |
| ೩೨ | ಯಲ್ಲಪ್ಪನಾಯಕಹೊಸಕೋಟೆ | | | | | | | |
| ೩೩ | ಶಿವಪುರ | ೨ | | ೪ | | | ೬ | ೫.೨೧ |
| ೩೪ | ಶೆಟ್ಟಿಹಳ್ಳಿ | | | | | | | |
| ೩೫ | ಸಾಲುಕಟ್ಟೆ | | | | | | | |
| ೩೬ | ಸಿದ್ದೇಹಳ್ಳಿ | | | ೧ | | ೧ | | |
| ೩೭ | ಹರೇನಹಳ್ಳಿ | | ೧ | | | ೧ | ೨ | ೧.೭೩ |
| ೩೮ | ಹಿಮಗಿರಿ | | | | | | ೨ | ೧.೭೩ |
| ೩೯ | ಹಿರೇಹಳ್ಳಿ | ೧ | | ೧ | | | | |
| ೪೦ | ಹೂವಿನಕಟ್ಟೆ | ೧ | | ೪ | ೨ | | ೨ | ೧.೭೩ |
| ೪೧ | ಹೊನ್ನೇಮಾರನಹಳ್ಳಿ | | | | | | ೭ | ೬.೦೮ |
| ೪೨ | ಹೊಸಹಳ್ಳಿ | | | | | | | |
| ಒಟ್ಟು | | ೩೬ | ೨೧ | ೩೦ | ೭ | ೨೧ | ೧೧೫ | |
| ಶೇ | | ೩೧.೩೦ | ೧೮.೨೬ | ೨೬.೦೮ | ೬.೦೮ | ೧೮.೨೬ | ೯೯.೯೮ | |

### ೩.೧ ಸಾಮಾನ್ಯ ಮೊನೆ

ಸಣ್ಣ ಮತ್ತು ಮಧ್ಯಮ ಗಾತ್ರದ, ಯಾವುದೇ ನಿರ್ದಿಷ್ಟ ಆಕಾರವಿಲ್ಲದ, ಹೆರೆಚಕ್ಕೆಯಂತಹ ತೆಳುಗಾತ್ರದ ಚಕ್ಕೆ-ಗಳಿಂದ ರೂಪಿತವಾಗಿರುವ ಈ ಉಪಕರಣಗಳು ೩೬ (ಶೇ. ೩೧.೩೦) ಇವೆ. ಸಾಧಾರಣವಾಗಿ ದೀರ್ಘವೃತ್ತ, ತ್ರಿಭುಜ, ತ್ರಾಪಿಜ್ಯ, ಆಯತ ಮತ್ತು ಅಂಡಾಕಾರಗಳಲ್ಲಿರುವುದನ್ನು ಗುರುತಿಸಬಹುದು. ಮೊನೆಯನ್ನುಂಟುಮಾಡಿರುವ ಪಾರ್ಶ್ವಗಳಲ್ಲಿ ಒಂದು ಅಥವಾ ಎರಡೂ ಹರಿತ ಅಲಗನ್ನು ಹೊಂದಿವೆ. ಹಿಂಬದಿ ಸಾಧಾರಣವಾಗಿ ಸಮತಲದಲ್ಲಿದ್ದರೆ ಮುಂಬದಿ ಚಕ್ಕೆಯ ಆಕಾರ ಮತ್ತು ದಪ್ಪವನ್ನನುಸರಿಸಿ ಮಧ್ಯಉಬ್ಬು, ಚಕ್ಕೆಕಲೆ ಮುಂತಾದ ಲಕ್ಷಣಗಳನ್ನು ತೋರಿಸುತ್ತದೆ. ಇವುಗಳ ಅಳತೆ ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೬.೧೭ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೭

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೧೫-೨೫ | ೯ | ೧೫-೨೦ | ೮ | ೩-೫ | ೪ |
| ೨೫-೩೫ | ೧೯ | ೨೦-೨೫ | ೧೬ | ೫-೧೦ | ೨೧ |
| ೩೫-೪೫ | ೮ | ೨೫-೩೫ | ೧೧ | ೧೦-೧೫ | ೧೧ |
| ಒಟ್ಟು | ೩೬ | | ೩೬ | | ೩೬ |

### ೩.೨ ತ್ರಿಭುಜಾಕಾರದ ಮೊನೆ

ನೀಳಚಕ್ಕೆಗಳ ಮೇಲ್ತುದಿ ಅಥವಾ ಹೆರೆಚಕ್ಕೆಗಳ ಮೇಲ್ತುದಿ ಅಥವಾ ಕಿರುಗಾತ್ರದ ಚಕ್ಕೆಗಳ ಎರಡೂ ಪಾರ್ಶ್ವ-ಗಳನ್ನು ವಿವಿಧ ಕೋನಗಳಲ್ಲಿ ಕತ್ತರಿಸಿ ಈ ಉಪಕರಣಗಳನ್ನು ರೂಪಿಸಿದೆ. ಒಟ್ಟು ೨೧ (ಶೇ. ೧೮.೨೬) ಉಪಕರಣಗಳಿವೆ. ಸಾಧಾರಣವಾಗಿ ತ್ರಿಭುಜಾಕಾರದಲ್ಲಿದ್ದರೂ ಕೆಲವು ಪಂಚ ಭುಜಗಳನ್ನು ಹೊಂದಿವೆ. ನೀಳಚಕ್ಕೆ ಮತ್ತು ಹೆರೆಚಕ್ಕೆಗಳಂತೆ ಸಮ-ತಲವಿರುವ ಹಿಂಬದಿ, ಚಕ್ಕೆಕಲೆಗಳಿಂದ ಕೂಡಿದ ಮುಂಬದಿ ಕಾಣುತ್ತದೆ. ಇವುಗಳ ಅಳತೆ ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೬.೧೮ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೮

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೫-೩೦ | ೮ | ೨೦-೨೫ | ೭ | ೫-೧೦ | ೬ |
| ೩೦-೩೫ | ೧೨ | ೨೫-೩೦ | ೧೩ | ೧೦-೧೫ | ೯ |
| ೪೫-೫೦ | ೧ | ೦-೪೦ | ೧ | ೧೫-೨೦ | ೬ |
| ಒಟ್ಟು | ೨೧ | | ೨೧ | | ೨೧ |

## ೩.೩ ಎಲೆಯಾಕಾರದ ಮೊನೆ

ಎಲೆಯಾಕಾರದ ಮೊನೆ ಉಪಕರಣಗಳು ಒಟ್ಟು ೩೦ ( ಶೇ. ೨೬.೦೮) ಇವೆ. ಸಾಧಾರಣವಾಗಿ ತ್ರಿಭುಜಾಕಾರದ ಮೊನೆಗಳ ಎಲ್ಲಾ ಲಕ್ಷಣಗಳನ್ನೂ ತೋರಿಸುವ ಉಪಕರಣಗಳು ವಿವಿಧ ರೀತಿಯ ಎಲೆಗಳ ಆಕಾರವನ್ನು ಹೊಂದಿವೆ. ಇವುಗಳ ಅಳತೆ ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೬.೧೯ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೧೯

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೧೫-೨೫ | ೩ | ೧೦-೨೦ | ೫ | ೩-೫ | ೧ |
| ೨೫-೩೫ | ೧೪ | ೨೦-೩೦ | ೨೧ | ೫-೧೦ | ೧೦ |
| ೩೫-೪೫ | ೧೩ | ೩೦-೪೮ | ೪ | ೧೦-೧೫ | ೧೯ |
| ಒಟ್ಟು | ೩೦ | | ೩೦ | | ೩೦ |

ಈ ಉಪಕರಣಗಳ ಅಳತೆ ಪ್ರಮಾಣದಂತೆ ಉದ್ದ ಕನಿಷ್ಠ ೩೫ ಗರಿಷ್ಠ ೪೫, ಅಗಲ ಕನಿಷ್ಠ ೧೫ ಗರಿಷ್ಠ ೩೫ ಮತ್ತು ದಪ್ಪ ಕನಿಷ್ಠ ೫ ಗರಿಷ್ಠ ೧೫ ಮಿ.ಮೀ. ಗಳಿವೆ.

## ೩.೪ ಕೊಕ್ಕುಳ್ಳ ಮೊನೆ

ನೀಳಚಕ್ಕೆಯಂತಹ ಹೆರೆಚಕ್ಕೆಯ ದಪ್ಪನೆಯ ಬುಡ ಅಥವಾ ಚೂಪಾದ ತುದಿಯ ಒಂದು ಭಾಗದಲ್ಲಿ ವಿವಿಧ ಕೋನಗಳಲ್ಲಿ ಅಡ್ಡವಾಗಿ, ಚಕ್ಕೆ ಎಬ್ಬಿಸಿ ಕೊಕ್ಕಿನಂತಹ ಮುಂಚಾಚು ಮೂಡಿಸಿ ಈ ಉಪಕರಣವನ್ನು ತಯಾರಿಸಿದೆ. ಕೊಕ್ಕಿನಂತಹ ಮುಂಚಾಚು ಮೊನೆಯಂತೆ ಹರಿತವಾಗಿರುತ್ತದೆ. ಅಥವಾ ಕೊರೆಯುಳಿಯ ಅಲಗಿನಂತೆ ಸರಳರೇಖೆಯಲ್ಲಿರುತ್ತದೆ. ಈ ಕೊಕ್ಕುಳ್ಳ ಉಪಕರಣದ ಯಾವುದಾದರೊಂದು ಪಾರ್ಶ್ವದ ತುದಿಯಲ್ಲಿ ಮೂಡಿಸಿರಬಹುದು. ಸಾಮಾನ್ಯವಾಗಿ ತುದಿ ಲಂಬಕೋನಕ್ಕಿಂತ ಹೆಚ್ಚಾದ ಕೋನದಲ್ಲಿ ಮುಂಚಾಚಿರುತ್ತದೆ. ಉಳಿದೆಲ್ಲಾ ಲಕ್ಷಣಗಳೂ ನೀಳಚಕ್ಕೆಯಂತೆಯೇ ಇರುತ್ತದೆ. ಇಂತಹ ೭ (ಶೇ. ೬.೦೮) ಉಪಕರಣ ಗಳು ದೊರೆತಿದ್ದು ಅವುಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೩.೨ ಗರಿಷ್ಠ ೭೦, ಅಗಲ ಕನಿಷ್ಠ ೨೦, ಗರಿಷ್ಠ ೪೦ ಮತ್ತು ದಪ್ಪ ಕನಿಷ್ಠ ೧೦ ಗರಿಷ್ಠ ೨೦ ಮಿ.ಮೀ. ಗಳಿವೆ.

### ೩.೫ ಕಚ್ಚುಳ್ಳ ಮೊನೆ

ಕಚ್ಚುಳ್ಳ ಮೊನೆ ಉಪಕರಣಗಳು ಒಟ್ಟು (ಶೇ. ೧೮.೨೬) ಇವೆ. ನೀಳಚಕ್ಕೆ ಅಥವಾ ತ್ರಿಭುಜಾಕಾರದ ಹೆರೆಚಕ್ಕೆಗಳಲ್ಲಿ ಈ ಉಪಕರಣವನ್ನು ರೂಪಿಸಿದೆ. ಉಪಕರಣದ ಒಂದು ತುದಿಯ ಒಂದು ಅಥವಾ ಎರಡೂ ಪಾರ್ಶ್ವಗಳಲ್ಲಿ ಲಂಬಕೋನ ಅಥವಾ ಅದಕ್ಕೂ ಹೆಚ್ಚಿನ ಕೋನಗಳಲ್ಲಿ, ಕೊಳವೆ ಆಕಾರದ ಸುತ್ತಿಗೆಯಿಂದ ನಿಯಂತ್ರಿತ ಚಕ್ಕೆ ಎಬ್ಬಿಸಿ ಕಚ್ಚುಗಳನ್ನು ಉಂಟುಮಾಡಿ ಮೊನೆಯಂತಹ ತುದಿಯನ್ನು ರೂಪಿಸಲಾಗಿದೆ. ಹೀಗೆ ಉಂಟಾದ ಮೊನೆಯು ಪಾರ್ಶ್ವಗಳಲ್ಲಿ ಅಥವಾ ಉಪಕರಣದ ತುದಿಯ ಮಧ್ಯದಲ್ಲಿ ಇರಬಹುದು. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೨೦ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೨೦

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೫-೩೫ | ೬ | ೨೦-೨೫ | ೪ | ೫-೧೦ | ೫ |
| ೩೫-೪೦ | ೭ | ೨೫-೩೦ | ೬ | ೧೦-೧೫ | ೬ |
| ೪೦-೫೦ | ೮ | ೩೦-೪೫ | ೧೧ | ೧೫-೨೦ | ೧೦ |
| ಒಟ್ಟು | ೨೧ | | ೨೧ | | ೨೧ |

### ೪. ಕೊರೆಗ

ಸಣ್ಣ ಹಾಗೂ ಮಧ್ಯಮ ಗಾತ್ರದ ಚಕ್ಕೆಗಳು ಮತ್ತು ಸಣ್ಣ ಗಾತ್ರದ ಉಂಡೆ ಕಲ್ಲುಗಳಿಂದ ರೂಪಿಸಿರುವ ಈ ಉಪಕರಣಗಳು ಒಟ್ಟು ೨೯ (ಶೇ. ೪.೧೬) ಇವೆ. ಉಂಡೆ ಕಲ್ಲುಗಳ ಮೇಲೆ ರೂಪಿಸಿರುವ ಐದು ಉಪಕರಣಗಳಲ್ಲಿ, ಎರಡು ಮಾತ್ರ ಮೂಲಶಿಲೆಯ ತೊಗಟೆ ಇರುವ ಸಮತಲವುಳ್ಳ ಹಿಂಬದಿಯನ್ನು ಹೊಂದಿದ್ದು ಮುಂಬದಿಯಲ್ಲಿ ಮಾತ್ರ ಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಮೊನೆಯನ್ನು ರೂಪಿಸಿದೆ. ಉಳಿದ ಮೂರು ಉಂಡೆಕಲ್ಲು ಉಪಕರಣಗಳು ಮಧ್ಯದಲ್ಲಿ ದಪ್ಪವಾಗಿದ್ದು, ಒಂದು ಅಥವಾ ಎರಡೂ ತುದಿಗಳಲ್ಲಿ ತೆಳ್ಳಗಿವೆ. ಈ ಐದೂ ಉಪಕರಣಗಳು ಮತ್ತು ಚಕ್ಕೆಯ ಮೇಲೆ ರಚಿಸಿರುವ ಇನ್ನೆರಡು ಉಪಕರಣಗಳಲ್ಲಿ ಎರಡೂ ಪಾರ್ಶ್ವಗಳಲ್ಲಿ ಕೊಳವೆಯಾಕಾರದ ಸುತ್ತಿಗೆಯಿಂದ ಬಡಿದು ಉದ್ದೇಶಿತ ಮೊನೆಯನ್ನು ರೂಪಿಸಿದೆ. ಮೊನೆ ಹೆಚ್ಚು ಉದ್ದವಾಗಿಲ್ಲ.

ಮಧ್ಯಮ ಗಾತ್ರದ ತೆಳ್ಳಗಿನ ಚಕ್ಕೆಗಳ ಮೇಲೆ ರೂಪಿಸಿರುವ ಐದು ಉಪಕರಣಗಳಿದ್ದು ಅವುಗಳಲ್ಲಿ ಒಂದು ಅಥವಾ ಎರಡೂ ತುದಿಗಳಲ್ಲಿ ಕೊರೆಯುವ ಮೊನೆ ಅಗಲವಾಗದ್ದು ತುದಿಯು ಉಪಕರಣದ ಮೇಲ್ತುದಿಯ ಮಧ್ಯಭಾಗದಲ್ಲಿದ್ದರೆ ಒಂದು ಉದಾಹರಣೆಯಲ್ಲಿ ಬಲ ಪಾರ್ಶ್ವಕ್ಕೆ ಹೊಂದಿಕೊಂಡಂತಿದೆ. ಇವುಗಳ ಇನ್ನೊಂದು ವಿಶೇಷ ಲಕ್ಷಣವೆಂದರೆ,

ತುದಿಯನ್ನು ಹೊರತು ಪಡಿಸಿ ಉಳಿದ ಭಾಗವು ಆಯತಾಕಾರದಲ್ಲಿರುವುದು. ಕೊರೆಗಗಳ ಬಹುಪಾಲು ತ್ರಿಭುಜಾಕಾರದ-ಲ್ಲಿದ್ದು ಚೂಪಾದ ಮತ್ತು ಹೆಚ್ಚು ಉದ್ದದ ಮೊನೆಯನ್ನು ಹೊಂದಿದೆ. ಕೆಲವು ಉಪಕರಣಗಳಲ್ಲಿ ಮೊನೆಯು ಎಡಕ್ಕೆ ಅಥವಾ ಬಲಕ್ಕೆ ವಾಲಿಕೊಂಡಿದ್ದರೆ ಹೆಚ್ಚಿನ ಉದಾಹರಣೆಗಳಲ್ಲಿ ಮಧ್ಯದಲ್ಲಿದ್ದು ನೇರವಾಗಿವೆ. ಈ ಉಪಕರಣಗಳಲ್ಲಿ ನಾಲ್ಕು ಕಂದು, ಹಸಿರು ಮತ್ತು ಕಡುಗಂದು ಬಣ್ಣದ ಜಾಸ್ಪರ್ ಶಿಲೆಯಲ್ಲಿದ್ದರೆ ಉಳಿದವು ವಿವಿಧ ವರ್ಣದ ಅದಿರುಯುಕ್ತ ಕ್ವಾರ್ಟ್ಸ್ ಶಿಲೆಯಲ್ಲಿ-ವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೨೧ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೨೧

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೫-೩೦ | ೧೧ | ೨೦-೨೫ | ೧೧ | ೫-೧೦ | ೧೪ |
| ೩೦-೪೦ | ೧೬ | ೨೫-೩೦ | ೧೦ | ೧೦-೧೫ | ೧೪ |
| ೪೫-೭೫ | ೨ | ೩೦-೩೫ | ೮ | ೧೫-೨೦ | ೧ |
| ಒಟ್ಟು | ೨೯ | | ೨೯ | | ೨೯ |

**ಕೊರೆಯುಳಿ**

ಅಂತ್ಯ ಹಳೆಶಿಲಾಯುಗದ ಮಾನವ ರೂಪಿಸಿದ ವಿಶೇಷ ಉಪಕರಣಗಳಲ್ಲಿ ಅತ್ಯಂತ ಮುಖ್ಯವಾದುದು ಒಂದು ರೀತಿಯಲ್ಲಿ ಅಂತ್ಯ ಹಳೆಶಿಲಾಯುಗದ ಸಂಸ್ಕೃತಿಯನ್ನು ಗುರುತಿಸುವುದರಲ್ಲಿ ಕೊರಯುಳಿಯ ಉಪಸ್ಥಿತಿಯು ಒಂದು ಮುಖ್ಯ ಲಕ್ಷಣ. ಈ ಉಪಕರಣವು ನೀಳಚಕ್ಕೆಯ ವಿವಿಧ ಮಾದರಿಗಳಲ್ಲಿ, ಕೆಲವೊಮ್ಮೆ ದಪ್ಪ ಮೂಲ ಶಿಲಾಗಟ್ಟಿಯ-ಲ್ಲಿಯೂ ರೂಪಿತವಾಗಿರುತ್ತದೆ. ಭಾರತದ ಅಂತ್ಯ ಹಳೆಶಿಲಾಯುಗದ ಹಲವು ನೆಲೆಗಳಲ್ಲಿ ಅನೇಕ ರೀತಿಯ ಕೊರೆಯುಳಿ ಉಪಕರಣಗಳನ್ನು ಗುರುತಿಸಲಾಗಿದೆ. ಇತ್ತೀಚೆಗೆ ಪದ್ದಯ್ಯನವರು ಉತ್ತರ ಕರ್ನಾಟಕದ ಅಂತ್ಯ ಹಳೆ ಶಿಲಾಯುಗ ಸಂಸ್ಕೃತಿ-ಯಲ್ಲಿ ಏಳು ರೀತಿಯ ಕೊರೆಯುಳಿಗಳನ್ನು ಗುರುತಿಸಿ ಅವುಗಳ ಉತ್ಪಾಧನಾ ತಂತ್ರ ಮತ್ತು ಕಾರ್ಯ ವಿಧಾನಗಳನ್ನು ವಿವರಿ-ಸಿದ್ದಾರೆ (೧೯೭೦;೧೭೨-೧೮೦).

ಪ್ರಸ್ತುತ ಸಮೂಹದಲ್ಲಿ ೧೬ ಕೊರೆಯುಳಿ ಉಪಕರಣಗಳು ೧೬ (ಚಿ. ೨.೨೯) ಇದ್ದು ಅವುಗಳಲ್ಲಿ ಏಳು ಅದಿರುಯುಕ್ತ ಜಾಸ್ಪರ್‌ನಲ್ಲಿಯೂ ಉಳಿದ ಒಂಭತ್ತು ಕ್ವಾರ್ಟ್ಸ್ ಶಿಲೆಯಲ್ಲಿಯೂ ಇವೆ. ಒಂದು ಉಪಕರಣವನ್ನು ಮೂಲಗಟ್ಟಿ-ಯಲ್ಲಿ ರೂಪಿಸಿದ್ದು ಏಳು ನೀಳಚಕ್ಕೆಯನ್ನು ಹೋಲುವ ದಪ್ಪ ಚಕ್ಕೆಗಳ ಮೇಲೆ ಮತ್ತು ಉಳಿದವನ್ನು ತೆಳ್ಳನೆಯ ನೀಳಚಕ್ಕೆಯ ಮೇಲೆ ರೂಪಿಸಿದೆ. ನಾಲ್ಕು ಉಪಕರಣಗಳಲ್ಲಿ ಎರಡೂ ತುದಿಗಳಲ್ಲಿ ಕೊರೆಯುಳಿ ಅಲಗನ್ನು ರೂಪಿಸಿದೆ. ನೀಳಚಕ್ಕೆಯ ತುದಿ ಭಾಗ ಮತ್ತು ದಪ್ಪನೆಯ ಬುಡ ಎರಡರಲ್ಲಿಯೂ ಅಲಗು ಮೂಡಿರುವುದು ಕಾಣುತ್ತದೆ. ಹೀಗೆ ಅಲಗು ರೂಪಿಸುವಾಗ

ಒಂದು, ಎರಡು ಹಾಗೂ ಮೂರು ಹೊಡೆತಗಳನ್ನು ನೀಡಿ ಉದ್ದೇಶಿತ ಅಲಗನ್ನು ಸಾಧಿಸಿದೆ. ದೊರೆತಿರುವ ಉಪಕರಣಗ-ಳನ್ನು ಮೂರು ಮಾದರಿಗಳಾಗಿ ವಿಭಾಗಿಸಬಹುದು.

೧. ಏಕಘಟ್ಟಿತ ಕೊರೆಯುಳಿ. ಈ ರೀತಿಯ ನಾಲ್ಕು ಉಪಕರಣಗಳು ನೀಳಚಕ್ಕೆಯಲ್ಲಿ ರೂಪಿತವಾಗಿವೆ. ಒಂದು ಉಪಕರಣ-ದಲ್ಲಿ ತೆಳ್ಳನೆಯ ತುದಿಯಲ್ಲಿ ಹಿಂಬದಿ ಮತ್ತು ಮುಂಬದಿಗಳಲ್ಲಿ ಒಂದೇ ಹೊಡೆತದಿಂದ ಚಕ್ಕೆ ತೆಗೆದು ಅಲಗು ರೂಪಿಸಿದೆ. ಉಳಿದೆರಡು ಉದಾಹರಣೆಗಳಲ್ಲಿ ಉಪಕರಣದ ಎಡಬದಿಗೆ ಲಂಬಕೋನದಲ್ಲಿ ಚಕ್ಕೆ ತೆಗೆದು ಅಲಗು ರೂಪಿಸಿದೆ.

೨. ಕೊಕ್ಕುಳ್ಳ ಕೊರೆಯುಳಿ. ಇಂತಹ ಒಂಬತ್ತು ಉಪಕರಣಗಳು ದೊರೆತಿದ್ದು ಅವುಗಳಲ್ಲಿ ಐದು ದಪ್ಪ ಚಕ್ಕೆಗಳ ಮೇಲೆ ಮತ್ತು ಉಳಿದವು ತೆಳ್ಳನೆಯ ನೀಳಚಕ್ಕೆಯಲ್ಲಿ ರೂಪಿತವಾಗಿವೆ. ದಪ್ಪಚಕ್ಕೆಯ ನಾಲ್ಕು ಉಪಕರಣಗಳು ಕೈ ಚಾಕು ನೀಳಚಕ್ಕೆಗಳಂತಹ ಹರಿತ ಅಲಗನ್ನು ಹೊಂದಿವೆ. ಕೊಕ್ಕಿನ ಮೊನೆ ಮತ್ತು ಕೊರೆಗದಂತೆ ಉಪಕರಣ ತಯಾರಿಸಿಕೊಂಡು ಒಂದು ಅಥವಾ ಎರಡು ಹೊಡೆತಗಳಿಂದ ಕೊರೆಯುಳಿಯ ಅಲಗನ್ನು ರೂಪಿಸಿದೆ. ಹೆಚ್ಚಿನ ಉಪಕರಣಗಳಲ್ಲಿ ಉಪಕರಣದ ಬಲ ಪಾರ್ಶ್ವಕ್ಕೆ ಕೊಕ್ಕು ಮತ್ತು ಕೊರೆಯುಳಿ ಅಲಗು ಮೂಡಿಸಿದೆ.

೩. ಬೆಕ್-ಡಿ-ಫ್ಲ್ಯುಟ್. ಈ ಮಾದರಿಯ ಎರಡು ಉಪಕರಣಗಳು ದೊರೆತಿದ್ದು ಎರಡೂ ಅದಿರುಯುಕ್ತ ಜಾಸ್ಪರ್ ಶಿಲೆಯಲ್ಲಿವೆ. ಒಂದು ಮೂಲಗಟ್ಟಿಯಲ್ಲಿ ಇನ್ನೊಂದು ನಿರುಪಯುಕ್ತ ಚಕ್ಕೆಯಲ್ಲಿವೆ. ಮೂಲಗಟ್ಟಿಯಲ್ಲಿರುವ ಉಪಕರಣದ ಎರಡೂ ಬದಿಯಲ್ಲಿ ಅನೇಕ ಚಕ್ಕೆ ಕಲೆಗಳಿದ್ದು, ಮಧ್ಯದಲ್ಲಿ ದಪ್ಪವಿದೆ. ತೆಳ್ಳಗಿರುವ ಎರಡೂ ತುದಿಗಳನ್ನು ಹೆರೆಚಕ್ಕೆಯಂತೆ ರೂಪಿಸಿಕೊಂಡು ಒಂದು ಅಥವಾ ಎರಡು ಹೊಡೆತಗಳಿಂದ ನಿಯಮಿತ ಕೋನದಲ್ಲಿ ಚಕ್ಕೆ ತೆಗೆದು ಅಲಗು ರೂಪಿಸಿದೆ. ಇನ್ನೊಂದು ಮಾದರಿಯನ್ನು ಆಯತಾಕಾರದ ಅಡ್ಡವಿನ್ಯಾಸ ಉಳ್ಳ ಚಕ್ಕೆಯ ಒಂದು ತುದಿಯಲ್ಲಿ ಮೂರು ಹೊಡೆತಗಳನ್ನು ನೀಡಿ ರೂಪಿಸಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೨೨ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ೬.೨೨

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೨೫-೩೦ | ೬ | ೧೫-೨೦ | ೬ | ೫-೧೦ | ೬ |
| ೩೦-೪೦ | ೫ | ೨೦-೨೫ | ೫ | ೧೦-೧೫ | ೫ |
| ೪೦-೫೦ | ೫ | ೨೫-೩೦ | ೫ | ೧೫-೨೦ | ೫ |
| ಒಟ್ಟು | ೧೬ | | ೧೬ | | ೧೬ |

## ೬. ಅರ್ಧಚಂದ್ರಾಕೃತಿ

ಅಂತ್ಯ ಹಳೆಶಿಲಾಯುಗದ ನೀಳಚಕ್ಕೆಯಿಂದ ರೂಪಿಸಿದ ವಿಶಿಷ್ಟ ಶಿಲೋಪಕರಣಗಳಲ್ಲಿ ಅರ್ಧಚಂದ್ರಾಕೃತಿಗಳು ಮುಖ್ಯವಾದವು. ವಿಶೇಷ ರೀತಿಯ ಪಾರ್ಶ್ವ ಹೆರೆಚಕ್ಕೆ ಮತ್ತು ಪರಿಧಿಯಲ್ಲಿ ಹರಿತ ಅಲಗುಳ್ಳ ಕೈ ಚಾಕು ನೀಳಚಕ್ಕೆ ಈ ಎರಡೂ ರೀತಿಯಲ್ಲಿ ಉಪಯೋಗಿಸಬಹುದಾದ ಇಂತಹ ಉಪಕರಣಗಳು ಒಟ್ಟು ೧೮ (ಶೀ. ೨.೫೮) ದೊರೆತಿವೆ. D ಆಕೃತಿಯಿಂದ ಹಿಡಿದು ಅತಿ ತೆಳ್ಳಗಿನ ಬಿದಿಗೆ ಚಂದ್ರನ ಆಕಾರದವರೆಗೆ, ವಿಷಮಕೋನ, ತ್ರಿಭುಜ ಮತ್ತು ತ್ರಾಪಿಜ್ಯದವರೆಗೆ ಇವು ಬೇರೆ ಬೇರೆ ಆಕಾರಗಳಲ್ಲಿವೆ. ಎರಡು ಉಪಕರಣಗಳನ್ನು ಅದಿರುಯುಕ್ತ ಜಾಸ್ಪರ್‌ನ ದಪ್ಪ ಚಕ್ಕೆಗಳ ಮೇಲೆ ರೂಪಿಸಿದ್ದರೆ ಉಳಿದವು ವಿವಿಧ ಬಣ್ಣದ ಅದಿರುಯುಕ್ತ ಕ್ವಾರ್ಟ್ಸ್ ಶಿಲೆಯಲ್ಲಿವೆ. ಇವುಗಳಲ್ಲಿ ಐದು ಅಲಗುಗಳು ಪರಿಷ್ಕೃತ ಅರ್ಧಚಂದ್ರಾಕೃತಿಯಲ್ಲಿದ್ದರೆ ಉಳಿದವು ತಯಾರಿಕೆಯ ವಿವಿಧ ಹಂತಗಳಲ್ಲಿವೆ. ಕೆಲವು ಉಪಕರಣಗಳಲ್ಲಿ ಸರಳ ರೇಖೆಯ ಅಲಗು ಹರಿತವಾಗಿದ್ದರೆ ಉಳಿದವುಗಳಲ್ಲಿ ಬಾಗಿದ ವಕ್ರರೇಖೆಯ ಅಲಗು ಹರಿತವಾಗಿದೆ. ಒಂದೆರಡು ಉಪಕರಣಗಳಲ್ಲಿ ಮರುಚಕ್ಕೆಗಳನ್ನೆಬ್ಬಿಸಿ ಅಲಗನ್ನು ಮತ್ತಷ್ಟು ಹರಿತಗೊಳಿಸಿದೆ. ಹೆಚ್ಚಿನ ಉಪಕರಣಗಳಲ್ಲಿ ಹಿಂಬದಿ ಸಮತಲವಾಗಿದ್ದರೆ ಒಂದೆರಡು ಉಪಕರಣಗಳಲ್ಲಿ ಮಧ್ಯದಲ್ಲಿ ದಪ್ಪವಾಗಿದ್ದು ಎರಡೂ ಕಡೆ ಹರಿತ ಅಲಗನ್ನು ಹೊಂದಿವೆ. ಮುಂಬದಿಯಲ್ಲಿ ಚಕ್ಕೆ ಕಲೆಗಳು ವಿಶೇಷವಾಗಿ ಕಾಣುತ್ತವೆ. ಒಂದೆರಡು ಉಪಕರಣಗಳಲ್ಲಿ ಮೇಲಿನ ತುದಿ ಚೂಪಾಗಿದ್ದು ಅವುಗಳನ್ನು ಮೊನೆಯಾಗಿಯೂ ಉಪಯೋಗಿಸಿರಬಹುದು. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೨೩ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೨೩

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೩೦-೩೫ | ೫ | ೧೦-೧೫ | ೪ | ೫-೧೦ | ೬ |
| ೩೫-೪೦ | ೯ | ೧೫-೨೦ | ೬ | ೧೦-೧೫ | ೮ |
| ೪೦-೪೫ | ೪ | ೨೦-೩೦ | ೮ | ೧೫-೨೦ | ೪ |
| ಒಟ್ಟು | ೧೮ | | ೧೮ | | ೧೮ |

## ೭. ಬಾಣದ ಮೊನೆ

ತ್ರಿಭುಜ, ಎಲೆ ಮತ್ತು ಹೃದಯಾಕಾರದ ಹೆರೆಚಕ್ಕೆಗಳನ್ನು ಆಯತಾಕಾರದ ಮೊನೆಗಳಂತೆ ರೂಪಿಸಿ, ನಿಯಂತ್ರಿತ ಚಕ್ಕೆ ಏಳಿಸುವುದರ ಮೂಲಕ ಉಪಕರಣದ ದಪ್ಪವನ್ನು ಕಡಿಮೆ ಮಾಡಿ ಬಾಣದ ಮೊನೆಯನ್ನು ತಯಾರಿಸಿದೆ. ಮೂಲಚಕ್ಕೆಯನ್ನನುಸರಿಸಿ ಮರುಚಕ್ಕೆ ಮತ್ತು ಪುಡಿಗೆಲಸ ಮಾಡಿ ನಾಜೂಕಾದ, ನಿರ್ದಿಷ್ಟವಾದ ಆಕಾರಕ್ಕೆ ಹೊಂದಿಸಿದೆ. ಸಾಧಾರಣವಾಗಿ ಈ ಉಪಕರಣವನ್ನು ಬಾಣ ಅಥವಾ ಈಟಿಯ ತುದಿಗೆ ಜೋಡಿಸಿ ಕಟ್ಟಲಾಗುತ್ತದೆ. ಹೀಗೆ ಜೋಡಿಸಿ

ಕಟ್ಟಲು ಅನುಕೂಲವಾಗುವಂತೆ ಉಪಕರಣದ ಬುಡದಲ್ಲಿ ಗೂಟವನ್ನು ರೂಪಿಸಿದೆ. ಕೆಲವು ಅಲಗುಗಳಲ್ಲಿ ಬುಡವನ್ನು ವಿವಿಧ ಕೋನದಲ್ಲಿ ಕತ್ತರಿಸಿ ಒಳಭಾಗನ್ನು ಉಂಟುಮಾಡಿದ್ದರೆ, ಕೆಲವದರಲ್ಲಿ ಅಸ್ಪಷ್ಟವಾಗಿ ಕಾಣುವ ಗೂಟವಿದೆ. ಇಂತಹ ಉಪಕರಣಗಳು ಒಟ್ಟು ೧೪ (ಶೇ. ೨.೦೦) ಇದ್ದು, ಅವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೪ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೪

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೩೦-೩೫ | ೩ | ೨೫-೩೦ | ೩ | ೫-೧೦ | ೨ |
| ೩೫-೪೦ | ೪ | ೩೦-೪೦ | ೭ | ೧೦-೧೫ | ೧೦ |
| ೪೫-೬೫ | ೭ | ೪೦-೪೫ | ೪ | ೧೫-೨೦ | ೨ |
| ಒಟ್ಟು | ೧೪ | | ೧೪ | | ೧೪ |

**ತಾಂತ್ರಿಕತೆ**

ಅಂತ್ಯ ಹಳೆಶಿಲಾಯುಗದ ಅತಿ ಹೆಚ್ಚು ಸಂಖ್ಯೆಯ ಉಪಕರಣಗಳು ಚಕ್ಕೆ ಉಪಕರಣಗಳು ಮಧ್ಯ ಹಳೆಶಿಲಾಯುಗದಲ್ಲಿ ಆರಂಭವಾದ ಚಕ್ಕೆ ಉಪಕರಣ ಸಂಪ್ರದಾಯ, ಈ ಕಾಲದಲ್ಲಿಯೂ ಮುಂದುವರಿಯಿತಲ್ಲದೆ ಗಾತ್ರ, ಆಕಾರ, ಮತ್ತು ವೈವಿಧ್ಯದಲ್ಲಿ ಹೆಚ್ಚಿನ ಸೂಕ್ಷ್ಮತೆ ಪಡೆಯಿತು. ಉಪಯೋಗವನ್ನು ಆಧರಿಸಿ ಉಪಕರಣಗಳು ಗಾತ್ರದಲ್ಲಿ ಕಿರಿದಾಗಿ ಹೊಸ ಹೊಸ ಆಕಾರಗಳನ್ನು ಪಡೆದವು. ಸಹಜವಾಗಿ ಮೊದಲೇ ಉಪಯೋಗದಲ್ಲಿದ್ದ ಚಕ್ಕೆ ಎಬ್ಬಿಸುವ ತಂತ್ರಗಳ ಜೊತೆಗೆ ಹೊಸ ತಂತ್ರಗಳೂ ಬೆಳಕಿಗೆ ಬಂದವು. ಅದರಲ್ಲಿಯೂ ತೆಳ್ಳನೆಯ ನೀಳಚಕ್ಕೆಗಳನ್ನೆಬ್ಬಿಸಲು ಮೂರು ಬಗೆಯ ತಂತ್ರಗಳನ್ನು ಹೆಚ್ಚಾಗಿ ಉಪಯೋಗಿಸಲಾರಂಭವಾಯಿತು. ಅವು ೧. ವಕ್ಷ ಸ್ಥಳ ಒತ್ತಡ, ೨. ಪರೋಕ್ಷ ಒತ್ತಡ ಮತ್ತು .೩ ನೇರ ಒತ್ತಡ.

ಕಲ್ಲು ಸುತ್ತಿಗೆ ವಿಧಾನಗಳಿಂದ ಕೊಳವೆ ಇಲ್ಲವೇ ಮುಪ್ಪಟಿ (ಪ್ರಿಸಮ್) ಆಕಾರ ಮತ್ತು ಆಮೆಯಾಕಾರದ ವಿವಿಧ ಗಾತ್ರದ ಮೂಲಗಟ್ಟಿಗಳನ್ನು ತಯಾರಿಸಿಕೊಂಡು ಅವುಗಳಿಂದ ಮೇಲೆ ಹೇಳಿದ ಮೂರೂ ತಂತ್ರಗಳನ್ನನುಸರಿಸಿ ನಿರ್ದಿಷ್ಟ ಆಕಾರ ಮತ್ತು ಗಾತ್ರದ ನೀಳಚಕ್ಕೆಗಳನ್ನೆಬ್ಬಿಸಲಾಗುತ್ತಿತ್ತು. ಅವಶ್ಯಕವಿದ್ದೆಡೆ ಮಾತ್ರ ಮರುಚಕ್ಕೆ, ಪುಡಿಗೆಲಸ ಮಾಡಿ ಕಾರ್ಯ ನಿರ್ವಹಿಸುವ ಮೊನೆ ಅಥವಾ ಅಲಗನ್ನು ಸಾಧಿಸಲಾಗುತ್ತಿತ್ತು. ಚಕ್ಕೆ ತೆಗೆದು ಉಳಿದ ಸಣ್ಣ ಗಾತ್ರದ ಮೂಲಗಟ್ಟಿಗಳನ್ನೂ ಉಪಕರಣವನ್ನಾಗಿ ಬಳಸಿರುವುದು ಕಾಣುತ್ತದೆ. ತುದಿ, ಬದಿ ಚಕ್ಕೆಗಳೆರಡೂ ಕಂಡು ಬಂದರೂ, ತುದಿ ಚಕ್ಕೆಗಳ ಶೇಕಡಾವಾರು ಪ್ರಮಾಣ ಹೆಚ್ಚಾಗಿವೆ. ಕೊರೆಯುಳಿ, ಕೊರೆಗ ಮತ್ತು ಮೊನೆಗಳ ತಯಾರಿಕೆಯಲ್ಲಿ ಹೆಚ್ಚಿನ ನಯಗಾರಿಕೆ ಕೌಶಲ್ಯ ಕಾಣಿಸುತ್ತದೆ. ದುಂಡು ಹೆರೆಚಕ್ಕೆ ಮತ್ತು ಹೆಬ್ಬೆಟ್ಟುಗುರಿನಂತಹ ಹೆರೆಚಕ್ಕೆ ತಯಾರಿಕೆಯಲ್ಲಿ ಲೆವೆಲ್ಲಾಯಸ್ ಮತ್ತು ಮೌಸ್ಟೀರಿಯನ್ ತಂತ್ರದ ಮುಂದುವರಿಕೆಯನ್ನು ಕಡಿಮೆ ಪ್ರಮಾಣದಲ್ಲಿ ಗುರುತಿಸಬಹುದು. ಸ್ಥಳೀಯವಾಗಿ ಉತ್ತಮ ದರ್ಜೆಯ

ಸಾಂದ್ರ ಕಣಗಳುಳ್ಳ ನಯಶಿಲೆಗಳು ಹೆಚ್ಚಾಗಿ ದೊರೆಯದಿರುವುದರಿಂದ ಉಪಕರಣಗಳು ಹೆಚ್ಚಿನ ತಾಂತ್ರಿಕತೆಯನ್ನು ಪ್ರದ-ರ್ಶಿಸುವುದಿಲ್ಲ.

**ಸ್ತರ ವಿವರಣೆ**

ಅಂತ್ಯ ಹಳೆಶಿಲಾಯುಗದ ಉಪಕರಣಗಳು ಭೂ ಮೇಲ್ಮೈನಲ್ಲಿ, ನೀರಿನ ಹರಿವುಗಳಲ್ಲಿ ಮತ್ತು ಹುಟ್ಟುಬಂಡೆ ಇರುವಂತಹ ಸ್ಥಳಗಳಲ್ಲಿ ದೊರೆತಿವೆ. ಹೀಗೆ ದೊರೆತ ಉಪಕರಣಗಳು ತಮ್ಮ ನಿರ್ದಿಷ್ಟ ಸ್ಥಳದಿಂದ ವ್ಯತ್ಯಾಸಗೊಂಡಿರುವುದ-ರಿಂದ ಇವು ಯಾವ ಮೂಲ ಸ್ತರದಲ್ಲಿದ್ದವೆಂದು ತಿಳಿಯಲು ಸಾಧ್ಯವಾಗುವುದಿಲ್ಲ. ಯಾವದಾದರೊಂದು ನೆಲೆಯನ್ನು ಉತ್ಖನನ ನಡೆಸಿದರೆ ನಿರ್ದಿಷ್ಟ ಸ್ತರ ವಿವರಣೆಯನ್ನು ತಿಳಿಯಲು ಸಹಾಯಕವಾಗುವುದು.

**ಪರಿಶೀಲನೆ**

ಮೇಲಿನ ವಿವರಣೆಗಳು ಮತ್ತು ಅಂಕಿ-ಅಂಶ ಪಟ್ಟಿಗಳು (ಕೋಷ್ಟಕ ಸಂಖ್ಯೆ ೬.೩ ಮತ್ತು ಭೂ ನಕ್ಷೆ ಪುಟ ಸಂಖ್ಯೆ ೧೪೯) ಅಧ್ಯಯನ ಪ್ರದೇಶದಲ್ಲಿ ಅಂತ್ಯ ಹಳೆಶಿಲಾಯುಗದ ಪ್ರಸರಣ, ಸಾಂದ್ರತೆ ಮತ್ತು ತೀವ್ರ ಬೆಳವಣಿಗೆಯನ್ನು ಸೂಚಿಸುತ್ತವೆ. ಮಧ್ಯ ಹಳೆಶಿಲಾಯುಗದ ಅಧ್ಯಯನದಲ್ಲಿ ಗಮನಸಿದಂತೆ ಈ ಹಂತದಲ್ಲಿ ಕೂಡ ಈ ಸಂಸ್ಕೃತಿಯ ಮೂಲ ಪ್ರದೇಶ ಯಥಾಪ್ರಕಾರ ಕಿಬ್ಬನಹಳ್ಳಿ-ಮೂಗನಾಯಕನಕೋಟೆ-ಮಾರಶೆಟ್ಟಿಹಳ್ಳಿ-ಮಂಚಲ್ದೊರೆ. ಅಷ್ಟೇ ಅಲ್ಲದೆ ಈ ಪ್ರದೇಶ-ದಿಂದ ಪಶ್ಚಿಮಕ್ಕೆ ಈ ಸಂಸ್ಕೃತಿ ಹೆಚ್ಚಾಗಿ ವಿಸ್ತರಿಸಿರುವುದು ಕಂಡು ಬರುತ್ತದೆ. ಮೂಲ ಪ್ರದೇಶದಲ್ಲಿ ೨೬ ನೆಲೆಗಳಿದ್ದಲ್ಲಿ ಪಶ್ಚಿಮ ಭಾಗದಲ್ಲಿ ೧೫ ನೆಲೆಗಳಿವೆ. ಆದ್ದರಿಂದ ಈ ಸಂಸ್ಕೃತಿಯು ಹೆಚ್ಚು ವ್ಯಾಪಕವಾಗಿ ಪ್ರಸರಿಸಿತ್ತೆಂದು ತಿಳಿಯತ್ತದೆ. ಅಪ-ರೂಪಕ್ಕೆ ಪೂರ್ವ ಮತ್ತು ಈಶಾನ್ಯ ದಿಕ್ಕಿಗೆ ಹಾಗೂ ಜಿಲ್ಲೆಯ ಉತ್ತರ ಭಾಗದವರೆಗೂ ಅಲ್ಲಲ್ಲಿ ಈ ಸಂಸ್ಕೃತಿಯು ಪ್ರಸರಣ ಮಾರ್ಗವನ್ನು ಸೂಚಿಸಬಹುದೇನೋ? ಈ ಸಂಸ್ಕೃತಿಯು ಉಪಕರಣಗಳನ್ನು ಮಾಡಲು ಉಪಯೋಗಿಸಿದ ಕಲ್ಲುಗಳು ಕ್ವಾರ್ಟ್ಸ್, ಅದಿರುಯುಕ್ತ ಕ್ವಾರ್ಟ್ಸ್, ಅದಿರುಯುಕ್ತ ಜಾಸ್ಪರ್, ಜಾಸ್ಪರ್ ಮತ್ತು ಡೈಕ್ ಶಿಲೆಯನ್ನು ಹೆಚ್ಚಾಗಿ ಉಪಯೋಗ ಮಾಡಿರುವುದು. ಫೆಲ್ಸಪರ್ ಕಡಿಮೆ ಪ್ರಮಾಣದಲ್ಲಿ ಉಪಯೋಗಸಿರುವುದು ಗಮನಾರ್ಹ. ಉಪಕರಣಗಳು ೧೬ ಪ್ರಕಾರದ-ಲ್ಲಿವೆ. ಇವುಗಳಲ್ಲಿ ಉದ್ದನೆಯ ನೀಳಚಕ್ಕೆ ಮತ್ತು ಹೆರೆಚಕ್ಕೆ ಅಧಿಕ ಪ್ರಮಾಣದಲ್ಲಿದೆ. ಉದ್ದನೆ ನೀಳಚಕ್ಕೆಗಳನ್ನು ಸಿದ್ಧಮಾಡಲು ಉಪಯೋಗಿಸಿದ ತಂತ್ರದ ಬಗ್ಗೆ ಅಷ್ಟಾಗಿ ಸ್ಪಷ್ಟ ಪ್ರಮಾಣಗಳು ದೊರೆತಿಲ್ಲ. ಆದ್ದರಿಂದ ಬಹುಮಟ್ಟಿಗೆ ಇತರ ನೆಲೆಗಳಿಂದ ತಿಳಿದು ಬಂದ ತಂತ್ರ ವಿಧಾನವೇ ಇಲ್ಲಿಯೂ ಉಪಯೋಗಿಸಿದ್ದಿರಬಹುದೆಂದು ಊಹಿಸಬಹುದು. ಈ ಪ್ರದೇಶದಲ್ಲಿ ದೊರೆ-ಯುವ ಜಾಸ್ಪರ್, ಬಿಜಾಪುರ ಜಿಲ್ಲೆಯ ಜಾಸ್ಪರ್ ನಷ್ಟು ಉತ್ತಮವಾದುದಲ್ಲ. ಆ ಕಲ್ಲಿನಲ್ಲಿ ಉಪಕರಣ ಮಾಡುವುದು ಸುಲ-ಭಸಾಧ್ಯವಲ್ಲ. ಆದ್ದರಿಂದ ತುಲನಾತ್ಮಕವಾಗಿ ಈ ಪ್ರದೇಶದ ಉಪಕರಣಗಳು ಸಾಮಾನ್ಯವಾಗಿವೆ.

### ಆಯ್ದ ಉಪಕರಣಗಳ ವಿವರಣೆ

**ನೀಳಚಕ್ಕೆಯಂತಹ ಚಕ್ಕೆ**

೧. ಹೊನ್ನೇಮಾರನಹಳ್ಳಿ:- ಕ್ವಾರ್ಟ್ಜ್‌ಶಿಲೆ. ಉದ್ದ ೪೦ ಅಗಲ ೨೮ ದಪ್ಪ ೧೨ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬು ಮತ್ತು ಉಬ್ಬೇಣು ಇದೆ. ಮೇಲ್ತುದಿ ಮತ್ತು ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಕೆಳತುದಿ ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ಬಲ ಪಾರ್ಶ್ವ ಮತ್ತು ಮೇಲ್ತುದಿಯಲ್ಲಿ ಪುಡಿಗೆಲಸ ಮಾಡಿದೆ.
ಸಾಮ್ಯ:- ಸಂಖ್ಯೆ-೫ ನಕ್ಷೆ-೪.೧೪ (ರಾಜು ಡಿ.ಆರ್. ೧೯೮೮;೫೫)

೨. ಓಬಳಾಪುರ:- ಕ್ವಾರ್ಟ್ಜ್‌ಶಿಲೆ. ಉದ್ದ ೪೦ ಅಗಲ ೨೨ ದಪ್ಪ ೮ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ಮೊಂಡಾಗಿದೆ. ಕೆಳತುದಿ ದಪ್ಪವಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ಮೊಂಡಾಗಿದೆ. ಹಿಂಬದಿ ಸಮತಲ. ತಾಡನ ವೇದಿಕೆ ಇದೆ.
ಸಾಮ್ಯ:- ಸಂಖ್ಯೆ-೧ ನಕ್ಷೆ -೪.೧೨ (ರಾಜು.ಡಿ.ಆರ್:೧೯೮೮;೫೩)

೩. ಚಿಕ್ಕೇಗೌಡನರೊಪ್ಪ:- ಕ್ವಾರ್ಟ್ಜ್‌ಶಿಲೆ. ಉದ್ದ ೫೦ ಅಗಲ ೨೦ ದಪ್ಪ ೨೦ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯದಲ್ಲಿ ಉಬ್ಬೇಣಿದ್ದು ಬಲಗಡೆಗೆ ಚಕ್ಕೆ ಎಬ್ಬಿಸಿದೆ. ಎಡಗಡೆ ಮೂಲ ಶಿಲಾ ತೊಗಟೆ ಉಳಿದಿದೆ. ಮೇಲ್ತುದಿ ಮೊಂಡಾಗಿದೆ. ಕೆಳತುದಿ ದಪ್ಪವಾಗಿದೆ. ಎರಡೂ ಪಾರ್ಶ್ವಗಳೂ ಹರಿತವಾಗಿವೆ. ಎಡ ಪಾರ್ಶ್ವದ ಅಲಗು ಸರಳರೇಖೆ ಹಾಗೂ ಬಲ ಪಾರ್ಶ್ವದ ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಅಸಮತಲ. ತಾಡನ ಶಂಖು ಮತ್ತು ವೇದಿಕೆ ಇದೆ.
ಸಾಮ್ಯ:- ಸಂಖ್ಯೆ- ೧೨ ನಕ್ಷೆ-೪.೮ (ರಾಜು.ಡಿ.ಆರ್:೧೯೮೮;೪೭)

೪. ಮೂಗನಾಯಕನಕೋಟೆ ದಕ್ಷಿಣ:- ಜಾಸ್ಪರ್ ಶಿಲೆ. ಉದ್ದ ೩೮ ಅಗಲ ೨೦ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬೇಣು ವಕ್ರರೇಖೆಯಲ್ಲಿ ಸಾಗಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿದೆ. ಬಲ ಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದೆ. ಎಡಪಾರ್ಶ್ವದಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಹಿಂಬದಿ ನಿಮ್ನವಾಗಿದೆ.
ಸಾಮ್ಯ:- ಸಂಖ್ಯೆ- ೧೯ ಪ್ಲೇಟ್-XXB ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್: ೧೯೭೫)






ಗಾತ್ರ ೧:೧

**ಒಬ್ಬದಿ ನೀಳಚಕ್ಕೆ**

೫. ಯಲ್ಲಪ್ಪನಾಯಕನಹೊಸಕೋಟೆ:- ಕಂದು ಕ್ವಾರ್ಟ್ಜ಼ೈಟ್ ಶಿಲೆ. ಉದ್ದ ೪೫ ಅಗಲ ೩೫ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿ ಬಲಪಾರ್ಶ್ವದ ಬಳಿ ಉಬ್ಬೇಣು ಇದೆ. ಎಡಪಾರ್ಶ್ವದಲ್ಲಿ ತೆಳ್ಳನೆಯ ಚಕ್ಕೆಗಳನ್ನೆಬ್ಬಿಸಿ ಅಲಗು ರೂಪಿಸಿದೆ. ಚಕ್ಕೆಕಲೆಗಳಿವೆ. ಮೇಲ್ತುದಿ ಅಗಲವಾಗಿದೆ. ಕೆಳತುದಿ ಸ್ವಲ್ಪ ಮೊನಚಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಉಪಕರಣ ತೆಳ್ಳಗಿದೆ.
ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್: ೧೯೯೪-೧೪೮)

೬. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೪೦ ಅಗಲ ೨೮ ದಪ್ಪ ೮ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿ ಸಾಗಿದೆ. ಎರಡೂ ಪಾರ್ಶ್ವಗಳತ್ತ ಸಣ್ಣ ಚಕ್ಕೆಗಳನ್ನೆಬ್ಬಿಸಿ ಅಲಗು ರೂಪಿಸಿದೆ. ಸುಮಾರು ನಾಲ್ಕು ಚಕ್ಕೆ ಕಲೆಗಳಿವೆ. ಬಲಪಾರ್ಶ್ವ ಹರಿತವಾಗಿದೆ. ಎಡಪಾರ್ಶ್ವ ಮೊಂಡಾಗಿದೆ. ಮೇಲ್ತುದಿ ಅಗಲವಾಗಿದ್ದು ಕೆಳತುದಿ ದಪ್ಪವಾಗಿದೆ. ಹಿಂಬದಿ ನಿಮ್ನವಾಗಿದ್ದು ಬುಡದಲ್ಲಿ ತಾಡನ ಶಂಖು ಇದೆ. ಹಿಡಿಕೆ ಮೂಡಿಸಿದೆ.
ಸಾಮ್ಯ:- ಸಂಖ್ಯೆ- ೬ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್: ೧೯೯೪;೧೪೮)

೭. ಅಪ್ಪಾನಹಳ್ಳಿ:- ಕ್ವಾರ್ಟ್ಜ಼ೈಟ್ ಶಿಲೆ. ಉದ್ದ ೩೫ ಅಗಲ ೨೦ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿಯಲ್ಲಿ ಸಣ್ಣ ಸಣ್ಣ ಪುಡಿಚಕ್ಕೆ ತೆಗೆದು ಬಲಪಾರ್ಶ್ವದಲ್ಲಿ ಅಲಗನ್ನು ಮೂಡಿಸಿದೆ. ಎಡಪಾರ್ಶ್ವ ದಪ್ಪಗಿದೆ. ಮೇಲ್ತುದಿ ದಪ್ಪಗಿದೆ. ಕೆಳತುದಿ ತೆಳುವಾಗಿದೆ. ಹಿಂಬದಿ ನಿಮ್ನ. ತಾಡನ ಶಂಖು ಹಾಗೂ ವೇದಿಕೆ ಇವೆ.
ಸಾಮ್ಯ:- ಸಂಖ್ಯೆ- ೧೬ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್: ೧೯೯೪;೧೪೮)

೮. ದೊಡ್ಡಗುಣಿ:- ಕಂದು ಬಣ್ಣದ ಕ್ವಾರ್ಟ್ಜ಼ೈಟ್ ಶಿಲೆ. ಉದ್ದ ೩೮ ಅಗಲ ೨೦ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿ ಎಡಭಾಗದಲ್ಲಿ ಮಧ್ಯ ಉಬ್ಬೇಣು ಇದೆ. ಬಲಪಾರ್ಶ್ವದಲ್ಲಿ ಮೂಲ ಶಿಲಾ ತೊಗಟೆ ಇದೆ. ಎಡಪಾರ್ಶ್ವಕ್ಕೆ ನೀಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಕೆಳತುದಿ ಅಗಲವಾಗಿದ್ದು ಹರಿತ ಅಲಗಿದೆ. ಮೇಲ್ತುದಿ ದಪ್ಪವಾಗಿದ್ದು ಮೂಲ ಶಿಲಾ ತೊಗಟೆ ಅಂಶವಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಬುಡದಲ್ಲಿ ದಪ್ಪವಾಗಿದ್ದು ತಾಡನ ಶಂಖುವಿದೆ.
ಸಾಮ್ಯ:- ಸಂಖ್ಯೆ- ೧೮ ಪ್ಲೇಟ್- XXB ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್: ೧೯೭೫)







ಗಾತ್ರ ೧:೧




**ಇಬ್ಬದಿ ನೀಳಚಕ್ಕೆ**

೯. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೬೦ ಅಗಲ ೩೦ ದಪ್ಪ ೧೫ ಮಿ.ಮೀ. ಆಯತಾಕಾರ. ಮುಂಬದಿಯಲ್ಲಿ ಬಲಭಾಗದಿಂದ ಮಧ್ಯಕ್ಕೆ ಉಬ್ಬೇಣು ಸಾಗಿದೆ. ಬುಡದಿಂದ ನೀಳಚಕ್ಕೆಗಳನ್ನೆಬ್ಬಿಸಿದೆ. ಸಣ್ಣ ಆಳವಾದ ಚಕ್ಕೆಗಳನ್ನೆಬ್ಬಿಸಿ ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ಮೂಡಿಸಿದೆ. ಮೇಲ್ತುದಿ ಬಲಭಾಗಕ್ಕೆ ಚೂಪಾದ ಕೊಕ್ಕಿನಾಕಾರವಿದೆ. ಕೆಳತುದಿ ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಬುಡದಲ್ಲಿ ತಾಡನ ವೇದಿಕೆ ಮತ್ತು ಶಂಖು ಕಾಣುತ್ತದೆ.
ಸಾಮ್ಯ:- ಸಂಖ್ಯೆ- ೫ ನಕ್ಷೆ- ೪.೧೪ (ರಾಜು.ಡಿ.ಆರ್:೧೯೮೮;೫೫)

೧೦. ಹಾರೇಕುರ್ಚಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೬೦ ಅಗಲ ೩೦ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಸರಳರೇಖೆಯಲ್ಲಿದೆ. ಎರಡೂ ಬದಿ ಸಣ್ಣಸಣ್ಣ ಚಕ್ಕೆ ಎಬ್ಬಿಸಿ ಅಲಗು ಮೂಡಿಸಿದೆ. ಮೇಲ್ತುದಿ ಮೊನೆ ಇದ್ದು ಹರಿತವಾಗಿದೆ. ಕೆಳತುದಿ ಅಗಲವಾಗಿದ್ದು ಮೊಂಡಾಗಿದೆ. ಹಿಂಬದಿಯಲ್ಲಿ ಅನೇಕ ಚಕ್ಕೆ ಕಲೆಗಳಿಂದ ಉಬ್ಬುತಗ್ಗುಗಳಿವೆ. ಹೆಚ್ಚು ಕಡಿಮೆ ಸಮತಲವಾಗಿದೆ.
ಸಾಮ್ಯ:- ಸಂಖ್ಯೆ- ೧೦ ನಕ್ಷೆ- ೪.೧೬ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್. ೧೯೯೪;೪೮)

೧೧. ಮಾರಶೆಟ್ಟಹಳ್ಳಿ:- ತಿಳಿ ಹಸಿರು ಬಣ್ಣದ ಕ್ವಾರ್ಟ್ಜ್‌ಶಿಲೆ. ಉದ್ದ ೫೫ ಅಗಲ ೩೦ ದಪ್ಪ ೧೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯಉಬ್ಬೇಣು ಇದೆ. ಎರಡು ನೀಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಮೇಲ್ತುದಿ ತೆಳ್ಳಗಿದ್ದು ಮೊಂಡಾಗಿದೆ. ಕೆಳತುದಿ ಅಗಲವಿದ್ದು ದಪ್ಪವಾಗಿದೆ. ಎರಡೂ ಪಾರ್ಶ್ವಗಳಲ್ಲೂ ಸಣ್ಣಸಣ್ಣ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಹಿಂಬದಿ ಸಮತಲವಾಗಿದೆ. ತಾಡನ ಶಂಖುವನ್ನು ಹೊಂದಿದೆ.
ಸಾಮ್ಯ:- ಸಂಖ್ಯೆ- ೧ ನಕ್ಷೆ- ೪.೧೨ (ರಾಜು.ಡಿ.ಆರ್:೧೯೮೮;೫೩)

೧೨. ಹೆನ್ನೇಮಾರನಹಳ್ಳಿ:- ಹರಳುಯುಕ್ತ ಕ್ವಾರ್ಟ್ಸ್‌ಶಿಲೆ. ಉದ್ದ ೪೫ ಅಗಲ ೩೦ ದಪ್ಪ ೧೦ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ತೆಗೆದು ಅಲಗು ಮೂಡಿಸಿದೆ. ಮೇಲ್ತುದಿ ಅಗಲವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಾಗಿದೆ. ಹಿಂಬದಿ ಹೀನವಾಗಿದೆ. ಒರಟು ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೪೩ ನಕ್ಷೆ- ೪೨ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೩. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೪೩ ಅಗಲ ೨೫ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಎಡದಿಂದ ಆರಂಭವಾಗಿ ಮೇಲ್ತುದಿವರೆಗೆ ಸಾಗಿದೆ. ಮೇಲ್ತುದಿ ಮೊನೆ ಇದ್ದು ಮೊಂಡಾಗಿದೆ. ಕೆಳತುದಿ ದಪ್ಪವಾಗಿದೆ. ಎರಡೂ ಪಾರ್ಶ್ವಗಳಲ್ಲೂ ಪುಡಿಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಬುಡದಲ್ಲಿ ದಪ್ಪವಾಗಿದ್ದು ತಾಡನ ಶಂಖುವಿದೆ.

ಸಾಮ್ಯ:- ಸಂಖ್ಯೆ- ೨೦ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೮)

೧೪. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್‌ಶಿಲೆ. ಉದ್ದ ೪೮ ಅಗಲ ೧೭ ದಪ್ಪ ೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ಪಾರ್ಶ್ವಗಳಲ್ಲೂ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಎರಡೂ ಬದಿಗೆ ಚಕ್ಕೆ ತೆಗೆದಿದೆ. ಬಲಪಾರ್ಶ್ವದ ಅಲಗು ನೇರವಾಗಿದೆ. ಎಡಪಾರ್ಶ್ವದ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಮೇಲ್ತುದಿ ತೆಳ್ಳಗಿದ್ದು ಅಗಲವಾಗಿದೆ. ಕೆಳತುದಿ ಮಧ್ಯದಲ್ಲಿ ಮೊನೆಯಂತಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೫ ನಕ್ಷೆ ೪.೧೨ (ರಾಜು.ಡಿ.ಆರ್:೧೯೮೮;೫೩)

೧೫. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೪೨ ಅಗಲ ೧೮ ದಪ್ಪ ೮ ಮಿ.ಮೀ. ಅಸಮ ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದೆ. ಬಲಪಾರ್ಶ್ವದಲ್ಲಿ ತೆಳುಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಪುಡಿಗೆಲಸ ಮಾಡಿದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೮ ನಕ್ಷೆ- ೪೧ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್: ೧೯೭೫)

೧೬. ಮೂಗನಾಯಕನಕೋಟೆ ಉತ್ತರ:- ಕ್ವಾರ್ಟ್ಸ್‌ಶಿಲೆ. ಉದ್ದ ೩೨ ಅಗಲ ೧೦ ದಪ್ಪ ೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣಿನಲ್ಲೂ ತೆಳುಚಕ್ಕೆ ತೆಗೆದಿದೆ. ಎರಡು ಮೂರು ಚಕ್ಕೆಕಲೆಗಳಿವೆ. ಮೇಲ್ತುದಿ ಮೊನೆ ಇದೆ. ಕೆಳತುದಿ ಅಗಲವಾಗಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೮ ನಕ್ಷೆ- ೪.೧೨ (ರಾಜು.ಡಿ.ಆರ್:೧೯೮೮;೫೩)



**ಕಚ್ಚುಳ್ಳ ಏಳಚಕ್ಕೆ**

೧೭. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್‌ಶಿಲೆ. ಉದ್ದ ೫೩ ಅಗಲ ೩೩ ದಪ್ಪ ೧೫ ಮಿ.ಮೀ. ತ್ರಾಪಿಜ್ಯ. ಮುಂಬದಿ ಮಧ್ಯ ಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಎರಡೂ ಪಾರ್ಶ್ವಗಳಲ್ಲಿ ಪುಡಿಗೆಲಸ ಮಾಡಿ ಗರಗಸದಂತಹ ಅಲಗು ಮೂಡಿಸಿದೆ. ಮೇಲ್ತುದಿ ಮತ್ತು ಕೆಳತುದಿ ದಪ್ಪವಾಗಿ ಮೊಂಡಾಗಿವೆ. ಹಿಂಬದಿ ಚಕ್ಕೆ ಕಲೆಗಳಿವೆ. ಮಧ್ಯ ಉಬ್ಬು ಇದೆ. ತಾಡನ ಶಂಖುವಿದೆ.
ಸಾಮ್ಯ:- ಸಂಖ್ಯೆ- ೫೨ ನಕ್ಷೆ- ೫೫ (ಸಾಂಕಳಿಯಾ.ಎಚ್.ಡಿ:೧೯೭೫; ೨೧೧)

೧೮. ಯಲ್ಲಾಪುರ:- ಕ್ವಾರ್ಟ್ಸ್‌ಶಿಲೆ. ಉದ್ದ ೪೦ ಅಗಲ ೨೮ ದಪ್ಪ ೧೦ ಮಿ.ಮೀ. ಚತುರ್ಭುಜಾಕಾರ. ಮುಂಬದಿ ಮೂರು ನಾಲ್ಕು ಚಕ್ಕೆ ತೆಗೆದು ಎರಡೂ ಬದಿ ಅಲಗು ಮೂಡಿಸಿದೆ. ಮಧ್ಯದಲ್ಲಿ ಎರಡು ಸಮಾನಾಂತರ ಉಬ್ಬೇಣುಗಳಿವೆ. ಮೇಲ್ತುದಿ ಮತ್ತು ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ತಾಡನ ಶಂಖು ಇದೆ.
ಸಾಮ್ಯ:- ಸಂಖ್ಯೆ- ೧೨ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೮)









ಗಾತ್ರ ೧:೧ ೧೭ ೧೮




**ಕೈಚಾಕು ಏಳಚಕ್ಕೆ**

೧೯. ಯಲ್ಲಾಪುರ:- ಕ್ವಾರ್ಟ್ಸ್‌ಶಿಲೆ. ಉದ್ದ ೪೦ ಅಗಲ ೨೫ ದಪ್ಪ ೧೦ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಸಣ್ಣಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿ ಎಡಕ್ಕೆ ಮೊನೆಯಿದೆ. ಕೆಳತುದಿ ಬೆರಳಿಡಿಕೆಗೆ ಅನುಕೂಲವಾಗುವಂತೆ ತೆಳುವಾಗಿದೆ. ಎಡಪಾರ್ಶ್ವದಲ್ಲಿ ನೇರ ಅಲಗು ಇದೆ. ಬಲಪಾರ್ಶ್ವ ವೃತ್ತಾಕಾರದಂತಿದ್ದು ಮೊಂಡಾಗಿದೆ. ಮಧ್ಯ ಭಾಗದಲ್ಲಿ ಮೂಲ ಶಿಲಾತೊಗಟೆ ಅಂಶವಿದೆ. ಹಿಂಬದಿ ಎಡಭಾಗದಲ್ಲಿ ಚಕ್ಕೆ ತೆಗೆದಿದೆ. ಬಲಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ.
ಸಾಮ್ಯ:- ಸಂಖ್ಯೆ- ೧೫ ನಕ್ಷೆ- ೫೫ -ಅ (ಸಂಕಳಿಯಾ.ಎಚ್.ಡಿ:೧೯೭೫; ೨೧೪)
ಸಂಖ್ಯೆ - ೨೫ ನಕ್ಷೆ- ೪೨ (ರಾಜು.ಡಿ.ಆರ್:೧೯೮೮)

೨೦. ಚಿಕ್ಕೇಗೌಡನರೊಪ್ಪ:- ಕಂದು ಕ್ವಾರ್ಟ್ಸ್‌ಶಿಲೆ. ಉದ್ದ ೩೮ ಅಗಲ ೨೦ ದಪ್ಪ ೧೦ ಮಿ.ಮೀ. ನಿರ್ದಿಷ್ಟ ಜಾಮಿತೀಯ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬು ಇದೆ. ಬಲಪಾರ್ಶ್ವದಲ್ಲಿ ಅಲಗಿದೆ. ಎಡಪಾರ್ಶ್ವ ದಪ್ಪವಾಗಿದೆ. ಮೇಲ್ತುದಿಯಲ್ಲಿ ಕೊಕ್ಕು ಇದೆ. ಕೆಳತುದಿ ಮೊನೆ ಇದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೪ ನಕ್ಷೆ- ೪.೧೨ (ರಾಜು.ಡಿ.ಆರ್:೧೯೮೮;೫೩)

೨೧. ಸಿದ್ಲೆಹಳ್ಳಿ:- ಕ್ವಾರ್ಟ್ಸ್‌ಶಿಲೆ. ಉದ್ದ ೪೦ ಅಗಲ ೨೦ ದಪ್ಪ ೧೦ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯಉಬ್ಬಿದೆ. ಎರಡೂ ಬದಿಗೂ ಆಳವಾದ ಚಕ್ಕೆ ತೆಗೆದಿದೆ. ಎಡಪಾರ್ಶ್ವದ ಅಲಗು ಹರಿತವಾಗಿದೆ. ಬಲಪಾರ್ಶ್ವದ ಅಲಗು ಮೊಂಡಾಗಿದೆ. ಮೇಲ್ತುದಿಯನ್ನು ಹಿಡಿತಕ್ಕೆ ಸಿಗುವಂತೆ ಮೊಂಡಾಗಿಸಿದೆ. ಹರಿತವಾಗಿರುವ ಎಡಪಾರ್ಶ್ವದ ಅಲಗು ಬಾಗಿದೆ. ಕೆಳತುದಿ ಹಿಡಿಕೆ ಮೂಡಿಸಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ.

೨೨. ಗುರಮ್ಮನಕಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೩೫ ಅಗಲ ೧೫ ದಪ್ಪ ೫ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಇದ್ದು ಎರಡೂ ಬದಿಗೂ ಚಕ್ಕೆಗಳನ್ನೆಬ್ಬಿಸಿದೆ. ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ಇದೆ. ಮೇಲ್ತುದಿಯ ಎಡಭಾಗದಲ್ಲಿ ಕೊಕ್ಕಿನಂತಹ ಮಂಚಾಚು ಇದೆ.ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.

ಸಾಮ್ಯ:- ಸಂಖ್ಯೆ- ೧೭ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೮)



೧೯


೨೦




ಗಾತ್ರ ೧:೧

೨೧ ೨೨




**ಮೊನೆಯುಳ್ಳ ನೀಳಚಕ್ಕೆ**

೨೩. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್‌ಶಿಲೆ. ಉದ್ದ ೩೩ ಅಗಲ ೧೮ ದಪ್ಪ ೭ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಮತ್ತು ಬಲಭಾಗದಲ್ಲಿ ಮತ್ತೊಂದು ಉಬ್ಬೇಣು ಇದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ಮೊಂಡಾಗಿದೆ. ಬಲಪಾರ್ಶ್ವ ಮೊಂಡಾಗಿದೆ. ಎಡಪಾರ್ಶ್ವ ಹರಿತವಾಗಿದೆ. ಹಿಂಬದಿ ಸಮತಲವಾಗಿದೆ

ಸಾಮ್ಯ:- ಸಂಖ್ಯೆ- ೨೮- ನಕ್ಷೆ- ೫೫೬ ( ಸಾಂಕಳಿಯ.ಎಚ್.ಡಿ:೧೯೭೫;೨೨೧)

೨೪. ಉನಗನಾಲ:- ಕ್ವಾರ್ಟ್ಸ್‌ಶಿಲೆ. ಉದ್ದ ೩೩ ಅಗಲ ೧೮ ದಪ್ಪ ೧೫ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಇದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದೆ. ಎಡಪಾರ್ಶ್ವದ ಅಲಗನ್ನು ಸಣ್ಣಸಣ್ಣ ಚಕ್ಕೆ ತೆಗೆದು ಮೂಡಿಸಿದೆ.ಮೇಲ್ತುದಿ ಮೊನೆ ಇದೆ. ಕೆಳತುದಿ ಅಗಲವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಮುಂಬದಿಯಲ್ಲಿ ಮೂಲಶಿಲಾತೊಗಟೆ ಅಂಶವಿದೆ.
ಸಾಮ್ಯ:- ಸಂಖ್ಯೆ- ೩೪ ನಕ್ಷೆ- ೫೫ L (ಸಾಂಕಳಿಯ.ಎಚ್.ಡಿ:೧೯೭೫;೨೨೨)








ಗಾತ್ರ ೧:೧ ೨೩ ೨೪

**ಹೆರೆಚಕ್ಕೆ**

**ಪಾರ್ಶ್ವ ಹೆರೆಚಕ್ಕೆ**

೨೫. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್‌ಶಿಲೆ. ಉದ್ದ ೪೫ ಅಗಲ ೩೮ ದಪ್ಪ ೨೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಹಲವು ಚಕ್ಕೆ ತೆಗೆದಿದೆ. ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗಿದೆ. ಮೇಲ್ತುದಿ ತೆಳುವಾಗಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಅಲಗನ್ನು ಹೊಂದಿದೆ. ಹಿಂಬದಿ ಪೀನವಾಗಿದೆ. ತಾಡನ ಶಂಖು ಇದೆ.
ಸಾಮ್ಯ:- ಸಂಖ್ಯೆ- ೪ ನಕ್ಷೆ- ೪.೩ (ರಾಜು.ಡಿ.ಆರ್:೧೯೮೮; ೪೦)

೨೬. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೫೦ ಅಗಲ ೩೫ ದಪ್ಪ ೫ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯು ವೃತ್ತಾಕಾರದಅಲಗನ್ನು ಹೊಂದಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಪುಡಿಗೆಲಸ ಮಾಡಿ ಎರಡೂ ಪಾರ್ಶದಲ್ಲಿ ಗರಗಸದಂತೆ ಅಲಗು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಹಿಂಬದಿ ಹಾಗೂ ಮುಂಬದಿ ಮಧ್ಯದಲ್ಲಿ ತೆಳು ಚಕ್ಕೆ ತೆಗೆದು ಹಿಡಿಯಲು ಅನುಕೂಲ ಮಾಡಿದೆ.
ಸಾಮ್ಯ:- ಸಂಖ್ಯೆ - ೧೦ ನಕ್ಷೆ - ೫೬.b (ಸಾಂಕಳಿಯಾ. ಎಚ್.ಡಿ: ೧೯೭೫;೨೧೦)

೨೭. ಮಧುಗಿರಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೪೫ ಅಗಲ ೩೩ ದಪ್ಪ ೧೮ ಮಿ.ಮೀ. ಅಸಮ ಆಯತಾಕಾರ ಮುಂಬದಿ ತೆಳುಚಕ್ಕೆ ತೆಗೆದಿದ್ದು. ಉಬ್ಬೇಣು ಇದೆ. ಮೇಲ್ತುದಿ ಹರಿತವಾಗಿದೆ. ಕೆಳತುದಿ ದಪ್ಪವಾಗಿ ಮೊಂಡಾಗಿದೆ. ಹಿಂಬದಿ ಅಸಮತಲವಾಗಿದೆ. ತೆಳುಚಕ್ಕೆ ತೆಗೆದಿದೆ. ಪುಡಿಗೆಲಸ ಮಾಡಿದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ - ೧ ನಕ್ಷೆ - ೫೫.b(ಸಾಂಕಳಿಯಾ.ಎಚ್.ಡಿ:೧೯೭೫;೨೧೦)

೨೮. ಕಾರೇಕುರ್ಚಿ:- ಜಾಸ್ಪರ್ ಶಿಲೆ. ಉದ್ದ ೪೫ ಅಗಲ ೩೮ ದಪ್ಪ ೨೦ ಮಿ.ಮೀ. ವಜ್ರಾಕೃತಿ. ಮುಂಬದಿ ಮಧ್ಯ ಉಬ್ಬೇಣಿದೆ.
ಬಲಪಾರ್ಶದಲ್ಲಿ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಎಡಪಾರ್ಶ್ವದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಹಿಂಬದಿ ಅಸಮತಲವಾಗಿದೆ. ಚಕ್ಕೆ ಕಲೆಗಳಿವೆ. ತಾಡನ ಶಂಖುವಿದೆ.
ಸಾಮ್ಯ:- ಸಂಖ್ಯೆ - ೨ ನಕ್ಷೆ - ೫೫.b (ಸಾಂಕಳಿಯಾ.ಎಚ್.ಡಿ:೧೯೭೫;೨೧೦)

೨೯. ಓಬಳಾಪುರ:- ಕ್ವಾರ್ಟ್ಸ್‌ಶಿಲೆ. ಉದ್ದ ೪೦ ಅಗಲ ೩೦ ದಪ್ಪ ೨೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣಿದೆ. ಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡಾಗಿದೆ. ಕೆಳತುದಿ ನಿಮ್ನ ಅಲಗನ್ನು ಹೊಂದಿವೆ. ಎರಡೂ ಪಾರ್ಶ್ವಗಳಲ್ಲೂ ಅಲಗಿದೆ. ಹಿಂಬದಿ ಪೀನವಾಗಿದೆ.
ಸಾಮ್ಯ:- ಸಂಖ್ಯೆ - ೯ ನಕ್ಷೆ - ೫೫.b (ಸಾಂಕಳಿಯಾ ಎಚ್.ಡಿ. :೧೯೭೫;೨೧೦)

೩೦. ಕೈಮರ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೩ ಅಗಲ ೩೫ ದಪ್ಪ ೫ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬು ಇದೆ. ಹಲವು ಚಕ್ಕೆ ತೆಗೆದ ಏಣುಗಳಿವೆ. ಎಡ ಪಾರ್ಶ್ವದಲ್ಲಿ ನಿಮ್ನ ಹರಿತ ಅಲಗಿದೆ. ಬಲ ಪಾರ್ಶ್ವ ತೆಳುವಾಗಿದೆ. ಪುಡಿ ಚಕ್ಕೆ ತೆಗೆದಿದೆ. ಮೇಲ್ತುದಿ ಮತ್ತು ಕೆಳತುದಿ ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ -೬ ನಕ್ಷೆ - ೫೫.b (ಸಾಂಕಳಿಯಾ ಎಚ್.ಡಿ. :೧೯೭೫;೨೧೦)

(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ.)

೩೧. ಕರಡಿ:- ಬಿಳಿ ಕ್ವಾರ್ಟ್ಜ್‌ಶಿಲೆ. ಉದ್ದ ೩೩ ಅಗಲ ೨೫ ದಪ್ಪ ೧೦ ಮಿ.ಮೀ. ಆಯತಾಕಾರ ಮುಂಬದಿ ಉಬ್ಬೇಣಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ಮೊನೆ ಇದ್ದು ಹರಿತವಾಗಿದೆ. ಬಲಪಾರ್ಶ್ವ ಮೊಂಡಾಗಿದೆ. ಎಡಪಾರ್ಶ್ವ ಕ್ಷೀಣ ಅಲಗನ್ನು ಹೊಂದಿದೆ. ಹಿಂಬದಿ ಅಸಮತಲವಾಗಿದೆ. ತಾಡನ ವೇದಿಕೆ ಮತ್ತು ಶಂಖುವಿದೆ.

ಸಾಮ್ಯ:- ಸಂಖ್ಯೆ - ೨ ನಕ್ಷೆ - ೫೫.m(ಸಾಂಕಳಿಯಾ ಎಚ್.ಡಿ: ೧೯೭೫: ೨೨೫)




೨೫




೨೮




೨೬




೨೯




೨೭




೩೧

ಗಾತ್ರ ೧:೧




**ತುದಿ ಹೆರೆಚಕ್ಕೆ**

೩೨. ಮಂಚಕಲ್ ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೧ ಅಗಲ ೩೦ ದಪ್ಪ ೧೦ ಮಿ.ಮೀ. ಎಲೆಯಾಕಾರ. ಮುಂಬದಿಯ ಮೇಲರ್ಧ ಭಾಗದಲ್ಲಿ ಚಕ್ಕೆ ತೆಗೆದು ಅರ್ಧ ವೃತ್ತಾಕಾರದಲ್ಲಿ ಅಲಗು ಮೂಡಿಸಿದೆ. ಕೆಳ ಅರ್ಧ ಭಾಗದಲ್ಲಿ ಮೂಲ ಶಿಲಾ ತೊಗಟೆ ಅಂಶವಿದೆ. ಪುಡಿಗೆಲಸ ಮಾಡಿ ಹರಿತ ಅಲಗನ್ನು ಮೂಡಿಸಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸದಲ್ಲಿ ಆಯತಾಕಾರ.
ಸಾಮ್ಯ:- ಸಂಖ್ಯೆ - ೬ ನಕ್ಷೆ - ೫೫.b(ಸಾಂಕಳಿಯಾ.ಎಚ್.ಡಿ:೧೯೭೫: ೨೧೦)

೩೩. ಯಕ್ಕಲಕಟ್ಟೆ. ಆದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೩೦ ದಪ್ಪ ೧೫ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿಯಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದಿದ್ದು ಉಬ್ಬೇಣುಗಳಿವೆ. ಎಡ ಪಾರ್ಶ್ವದಲ್ಲಿ ಹರಿತ ಅಲಗಿದೆ. ಮೇಲ್ತುದಿಯಲ್ಲಿ ಹರಿತ ಅಲಗಿದ್ದು ಕಿರಿದಾದ ಮೊನೆ ಇದೆ. ಬಲ ಪಾರ್ಶ್ವ ಮತ್ತು ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದ್ದು ಚಕ್ಕೆ ಕಲೆಗಳಿವೆ. ಪುಡಿಗೆಲಸ ಮಾಡಿದೆ. ಮೂಲ ಶಿಲಾ ತೊಗಟೆ ಅಂಶವಿದೆ.
ಸಾಮ್ಯ:- ಸಂಖ್ಯೆ - ೧ ನಕ್ಷೆ - ೪.೩ (ರಾಜು.ಡಿ.ಆರ್:೧೯೮೮;೪೦)

೩೪. ನಾಗಲಾಪುರ:- ಫೆಲ್ಸಪರ್ ಶಿಲೆ. ಉದ್ದ ೩೦ ಅಗಲ ೨೮ ದಪ್ಪ ೧೦ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮೇಲ್ಮಧ್ಯದಿಂದ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಕೆಳತುದಿಯಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಎರಡೂ ಪಾರ್ಶಗಳೂ ಸ್ವಲ್ಪ ಭಾಗ ಹರಿತ ಅಲಗನ್ನು ಹೊಂದಿದೆ. ಮೇಲ್ತುದಿ ಹರಿತ ಅಲಗು ಅಗಲವಾಗಿದೆ. ಹಿಂಬದಿ ನಿಮ್ನವಾಗಿದೆ. ಬೆರಳಿಡಿಕೆಗೆ ಹೊಂದುವಂತೆ ಚಕ್ಕೆ ತೆಗೆದಿದೆ.
ಸಾಮ್ಯ:- ಸಂಖ್ಯೆ -೩ ನಕ್ಷೆ - ೫೫.c (ಸಾಂಕಳಿಯಾ ಎಚ್.ಡಿ. :೧೯೭೫;೨೧೪)

೩೫. ಗುಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೦ ಅಗಲ ೩೦ ದಪ್ಪ ೧೦ ಮಿ.ಮೀ. ಚತುರ್ಭುಜಾಕಾರ. ಮುಂಬದಿಯ ಬಲ ಭಾಗದಲ್ಲಿ ಮಧ್ಯ ಉಬ್ಬೇಣು ಇದೆ. ಬಲಕ್ಕೆ ಆಳಚಕ್ಕೆ ತೆಗೆದಿದೆ. ಎಡಕ್ಕೆ ಅಗಲ ತೆಳು ಚಕ್ಕೆ ತೆಗೆದಿದೆ. ಮೇಲ್ತುದಿ ಹರಿತ ಅಲಗನ್ನು ಹೊಂದಿದ್ದು ಮೊನೆ ಇದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಹಿಂಬದಿ ಸಮತಲವಾಗಿದ್ದು ತಾಡನ ಶಂಖುವಿದೆ.
ಸಾಮ್ಯ:- ಸಂಖ್ಯೆ- ೮ ನಕ್ಷೆ- ೫೫.b (ಸಾಂಕಳಿಯಾ.ಎಚ್.ಡಿ:೧೯೭೫;೨೧೦)






ಗಾತ್ರ ೧:೧




**ದುಂಡು ಹೆರೆಚಕ್ಕೆ**

೩೬. ಗಳಿಗೆಕೆರೆ:- ಕ್ವಾರ್ಟ್ಸ ಶಿಲೆ ವ್ಯಾಸ. ೩೭ ದಪ್ಪ ೧೦ ಮಿಮೀ. ಹೆಚ್ಚುಕಡಿಮೆ ವೃತ್ತಾಕಾರವಾಗಿದೆ. ಮುಂಬದಿ ಮಧ್ಯ ಉಬ್ಬಿದ್ದು ಹಲವು ಚಕ್ಕಿ ತೆಗೆದು ಪರಿಧಿಯ ಸುತ್ತಲೂ ಹರಿತ ಅಲಗು ಮೂಡಿಸಿದೆ. ಮೇಲ್ತುದಿ ತೆಳುವಾಗಿದ್ದು ಹರಿತವಾಗಿದೆ. ಅಲ್ಲಲ್ಲಿ ಪುಡಿಗೆಲಸ ಮಾಡಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ -೧೧ ನಕ್ಷೆ - ೫೫.b (ಸಾಂಕಳಿಯಾ.ಎಚ್.ಡಿ:೧೯೭೫;೨೧೦)

೩೭. ದೊಡ್ಡಗುಣಿ:- ಕ್ವಾರ್ಟ್ಸ ಶಿಲೆ. ವ್ಯಾಸ ೪೨ ದಪ್ಪ ೧೦ ಮಿ.ಮೀ. ಅಂಡಾಕಾರ. ಮುಂಬದಿಯ ಮಧ್ಯ ಮತ್ತು ಎಡಭಾಗದಲ್ಲಿ ಉಬ್ಬೇಣಿದೆ. ಎರಡು ತೆಳುಚಕ್ಕೆ ತೆಗೆದು ಪರಿಧಿಯ ಸುತ್ತಲೂ ಹರಿತ ಅಲಗನ್ನು ಮೂಡಿಸಿದೆ. ಮೇಲ್ತುದಿ ಮೊನೆ ಹೊಂದಿದೆ. ಹಿಂಬದಿಯಲ್ಲಿ ತಾಡನ ವೇದಿಕೆ ಮತ್ತು ಶಂಖುವಿದೆ. ಪೀನವಾಗಿದೆ.

ಸಾಮ್ಯ:- ಸಂಖ್ಯೆ- ೮ ನಕ್ಷೆ- ೫೫ f (ಸಾಂಕಳಿಯಾ.ಎಚ್.ಡಿ:೧೯೭೫;೨೧೫)

೩೮. ಗುರಮ್ಮನಕಟ್ಟೆ:- ಕ್ವಾರ್ಟ್ಸ ಶಿಲೆ. ವ್ಯಸ ೩೩ ದಪ್ಪ ೧೫ ಮಿ.ಮೀ. ವೃತ್ತಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬಿದ್ದು ಪರಿಧಿಯಕಡೆಗೆ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಪುಡಿಚಕ್ಕೆ ತೆಗೆದಿದೆ.

ಸಾಮ್ಯ:- ಸಂಖ್ಯೆ- ೬ ನಕ್ಷೆ- ೫೫f(ಸಾಂಕಾಳಿಯ.ಎಚ್.ಡಿ:೧೯೭೫;೨೧೫)










ಗಾತ್ರ ೧:೧

**ಒಳಬಾಗಿದ ಅಂಚಿನ ಹೆರೆಚಕ್ಕೆ**

೩೯. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್‌ಶಿಲೆ. ಉದ್ದ ೩೫ ಅಗಲ ೫೫ ದಪ್ಪ ೧೫ ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಮಧ್ಯ ಉಬ್ಬೇಣು ಇದೆ. ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಮೇಲ್ತುದಿ ಅಲಗು ಹರಿತವಾಗಿದ್ದು ಒಳಬಾಗಿದೆ. ಕೆಳತುದಿ ದಪ್ಪವಾಗಿದೆ. ಎರಡೂ ಪಾರ್ಶ್ವಗಳೂ ದಪ್ಪವಾಗಿವೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ.
ಸಾಮ್ಯ:- ಅಪರೂಪದ ಉಪಕರಣ.

೪೦. ಯಲ್ಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೫ ಅಗಲ ೪೦ ದಪ್ಪ ೮ ಮಿ.ಮೀ. ಅರ್ಧಚಂದ್ರಾಕೃತಿ. ಮುಂಬದಿ ಹೆಚ್ಚುಕಡಿಮೆ ಸಮವಾಗಿದೆ. ಚಕ್ಕೆಕಲೆಗಳಿವೆ. ಮೇಲ್ತುದಿ ಹರಿತ ಒಳಬಾಗಿದ ಅಲಗನ್ನು ಹೊಂದಿದೆ. ಕೆಳತುದಿ ಅಂಡಾಕಾರ. ಎಡಪಾರ್ಶ್ವ ತೆಳುವಾಗಿದ್ದು ಹರಿತವಾಗಿದೆ. ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ಚಕ್ಕೆ ಕಲೆಗಳಿವೆ.
ಸಾಮ್ಯ:- ಸಂಖ್ಯೆ - ೧೪ ನಕ್ಷೆ - IV a (ಷಡಕ್ಷರಯ್ಯ.ಆರ್.ಎಂ:೧೯೯೫)

೪೧. ಗಳಿಗೆಕೆರೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೦ ಅಗಲ ೩೫ ದಪ್ಪ ೧೦ ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದು ಮುಂಬದಿಯಲ್ಲಿ ಹರಿತ ಅಲಗು ಮೂಡಿಸಿದೆ. ಎಡಭಾಗದಲ್ಲಿ ಮೂಲ ಶಿಲಾ ತೊಗಟೆ ಅಂಶವಿದೆ. ಮೇಲ್ತುದಿ ಒಳಬಾಗಿದ ಹರಿತ ಅಲಗು ಇದೆ. ಕೆಳತುದಿ ಅಂಡಾಕಾರವಾಗಿದ್ದು ಅಲಗು ಇದೆ. ಹಿಂಬದಿ ನಿಮ್ನವಾಗಿದೆ. ಎಡ ಮತ್ತು ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ.
ಸಾಮ್ಯ:- ಅಪರೂಪದ ಉಪಕರಣವಾಗಿದೆ.




ಗಾತ್ರ ೧:೧

**ಹೆಬ್ಬೆಟ್ಟುಗುರಿನಂತಹ ಹೆರೆಚಕ್ಕೆ**

೪೨. ಹಿರೇಹಳ್ಳಿ.:- ಕ್ವಾರ್ಟ್ಸ್‌ಶಿಲೆ. ಉದ್ದ ೨೫ ಅಗಲ ೨೫ ದಪ್ಪ ೧೨ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯದಲ್ಲಿ ಸಮತಲ ಉಬ್ಬು ಮೂಲ ಶಿಲೆಯಲ್ಲಿದೆ. ಮೇಲ್ತುದಿ ಮತ್ತು ಬಲಪಾರ್ಶ್ವಕ್ಕೆ ಸಣ್ಣಸಣ್ಣ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಎಡ ಪಾರ್ಶ್ವ ದಪ್ಪವಾಗಿದ್ದು ಮೂಲಶಿಲಾ ತೊಗಟೆ ಅಂಶವಿದೆ. ಕೆಳ ತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ.
ಸಾಮ್ಯ:- ಸಂಖ್ಯೆ - ೧೦ ನಕ್ಷೆ - ೫೫ ವೇಮುಲಾ (ಸಾಂಕಳಿಯಾ.ಎಚ್.ಡಿ: ೧೯೭೫; ೨೧೫)

೪೩.ಹಾರೇಕುರ್ಚಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೨೫ ದಪ್ಪ ೫ ಮಿ.ಮೀ. ಚತುರ್ಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ಕಲೆಗಳಿವೆ. ಪರಧಿಯ ಸುತ್ತಲೂ ಅಲಗನ್ನು ಮೂಡಿಸಿದೆ. ಹಿಂಬದಿ ಪೀನವಾಗಿದೆ. ಪುಡಿ ಚಕ್ಕೆ ಕಲೆಗಳು ಅಲ್ಲಲ್ಲಿ ಇವೆ.

ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೫೫b ರೇಣಿಗುಂಟ (ಸಾಂಕಳಿಯಾ.ಎಚ್.ಡಿ:೧೯೭೫; ೨೧೦)

೪೪. ಹೂವಿನಕಟ್ಟೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೩೦ ದಪ್ಪ ೧೦ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಮತ್ತು ಎಡಪಾರ್ಶ್ವದಲ್ಲಿ ಹರಿತ ಅಲಗು ಇದ್ದು ಮೊನೆಗಳನ್ನು ಮೂಡಿಸಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಮೂಲ ಶಿಲಾ ತೊಗಟೆ ಅಂಶವಿದೆ. ಹಿಂಬದಿ ಅಸಮತಲವನ್ನು ಹೊಂದಿದ್ದು ಚಕ್ಕೆಕಲೆಗಳಿವೆ.

ಸಾಮ್ಯ:- ಸಂಖ್ಯೆ- ೮ ನಕ್ಷೆ- ೫೫b ರೇಣಿಗುಂಟ (ಸಾಂಕಳಿಯಾ.ಎಚ್.ಡಿ: ೧೯೭೫; ೨೧೦)

೪೫. ಗಳಿಗೆಕೆರೆ:- ಬಿಳಿ ಕ್ವಾರ್ಟ್ಸ್ ಶಿಲೆ. ಉದ್ದ ೨೫ ಅಗಲ ೨೫ ದಪ್ಪ ೧೦ ಮಿ.ಮೀ. ಹೆಚ್ಚು ಕಡಿಮೆ ವೃತ್ತಾಕಾರ. ಮುಂಬದಿ ಸಣ್ಣ ಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿ ಹರಿತ ಅಲಗು ಮೂಡಿಸಿದೆ. ಕೆಳತುದಿ, ಬಲ ಮತ್ತು ಎಡಪಾರ್ಶ್ವಗಳು ದಪ್ಪವಾಗಿದ್ದು ಮೊಂಡಾಗಿವೆ. ಹಿಂಬದಿ ಸಮತಲವಾಗಿದ್ದು ಪುಡಿಗೆಲಸ ಮಾಡಿದೆ. ಬೆರಳಿಡಿಕೆಗೆ ಸರಿಯಾಗುವಂತೆ ಚಕ್ಕೆ ತೆಗೆದಿದೆ.

ಸಾಮ್ಯ:- ಸಂಖ್ಯೆ- ೯ ನಕ್ಷೆ- ೫೫b ರೇಣುಗುಂಟ (ಸಾಂಕಳಿಯಾ.ಎಚ್.ಡಿ:೧೯೭೫;೨೧೦)




೪೨




೪೩






ಗಾತ್ರ ೧:೧ ೪೪ ೪೫




**ಸಾಮಾನ್ಯ ಮೊನೆ.**

೪೬. ಶಿವಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೪೦ ಅಗಲ ೨೮ ದಪ್ಪ ೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಎರಡೂ ಪಾರ್ಶ್ವ ಹರಿತ ಅಲಗನ್ನು ಹೊಂದಿವೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದೆ. ಪುಡಿಗೆಲಸ ಮಾಡಿದೆ.

ಸಾಮ್ಯ:- ಸಂಖ್ಯೆ - ೩. ನಕ್ಷೆ - ೪.೧೦ (ರಾಜು ಡಿ.ಆರ್: ೧೯೮೮; ೫೧)

೪೭. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೪೨ ಅಗಲ ೩೦ ದಪ್ಪ ೧೫ ಮಿ.ಮೀ. ಅಂಡಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬಿದ್ದು ನಾಲ್ಕು ಸಣ್ಣ ಚಕ್ಕೆಗಳ ಉಬ್ಬೇಣು ಇದೆ. ಮೇಲ್ತುದಿ ಮತ್ತು ಕೆಳತುದಿ ಮೊನೆಯನ್ನು ಹೊಂದಿವೆ. ಎರಡೂ ಪಾರ್ಶ್ವಗಳ ಮೇಲ್ಬದಿಯಲ್ಲಿ ಹರಿತ ಅಲಗಿದೆ. ಹಿಂಬದಿ ಸಮತಲವಾಗಿದೆ. ಬೆರಳಡಿಕೆಗೆ ಸರಿಯಾಗುವಂತೆ ಚಕ್ಕೆ ತೆಗೆದಿದೆ.

ಸಾಮ್ಯ:- ಸಂಖ್ಯೆ- ೧೭ ನಕ್ಷೆ- ೫೫k ಕೋರಾಪುರ ಡೋಆಬ್ (ಸಾಂಕಳಿಯಾ ಎಚ್.ಡಿ. ೧೯೭೫. ೨೨೧)

೪೮. ಓಬಳಾಪುರ:- ಕ್ವಾರ್ಟ್ಸ್‌ಶಿಲೆ. ಉದ್ದ ೪೦ ಅಗಲ ೨೨ ದಪ್ಪ ೧೨ ಮಿ.ಮೀ. ತ್ರಿಭುಜಾಕಾರ. ಮುಂಬದಿಯಲ್ಲಿ ಎರಡು ಆಳಚಕ್ಕೆ ತೆಗೆದು ಅಲಗು ಮೂಡಿಸಿದೆ. ಮೇಲ್ತುದಿ ಮತ್ತು ಕೆಳತುದಿಗಳೆರಡರಲ್ಲೂ ಮೊನೆ ಇದೆ. ಎಡಪಾರ್ಶ್ವ ಮತ್ತು ಬಲಪಾರ್ಶ್ವಗಳಲ್ಲಿ ಪುಡಿಗೆಲಸ ಮಾಡಿ ಗರಗಸದಂತೆ ಅಲಗನ್ನು ರೂಪಿಸಿದೆ. ಹಿಂಬದಿ ಅಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೨೯ ನಕ್ಷೆ- ೫೫L ಶೋರಾಪುರ ಡೋಅಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೨)

೪೯. ಯಕ್ಕಲಕಟ್ಟೆ:- ಅದಿರುಯುಕ್ತ ಕ್ವಾರ್ಟ್ಸ್‌ಶಿಲೆ. ಉದ್ದ ೪೦ ಅಗಲ ೩೦ ದಪ್ಪ ೧೫ ಮಿ.ಮೀ. ಅಸಮ ಚತುರ್ಭುಜಾಕಾರ.
ಮುಂಬದಿಯಲ್ಲಿ ಚಕ್ಕೆಕಲೆ ಮತ್ತು ಉಬ್ಬೇಣು ಇದೆ. ಮೇಲ್ತುದಿ ಹರಿತವಾದ ಮೊನೆ ಹೊಂದಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳ ಮೇಲ್ಬದಿಯಲ್ಲಿ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಮುಂಬದಿ ಅಸಮತಲವಾಗಿದೆ. ಚಕ್ಕೆ ಕಲೆಗಳಿವೆ. ಉಬ್ಬೇಣು ಇದೆ. ತಾಡನ ವೇದಿಕೆ ಮತ್ತು ಶಂಖುವಿದೆ.

ಸಾಮ್ಯ:- ಸಂಖ್ಯೆ- ೪ ನಕ್ಷೆ- ೫೫ m ಬಿಂಬೇಟ್ಕ (ಸಾಂಕಳಿಯಾ.ಎಚ್.ಡಿ:೧೯೭೫;೨೨೫)

೫೦. ಗುರಮ್ಮನಕಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೩೮ ಅಗಲ ೨೦ ದಪ್ಪ ೧೫ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬು ಇದೆ. ಆಳಚಕ್ಕೆ ತೆಗೆದಿದೆ. ಉಬ್ಬೇಣುಗಳಿವೆ. ಮೇಲ್ತುದಿ ಮತ್ತು ಕೆಳತುದಿಗಳಲ್ಲಿ ಮೊನೆ ಇದೆ. ಬಲಪಾರ್ಶ್ವ ಹರಿತವಾಗಿದೆ. ಎಡಪಾರ್ಶ್ವ ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೮ ನಕ್ಷೆ- ೫೫ k ಶೋರಾಪುರ ಡೋಅಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೫೧. ದೊಡ್ಡಗುಣಿ:- ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೨೫ ದಪ್ಪ ೧೦ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಸಣ್ಣ ಚಕ್ಕೆಕಲೆಗಳಿವೆ. ಉಬ್ಬೇಣು ಇದೆ. ಮೇಲ್ತುಟ ಮತ್ತು ಎಡಪಾರ್ಶ್ವದ ಮಧ್ಯದಲ್ಲಿ ಮೊನೆ ಇದ್ದು ಹರಿತ ಅಲಗನ್ನೂ ಹೊಂದಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ತಾಡನ ಶಂಖು ಇದೆ.

ಸಾಮ್ಯ:- ಸಂಖ್ಯೆ- ೨೬ ನಕ್ಷೆ- ೫೫k ಶೋರಾಪುರ ಡೋಅಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)




೪೬




೪೭




೪೮




೪೯




ಗಾತ್ರ ೧:೧




**ತ್ರಿಭುಜಾಕಾರದ ಮೊನೆ**

೫೨. ಗುರಮ್ಮನಕಟ್ಟೆ:- ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೩೫ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡು ಚಕ್ಕೆ ತೆಗೆದು ಅಲಗು ಮೂಡಿಸಿದೆ. ಮೇಲ್ತುದಿಯಲ್ಲಿ ಮೊಂಡು ಮೊನೆ ಇದೆ. ಕೆಳತುದಿ ಅಗಲವಾಗಿದ್ದು ದಪ್ಪವಾಗಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗಿದೆ. ಎಡಪಾರ್ಶ್ವದ ಅಲಗು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೨೧ ನಕ್ಷೆ- ೫೫k ಶೋರಾಪುರ ಡೋಆಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೫೩. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೩೫ ಅಗಲ ೩೦ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೂರು ಚಕ್ಕೆ ತೆಗೆದಿದೆ. ಚಕ್ಕೆ ಕಲೆ ಇದೆ. ಮೇಲ್ತುದಿಯಲ್ಲಿ ಮೊನೆ ಇದೆ. ಕೆಳತುದಿ ತೆಳು ಅಲಗಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಮೂಲಶಿಲಾ ತೊಗಟೆ ಅಂಶವಿದೆ. ಅಡ್ಡವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೫೦ ನಕ್ಷೆ- ೫೫D ರೇಣಿಗುಂಟ (ಸಾಂಕಳಿಯಾ.ಎಚ್.ಡಿ:೧೯೭೫;೨೧೧)




ಗಾತ್ರ ೧:೧




**ಎಲೆಯಾಕಾರದ ಮೊನೆ**

೫೪. ನಿಡುಗಲ್ಲು:- ಡಾಲರೈಟ್ ಶಿಲೆ. ಉದ್ದ ೪೫ ಅಗಲ ೩೩ ದಪ್ಪ ೧೦ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣ ಸಣ್ಣ ಚಕ್ಕೆ ತೆಗೆದ ಕಲೆಗಳಿವೆ. ಮೇಲ್ತುದಿ ಮೊನೆ ಮೊಂಡಾಗಿದೆ. ಕೆಳತುದಿಗೆ ಹಿಡಿಕೆ ರೂಪಿಸಿದೆ. ಬಲಪಾರ್ಶ್ವ ಹರಿತ ಅಲಗು ಹೊಂದಿದೆ. ಎಡಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಪುಡಿಗೆಲಸ ಮಾಡಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೩೦ ನಕ್ಷೆ- ೫೫ L ಶೋರಾಪುರ ಡೋಆಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೨)

೫೫. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೪೫ ಅಗಲ ೨೫ ದಪ್ಪ ೧೨ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಇದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತವಾಗಿದೆ. ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೫ ನಕ್ಷೆ- ೫೫ ಆ ವೇಮುಲಾ (ಸಾಂಕಳಿಯಾ.ಎಚ್.ಡಿ:೧೯೭೫;೨೧೪)

೫೬. ಬೊಮ್ಮೇನಹಳ್ಳಿ:- ಬಿಳಿ ಕ್ವಾರ್ಟ್ಸ್‌ಶಿಲೆ. ಉದ್ದ ೩೦ ಅಗಲ ೧೫ ದಪ್ಪ ೧೦ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆಕಲೆಗಳಿವೆ. ಮೇಲ್ತುದಿ ಮೊನೆ ಇದೆ. ಕೆಳತುದಿ ಹಿಡಿಕೆ ಇದೆ. ಎರಡೂ ಪಾರ್ಶ್ವಗಳು ದಪ್ಪವಾಗಿದ್ದು ಮೊಂಡಾಗಿವೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೧೮ ನಕ್ಷೆ- IV (ಪೂಣಚ್ಚ.ಕೆ.ಪಿ:೧೯೯೨;೩೦೨)

೫೭. ಮೂಗನಾಯಕನಕೋಟೆ ಪೂರ್ವ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೨೨ ದಪ್ಪ ೧೦ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದಿದೆ. ಬಲಪಾರ್ಶ್ವದ ಮೇಲ್ಬದಿ ಹರಿತ ಅಲಗನ್ನು ಹೊಂದಿದೆ. ಕೆಳಬದಿ ಮೊಂಡಾಗಿದೆ. ಎಡಪಾರ್ಶ್ವ ಮೊಂಡಾಗಿದೆ. ಮೇಲ್ತುದಿ ಮೊನೆ ಇದೆ. ಕೆಳತುದಿ ದಪ್ಪವಾಗಿ ಮೊಂಡಾಗಿದೆ ಹಿಡಿಕೆ ಇದೆ. ಹಿಂಬದಿ ಹೆಚ್ಚು ಕಡಿಮೆ ಅಸಮತಲವಾಗಿದೆ. ತಾಡನಶಂಖುವಿದೆ.

ಸಾಮ್ಯ:- ಸಂಖ್ಯೆ - ೨೬ - ನಕ್ಷೆ - ೫೫ ಕೆ ಶೋರಾಪುರ ಡೋ ಆಬ್ (ಸಾಂಕಳಿಯಾ ಎಚ್.ಡಿ. ೧೯೭೫. ೨೨೧)




ಗಾತ್ರ ೧:೧



೫೮. ಮೂಗನಾಯಕನಕೋಟೆ ಪೂರ್ವ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೪೫ ಅಗಲ ೨೮ ದಪ್ಪ ೧೫ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಮೇಲ್ತುದಿಯ ಎಡಕ್ಕೆ ಕೊಕ್ಕು ಮೂಡಿಸಿದೆ. ಹರಿತ ಅಲಗಿದೆ. ಕೆಳತುದಿ ತೆಳುವಾಗಿದೆ. ಬೆರಳಿಡಿಕೆಯಂತೆ ಚಕ್ಕೆ ತೆಗೆದಿದೆ. ಬಲಪಾರ್ಶ್ವ ಹರಿತವಾಗಿದೆ. ಎಡಪಾರ್ಶ್ವ ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೨ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೮)

೫೯. ಹೊನ್ನೇಮಾರನಹಳ್ಳಿ:- ಅದಿರುಯುಕ್ತ ಕಪ್ಪುಜಾಸ್ಪರ್ ಶಿಲೆ. ಉದ್ದ ೪೦ ಅಗಲ ೩೦ ದಪ್ಪ ೧೦ ಮಿ.ಮೀ. ಹೆಚ್ಚು ಕಡಿಮೆ ಆಯತಾಕಾರ. ಮುಂಬದಿ ಎರಡು ಉಬ್ಬೇಣುಗಳಿವೆ. ಮೇಲ್ತುದಿ ದಪ್ಪವಾಗದ್ದು ಬಲಕ್ಕೆ ಕೊಕ್ಕು ಮೂಡಿಸಿದೆ. ಎಡಪಾರ್ಶ್ವ ಮತ್ತು ಬಲಪಾರ್ಶ್ವಗಳೆರಡೂ ಹರಿತ ಅಲಗನ್ನು ಹೊಂದಿವೆ. ಕೆಳತುದಿ ತೆಳುವಾಗಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೨೫ ನಕ್ಷೆ- ೫೫ k ಶೋರಾಪುರ ಡೋಆಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೬೦. ಕರಡಿ:- ಕ್ವಾರ್ಟ್ಸ್‌ಶಿಲೆ. ಉದ್ದ ೪೫ ಅಗಲ ೩೦ ದಪ್ಪ ೧೫ ಮಿ.ಮೀ. ಹೆಚ್ಚು ಕಡಿಮೆ ಆಯತಾಕಾರ. ಮುಂಬದಿ ಮಧ್ಯ ಸಮತಲವಾಗಿದೆ. ಎಡಕ್ಕೆ ಆಳಚಕ್ಕೆ ತೆಗೆದಿದೆ. ಬಲಕ್ಕೆ ಸಣ್ಣ ಸಣ್ಣ ಚಕ್ಕೆ ತೆಗೆದಿದೆ. ಮೇಲ್ತುದಿ ಹರಿತ ಅಲಗಿದೆ. ಬಲಕ್ಕೆ ಕೊಕ್ಕು ಮೂಡಿಸಿದೆ. ಕೆಳತುದಿ ದಪ್ಪವಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ .
ಸಾಮ್ಯ:- ಸಂಖ್ಯೆ - ೩ ನಕ್ಷೆ - ೫೫ m ಬಿಂಬೇಡ್ಕ (ಸಾಂಕಳಿಯಾ.ಎಚ್.ಡಿ:೧೯೭೫;೨೨೫)




೫೮




೫೯




೬೦




ಗಾತ್ರ ೧:೧

**ಕಚ್ಚುಳ್ಳ ಮೊನೆ**

೬೧. ಶಿವಪುರ:- ಕ್ವಾರ್ಟ್ಜ್‌ಶಿಲೆ. ಉದ್ದ ೩೫ ಅಗಲ ೩೦ ದಪ್ಪ ೧೦ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಉಬ್ಬು ಇದೆ. ಮೇಲ್ತುದಿ ಮೊನೆ ಮೂಡಿಸಿದೆ. ಮೊನೆಯ ಎರಡೂ ಪಕ್ಕದಲ್ಲೂ ಕಚ್ಚುಗಳನ್ನೂ ಮಾಡಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನೂ ಹೊಂದಿವೆ. ಕೆಳತುದಿ ತೆಳುವಾಗಿ ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೨೯ ನಕ್ಷೆ- ೫೫ L . ಕೋರಾಪುರ ಡೋಆಬ್ (ಸಾಂಕಳಿಯಾ.ಎಚ್.ಡಿ:೧೯೬೫;೨೨೨)

೬೨. ಹೂವಿನಕಟ್ಟೆ:- ಕ್ವಾರ್ಟ್ಜ್‌ಶಿಲೆ. ಉದ್ದ ೩೫ ಅಗಲ ೨೫ ದಪ್ಪ ೧೦ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಎಡಕ್ಕೆ ಕೊಕ್ಕು ಇದೆ. ಕೊಕ್ಕಿನ ಕೆಳಗೆ ಕಚ್ಚುಗಳನ್ನು ಮೂಡಿಸಿದೆ. ಬಲಪಾರ್ಶ್ವ ಮೊಂಡಾಗಿದೆ. ಎಡಪಾರ್ಶ್ವ ಹರಿತವಾಗಿದೆ. ಕೆಳತುದಿ ದಪ್ಪವಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೨ ನಕ್ಷೆ- ೪.೧೪ (ರಾಜು.ಡಿ.ಆರ್:೧೯೮೮; ೫೫)

೬೩. ದೊಡ್ಡಗುಣಿ:- ಜಾಸ್ಪರ್ ಶಿಲೆ. ಉ. ೨೫ ಅ.೩೦ ದ. ೧೦ ಮಿ.ಮೀ. ಹೆಚ್ಚು ಕಡಿಮೆ ವೃತ್ತಾಕಾರ. ಮಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣಸಣ್ಣ ಚಕ್ಕೆ ತೆಗೆದಿದೆ. ಎರಡೂ ಪಾರ್ಶ್ವಗಳಲ್ಲೂ ಅಲಗಿದ್ದು ಮೊಂಡಾಗಿದೆ. ಬಲಪಾರ್ಶ್ವದ ಮೇಲ್ತುದಿಯಲ್ಲಿ ಮೊನೆ ರೂಪಿಸಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದೆ. ತಾಡನ ವೇದಿಕೆ ಮತ್ತು ಶಂಖುವಿದೆ. ಪುಡಿಗೆಲಸ ಮಾಡಿದೆ.

ಸಾಮ್ಯ:- ಸಂಖ್ಯೆ- ೧೯ ನಕ್ಷೆ- ೪.೧೬ ಕಲ್ಲಡಗಿ ಬೇಸಿನ್ ( ಪಪ್ಪು.ಆರ್.ಎಸ್:೧೯೯೪;೪೮)




೬೧




೬೨







ಗಾತ್ರ ೧:೧

೬೩

**ಕೊರೆಗ**

೬೪. ಮಿಡಿಗೇಶಿ:- ಕ್ವಾರ್ಟ್ಜ್‌ಶಿಲೆ. ಉದ್ದ ೪೦ ಅಗಲ ೩೨ ದಪ್ಪ ೧೦ ಮಿ.ಮೀ. ಅನಿರ್ದಿಷ್ಟ ಆಕಾರ. ತೆಳ್ಳನೆಯ ಹೆರೆಚಕ್ಕೆ ಚಕ್ಕೆಯ ಮೇಲೆ ರೂಪಿತವಾಗಿದೆ. ಮುಂಬದಿಯಲ್ಲಿ ಹಲವಾರು ಚಕ್ಕೆಕಲೆಗಳಿವೆ. ಎಡಬದಿ ಮೂಲಶಿಲಾ ತೊಗಟೆ ಸ್ವಲ್ಪ ಭಾಗ ಉಳಿದಿದೆ. ಬಲತುದಿ ಹರಿತ ಅಲಗು ಮೇಲ್ತುದಿಯಲ್ಲಿ ಎರಡೂ ಪಾರ್ಶ್ವಗಳಲ್ಲೂ ಕಚ್ಚು ತೆಗೆದು ಮುಂಚಾಚಿದ ಅಲಗು ರೂಪಿಸಿದೆ. ಅಲಗಿನ ಮೇಲ್ಭಾಗ ಭಗ್ನವಾಗಿದ್ದು ಮೊಂಡಾಗಿದೆ. ಕೆಳತುದಿ ಅಗಲವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲ.

ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೫೫ ಠ ವೇಮುಲಾ (ಸಾಂಕಳಿಯಾ.ಎಚ್.ಡಿ:೧೯೬೫;೨೧೪)

೬೫. ಸಾಲುಕಟ್ಟೆ:- ಕ್ವಾರ್ಟ್ಜ್‌ಶಿಲೆ. ಉದ್ದ ೪೦ ಅಗಲ ೨೫ ದಪ್ಪ ೧೫ ಮಿ.ಮೀ. ತ್ರಿಭುಜಾಕಾರ. ಮುಂಬದಿಯ ಮಧ್ಯದಲ್ಲಿ ದಪ್ಪಗಿದ್ದು ಮೂರೂ ಭುಜಗಳ ಕಡೆಗೆ ಆಳವಾದ ಚಕ್ಕೆಕಲೆಗಳಿವೆ. ಮಧ್ಯ ಉಬ್ಬು ಅಂಕುಡೊಂಕಾಗಿ ಸಾಗಿದೆ. ಎರಡೂ ಪಾರ್ಶ್ವಗಳೂ ಹರಿತಾಗಿದ್ದು ಉದ್ದವಾದ ಕೊರೆಯುವ ತುದಿಯನ್ನು ರೂಪಿಸಿದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ. ಕೊರೆಯುವ ಮೇಲ್ತುದಿಯ ಬಲಪಾರ್ಶ್ವಕ್ಕೆ ಹೊಂದಿಕೊಂಡಂತೆ

ಮುಂಚಾಚಿದೆ. ಕೆಳತುದಿ ಅಗಲವಾಗಿದ್ದು ಹರಿತವಾಗಿದೆ. ಸಮತಲವಲ್ಲದ ಹಿಂಬದಿ ಪೂರ್ಣ ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ.
ಸಾಮ್ಯ:- ಸಂಖ್ಯೆ- ೨೦ ನಕ್ಷೆ- ೫೫ k ಶೋರಾಪುರ ಡೋಅಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೭೬. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್‌ಶಿಲೆ. ಉದ್ದ ೨೫ ಅಗಲ ೩೦ ದಪ್ಪ ೧೫ ಮಿ.ಮೀ. ವಜ್ರಾಕೃತಿ. ಮುಂಬದಿಯ ಬುಡ ದಪ್ಪವಾಗಿದ್ದು ಎರಡು ಅಳಚಕ್ಕೆಗಳನ್ನು ತೆಗೆದು ಚೂಪಾದ ಉದ್ದನೆಯ ಕೊರೆಯುವ ತುದಿಯನ್ನು ರೂಪಿಸಿದೆ. ಪಾರ್ಶ್ವಗಳೆರಡೂ ಮೇಲ್ಭಾಗದಲ್ಲಿ ಹರಿತವಾಗಿವೆ. ಕೆಳಭಾಗ ದಪ್ಪವಾಗಿದೆ. ಬುಡದ ಬಲಭಾಗದಲ್ಲಿ ಗಪ್ಪಗಿದ್ದು ಮೂಲಶಿಲಾ ತೊಗಟೆ ಅಂಶ ಉಳಿದಿದೆ. ಹಿಂಬದಿ ಸಮತಲವಾಗಿದೆ.
ಸಾಮ್ಯ:- ಸಂಖ್ಯೆ-೨೪ ನಕ್ಷೆ- ೪.೧೭ ಕಲ್ಲಡಗಿ ಬೇಸಿನ್ (ಪಪ್ಪು.ಆರ್.ಎಸ್:೧೯೯೪;೪೮)

೭೭. ಕೈಮರ:- ಕ್ವಾರ್ಟ್ಸ್‌ಶಿಲೆ. ಉದ್ದ ೩೩ ಅಗಲ ೨೫ ದಪ್ಪ ೧೦ ಮಿ.ಮೀ. ಚತುರ್ಭುಜಾಕಾರ. ಮುಂಬದಿ ಬಲಭಾಗದಲ್ಲಿ ಮೂರು ಕಡೆಗೆ ತೆಳುಚಕ್ಕೆಗಳನ್ನೆಬ್ಬಿಸಿದೆ. ಮಧ್ಯದಲ್ಲಿ ಸ್ವಲ್ಪ ಉಬ್ಬಿದೆ. ಎರಡು ಪಾರ್ಶ್ವ ಹಾಗೂ ಮೇಲ್ಬಗ ಹರಿತವಾಗಿದೆ. ಕೊರೆಯುವ ಮೊನೆ ಬಲಪಾರ್ಶ್ವಕ್ಕೆ ಹೊಂದಿಕೊಂಡಿದೆ. ಎಡಪಾರ್ಶ್ವದ ಮೇಲ್ತುದಿಯಲ್ಲಿ ಮತ್ತು ಬುಡದಲ್ಲಿ ಮೂಲ ಶಿಲಾ ತೊಗಟೆ ಅಂಶ ಉಳಿದಿದೆ. ಹಿಂಬದಿ ಸಮತಲ. ಬುಡದಲ್ಲಿ ತಾಡನಶಂಖು ಕಾಣುತ್ತದೆ.
ಸಾಮ್ಯ:- ಸಂಖ್ಯೆ- ೨೨ ನಕ್ಷೆ- ೫೫ k ಶೋರಾಪುರ ಡೋಅಬ್ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೭೮. ಶಿವಪುರ:- ಕ್ವಾರ್ಟ್ಸ್‌ಶಿಲೆ. ಉದ್ದ ೩೦ ದಪ್ಪ ೪೦ ಅಗಲ ೧೦ ಮಿ.ಮೀ. ಅನೇಕ ತೆಳುಚಕ್ಕೆಕಲೆಗಳಿವೆ. ಮೇಲ್ತುದಿಯಲ್ಲಿ ಎರಡೂ ಪಾರ್ಶ್ವಗಳಿಂದ ಕಚ್ಚು ತೆಗೆದು ಸ್ವಲ್ಪ ಮುಂಚಾಚಿದ ಕೊರೆಯುವ ಮೊನೆಯನ್ನು ರೂಪಿಸಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಕೆಳತುದಿ ಅಗಲವಾಗಿದ್ದು ದಪ್ಪವಾಗಿದೆ. ಹಿಂಬದಿಯಲ್ಲಿ ಅನೇಕ ಚಕ್ಕೆ ಕಲೆಗಳಿದ್ದು ಹೀನವಾಗಿದೆ.
ಸಾಮ್ಯ:- ಅಪರೂಪದ ಉಪಕರಣ.




೭೪




೭೫




೭೬




೭೭




ಗಾತ್ರ ೧:೧

೭೮



**ಕೊರೆಯುಳಿ**

೬೯. ಹೂವಿನಕಟ್ಟೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೫ ಅಗಲ ೨೨ ದಪ್ಪ ೧೨ ಮಿ.ಮೀ. ಆಯತಾಕಾರ. ಮುಂಬದಿಯ ಮಧ್ಯದಲ್ಲಿ ಉಬ್ಬೇಣು ಇದೆ. ಎರಡೂ ಪಾರ್ಶ್ವಗಳಲ್ಲಿ ಆಳ ಚಕ್ಕೆಕಲೆಗಳಿವೆ. ಮೇಲ್ತುದಿಯಲ್ಲಿ ಎರಡೂ ಬದಿಗಳಿಂದ ಕಚ್ಚು ತೆಗೆದು ಕೊಕ್ಕಿನ ಮೊನೆಯಂತಹ ಅಲಗನ್ನು ರೂಪಿಸಿದೆ. ಕೊರೆಯುಳಿ ಮೊನೆ ಬಲಪಾರ್ಶ್ವಕ್ಕಿದೆ. ಮೊನೆಯ ಪಕ್ಕಗಳಲ್ಲಿ ಮತ್ತು ಹಿಂಬದಿಯಲ್ಲಿ ಪುಡಿಗೆಲಸ ಕಾಣುತ್ತದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಕೆಳತುದಿ ದಪ್ಪಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೪೫ ನಕ್ಷೆ- ೫೫ d ರೇಣಿಗುಂಟಾ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೭೦. ಮೂಗನಾಯಕನಕೋಟೆ ಪಶ್ಚಿಮ:- ಜಾಸ್ಪರ್ ಶಿಲೆ. ಉದ್ದ ೪೦ ಅಗಲ ೨೮ ದಪ್ಪ ೧೮ ಮಿ.ಮೀ. ಅನಿರ್ದಿಷ್ಟ ಆಕಾರ. ಮಧ್ಯಮ ಗಾತ್ರದ ಮೂಲ ಶಿಲಾಗಟ್ಟಿಯಲ್ಲಿ ರೂಪಸಿದೆ. ಮುಂಬದಿ ಹಾಗೂ ಹಿಂಬದಿಗಳಲ್ಲಿ ಅನೇಕ ಚಕ್ಕೆಕಲೆಗಳಿವೆ. ಮೇಲ್ತುದಿ ಮತ್ತು ಕೆಳತುದಿಗಳನ್ನು ತುದಿ ಹೆರೆಚಕ್ಕೆಗಳಂತೆ ರೂಪಿಸಿ ನಿಯಮಿತ ಕೋನದಲ್ಲಿ ನಿಯಂತ್ರಿತ ಚಕ್ಕೆ ತೆಗೆದು ಕೊರೆಯುಳಿ ಅಲಗನ್ನು ರೂಪಿಸಿದೆ. ಪಾರ್ಶ್ವಗಳು ಮೊಂಡಾಗಿವೆ. ಮೇಲ್ತುದಿ ಮತ್ತು ಕೆಳತುದಿಗಳೆರಡರಲ್ಲೂ ಹರಿತ ಅಲಗಿದೆ.
ಸಾಮ್ಯ:- ಸಂಖ್ಯೆ- ೪೪ ನಕ್ಷೆ- ೫೫ C ರೇಣಿಗುಂಟಾ (ಸಾಂಕಳಿಯಾ.ಎಚ್.ಡಿ:೧೯೭೫;೨೨೧)

೭೧. ಹೂವಿನಕಟ್ಟೆ:- ಕ್ವಾರ್ಟ್ಜ಼ಶಿಲೆ. ಉದ್ದ ೩೦ ಅಗಲ ೧೫ ದಪ್ಪ ೮. ಮಿ.ಮೀ. ತ್ರಿಕೋನಾಕಾರ. ಮುಂಬದಿಯಲ್ಲಿ ಅನೇಕ ಚಕ್ಕೆಕಲೆಗಳಿವೆ. ದೋಷಯುಕ್ತ ಶಿಲೆಯಾದ್ದರಿಂದ ಚಕ್ಕೆಗಳನ್ನು ಸರಿಯಾಗಿ ತೆಗೆಯಲು ಸಾಧ್ಯವಾಗಿಲ್ಲ. ಎಡಪಾರ್ಶ್ವ ಹರಿತವಾಗಿದೆ. ಬಲಪಾರ್ಶ್ವ ದಪ್ಪಗಿದ್ದು ಮೊಂಡಾಗಿದೆ. ಮೇಲ್ತುದಿ ಅಲಗಿದ್ದು ಎರಡೂ ಬದಿಗಳಿಂದ ಚಕ್ಕೆ ತೆಗೆದು ಉದ್ದೇಶಿತ ಅಲಗನ್ನು ರೂಪಿಸಿದೆ. ಕೆಳತುದಿ ಅಗಲವಾಗಿದ್ದು ದಪ್ಪವಾಗಿದೆ.
ಸಾಮ್ಯ:- ಸಂಖ್ಯೆ- ೨೦ ನಕ್ಷೆ- ೫೫ C ರೇಣಿಗುಂಟಾ (ಸಾಂಕಳಿಯಾ.ಎಚ್.ಡಿ:೧೯೭೫;೨೧೧)

೭೨. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೩ ಅಗಲ ೨೨ ದಪ್ಪ ೧೦ ಮಿ.ಮೀ. ಎಲೆಯಾಕಾರ. ಸಮಾನಾಂತರ ಪಾರ್ಶ್ವಗಳ ನೀಳಚಕ್ಕೆಯನ್ನು ಬದಿಗಳಿಂದ ಕತ್ತರಿಸಿ ಮಧ್ಯದಲ್ಲಿ ಲಂಬಕೋನದಲ್ಲಿ ಚಕ್ಕೆ ತೆಗೆದು ಉದ್ದೇಶಿತ ಮೊನೆಯನ್ನು ರೂಪಿಸಿದೆ. ಮುಂಬದಿಯ ಮಧ್ಯ ಭಾಗದಲ್ಲಿ ಉಬ್ಬೇಣಿದೆ. ಎರಡೂ ಪಾರ್ಶ್ವಗಳೂ ಹರಿತವಾಗಿದೆ. ಹೆಚ್ಚಿನ ಭಾಗದಲ್ಲಿ ಮೂಲ ಶಿಲಾತೊಗಟೆ ಅಂಶವಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಮೇಲೆ ಮತ್ತು ಕೆಳತುದಿಗಳೆರಡರಲ್ಲೂ ಕೊರೆಯುಳಿ ಅಲಗು ರೂಪಿಸಿದೆ.
ಸಾಮ್ಯ:- ಸಂಖ್ಯೆ- ೧೯ ನಕ್ಷೆ- ೫೫ C ರೇಣಿಗುಂಟಾ (ಸಾಂಕಳಿಯಾ.ಎಚ್.ಡಿ:೧೯೭೫;೨೧೧)

೭೩. ಮೂಗನಾಯಕನಕೋಟೆ ಉತ್ತರ:- ಕ್ವಾರ್ಟ್ಜ಼ಶಿಲೆ. ಉದ್ದ ೩೦ ಅಗಲ ೨೦ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿಯಲ್ಲಿ ಅನೇಕ ಚಕ್ಕೆಕಲೆಗಳಿವೆ. ಬಲಪಾರ್ಶ್ವ ಮೊಂಡಾಗಿದ್ದು ಎಡಪಾರ್ಶ್ವದಲ್ಲಿ ಹರಿತ ಅಲಗಿದೆ. ಮೇಲ್ತುದಿಯಲ್ಲಿ ಎಡಪಾರ್ಶ್ವಕ್ಕೆ ಲಂಬಕೋನದಲ್ಲಿ ಒಂದೇ ಹೊಡೆತದಿಂದ ಕೊರೆಯುಳಿ ಅಲಗು ರೂಪಿಸಿದೆ. ಹಿಂಬದಿಯಲ್ಲಿ ಕಿರುಚಕ್ಕೆಗಳನ್ನೆಬ್ಬಿಸಿ ಮೇಲ್ತುದಿಗೆ ಹೆಚ್ಚು ಬಲ ನೀಡಿದೆ. ಕೆಳತುದಿ ಅಗಲವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ.
ಸಾಮ್ಯ:- ಸಂಖ್ಯೆ- ೧೬ ನಕ್ಷೆ- ೫೫ C ರೇಣಿಗುಂಟಾ (ಸಾಂಕಳಿಯಾ.ಎಚ್.ಡಿ:೧೯೭೫;೨೧೧)




೧೯




೨೦




೨೧




೨೨




೨೩

ಗಾತ್ರ ೧:೧




**ಬಾಣದ ಮೊನೆ**

೨೪. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೫೦ ಅಗಲ ೪೫ ದಪ್ಪ ೧೫ ಮಿ.ಮೀ. ನಿರ್ದಿಷ್ಟ ಆಕಾರವಿಲ್ಲ. ಮುಂಬದಿ ಮಧ್ಯ ಉಬ್ಬು ಇದೆ. ಚಕ್ಕೆ ತೆಗೆದಿದೆ. ಏಣುಗಳಿವೆ. ಮೇಲ್ತುದಿ ಮೊನೆ ಇದೆ. ಎರಡೂ ಪಾರ್ಶ್ವ ಹರಿತವಾಗಿದೆ. ಕೆಳತುದಿ ದಪ್ಪವಿದೆ. ಹಿಂಬದಿ ತಾಡನಶಂಖುವಿದೆ. ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೪ ನಕ್ಷೆ- ೫೫ θ ವೇಮುಲ (ಸಾಂಕಳಿಯಾ.ಎಚ್.ಡಿ:೧೯೭೫;೨೧೪)

೨೫. ಶೆಟ್ಟಿಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೫೦ ಅಗಲ ೩೫ ದಪ್ಪ ೧೫ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದೆ. ಹರಿತ ಅಲಗು ವೃತ್ತಾಕಾರವಾಗಿದೆ. ಬಲಪಾರ್ಶ್ವಕ್ಕೆ ತೆಳು ಚಕ್ಕೆ ತೆಗೆದಿದೆ. ಮೊಂಡಾಗಿದೆ . ಮೇಲ್ತುದಿ ಮೊನೆ ಇದೆ. ಕೆಳತುದಿ ತೆಳುವಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೪ ನಕ್ಷೆ- ೫೫ h ಕರ್ನೂಲ್ ಜಿಲ್ಲೆ (ಸಾಂಕಳಿಯಾ.ಎಚ್.ಡಿ:೧೯೭೫;೨೧೮)




೨೪




೨೫

ಗಾತ್ರ ೧:೧




**ಅರ್ಧಚಂದ್ರಾಕೃತಿ**

೭೬. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೪೫ ದಪ್ಪ ೧೦ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಚಕ್ಕೆಕಲೆಗಳಿವೆ. ಎಡಪಾರ್ಶ್ವ ತೆಳುವಾಗಿ ಹರಿತವಾಗಿದೆ. ಬಲಪಾರ್ಶ್ವ ದಪ್ಪಗಿದ್ದು ಮೊಂಡಾಗಿದೆ. ಮೇಲ್ತುದಿಯಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಕೆಳತುದಿ ಹರಿತ ಅಲಗನ್ನು ಹೊಂದಿದೆ. ಹಿಂಬದಿ ಸಮತಲವಾಗಿದೆ. ತಾಡನಶಂಖುವಿದೆ.
ಸಾಮ್ಯ:- ಸಂಖ್ಯೆ- ೧೫ ನಕ್ಷೆ- ೫೫ ಆ ವೇಮುಲ (ಸಾಂಕಳಿಯಾ.ಎಚ್.ಡಿ:೧೯೭೫;೨೧೪)

೭೭. ಮಿಡಿಗೇಶಿ:- ಕ್ವಾರ್ಟ್ಸೈಟ್ ಶಿಲೆ. ಉದ್ದ ೨೦ ಅಗಲ ೪೦ ದಪ್ಪ ೧೨ ಮಿ.ಮೀ. ಅರ್ಧಚಂದ್ರಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಸಣ್ಣ ಸಣ್ಣ ಚಕ್ಕೆ ತೆಗೆದಿದೆ. ಎರಡೂ ಪಾರ್ಶ್ವಗಳಲ್ಲೂ ಮೊನೆ ಇದೆ. ಮೇಲ್ತುದಿ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ಹರಿತ ಅಲಗಿದೆ. ವೃತ್ತಾಕಾರವಾಗಿದೆ. ಹಿಂಬದಿ ಚಕ್ಕೆ ಕಲೆಗಳಿವೆ.
ಸಾಮ್ಯ:- ಸಂಖ್ಯೆ- ೧೬ ನಕ್ಷೆ- ೫೫ ಆ ವೇಮುಲ (ಸಾಂಕಳಿಯಾ.ಎಚ್.ಡಿ:೧೯೭೫;೨೧೪)

೭೮. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೫ ಅಗಲ ೪೦ ದಪ್ಪ ೧೫ ಮಿ.ಮೀ. ಅರ್ಧಚಂದ್ರಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ಪಾರ್ಶ್ವಗಳಲ್ಲೂ ಮೊನೆ ಇದೆ. ಮೇಲ್ತುದಿ ಅಲಗು ವಕ್ರರೇಖೆಯಲ್ಲಿದೆ. ಕೆಳತುದಿ ಅಲಗು ವೃತ್ತಾಕಾರವಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೪ ನಕ್ಷೆ- ೫೫ ಆ ವೇಮುಲ (ಸಾಂಕಳಿಯಾ.ಎಚ್.ಡಿ:೧೯೭೫;೨೧೪)
(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)




ಗಾತ್ರ ೧:೧



ಅಧ್ಯಾಯ ಏಳು

# ಸೂಕ್ಷ್ಮ ಶಿಲಾಯುಗ ಸಂಸ್ಕೃತಿ

ಸುಮಾರು ೧೮೬೭ರ ವೇಳೆಗೆ ಎ.ಸಿ.ಎಲ್.ಕಾರ್ಲೈಲ್ (೧೮೭೪) ಉತ್ತರ ಪ್ರದೇಶ ಮತ್ತು ಮಧ್ಯ ಪ್ರದೇಶ-ದಲ್ಲಿ ಹರಡಿರುವ ಕೈಮಾರ್ ಬೆಟ್ಟ ಸಾಲಿನ ಸಾಮೂಹಿಕ ಗುಹೆಗಳಲ್ಲಿ ಮೊದಲ ಬಾರಿಗೆ ಸೂಕ್ಷ್ಮಶಿಲಾ ಉಪಕರಣಗಳನ್ನು ಶೋಧಿಸಿದರು. ಅಂದಿನಿಂದ ಇಂದಿನವರೆಗೆ ಭಾರತದ ಹಾಗೂ ಐರೋಪ್ಯ ದೇಶಗಳ ಹಲವಾರು ಸಂಶೋಧಕರ ಸತತ ಪ್ರಯತ್ನದಿಂದ ಭಾರತಾದ್ಯಂತ ಹರಡಿರುವ ಅನೇಕ ಸೂಕ್ಷ್ಮಶಿಲಾಯುಗ ನಿವೇಶನಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಪಾಚ್‌ಮರ್ಹಿ (ಹಂಟರ್:೧೯೩೫-೩೭;೧೩೧ ಮತ್ತು ೧೩೭) ಕೌಡುವಿಲಿ ಮತ್ತು ಜಾಲಹಳ್ಳಿ (ಗಾರ್ಡನ್ ಚೈಲ್ಡ್:೧೯೩೮), ಸಂಗನಕಲ್ಲು (ಸುಬ್ಬಾರಾವ್:೧೯೪೮) ಅಮ್ರಾಪುರ್ (ಸುಬ್ಬಾರಾವ್:೧೯೫೨), ಟೆರ್ರಿ ನೆಲೆ-ಗಳು (ಜ್ಯೂನರ್ ಮತ್ತು ಅಲ್ಚಿನ್:೧೯೫೬;೪-೨೦), ಕಿಬ್ಬನಹಳ್ಳಿ (ಶೇಷಾದ್ರಿ:೧೯೫೬), ಬೀರ್‌ಬಾನ್‌ಪುರ್ (ಲಾಲ್:೧೯೫೮), ಕುಚಾಯ್ (ಇಂ.ಆ.ರಿ:೧೯೬೧-೨;೩೬), ಲಾಂಗ್‌ನಾಜ್ (ಸಾಂಕಳಿಯಾ:೧೯೬೫), ಮೊರ್‌ಹಾನ ಪಹರ್ (ಶರ್ಮಾ:೧೯೬೫), ದೇವ್ನಿಮೋರಿ (ಮಲಿಕ್:೧೯೬೬), ಚಿತ್ತೂರು ಜಿಲ್ಲೆಯ ನೆಲೆಗಳು (ಮೂರ್ತಿ:೧೯೭೦), ಪಾಚದ್ (ಜೋಶಿ ಮತ್ತು ಬೊಪರ್ಡಿಕರ್:೧೯೭೨;೪೭-೫೭), ಬಾಗೋರ್ (ಮಿಶ್ರ:೧೯೭೩;೯೨-೧೧೦) ಸರಯ್ ನಹರ್ ರಾಯ್ (ಶರ್ಮಾ:೧೯೭೩;೧೨೯-೪೬), ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ:೧೯೭೫) ಭೀಮ್‌ಬೇಟ್ಕ (ವಾಕಂಕರ್:೧೯೭೬;೭-೨೯), ಅಧಮ್‌ಘರ್ (ಜೋಶಿ:೧೯೭೮) ಮತ್ತು ಚೋಪಾನಿ-ಮಂಡೋ (ಶರ್ಮಾ:೧೯೮೦).

ಶೋರಾಪುರ ಡೋ ಆಬ್ ನೆಲೆಗಳು (ಪದ್ದಯ್ಯ:೧೯೭೦;೧೬೫-೧೯೦), ವಾಯುವ್ಯ ಒರಿಸ್ಸಾ (ತ್ರಿಪಾಠಿ:೧೯೭೨), ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆ (ಇಂ.ಆ.ರಿ:೧೯೭೫-೭೬;೧೯), ಕೃಷ್ಣಾ ನದೀ ಪಾತ್ರ (ಪಪ್ಪು:೧೯೭೪) ಇಂದ್ರಾವತಿ ಕಣಿವೆ (ನಂದಾ:೧೯೮೫) ದಕ್ಷಿಣ ಕನ್ನಡ ಜಿಲ್ಲೆಯ ಮಣಿ ಮತ್ತು ಉಪ್ಪಿನಂಗಡಿ (ರಾಜೇಂದ್ರನ್:೧೯೮೩;೧೩೩-೩೭) ಉತ್ತರ ಕೇರಳದ ಮಲ್ಲಪುಜಾ ನದೀ ಪ್ರದೇಶ (ರಾಜೇಂದ್ರನ್:೧೯೮೫), ಬೀದರ್ ಜಿಲ್ಲೆಯ ಮಾಜ್ರಾ ಮತ್ತು ಕಾರಂಜಾ ಕಣಿವೆ ಪ್ರದೇಶ (ಷಡಕ್ಷರಯ್ಯ:೧೯೯೫)ದ ನೆಲೆಗಳು ಇನ್ನಿತರ ಪ್ರಮುಖ ನೆಲೆಗಳಾಗಿವೆ ಮಲೆನಾಡು ಪ್ರದೇಶದ ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲಾ ಪ್ರದೇಶ (ಪೂಣಚ್ಚ:೧೯೯೦). ಬೀರ್‌ಬಾನ್-ಪುರ (ಲಾಲ್:೧೯೫೮;೧-೨೦), ಅಧಮ್‌ಘರ್ (ಇಂ.ಆ.ರಿ:೧೯೬೦-೬೧;೧೩) ಲಾಂಗ್‌ನಾಜ್ (ಸಾಂಕಳಿಯಾ: ೧೯೬೫) ಬೀಮ್‌ಬೇಟ್ಕ(ವಾಕಂಕರ್:೧೯೭೩;೨೩-೨೨), ಸರಾಯ್ ನಹರ್ ರಾಯ್(ಶರ್ಮಾ: ೧೯೭೩;೧೨೯-೪೬),

ಬಾಗೋರ್ (ಮಿಶ್ರ.ವಿ.ಎನ್:೧೯೭೩:೯೨-೧೧೦) ಮುಂತಾದ ಸ್ಥಳಗಳಲ್ಲಿ ನಡೆದಿರುವ ಉತ್ಖನನಗಳು ಸೂಕ್ಷ್ಮ ಶಿಲಾಯುಗದ ಜನರ ಆಹಾರ ಪದ್ಧತಿ, ವಸತಿ ಕ್ರಮ, ಮಣ್ಣಿನ ಪಾತ್ರೆಗಳು, ಶವ ಸಂಸ್ಕಾರ ಪದ್ಧತಿ ಮುಂತಾದ ಅಂಶಗಳ ಬಗ್ಗೆ ಕುತೂಹಲಕರವಾದ ಅನೇಕ ಮಾಹಿತಿಗಳನ್ನು ದೊರಕಿಸಿವೆ. ಭಾರತದ ವಿವಿಧ ಪ್ರದೇಶಗಳಲ್ಲಿ ಬೆಳಕಿಗೆ ಬಂದಿರುವ ಆ ಕಾಲದ ಬಂಡೆಯ ಮೇಲಿನ ವರ್ಣ ಚಿತ್ರಗಳು ಆ ಜನರ ಸಾಂಸ್ಕೃತಿಕ ಸಾಮಾಜಿಕ ಹಾಗೂ ಆರ್ಥಿಕ ಪದ್ಧತಿ, ನಂಬಿಕೆಗಳ ಬಗೆಗೆ ನೀಡುವುದರ ಜೊತೆಗೆ ಅವರ ಕಲೆಗಾರಿಕೆಯನ್ನೂ ತೋರಿಸುತ್ತದೆ.

ಕರ್ನಾಟಕದಲ್ಲಿ ಸೂಕ್ಷ್ಮ ಶಿಲಾಯುಗದ ನಿವೇಶನಗಳು ೧೯೩೯ರ ವೇಳೆಗೆ ಶೋಧಿಸಲಾಗಿದ್ದರೂ ಆ ಉಪಕರಣಗಳ ವಿಶೇಷ ವೈಜ್ಞಾನಿಕ ಅಧ್ಯಯನ ಆರಂಭವಾದದ್ದು ೧೯೫೭ರ ನಂತರವೇ, ಬ್ರಹ್ಮಗಿರಿ ಉತ್ಖನನ (ವೀಲರ್:೧೯೪೮ :೧೮೦-೨೭೦) ದಲ್ಲಿ ಈ ಉಪಕರಣಗಳು ಗಮನಾರ್ಹ ಸಂಖ್ಯೆಯಲ್ಲಿ ದೊರೆತಿದ್ದರೂ ಅವುಗಳನ್ನು ನಿರ್ದಿಷ್ಟ ಹಾಗೂ ಪ್ರತ್ಯೇಕ ಸ್ತರಗಳಲ್ಲಿ ಗುರುತಿಸಲಾಗದೆ, ನೂತನ ಶಿಲಾಯುಗಕ್ಕೆ ಸಂಬಂಧಿಸಿದವುಗಳೆಂದೇ ಭಾವಿಸಲಾಗಿತ್ತು. ಆದರೆ ಸಾಂಕಳಿಯಾ ಅವರು ಸಂಗನಕಲ್ಲುನಲ್ಲಿ ನಡೆಸಿದ ಉತ್ಖನನ (೧೯೬೯) ದಲ್ಲಿ ಈ ಸಂಸ್ಕೃತಿಯನ್ನು ನಿರ್ದಿಷ್ಟ ಕಾಲಮಾನದಲ್ಲಿದ್ದ ಪ್ರತ್ಯೇಕ ಸಂಸ್ಕೃತಿಯೆಂದು, ಕರ್ನಾಟಕ ಪ್ರದೇಶದಲ್ಲಿ ಮೊದಲ ಬಾರಿಗೆ ಗುರುತಿಸಲಾಯಿತು. ಹಾಗಿದ್ದರೂ ಕಿರಿದಾದ ಗಾತ್ರದ, ವಿವಿಧ ರೀತಿಯ ಉಪಕರಣಗಳನ್ನು ಹೊಂದಿರುವ ಸಂಸ್ಕೃತಿಯಾಗಿ ಮಾತ್ರ ಗುರುತಿಸಲಾಯಿತಲ್ಲದೆ ಅವರ ಜೀವನ ವಿಧಾನದ ಇನ್ನಾವುದೇ ಅಂಶಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ.

ಇದುವರೆಗೆ ಕರ್ನಾಟಕದಲ್ಲಿ ನಡೆದ ಸ್ಥಳ ಪರಿಶೋಧನೆ ಹಾಗೂ ಉತ್ಖನನಗಳಿಂದ ಸೂಕ್ಷ್ಮ ಶಿಲಾಯುಗದ ಎರಡು ರೀತಿಯ ನಿವೇಶನಗಳು ಬೆಳಕಿಗೆ ಬಂದಿವೆ. ಮೊದಲನೆಯದು ಕಿಬ್ಬನಹಳ್ಳಿ, ಜಾಲಹಳ್ಳಿ ಮುಂತಾದ ನೆಲೆಗಳಲ್ಲಿ ಕಾಣುವಂತಹ ಮಣ್ಣಿನ ಪಾತ್ರೆಗಳು ಮತ್ತು ಇತರೆ ಯಾವುದೇ ಅವಶೇಷಗಳನ್ನು ಹೊಂದಿರದೆ ಕೇವಲ ಶಿಲೋಪಕರಣಗಳು ಮಾತ್ರ ದೊರೆಯುವ ನೆಲೆಗಳು. ಎರಡನೆಯದು ನೂತನ ಶಿಲಾಯುಗ ಮತ್ತು ತಾಮ್ರ-ಶಿಲಾಯುಗದ ಶಿಲೋಪಕರಣಗಳು, ಮಣ್ಣಿನ ಪಾತ್ರೆಗಳು ಗೋರಿಗಳು ಮುಂತಾದವುಗಳ ಜೊತೆಯಲ್ಲಿ ದೊರಕುವಂತಹ ನೆಲೆಗಳು, ಬ್ರಹ್ಮಗಿರಿ, ಮಸ್ಕಿ, ಸಂಗನಕಲ್ಲು ಮುಂತಾದವು ಈ ಗುಂಪಿಗೆ ಸೇರುತ್ತವೆ.

## ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯ ಮೂರು ಹಂತಗಳು

ಸೂಕ್ಷ್ಮ ಶಿಲಾಯುಗದ ನೆಲೆಗಳ ವ್ಯಾಪ್ತಿ ಮತ್ತು ಸಂಖ್ಯೆಯನ್ನನುಲಕ್ಷಿಸಿದಾಗ ಈ ಹಂತದಲ್ಲಿ ಜನಸಂಖ್ಯೆ ಬಹಳ ಹೆಚ್ಚಾಗಿದ್ದಿತೆಂದು ತೋರುತ್ತದೆ. ಕೆಲವೊಂದು ಹಳೆ ಶಿಲಾಯುಗ, ಕೇವಲ ನೂತನ ಶಿಲಾಯುಗ ಹಾಗೂ ಸುಧಾರಿಸಿದ ನೂತನ ಶಿಲಾಯುಗದ ನೆಲೆಗಳಲ್ಲಿಯೂ ಸೂಕ್ಷ್ಮ ಶಿಲಾ ಉಪಕರಣಗಳು ಗಣನೀಯ ಪ್ರಮಾಣದಲ್ಲಿವೆ. ಆದಿ ಹಳೆಶಿಲಾ-ಯುಗದ ಜನರ ಕೆಲವು ನೆಲೆಗಳ ಪರಿಸರವು ಸೂಕ್ಷ್ಮ ಶಿಲಾಯುಗದ ಹಂತದ ಜನರಿಗೂ ಅನುಕೂಲಕರವಾಗಿ ಕಂಡು ಬಂದಿ-ರುವುರಿಂದ ಅಂತಹ ನೆಲೆಗಳಲ್ಲಿ ಅವರ ಚಟುವಟಿಕೆಯನ್ನು ಮುಂದುವರಿಸಿದುದು ಕಾಣುತ್ತದೆ. ಆದರೆ ಹಿಂದೆ ಅಂಥ ನೆಲೆಗ-ಳಲ್ಲಿ ಅತಿ ಪ್ರಾಚೀನ ಹಂತದ ಶಿಲಾಯುಗದ ಜನರಿದ್ದ ಬಗ್ಗೆ ಮತ್ತು ಅವರೊಡನೆ ದೂರದ ಸಂಬಂಧವಿದ್ದಿರಬಹುದಾದ ಸಾಧ್ಯತೆ ಬಗ್ಗೆ ಸೂಕ್ಷ್ಮ ಶಿಲಾ ಜನರಿಗೆ ಮಾಹಿತಿ ಕೂಡ ಇರಲಿಲ್ಲವೆಂದು ಹೇಳಬಹುದು. ಸಾಂಸ್ಕೃತಿಕವಾಗಿ ಪರಸ್ಪರ ದೂರದ ಸಂಬಂಧವೂ ಇದ್ದುದಕ್ಕೆ ಪುರಾವೆಗಳು ದೊರೆತಿಲ್ಲ.

ಇಂತಹ ನೆಲೆಗಳಲ್ಲಿ ಯಾವುದಾದರೂ ಒಂದು ಆಶಾದಾಯಕ ನೆಲೆಯನ್ನು ಉತ್ಖನನ ಮಾಡಿದಲ್ಲಿ ಇವುಗಳ ನಡುವಿನ ಕಾಲಮಾನದ ಹಂತ ಹಾಗೂ ದೂರದ ಸಾಂಸ್ಕೃತಿಕ ಸಂಬಂಧವನ್ನು ತಿಳಿಯಲು ಸಾಧ್ಯವಾಗಬಹುದೇನೋ?

ಇತರ ಕೆಲವು ಸೂಕ್ಷ್ಮ ಶಿಲಾ ಸಂಸ್ಕೃತಿಯ ನೆಲೆಗಳಲ್ಲಿ ಸಾಮಾನ್ಯವಾಗಿ ನೂತನ ಶಿಲಾ ಸಂಸ್ಕೃತಿಯ ಉಪಕ-ರಣಗಳಾದ ಉಂಗುರಕಲ್ಲು ಮತ್ತು ತ್ರಿಕೋಣಾಕೃತಿಯ ಉಜ್ಜಿ ನಯ ಮಾಡಿದ ಕಲ್ಲಿನ ಕೊಡಲಿಯ ತುಣುಕುಗಳು ವಿರಳವಾಗಿ ಇವೆ. ಪ್ರಾಯಶಃ ಒಂದು ಹಂತದಲ್ಲಿ ಬಳಪದ ಕಲ್ಲನ್ನು ಉಂಗುರ ಕಲ್ಲು ತಯಾರಿಕೆಗೂ ಡಾಲರೈಟ್ ಶಿಲೆಯನ್ನು ಕೊಡಲಿಗ-ಳನ್ನು ಮಾಡಲೂ ಬಳಸಲಾಗಿದೆ. ಮತ್ತೆ ಬೇರೆ ಆರು ನೆಲೆಗಳಲ್ಲಿ ಸೂಕ್ಷ್ಮ ಶಿಲಾ ಉಪಕರಣಗಳು ಹಾಗೂ ನೂತನ ಶಿಲಾ ಉಪಕರಣಗಳು ಮತ್ತು ಮಣ್ಣಿನ ಮಡಕೆಯ ಭಾಗ ಮೊದಲಾದವು ಇವೆ. ತುಲನಾತ್ಮಕವಾಗಿ ನೋಡಿದಾಗ ಸಮಾನ ಅಂತ-ರದ ಅಂಚುಗಳುಳ್ಳ ನೀಳಚಕ್ಕೆಗಳು ಮತ್ತು ಸಮಾನಾಂತರ ಊರ್ಧ್ವ ಪಟ್ಟಿಕೆಗಳುಳ್ಳ ಗಟ್ಟಿಗಳು ಇತರ ಸೂಕ್ಷ್ಮ ಶಿಲಾ ನೆಲೆಗ-ಳಲ್ಲಿ ಕಾಣಬರದೆ ಇಂತಹ ನೆಲೆಗಳಲ್ಲಿ ಮಾತ್ರ ಇವೆ. ಆದ್ದರಿಂದ ಪ್ರಾಯಶಃ ಈ ನೆಲೆಗಳು ಸೂಕ್ಷ್ಮ ಶಿಲಾ ಹಂತದಿಂದ ನೂತನ ಶಿಲಾ ಹಂತಕ್ಕೆ ಅಭಿವೃದ್ಧಿಯಾಗುತ್ತಿರುವ ಹಂತವನ್ನು ಸೂಚಿಸುತ್ತವೆ ಏನೋ? ಕ್ರಮೇಣ ಇತರ ನೆಲೆಗಳಲ್ಲಿ ಪ್ರಾಣಿ ಸಾಕಾಣಿಕೆಯ ಜೊತೆಗೆ ಒಂದೆಡೆ ನೆಲೆಯಾಗಿ ನಿಂತು ಕೃಷಿ ಉದ್ಯೋಗ ಮಾಡುವಂತಹ ಜನರು ನೆಲೆಸಿದ್ದ ಕುರುಹುಗಳಿವೆ. ಆದ್ದರಿಂದ ಎರಡನೇ ವರ್ಗದ ನೆಲೆಗಳು ಮಧ್ಯಮ ಹಂತವನ್ನು ಸೂಚಿಸುತ್ತಿದ್ದು ಈ ಪ್ರದೇಶದಲ್ಲಿ ಮಹತ್ವದ್ದಾಗಿದೆ. ಇದರ ಬಗ್ಗೆ ಹೆಚ್ಚು ಸಂಶೋಧನೆ ನಡೆಯಬೇಕಿದೆ.

ಈ ಮೂರೂ ಪ್ರಕಾರದ ನೆಲೆಗಳು ಸೂಕ್ಷ್ಮ ಶಿಲಾ ಹಂತದಿಂದ ಪ್ರಬುದ್ಧ ನೂತನ ಶಿಲಾ ಹಂತಕ್ಕೆ ಜನರ ಪ್ರಗತಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಈ ಮೂರೂ ಪ್ರಕಾರದ ನೆಲೆಗಳು ಈ ರೀತಿಯಾಗಿವೆ.

೧. ಹಳೆ ಶಿಲಾಯುಗ ಸಂಸ್ಕೃತಿಗಳ ಅವಶೇಷಗಳೊಡನೆ ಅಥವಾ ಕೇವಲ ಸೂಕ್ಷ್ಮ ಶಿಲಾ ಉಪಕರಣಗಳಿರುವ ನೆಲೆಗಳು.
೨. ಸೂಕ್ಷ್ಮ ಶಿಲಾ ಉಪಕರಣಗಳು ಮತ್ತು ಅತಿ ವಿರಳವಾಗಿ ನೂತನ ಶಿಲಾ ಉಪಕರಣಗಳಿರುವ ನೆಲೆಗಳು ಮತ್ತು
೩. ಸೂಕ್ಷ್ಮ ಶಿಲಾ ಉಪಕರಣಗಳೊಡನೆ ಸುಧಾರಿತ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳುಳ್ಳ ಜನವಾಸ್ತವ್ಯದ ನೆಲೆಗಳು.

ಈ ಮೂರೂ ಬಗೆಯ ನೆಲೆಗಳಲ್ಲಿಯ ಪರಿಸರವನ್ನೂ, ಸೂಕ್ಷ್ಮ ಶಿಲಾ ಉಪಕರಣಗಳನ್ನೂ ಪರಿಶೀಲಿಸಿದಾಗ ಕೆಲವು ಸ್ಪಷ್ಟ ಹಾಗೂ ವಿಶಿಷ್ಟ ಲಕ್ಷಣಗಳು ಕಂಡು ಬರುತ್ತವೆ. ಮೊದಲನೆಯ ಪ್ರಕಾರದ ನೆಲೆಗಳು ಎತ್ತರದ ದಿಣ್ಣೆಗಳಲ್ಲಿವೆ ಎರಡನೆ ಪ್ರಕಾರದ ನೆಲೆಗಳು ಸಾಮಾನ್ಯವಾಗಿ ಗುಡ್ಡಗಳ ತಪ್ಪಲು ಅಥವಾ ಸ್ವಲ್ಪ ದೂರದಲ್ಲಿರುತ್ತವೆ. ಮೂರನೆಯ ಪ್ರಕಾರದ ನೆಲೆಗಳು ಹಳ್ಳ ಅಥವಾ ನೀರಿನಾಸರೆಯ ಅಥವಾ ಸಮೀಪದ ಬಯಲು ಪ್ರದೇಶದಲ್ಲಿರುತ್ತವೆ. ಪ್ರಾಯಶಃ ಮುಖ್ಯ ಕಸುಬಾದ ಪ್ರಾಣಿ ಸಾಕಣೆ ಜೊತೆಗೆ ಸ್ವಲ್ಪ ಮಟ್ಟಿಗೆ ಕೃಷಿಯನ್ನು ಪ್ರಾರಂಭ ಮಾಡಿರುವ ಸಾಧ್ಯತೆ ಇದೆ. ಮೂರನೆಯ ವರ್ಗದ ಜನರು ಪ್ರಾಣಿ ಸಾಕಾಣಿಕೆ ಮತ್ತು ಕೃಷಿ ಎರಡನ್ನೂ ತಮ್ಮ ಜೀವನೋಪಾಯಕ್ಕೆ ಅಭಿವೃದ್ಧಿಪಡಿಸಿಕೊಂಡರೆಂದು ಕಾಣುತ್ತದೆ.

ಈ ಮೂರೂ ಉಪ ಹಂತಗಳು ಒಂದಾದ ನಂತರ ಒಂದರಂತೆ ಇಲ್ಲವೇ ಪರಸ್ಪರ ಸ್ವಲ್ಪ ಕಾಲದವರೆಗೆ ಸಂಬಂಧವಿದ್ದು ಕ್ರಮೇಣ ವಿಶಿಷ್ಟ ರೂಪವನ್ನು ತಳೆದಿರಬಹುದೇ ಎಂಬ ಅಂಶಗಳನ್ನು ಆಯ್ದ ನೆಲೆಗಳ ಉತ್ಖನನವು ಸ್ಪಷ್ಟಪಡಿಸಬಹುದೆಂದು ಕಾಣುತ್ತದೆ. ಆದರೂ ಕೂಡ ಈ ಉಪ ಹಂತಗಳ ನಡುವಿನ ಕಾಲದ ಅಂತರವು ತೀರಾ ಕಡಿಮೆ ಎಂದೇ ಹೇಳಬಹುದು. ಸೂಕ್ಷ್ಮ ಶಿಲಾ ಉಪಕರಣಗಳಿಗೆ ಉಪಯೋಗಿಸಿದ ಶಿಲಾ ಮಾಧ್ಯಮ, ವೈವಿಧ್ಯ ಮತ್ತು ಉಪಕರಣಗಳ ತಯಾರಿಕೆಯಲ್ಲಿ ನಿರ್ದಿಷ್ಟ ವಿಶಿಷ್ಟ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಆದ್ದರಿಂದ ಈ ಮೂರೂ ಉಪ ಹಂತಗಳ ಅನುಕ್ರಮದ ಒಟ್ಟು ಕಾಲಮಾನ ಹೆಚ್ಚೆಂದರೆ ಸುಮಾರು ೫-೬ ಸಾವಿರ ವರ್ಷಗಳಿರಬಹುದು. ಕೇರಳದಲ್ಲಿಯ ತೇನ್ಮಲೈ (ಇಂ.ಆ.ರಿ:೧೯೩೬-೩೭) ಸೂಕ್ಷ್ಮ ಶಿಲಾ ನೆಲೆಯ ಕಾಲಮಾನ ಹಾಗೂ ಅಲಹಾಬಾದ್ ಉತ್ತರಕ್ಕಿರುವ ಬೇಲಾನ್ (ಶರ್ಮಾ:೧೯೮೦) ನದಿ ಪ್ರದೇಶದ ಮೂರು ಸೂಕ್ಷ್ಮ ಶಿಲಾ ಸಂಸ್ಕೃತಿಯ ಉಪಹಂತಗಳ ಕಾಲಮಾನವನ್ನು ಗಣನೆಗೆ ತೆಗೆದುಕೊಂಡಾಗ ಈ ಮೂರು ಹಂತಗಳ ಕಾಲ ಸುಮಾರು ಕ್ರಿ.ಪೂ.೬೦೦೦-೫೦೦೦ ದಿಂದ ೨೦೦೦-೧೫೦೦ ಇದ್ದಿರಬಹುದು.

ಮೊದಲನೆಯ ಅಂದರೆ ಅತಿ ಪ್ರಾಚೀನ ವರ್ಗದಲ್ಲಿಯ ನೆಲೆಗಳ ಶಿಲಾ ಉಪಕರಣಗಳನ್ನು ಬಿಳಿ, ಹೊಗೆ ಸುತ್ತಿದ ಹಾಲು ಬಣ್ಣದ ಬೆಣಚುಕಲ್ಲಿನಲ್ಲಿ ಮಾಡಲಾಗಿದೆ. ಕಡಿಮೆ ಪ್ರಮಾಣದಲ್ಲಿ ಜಾಸ್ಪರ್ ಕಲ್ಲಿನಲ್ಲಿ ಮಾಡಲಾಗಿದೆ. ಈ ಅನುಪಯುಕ್ತ ಚಕ್ಕೆಗಳ ಜೊತೆಗೆ ಸಣ್ಣಸಣ್ಣ ಉಪಕರಣಗಲನ್ನು ಪರಿಶೀಲಿಸಿದಾಗ ಯಾವುದೇ ಪುಡಿಕೆಲಸ ಕಂಡು ಬರುವುದಿಲ್ಲ. ಆದರೆ ಸಣ್ಣಸಣ್ಣ ಚಕ್ಕೆಗಳು ವಿವಿಧ ಆಕೃತಿಯಲ್ಲಿವೆ. ಉದ್ದೇಶ ಪೂರ್ವಕವಾಗಿ ಈ ಆಕೃತಿಗಳನ್ನು ರೂಪಿಸಲಾಗಿದೆ. ಅವುಗ-ಳನ್ನು ಹೀಗೆ ಗುರುತಿಸಬಹುದು. ನೀಳಚಕ್ಕೆ ಮಾದರಿ, ಹೆರೆಚಕ್ಕೆ ಮಾದರಿ, ಮೊನೆ ಮಾದರಿ, ಬಾಣದ ಮೊನೆ, ಕೊರೆಗ, ಕೊರೆಯುಳಿ, ಅರ್ಧ ಚಂದ್ರಾಕೃತಿ, ದಬ್ಬಳ ಮುಂತಾದವು.

ಎರಡನೆಯ ವರ್ಗದ ನೆಲೆಗಳಲ್ಲಿ ಎಲ್ಲಾ ಉಪಕರಣಗಳನ್ನೂ ಕ್ವಾರ್ಟ್ಸ್ ಶಿಲೆಯಲ್ಲೆ ಮಾಡಲಾಗಿದ್ದು ವಿವಿಧ ಆಕೃತಿಗಳಲ್ಲಿವೆ. ತೀರ ಅಪರೂಪವಾಗಿ ಅಲ್ಲಿ ಇಲ್ಲಿ ಪುಡಿಗೆಲಸವೂ ಕಂಡು ಬರುತ್ತದೆ. ಆದರೂ ಕೆಲವೊಂದು ವಿಶಿಷ್ಟ ಆಕೃ-ತಿಗಳನ್ನು ಪ್ರಪ್ರಥಮವಾಗಿ ಗುರುತಿಸಬಹುದು.

ಈ ನೆಲೆಗಳ ವಿಶಿಷ್ಟ ಸಂಗತಿ ಎಂದರೆ ತೀರಾ ವಿರಳವಾಗಿ ಅಲ್ಲೊಂದು ಇಲ್ಲೊಂದು ನೂತನ ಶಿಲಾ ಸಂಸ್ಕೃ-ತಿಯ ಉಪಕರಣವಾದ ಉಂಗುರಕಲ್ಲು ಮತ್ತು ಡಾಲರೈಟ್ ಶಿಲೆಯ ಉಪಕರಣವಿರುವುದು. ಉಂಗುರಕಲ್ಲಿಗೆ ಉದ್ದ ಕೋಲನ್ನು ಸೇರಿಸಿ ಉಂಗುರದ ಹತ್ತಿರದ ತುದಿಯನ್ನು ಹರಿತ ಮಾಡಿ ನೆಲ ಕೊಚ್ಚಲು ಉಪಯೋಗಿಸಿದ ಉಪಕರಣವೆಂದು ಅಭಿಪ್ರಾಯಪಡಲಾಗಿದೆ. ಪ್ರಾಯಶಃ ಇದರಿಂದ ಪ್ರಪ್ರಥಮವಾಗಿ ನೆಲವನ್ನು ಕೊಚ್ಚಿ ಬೀಜ ಚೆಲ್ಲುವಂತಹ ಬೆಳವಣಿಗೆ ಬೆಳೆ-ದಿರಬಹುದೇ, ಇದು ಆರಂಭದ ಕೃಷಿ ಪದ್ಧತಿಯ ಬಗ್ಗೆ ತಿಳಿಯುತ್ತದೆ.

ಮೂರನೆಯ ವರ್ಗದ ನೆಲೆಗಳಲ್ಲಿ ಬೂದಿ ಮಣ್ಣು ಇರುವುದರಿಂದ ವರ್ಷದ ಕೆಲವು ಕಾಲ ಒಂದೆಡೆ ನಿಂತು ಕೃಷಿ ಮಾಡಿ ಜೀವನ ನಡೆಸಿರಬೇಕೆಂದು ತಿಳಿಯುತ್ತದೆ. ಈ ಸಂಸ್ಕೃತಿಯ ಸೂಕ್ಷ್ಮ ಶಿಲಾ ಉಪಕರಣಗಳಲ್ಲಿ ಒಂದು ವಿಶಿಷ್ಟ ಬೆಳವಣಿಗೆಯನ್ನು ಕಾಣುತ್ತೇವೆ. ವಕ್ರರೇಖೆಯ ಉಬ್ಬೇಣಿನ ನೀಳಚಕ್ಕೆ, ಸಮಾನಾಂತರ ನೀಳ ತಗ್ಗುಗಳುಳ್ಳ ಗಟ್ಟಿಗಳು ಮತ್ತು ಸಮಾನಾಂತರ ಅಂಚುಗಳುಳ್ಳ ಉದ್ದನೆಯ ನೀಳಚಕ್ಕೆಗಳು ಪ್ರಪ್ರಥಮವಾಗಿ ಕಾಣಿಸಿಕೊಳ್ಳುತ್ತವೆ ಮತ್ತು ಸೂಕ್ಷ್ಮ ಶಿಲಾ ಉಪ-ಕರಣಗಳ ವೈವಿಧ್ಯವೂ ಕಡಿಮೆಯಾಗುತ್ತದೆ.

ಇವೆಲ್ಲಾ ಅಂಶಗಳನ್ನು ಗಮನಿಸಿದಾಗ ಪ್ರಾಯಶಃ

೧. ಪ್ರಾಣಿ ಸಾಕಣೆ ಉದ್ಯಮವಿರುವ ಸೂಕ್ಷ್ಮ ಶಿಲಾ ಹಂತ

೨. ಇದರ ಜೊತೆಗೆ ಅಲ್ಪ ಪ್ರಮಾಣದಲ್ಲಿ ನೆಲವನ್ನು ಕೊಚ್ಚಿ ಬೀಜ ಚೆಲ್ಲಿ ಬೆಳೆ ತೆಗೆಯುವಂತಹ ಕೃಷಿ ಉದ್ಯಮದ ಹಂತ.

ಇವೆರಡೂ ಹಂತಗಳಲ್ಲಿ ಜನರು ಹೆಚ್ಚಾಗಿ ಅಲೆಮಾರಿ ಸ್ಥಿತಿಯಲ್ಲಿದ್ದರೆಂದು ಕಾಣುತ್ತದೆ.
೩. ಮೂರನೆಯ ಹಂತವು ವರ್ಷದಲ್ಲಿ ಕೆಲವು ಕಾಲ ಒಂದೆಡೆ ನೆಲೆಯಾಗಿ ನಿಂತು ಮನೆಗಳನ್ನು ನಿರ್ಮಿಸಿಕೊಂಡು ವಿವಿಧ ಕಾರ್ಯಗಳಿಗೆ ಬೇಕಾದ ಮಣ್ಣಿನ ಪಾತ್ರೆ ಮಾಡಿಕೊಂಡು ಸುಧಾರಿತ ಕೃಷಿಯನ್ನು ಆರಂಭಿಸಿದ ಸುಧಾರಿತ ಹಂತ.

ಈ ಮೂರೂ ಉಪಹಂತಗಳಿಂದ ಮಾನವರು ಅಲೆಮಾರಿ ಜೀವನದ ಸೂಕ್ಷ್ಮ ಶಿಲಾ ಹಂತದಿಂದ ನೆಲೆ ನಿಂತು ಕೃಷಿ ಉದ್ಯೋಗದ ನೂತನ ಶಿಲಾಯುಗದ ಹಂತದವರೆಗೆ ಬದಲಾವಣೆ ಆಗಿರುವುದು ತಿಳಿಯುತ್ತದೆ.

**ಅಧ್ಯಯನ ಪ್ರದೇಶದ ಪರಿಸರ ಮತ್ತು ಶಿಲಾಮಾದರಿ**

ಸೂಕ್ಷ್ಮ ಶಿಲಾಯುಗ ಸಂಸ್ಕೃತಿಗೆ ಸಂಬಂಧಿಸಿದ ಅತಿ ಹೆಚ್ಚು ನೆಲೆಗಳು ಬೆಳಕಿಗೆ ಬಂದಿದ್ದು ದೊರೆತಿರುವ ವಿವಿಧ ಸಾಂಸ್ಕೃತಿಕ ಹಂತಗಳ ಸಂಖ್ಯೆಯಲ್ಲಿ ಉಪಕರಣಗಳ ವೈವಿಧ್ಯತೆ ಮತ್ತು ಸಂಖ್ಯೆಯಲ್ಲಿಯೂ ಅಗ್ರಸ್ಥಾನವನ್ನು ಪಡೆದು-ಕೊಂಡಿದೆ. ಉಪಕರಣಗಳಲ್ಲಿನ ವಿವಿಧತೆಯನ್ನು ಗುರುತಿಸಿ ಈ ಸಂಸ್ಕೃತಿಯನ್ನು ಮೂರು ಹಂತಗಳಾಗಿ ವಿಭಾಗಿಸಿ ಪ್ರತಿ-ಯೊಂದು ಹಂತದ ಪ್ರಾಮುಖ್ಯತೆಯನ್ನು ಅಧ್ಯಯಿಸಲಾಗಿದೆ.

ಈ ಪ್ರದೇಶದ ಪರಿಸರವು ಅತಿ ಹೆಚ್ಚು ಬದಲಾವಣೆಯನ್ನು ಕಂಡು ಕೊಂಡಂತೆ ತಿಳಿಯುತ್ತದೆ. ದಟ್ಟಾರಣ್ಯದ ಬದಲಾಗಿ ಬಯಲು ಹುಲ್ಲಗಾವಲು ಪ್ರದೇಶವಾಗಿದ್ದಿರಬೇಕೆಂದು ತಿಳಿಯುತ್ತದೆ. ನೀರಿನ ಹರಿವುಗಳೂ ನಿರ್ದಿಷ್ಟ ಮಾರ್ಗವನ್ನು ಆರಿಸಿಕೊಂಡಿರಬೇಕು. ದೈತ್ಯಾಕಾರದ ಪ್ರಾಣಿಗಳಿಗೆ ಬದಲಾಗಿ ಸಣ್ಣ ಗಾತ್ರದ ಮತ್ತು ಅತಿ ವೇಗವಾಗಿ ಓಡುವ ಪ್ರಾಣಿ ಸಂಕುಲ ವೃದ್ಧಿಯಾದಂತೆ ತಿಳಿಯುತ್ತದೆ. ಕುರುಚಲು ಗಿಡಗಳೂ ಉಳಿದುಕೊಂಡು ಮುಂದುವರಿದಂತೆ ತಿಳಿಯುತ್ತದೆ.

ಉಪಕರಣಗಳ ತಯಾರಿಕೆಯಲ್ಲಿ ವೈವಿಧ್ಯತೆ, ನಿಪುಣತೆ ಹಾಗೂ ಕಚ್ಚಾ ಶಿಲಾ ಸಾಮಗ್ರಿಯ ಆಯ್ಕೆಯ-ಲ್ಲಿಯೂ ಪ್ರಾವಿಣ್ಯತೆ ಹೊಂದಿರುವ ಅಂಶ ಸ್ಪಷ್ಟವಾಗುತ್ತದೆ. ನಿರ್ದಿಷ್ಟ ಹಾಗೂ ಉತ್ತಮ ಮಾದರಿಯ ಶಿಲಾ ಪ್ರಭೇಧಗಳನ್ನು ಶೋಧಿಸಿಕೊಂಡಿರವುದು ಪ್ರಮುಖ ಅಂಶ. ಸ್ಥಳೀಯಾಗಿಯೇ ತನಗವಶ್ಯಕವಾದಂತಹ ಉತ್ತಮ ಜಾತಿಯ ಶಿಲಾ ಮಾದರಿ-ಗಳನ್ನು ಗುರುತಿಸಲಾಗಿದೆ. ಜೊತೆಯಲ್ಲಿ ಕನಿಷ್ಠ ದರ್ಜೆಯ ಶಿಲಾ ಮಾದರಿಯನ್ನು ಬಳಸಿ ನಿರ್ದಿಷ್ಟ ತಾಂತ್ರಿಕತೆಯನ್ನು ಅಳ-ವಡಿಸಿ ಉಪಕರಣ ತಯಾರಿಸಲಾಗಿದೆ. ವಿವಿಧ ಮಾದರಿಯ ಜಾಸ್ಪರ್ ಮತ್ತು ಕ್ವಾರ್ಟ್ಸ್ ಶಿಲೆಯನ್ನು ಉಪಯೋಗಿಸಿ ಉಪಕ-ರಣಗಳನ್ನು ನಿರೂಪಿಸಿರುವುದನ್ನು ಕಾಣಬಹುದು. ಉತ್ತಮ ಜಾತಿಯದಲ್ಲದ ಶಿಲಾ ಪ್ರಭೇದವನ್ನು ಬಳಸಿ ನಿರ್ದಿಷ್ಟ ಉಪಕ-ರಣಗಳನ್ನು ರೂಪಿಸಿರುವುದು ಗಮನಾರ್ಹ ಅಂಶ.

ಒಟ್ಟು ಉಪಕರಣ (೧೮೬೩)ಗಳಲ್ಲಿ ಅತಿ ಹೆಚ್ಚು ಸಂಖ್ಯೆಯವು ಕ್ವಾರ್ಟ್ಸ್ ಶಿಲೆ ಉಪಕರಣಗಳಾಗಿದ್ದು ೧೪೨೯ ಶೇ. ೭೬.೨೦ ಅದಿರುಯುಕ್ತ ಕ್ವಾರ್ಟ್ಸ್ ಶಿಲೆ ೧೨೦ (ಶೇ. ೯.೧೨) ಇವೆ. ಅದಿರುಯುಕ್ತ ಜಾಸ್ಪರ್ ಶಿಲೆಯಲ್ಲಿ ೧೫೬(ಶೇ. ೮.೩೭) ಇವೆ. ಜಾಸ್ಪರ್ ಶಿಲೆಯಲ್ಲಿ ೧೦೬ (ಶೇ. ೫.೬೯) ಇವೆ. ಅತಿ ಕಡಿಮೆ ಸಂಖ್ಯೆಯಲ್ಲಿ ಅಂದರೆ ಕೇವಲ ೨ (ಶೇ. ೦.೧೧) ಉಪಕರಣವನ್ನು ಫೆಲ್ಸಪರ್ ಶಿಲೆಯಲ್ಲಿ ರೂಪಿಸಲಾಗಿದೆ.

ಪ್ರತಿ ಹಂತದ ವಿವಿಧ ಶಿಲಾ ಮಾದರಿಗಳ ಉಪಕರಣಗಳು ಮತ್ತು ಅವುಗಳ ಶೇಕಡಾವಾರು ಪ್ರಮಾಣ ಇವುಗಳ ವಿವರಣೆಯನ್ನು ಕೋಷ್ಟಕ ಸಂಖ್ಯೆ ೭.೧ ಮತ್ತು ವೃತ್ತ ನಕ್ಷೆ ಸಂಖ್ಯೆ ೭.ಅ ರಲ್ಲಿ ನೀಡಿದೆ.

ಒಟ್ಟು ಶಿಲಾ ಮಾದರಿಯ ಶೇಕಡವಾರು ಪ್ರಮಾಣ.

ಕೋಷ್ಟಕ ಸಂಖ್ಯೆ ೭.೧

| | ಕ್ವಾರ್ಟ್ಸ್ | ಅದಿರುಯುಕ್ತ ಕ್ವಾರ್ಟ್ಸ್ | ಜಾಸ್ಪರ್ | ಅದಿರುಯುಕ್ತ ಜಾಸ್ಪರ್ | ಪೆಲ್ಸಪರ್ | ಒಟ್ಟು |
|---|---|---|---|---|---|---|
| ಉಪಕರಣ ಸಂಖ್ಯೆ | ೧೪೨೯ | ೧೨೦ | ೧೦೬ | ೧೫೬ | ೨ | ೧೮೬೩ |
| ಶೇಕಡ | ೭೬.೨೦ | ೯.೧೨ | ೮.೩೭ | ೫.೬೯ | ೦.೧೧ | |

ವೃತ್ತ ನಕ್ಷೆ ಸಂಖ್ಯೆ ೭.ಅ




ಒಟ್ಟು ಶಿಲಾಮಾದರಿಗಳನ್ನು ಉಪಕರಣಗಳ ಅನ್ವಯದಂತೆ ಮೂರು ಹಂತಗಳಾಗಿ ಅಧ್ಯಯಿಸಿದೆ. ಮೊದಲನೆಯ ಹಂತದ ಶಿಲಾಮಾದರಿಯ ಶೇಕಡಾವಾರು ವಿವರಣೆಯನ್ನು ಕೋಷ್ಟಕ ಸಂಖ್ಯೆ ೭.೧.೧ ಮತ್ತು ವೃತ್ತ ನಕ್ಷೆ ಸಂಖ್ಯೆ ೭.ಅ೧ ರಲ್ಲಿ ನೀಡಿದೆ. ಎರಡನೆಯ ಹಂತದ ಶಿಲಾಮಾದರಿಯ ಶೇಕಡಾವಾರು ವಿವರಣೆಯನ್ನು ಕೋಷ್ಟಕ ಸಂಖ್ಯೆ ೭.೧.೨ ರಲ್ಲಿ ನೀಡಿದೆ. ಮೂರನೆಯ ಹಂತದ ಶಿಲಾಮಾದರಿಯ ಶೇಕಡಾವಾರು ವಿವರಣೆಯನ್ನು ಕೋಷ್ಟಕ ಸಂಖ್ಯೆ ೭.೧.೩ ಮತ್ತು ವೃತ್ತ ನಕ್ಷೆ ಸಂಖ್ಯೆ ೭.ಅ೨ ರಲ್ಲಿ ನೀಡಿದೆ.

ಮೊದಲನೆಯ ಹಂತದ ಶಿಲಾಮಾದರಿಯ ಶೇಕಡವಾರು ಪ್ರಮಾಣ.

ಕೋಷ್ಟಕ ಸಂಖ್ಯೆ ೭.೧.೧

| | ಕ್ವಾರ್ಟ್ಸ್ | ಅದಿರುಯುಕ್ತ ಕ್ವಾರ್ಟ್ಸ್ | ಜಾಸ್ಪರ್ | ಅದಿರುಯುಕ್ತ ಜಾಸ್ಪರ್ | ಪೆಲ್ಸಪರ್ | ಒಟ್ಟು |
|---|---|---|---|---|---|---|
| ಉಪಕರಣ ಸಂಖ್ಯೆ | ೧೦೦೯ | ೧೩ | ೬೪ | ೧೩೩ | ೧ | ೧೩೩೭ |
| ಶೇಕಡ | ೭೫.೪೭ | ೯.೭೨ | ೫.೬೯ | ೯.೯೪ | ೦ | |

ವೃತ್ತ ನಕ್ಷೆ ಸಂಖ್ಯೆ ೭.ಅ೧




ಎರಡನೆಯ ಹಂತದ ಶಿಲಾಮಾದರಿಯ ಶೇಕಡವಾರು ಪ್ರಮಾಣ.

ಕೋಷ್ಟಕ ಸಂಖ್ಯೆ ೭.೧.೨

| | ಕ್ವಾರ್ಟ್ಸ್ | ಒಟ್ಟು |
|---|---|---|
| ಉಪಕರಣ ಸಂಖ್ಯೆ | ೧೮ | ೧೮ |
| ಶೇಕಡ | ೧೦೦ | |

ಮೂರನೆಯ ಹಂತದ ಶಿಲಾಮಾದರಿಯ ಶೇಕಡವಾರು ಪ್ರಮಾಣ.

ಕೋಷ್ಟಕ ಸಂಖ್ಯೆ ೭.೧.೩

| | ಕ್ವಾರ್ಟ್ಸ್ | ಅದಿರುಯುಕ್ತ ಕ್ವಾರ್ಟ್ಸ್ | ಜಾಸ್ಪರ್ | ಅದಿರುಯುಕ್ತ ಜಾಸ್ಪರ್ | ಪೆಲ್ಸಪರ್ | ಒಟ್ಟು |
|---|---|---|---|---|---|---|
| ಉಪಕರಣ ಸಂಖ್ಯೆ | ೪೦೨ | ೪೦ | ೪೩ | ೨೩ | ೧ | ೫೦೮ |
| ಶೇಕಡ | ೭೯.೧೩ | ೭.೮೭ | ೮.೨೭ | ೪.೫೩ | ೦.೨೦ | |

ವೃತ್ತ ನಕ್ಷೆ ಸಂಖ್ಯೆ ೭.ಅ೩



## ಸೂಕ್ಷ್ಮ ಶಿಲಾಯುಗದ ನೆಲೆಗಳು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸೂಕ್ಷ್ಮ ಶಿಲಾಯುಗದ ಒಟ್ಟು ೬೬ ನೆಲೆಗಳು ದೊರೆತಿವೆ. ಇವುಗಳಲ್ಲಿ ಮೂಗನಾಯಕನಕೋಟೆ ಗುಡ್ಡದ ಸುತ್ತಮುತ್ತ ಇರುವ ಒಟ್ಟು ೧೩ ನೆಲೆಗಳ ಬಗ್ಗೆ ವಿವರಣೆ ನೀಡಬೇಕಾಗುತ್ತದೆ. ಮೂಗನಾಯಕನಕೋಟೆ ಗುಡ್ಡದ ಸುತ್ತಲೂ ಬರುವ ನೆಲೆಗಳು ಬೇರೆ ಬೇರೆ ಗ್ರಾಮಗಳ ವ್ಯಾಪ್ತಿಯಲ್ಲಿ ಬರುತ್ತವೆ. ಆದರೆ ಈ ಹಳ್ಳಿಗಳ ಪರಿಮಿತಿಯ ನೆಲೆಗಳಲ್ಲಿ ದೊರೆತಿರುವ ಉಪಕರಣಗಳು, ಉಪಯೋಗಿಸಿರುವ ಮೂಲ ಶಿಲಾ ಸಾಮಗ್ರಿಗಳು ಮತ್ತು ನೆಲೆಗಳಿರುವ ಭೌಗೋಳಿಕ ಪರಿಸರ ಇವುಗಳಲ್ಲಿ ಯಾವುದೇ ಗಮನಾರ್ಹ ವ್ಯತ್ಯಾಸಗಳು ಕಂಡು ಬರುವುದಿಲ್ಲ. ಆದ ಕಾರಣ ಈ ಪ್ರದೇಶದ ೧೩ ನೆಲೆಗಳನ್ನೂ ಮೂಗನಾಯಕನಕೋಟೆ ಉತ್ತರ, ಪೂರ್ವ, ದಕ್ಷಿಣ ಮತ್ತು ಪಶ್ಚಿಮ ಎಂದು ನಾಲ್ಕು ಭಾಗಗಳಾಗಿ ಮಾಡಿಕೊಂಡು ಪರಿಶೀಲಿಸಲಾಗಿದೆ.

ಮೂಗನಾಯಕನಕೋಟೆ ಉತ್ತರದ ಭಾಗದಲ್ಲಿ ಹೊಸಕೆರೆ ಮತ್ತು ಅಳಿಲುಘಟ್ಟ ನೆಲೆಗಳು ಒಳಗೊಂಡಿವೆ.

ಮೂಗನಾಯಕನಕೋಟೆ ಪೂರ್ವದ ಭಾಗದಲ್ಲಿ ಮೂಗನಾಯಕನಕೋಟೆ, ಮುದಿಪುರ ಮತ್ತು ಸಾಕಸಂದ್ರ ನೆಲೆಗಳು ಒಳಗೊಂಡಿವೆ.

ಮೂಗನಾಯಕನಕೋಟೆ ದಕ್ಷಿಣದ ಭಾಗದಲ್ಲಿ ತ್ಯಾಗಟೂರು, ಸೌರನಕೋಟೆ ಮತ್ತು ಅದ್ದಗೆರೆ ನೆಲೆಗಳು ಬರುತ್ತವೆ.

ಮೂಗನಾಯಕನಕೋಟೆ ಪಶ್ಚಿಮದ ಭಾಗದಲ್ಲಿ ಬಂಡನಹಳ್ಳಿ ಬಣ್ಣಿಗಾನಹಳ್ಳಿ, ಬೋಗಸಂದ್ರ, ವೀರಾಪುರ ಮತ್ತು ಜೋಗಿಹಳ್ಳಿ ನೆಲೆಗಳು ಒಳಗೊಂಡಿವೆ.

ಭೌಗೋಳಿಕ ಪರಿಸರ, ಉಪಕರಣ ವೈವಿಧ್ಯ ಹಾಗೂ ಪ್ರಾಚೀನ ಹಾಗೂ ಅನಂತರದ ಸಂಸ್ಕೃತಿಗಳ ಹಿನ್ನೆಲೆಯಲ್ಲಿ ಈ ಸ್ಥಳ ಪರಿಶೋಧನೆಯಲ್ಲಿ ಬೆಳಕಿಗೆ ಬಂದಿರುವ ೬೬ ನೆಲೆಗಳನ್ನು ಮೂರು ಮುಖ್ಯ ಗುಂಪುಗಳಾಗಿ ವರ್ಗೀಕರಿಸಬಹುದು.

೧. ಆದಿ ಹಳೆ ಶಿಲಾಯುಗದಿಂದ ಅಂತ್ಯಹಳೆ ಶಿಲಾಯುಗದವರೆಗಿನ ಅವಶೇಷಗಳು ದೊರೆತಿರುವ ನೆಲೆಗಳ ಜೊತೆಯಲ್ಲಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು ಅಥವಾ ಮೊದಲನೆಯ ಹಂತದ ನೆಲೆಗಳು.
೨. ಯಾವುದೇ ಸಾಂಸ್ಕೃತಿಕ ಅನುಪೂರ್ವಿ ಇಲ್ಲದೆ ಕೇವಲ ಸೂಕ್ಷ್ಮ ಶಿಲಾಯುಧಗಳು ದೊರೆತಿರುವ ನೆಲೆಗಳು ಅಥವಾ ಎರಡನೆಯ ಹಂತದ ನೆಲೆಗಳು, ಮತ್ತು
೩. ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಅವಶೇಷಗಳ ಜೊತೆಯಲ್ಲಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು

ಅಥವಾ ಮೂರನೆಯ ಹಂತದ ನೆಲೆಗಳು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ೬೬ ನೆಲೆಗಳನ್ನು ಅವುಗಳಿರುವ ಆನುಪೂರ್ವಿಯಂತೆ ಹಳೆಶಿಲಾಯುಗದ ನೆಲೆಗಳು, ಸ್ವತಂತ್ರ್ಯ ಸೂಕ್ಷ್ಮ ಶಿಲಾಯುಗದ ನೆಲೆಗಳು ಹಾಗು ನೂತನ ಮತ್ತು ಬೃಹತ್ ಶಿಲಾಯುಗದ ಸಂಸ್ಕೃತಿಗಳೊಂದಿಗಿರುವ ನೆಲೆಗಳು. ಅವುಗಳಿರುವ ಪರಿಸರ ಇವುಗಳನ್ನೊಳಗೊಂಡ ವಿವರವನ್ನು ಕೋಷ್ಟಕ ಸಂಖ್ಯೆ ೬.೧ ರಲ್ಲಿ ನೀಡಿದೆ. ನೆಲೆಗಳಿರುವ ಭೂ ನಕ್ಷೆಯನ್ನು ಪುಟ ೧೦೬ ಸಂಖ್ಯೆ ರಲ್ಲಿ ನೀಡಿದೆ.

## ಕೋಷ್ಟಕ ಸಂಖ್ಯೆ ೭.೨

| ಕ್ರಮ ಸಂಖ್ಯೆ | ನೆಲೆ | ಮೊದಲನೆಯ ಹಂತ ಹಳೆಶಿಲಾಯುಗದ ನೆಲೆಗಳ ಜೊತೆಗಿರುವ ಸೂಕ್ಷ್ಮಶಿಲಾಯುಗದ ನೆಲೆಗಳು | ಎರಡನೆಯ ಹಂತ ಕೇವಲ ಸೂಕ್ಷ್ಮಶಿಲಾಯುಗದ ನೆಲೆಗಳು | ಮೂರನೆಯ ಹಂತ ನೂತನ, ಬೃಹತ್ ಶಿಲಾನೆಲೆಗಳೊಂದಿಗಿರುವ ಸೂಕ್ಷ್ಮಶಿಲಾಯುಗದ ನೆಲೆಗಳು | ನೆಲೆಯ ಪರಿಸರ | ವಿಶೇಷ ವಿವರಣೆ |
|---|---|---|---|---|---|---|
| ೧ | ಅಡ್ಡಗೆರೆ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ದಕ್ಷಿಣ ಎಂದು ಪರಿಶೀಲಿಸಿದೆ |
| ೨ | ಅಪ್ಪಾನಹಳ್ಳಿ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೩ | ಅವರಗಲ್ಲು | | | ✓ | ಬೆಟ್ಟದ ತಪ್ಪಲು | |
| ೪ | ಅಳಿಲುಘಟ್ಟ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಉತ್ತರ ಎಂದು ಪರಿಶೀಲಿಸಿದೆ |
| ೫ | ಅಂಕಸಾವಿ | | | ✓ | ಎತ್ತರದ ಬಯಲು ಪ್ರದೇಶ | |
| ೬ | ಇರಕಸಂದ್ರ ಕಾಲೋನಿ | ✓ | | | ಬೆಟ್ಟದ ಮೇಲಿದೆ | |
| ೭ | ಉನಗನಾಲ | ✓ | | | ಎತ್ತರದ ಬಯಲು ಪ್ರದೇಶ | |
| ೮ | ಓಬಳಾಪುರ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೯ | ಕತ್ತಿರಾಜನಹಳ್ಳಿ | | | ✓ | ಬೆಟ್ಟದ ತಪ್ಪಲು | |
| ೧೦ | ಕರಡಿ | ✓ | | | ಬೆಟ್ಟದ ಮೇಲಿದೆ | |
| ೧೧ | ಕಂಠೇಬರ್ಜ | ✓ | | | ಬೆಟ್ಟದ ಮೇಲಿದೆ | |
| ೧೨ | ಕಂವಲಹಟ್ಟಿ | ✓ | | | ಎತ್ತರದ ಬಯಲು ಪ್ರದೇಶ | |
| ೧೩ | ಕೈಮರ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೧೪ | ಗಳಿಗೆರೆ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೧೫ | ಗುಟ್ಟೆ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೧೬ | ಗುರವ್ವನಹಟ್ಟಿ | | | ✓ | ಎತ್ತರದ ಬಯಲು ಪ್ರದೇಶ | |
| ೧೭ | ಗೊಲ್ಲರಹಟ್ಟಿ | | | ✓ | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೧೮ | ಚಿಕ್ಕೇಗೌಡನರೊಪ್ಪ | ✓ | | | ಬೆಟ್ಟದ ಮೇಲಿದೆ | |
| ೧೯ | ಚಿನಗ | | | ✓ | ಎತ್ತರದ ಬಯಲು ಪ್ರದೇಶ | |
| ೨೦ | ಚಿನವಾರ | | | ✓ | ಬೆಟ್ಟದ ತಪ್ಪಲು | |
| ೨೧ | ಜೋಗಿಹಳ್ಳಿ | ✓ | | | ಬೆಟ್ಟದ ಮೇಲಿದೆ | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೨೨ | ಧಾಂಪುರ | ✓ | | | ಬೆಟ್ಟದ ಮೇಲಿದೆ | |
| ೨೩ | ತ್ಯಾಗಟೂರು | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ದಕ್ಷಿಣ ಎಂದು ಪರಿಶೀಲಿಸಿದೆ |
| ೨೪ | ಥರಟಿ | | | ✓ | ಬೆಟ್ಟದ ತಪ್ಪಲು | |
| ೨೫ | ದಬ್ಬೆಗಟ್ಟ | | ✓ | | ಬೆಟ್ಟದ ಮೇಲಿದೆ | |
| ೨೬ | ದೊಡ್ಡಗುಣಿ | ✓ | | | ಎತ್ತರದ ಬಯಲು ಪ್ರದೇಶ | |
| ೨೭ | ನಾಗಲಾಪುರ | | | ✓ | ಬೆಟ್ಟದ ತಪ್ಪಲು | |
| ೨೮ | ನಿಡುಗಲ್ಲು | | | ✓ | ಬೆಟ್ಟದ ತಪ್ಪಲು | |
| ೨೯ | ಬಡ್ಡಿಗಾನಹಳ್ಳಿ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೩೦ | ಬಿಜ್ಜಾವರ | | ✓ | | ಎತ್ತರದ ಬಯಲು ಪ್ರದೇಶ | |
| ೩೧ | ಬೆಟ್ಟದಹಳ್ಳಿ | | | ✓ | ಬೆಟ್ಟದ ಮೇಲಿದೆ | |
| ೩೨ | ಬೆಳ್ಳಿಬಟ್ಟಲಹಳ್ಳಿ | | | ✓ | ಬೆಟ್ಟದ ತಪ್ಪಲು | |
| ೩೩ | ಬೊಮ್ಮೇನಹಳ್ಳಿ | ✓ | | | ಬೆಟ್ಟದ ಮೇಲಿದೆ | |
| ೩೪ | ಬೋಗಸಂದ್ರ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೩೫ | ಬಂಡನಹಳ್ಳಿ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೩೬ | ಮಧುಗಿರಿ | | | ✓ | ಬೆಟ್ಟದ ತಪ್ಪಲು | |
| ೩೭ | ಮಾರನಾಯಕನಪಾಳ್ಯ | | | ✓ | ಬೆಟ್ಟದ ತಪ್ಪಲು | |
| ೩೮ | ಮಿಡಿಗೇಶಿ | | | ✓ | ಬೆಟ್ಟದ ತಪ್ಪಲು | |
| ೩೯ | ಮುದಿಪುರ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪೂರ್ವ ಎಂದು ಪರಿಶೀಲಿಸಿದೆ |
| ೪೦ | ಮೂಗನಾಯಕನಕೋಟೆ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪೂರ್ವ ಎಂದು ಪರಿಶೀಲಿಸಿದೆ |
| ೪೧ | ಮಂಚಕಲ್‌ಕುಪ್ಪೆ | ✓ | | | ಬೆಟ್ಟದ ಮೇಲಿದೆ | |
| ೪೨ | ಮಂಚಲ್ದೊರೆ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೪೩ | ಯಕ್ಕಲಕಟ್ಟೆ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೪೪ | ಯಲ್ಲಾಪುರ | ✓ | | | ಎತ್ತರದ ಬಯಲು ಪ್ರದೇಶ | |
| ೪೫ | ರಜತಾದ್ರಿಪುರ | | | ✓ | ಬೆಟ್ಟದ ತಪ್ಪಲು | |
| ೪೬ | ವೀರಾಪುರ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪಶ್ಚಿಮ ಎಂದು ಪರಿಶೀಲಿಸಿದೆ |
| ೪೭ | ಶಿವಪುರ | ✓ | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನಿರಿನಾಸರೆ | |
| ೪೮ | ಶೆಟ್ಟಹಳ್ಳಿ | ✓ | | | ಬೆಟ್ಟದ ಮೇಲಿದೆ | |
| ೪೯ | ಸಾತಸಂದ್ರ | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ಪೂರ್ವ ಎಂದು ಪರಿಶೀಲಿಸಿದೆ |
| ೫೦ | ಸಾಲುಹಟ್ಟಿ | ✓ | | | ಎತ್ತರದ ಬಯಲು ಪ್ರದೇಶ | |
| ೫೧ | ಸಿದ್ದರಬೆಟ್ಟ | | | ✓ | ಬೆಟ್ಟದ ತಪ್ಪಲು | |
| ೫೨ | ಸಿದ್ದಗಂಗಾಬೆಟ್ಟ | | | ✓ | ಬೆಟ್ಟದ ತಪ್ಪಲು | |
| ೫೩ | ಸಿದ್ದಾಪುರ | | | ✓ | ಬೆಟ್ಟದ ತಪ್ಪಲು | |
| ೫೪ | ಸಿದ್ದೇಹಳ್ಳಿ | ✓ | | | ಬೆಟ್ಟದ ಮೇಲಿದೆ | |
| ೫೫ | ಸೀಗೆಪಾಳ್ಯ | | | ✓ | ಬೆಟ್ಟದ ತಪ್ಪಲು | |
| ೫೬ | [illegible] | ✓ | | | ಬೆಟ್ಟದ ತಪ್ಪಲು | ಮೂಗನಾಯಕನಕೋಟೆ ದಕ್ಷಿಣ ಎಂದು ಪರಿಶೀಲಿಸಿದೆ |
| ೫೭ | ಸಂಕಿಗೆ | | | ✓ | ಎತ್ತರದ ಬಯಲು ಪ್ರದೇಶ | |
| ೫೮ | ಹರೇನಹಳ್ಳಿ | ✓ | | | ಬೆಟ್ಟದ ತಪ್ಪಲು | |
| ೫೯ | ಹಿಮಗಿರಿ | ✓ | | | ಬೆಟ್ಟದ ಮೇಲಿದೆ | |
| ೬೦ | ಹಿರೇಗುಂಡಗಲ್ಲು | | | ✓ | ಬೆಟ್ಟದ ತಪ್ಪಲು | |
| ೬೧ | ಹಿರೇಹಳ್ಳಿ | ✓ | | | ಬೆಟ್ಟದ ತಪ್ಪಲು | |
| ೬೨ | ಹುಲಿಯೂರುದುರ್ಗ | | ✓ | | ಬೆಟ್ಟದ ತಪ್ಪಲು | |
| ೬೩ | ಹೂವಿನಹಟ್ಟಿ | | | ✓ | ಬೆಟ್ಟದ ಮೇಲಿದೆ | |
| ೬೪ | ಹೊನ್ನೇಮಾರನಹಳ್ಳಿ | ✓ | | | ಬೆಟ್ಟದ ಮೇಲಿದೆ | |
| ೬೫ | ಹೊಸಕೆರೆ | ✓ | | | | ಮೂಗನಾಯಕನಕೋಟೆ ಉತ್ತರ ಎಂದು ಪರಿಶೀಲಿಸಿದೆ |
| ೬೬ | ಹೊಸಹಳ್ಳಿ | | | ✓ | ಎತ್ತರದ ಬಯಲು ಪ್ರದೇಶ | |

## ಮೊದಲನೆ ಹಂತದ ನೆಲೆಗಳಲ್ಲಿ ದೊರೆತಿರುವ ಉಪಕರಣಗಳು

ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ಒಟ್ಟು ೫೭ ನೆಲೆಗಳಲ್ಲಿ ಅತಿ ಹೆಚ್ಚು ಸಂಖ್ಯೆಯ(ಒಟ್ಟು ೩೮ ಶೇ ೫೭.೫೭) ನೆಲೆಗಳು ಹಳೆಶಿಲಾಯುಗದ ಸಂಸ್ಕೃತಿಯ ಅವಶೇಷಗಳೊಡನೆ ದೊರೆತಿವೆ. ಹಳೆಶಿಲಾಯುಗದ ಮೂರು ಹಂತ-ಗಳಾದ ಆದಿ, ಮಧ್ಯ ಮತ್ತು ಅಂತ್ಯ ಹಳೆಶಿಲಾಯುಗಗಳಲ್ಲಿ ಒಂದು ಅಥವಾ ಅದಕ್ಕಿಂತ ಹೆಚ್ಚು ಸಂಸ್ಕೃತಿಗಳನ್ನು ಸೂಚಿ-ಸುವ ಅವಶೇಷಗಳ ಜೊತೆಗೆ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಬೆಳಕಿಗೆ ಬಂದಿವೆ. ಹಾಗಿದ್ದರೂ ಉಪಕರಣಗಳ ಗಾತ್ರ, ವೈವಿಧ್ಯ ಮತ್ತು ಉಪಯೋಗಿಸಿರುವ ಶಿಲಾ ಸಾಮಗ್ರಿಗಳಲ್ಲಿ ಗಮನಾರ್ಹ ಬದಲಾವಣೆಯನ್ನು ಗುರುತಿಸಬಹುದು.

ಈ ೩೮ ನೆಲೆಗಳಿಂದ ಸಂಗ್ರಹಿಸಿರುವ ಸೂಕ್ಷ್ಮ ಶಿಲಾ ಉಪಕರಣಗಳು ಒಟ್ಟು ೧೩೩೭ (ಶೇ. ೭೧.೭೭) ಇದ್ದು, ಅತಿ ಹೆಚ್ಚಿನ ಸಂಖ್ಯಾಬಾಹುಳ್ಯ, ಶೇಕಡಾವಾರು ಪ್ರಮಾಣ ಹಾಗೂ ವೈವಿಧ್ಯಗಳನ್ನು ಈ ಹಂತದ ನೆಲೆಗಳಲ್ಲಿ ಕಾಣಬ-ಹುದು. ವೈವಿಧ್ಯತೆಯ ದೃಷ್ಟಿಯಿಂದ ಈ ಉಪಕರಣಗಳನ್ನು ಈ ಕೆಳಗಿನ ವಿವಿಧ ಮಾದರಿಗಳಂತೆ ವಿಭಾಗಿಸಲಾಗಿದೆ.

| | | |
|---|---|---|
| ೧. ನೀಳಚಕ್ಕೆ ಮಾದರಿ(Blade Group) | ಒಟ್ಟು ಉಪಕರಣ ೫೭೪ | ಶೇ. ೪೨.೯೩ |
| ೨. ಹೆರೆಚಕ್ಕೆ ಮಾದರಿ(Scraper Group) | ಒಟ್ಟು ಉಪಕರಣ ೩೩೬ | ಶೇ. ೨೫.೧೩ |
| ೩. ಮೊನೆ ಮಾದರಿ(Point Group) | ಒಟ್ಟು ಉಪಕರಣ ೨೧೦ | ಶೇ. ೧೫.೭೦ |
| ೪. ಬಾಣದ ಮೊನೆ(Arrow Head) | ಒಟ್ಟು ಉಪಕರಣ ೬೭ | ಶೇ. ೫.೦೧ |
| ೫. ಕೊರೆಗ(Borer) | ಒಟ್ಟು ಉಪಕರಣ ೩೫ | ಶೇ. ೨.೬೧ |
| ೬. ಕೊರೆಯುಳಿ(Burin) | ಒಟ್ಟು ಉಪಕರಣ ೧೩ | ಶೇ. ೦.೯೭ |
| ೭. ಅರ್ಧ ಚಂದ್ರಾಕೃತಿ(Lunate) | ಒಟ್ಟು ಉಪಕರಣ ೫೦ | ಶೇ. ೩.೭೩ |
| ೮. ದಬ್ಬಳ(Awl) | ಒಟ್ಟು ಉಪಕರಣ ೧೬ | ಶೇ. ೧.೧೯ |
| ೯. ಮೂಲಗಟ್ಟಿ (Core) | ಒಟ್ಟು ಉಪಕರಣ ೩೬ | ಶೇ. ೨.೬೯ |
| | ೧೩೩೭ | |

ಈ ಮೇಲೆ ಹೇಳಿದ ಮಾದರಿಯ ಉಪಕರಣಗಳನ್ನು ಅವುಗಳ ಆಕಾರ, ಗಾತ್ರ ಹಾಗೂ ಕಾರ್ಯ ನಿರ್ವಹಿ-ಸುವ ಅಂಚು, ಮೊನೆ ಇವುಗಳನ್ನಾಧರಿಸಿ ಇನ್ನಷ್ಟು ಉಪಗುಂಪುಗಳಾಗಿ ವಿಂಗಡಿಸಿದೆ. ಪ್ರತಿಯೊಂದೂ ಮಾದರಿಯ ಉಪಕ-ರಣಗಳ ವೈವಿಧ್ಯ,ಉಪಗುಂಪುಗಳು ಹಾಗೂ ಅವುಗಳ ಶೇಕಡಾವಾರು ಪ್ರಮಾಣ ಮುಂತಾದವುಗಳನ್ನು ಪ್ರತ್ಯೇಕವಾಗಿ ವಿಶ್ಲೇ-ಷಿಸಿದೆ.

ಈ ಹಂತದ ನೆಲೆಗಳಲ್ಲಿ ದೊರೆತಿರುವ ಒಟ್ಟು ಉಪಕರಣಗಳ ವೈವಿಧ್ಯ ಹಾಗೂ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೩ ನಲ್ಲಿ ನೀಡಿದೆ ಶೇಕಡವಾರು ಪ್ರಮಾಣದಂತೆ ವೃತ್ತ ನಕ್ಷೆ ರೂಪಿಸಿದ್ದು ವಿವರಣೆಯನ್ನು ವೃತ್ತ ನಕ್ಷೆ ಸಂಖ್ಯೆ ೭.ಅ ರಲ್ಲಿ ನೀಡಿದೆ. ಪ್ರತಿ ಗುಂಪಿನ ಉಪಕರಣಗಳ ವಿವರಣೆಯನ್ನು ಪ್ರತ್ಯೇಕವಾಗಿ ನಿರೂಪಿಸಿದೆ.

**ಸೂಕ್ಷ್ಮ ಶಿಲಾಯುಗದ ಉಪಕರಣ ವೈವಿಧ್ಯ.**

**ಮೊದಲನೆ ಹಂತ**

(ಹಳೆಶಿಲಾಯುಗದ ನೆಲೆಗಳ ಜೊತೆಗಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು)

**ಕೋಷ್ಟಕ ಸಂಖ್ಯೆ ೭.೩**

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆ ಮಾದರಿ | ಹೆರೆಚಕ್ಕೆ ಮಾದರಿ | ಮೊನೆ ಮಾದರಿ | ಬಾಣದಮೊನೆ | ಕೊರೆಗ | ಕೊರೆಯುಳಿ | ಅರ್ಧ ಚಂದ್ರಾಕೃತಿ | ದಬ್ಬಳ | ಮೂಲ ಶಿಲಾಗಟ್ಟಿ | ಒಟ್ಟು | ಶೇ |
|---|---|---|---|---|---|---|---|---|---|---|---|---|
| ೧ | ಅಪ್ಪಾನಹಳ್ಳಿ | ೮ | ೩ | ೩ | | ೨ | | | | | ೧೬ | ೧.೧೯ |
| ೨ | ಇರಕಸಂದ್ರ ಕಾಲೋನಿ | ೫ | ೩ | ೫ | ೧ | | ೧ | ೩ | ೩ | | ೨೧ | ೧.೫೭ |
| ೩ | ಉನಗನಾಲ | ೧೧ | ೩ | ೫ | | ೧ | ೩ | | | ೧ | ೨೪ | ೧.೭೯ |
| ೪ | ಓಬಳಾಪುರ | ೩ | ೫ | ೩ | ೧ | | | | | | ೧೨ | ೦.೮೯ |
| ೫ | ಕಿರಗಿ | ೧೧ | ೩ | ೩ | | | | | | ೧ | ೧೮ | ೧.೩೪ |
| ೬ | ಕಾರೇಕುರ್ಚಿ | | ೧ | ೧ | | | | | | | ೨ | ೦.೧೪ |
| ೭ | ಕಾವಲಹಟ್ಟಿ | ೬ | ೧ | ೧ | | ೧ | | | | | ೯ | ೦.೬೭ |
| ೮ | ಗಂಗಿಕೆರೆ | ೩೩ | ೧೧ | ೮ | | | | | | ೪ | ೫೬ | ೪.೧೮ |
| ೯ | ಗುಬ್ಬಿ | | ೩ | | ೩ | | | | | ೧ | ೭ | ೦.೫೨ |
| ೧೦ | ಚಿಕ್ಕೇಗೌಡನದೊಪ್ಪ | ೩ | | ೧ | | ೧ | | | | | ೫ | ೦.೩೭ |
| ೧೧ | ಘಟಾಪುರ | ೪೪ | ೨೦ | ೨೭ | ೧ | ೫ | | ೩ | | ೧ | ೧೦೧ | ೭.೫೫ |
| ೧೨ | ದೊಡ್ಡಗುಣಿ | ೧೪ | ೧೧ | ೪ | ೨ | | | | ೪ | | ೩೫ | ೨.೬೧ |
| ೧೩ | ಬೊಮ್ಮೇನಹಳ್ಳಿ | ೫ | | ೧ | | | | | | | ೬ | ೦.೪೪ |
| ೧೪ | ಮೂಗನಾಯಕನಕೋಟೆ ಉತ್ತರ | ೧೩ | ೯ | ೬ | ೫ | | | | | ೮ | ೪೧ | ೩.೦೬ |
| ೧೫ | ಮೂಗನಾಯಕನಕೋಟೆ ಪೂರ್ವ | ೧೧೩ | ೭೪ | ೫೪ | ೨೪ | ೮ | | ೧೩ | ೩ | ೧೨ | ೩೦೧ | ೨೨.೫೧ |
| ೧೬ | ಮೂಗನಾಯಕನಕೋಟೆ ದಕ್ಷಿಣ | ೮೦ | ೬೧ | ೪೦ | ೧೪ | ೫ | | ೭ | | | ೨೦೭ | ೧೫.೪೮ |
| ೧೭ | ಮೂಗನಾಯಕನಕೋಟೆ ಪಶ್ಚಿಮ | ೮೦ | ೬೫ | ೧೪ | ೨ | ೨ | ೬ | ೯ | ೪ | ೫ | ೧೮೭ | ೧೩.೯೮ |
| ೧೮ | ಮಂಚಕಲ್‌ಕುಪ್ಪೆ | ೪೮ | ೧೩ | ೧೧ | ೮ | ೪ | | ೭ | ೧ | ೨ | ೯೪ | ೭.೦೩ |
| ೧೯ | ಮಂಚಲಿದ್ದೊರೆ | ೫ | ೩ | | | | | | | | ೮ | ೦.೫೯ |
| ೨೦ | ಯಕ್ಕೆಲಹಟ್ಟಿ | ೮ | ೧೨ | ೩ | ೧ | ೧ | ೧ | ೧ | ೧ | ೧ | ೨೯ | ೨.೧೬ |
| ೨೧ | ಯಲ್ಲಾಪುರ | ೧೧ | ೩ | ೪ | | | | ೧ | | | ೧೯ | ೧.೪೨ |
| ೨೨ | ಶಿವಪುರ | ೧೩ | | ೧ | | ೨ | | | | | ೧೬ | ೧.೧೯ |
| ೨೩ | ಶೆಟ್ಟಿಹಳ್ಳಿ | ೧೬ | ೧೨ | ೮ | ೨ | ೧ | ೨ | ೩ | | | ೪೪ | ೩.೨೯ |
| ೨೪ | ಸಾಲುಹಟ್ಟಿ | ೯ | ೪ | | ೧ | | | ೧ | | | ೧೫ | ೧.೧೨ |
| ೨೫ | ಸಿದ್ದೇಹಳ್ಳಿ | ೭ | ೧ | ೧ | | | | | | | ೯ | ೦.೬೭ |
| ೨೬ | ಹರೇನಹಳ್ಳಿ | ೨ | ೧ | | | | | | | | ೩ | ೦.೨೨ |
| ೨೭ | ಹಿಮಗಿರಿ | ೫ | | | | | | | | | ೫ | ೦.೩೭ |
| ೨೮ | ಹಿರೇಹಳ್ಳಿ | ೫ | ೧೦ | ೪ | | | | | | | ೧೯ | ೧.೪೨ |
| ೨೯ | ಹೊನ್ನೇಮಾರನಹಳ್ಳಿ | ೧೬ | ೪ | ೨ | ೨ | ೨ | | ೨ | | | ೨೮ | ೨.೦೯ |
| | ಒಟ್ಟು | ೫೭೪ | ೩೩೬ | ೨೧೦ | ೬೭ | ೩೫ | ೧೩ | ೫೦ | ೧೬ | ೩೬ | ೧೩೩೭ | |
| | ಶೇ | ೪೨.೯೩ | ೨೫.೧೩ | ೧೫.೭೦ | ೫.೦೧ | ೨.೬೧ | ೦.೯೭ | ೩.೭೩ | ೧.೧೯ | ೨.೬೯ | | |

ವೃತ್ತ ನಕ್ಷೆ ಸಂಖ್ಯೆ ೭.೫




## ೧. ನೀಳಚಕ್ಕೆ ಉಪಕರಣಗಳ ವಿವರಣೆ (ಮೊದಲನೆ ಹಂತ)

ಸೂಕ್ಷ್ಮ ಶಿಲಾಯುಗದ ಉಪಕರಣಗಳು ಬಹುಪಾಲು ಅಂತ್ಯ ಹಳೆಶಿಲಾಯುಗದ ನೆಲೆಗಳಿರುವ ಸ್ಥಳಗಳಲ್ಲಿಯೇ ಬೆಳಕಿಗೆ ಬಂದಿವೆ. ಸಹಜವಾಗಿ ಈ ಕಾಲದ ಶಿಲೋಪಕರಣಗಳು ಅಂತ್ಯ ಹಳೆಶಿಲಾಯುಗದ ಶಿಲೋಪಕರಣಗಳಿಂದ ಹೆಚ್ಚು ಕಡಿಮೆ ನೇರವಾಗಿ ಪ್ರಭಾವಿತಾಗಿರುವಂತೆ ಕಾಣುತ್ತವೆ. ಅಂತ್ಯ ಹಳೆಶಿಲಾಯುಗದ ಉಪಕರಣ ವೈವಿಧ್ಯವು ಬಹು ಮಟ್ಟಿಗೆ ಈ ಕಾಲದಲ್ಲಿಯೂ ಮುಂದುವರಿಯುವುದಲ್ಲದೆ ಸ್ವಲ್ಪ ಮಟ್ಟಿಗೆ ಮಾರ್ಪಾಡನ್ನೂ ಹೊಂದಿವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದ ಪೈಕಿ ೨೭ ನೆಲೆಗಳಲ್ಲಿ ದೊರಕಿರುವ ನೀಳಚಕ್ಕೆ ಗುಂಪಿನ ಉಪಕರಣಗಳು ಮುಖ್ಯವಾಗುತ್ತವೆ.

ಗುಂಪಿನ ಒಟ್ಟು ೫೭೪ (ಶೇ. ೪೨.೯೩) ಉಪಕರಣಗಳು ದೊರೆತಿವೆ. ಉಪಯೋಗಿಸಿರುವ ಶಿಲೆಗಳು ಸ್ವಲ್ಪ ಪ್ರಮಾಣದಲ್ಲಿ ಜಾಸ್ಪರ್ ಗುಂಪಿನ ಶಿಲೆ (೧೮ ಜಾಸ್ಪರ್ ಮತ್ತು ೫೦ ಅದಿರುಯುಕ್ತ ಜಾಸ್ಪರ್) ಗಳಲ್ಲಿಯೂ ಹಾಗೂ ಅತಿ ಹೆಚ್ಚು ಪ್ರಮಾಣದಲ್ಲಿ ಕ್ವಾರ್ಟ್ಸ ಗುಂಪಿನ ಶಿಲೆ (೪೫೦ ಕ್ವಾರ್ಟ್ಸ ಮತ್ತು ೫೬ ಅದಿರುಯುಕ್ತ ಕ್ವಾರ್ಟ್ಸ) ಗಳಲ್ಲಿಯೂ ರೂಪಿತವಾಗಿದೆ. ಹರಿತ ಅಲಗನ್ನು ರೂಪಿಸಿರುವ ಪಾರ್ಶ್ವಗಳು, ಬಳಸಿರುವ ತಾಂತ್ರಿಕತೆ, ಗಾತ್ರ ಮತ್ತು ಉಪಯೋಗ ಇವುಗಳನ್ನಾಧರಿಸಿ ನೀಳಚಕ್ಕೆ ಗುಂಪಿನ ಉಪಕರಣಗಳನ್ನು ಏಳು ಉಪ ಗುಂಪುಗಳಾಗಿ ವಿಂಗಡಿಸಲಾಗಿದೆ, ಇವುಗಳೆಂದರೆ

| | | | |
|---|---|---|---|
| ೧. | ನೀಳಚಕ್ಕೆಯಂತಹ ಚಕ್ಕೆ | ಒಟ್ಟು ಉಪಕರಣ ೧೦೬ | ಶೇ ೧೮.೪೬ |
| ೨. | ಒಬ್ಬದಿ ನೀಳಚಕ್ಕೆ | ಒಟ್ಟು ಉಪಕರಣ ೧೦೯ | ಶೇ ೧೮.೯೮ |
| ೩. | ಇಬ್ಬದಿ ನೀಳಚಕ್ಕೆ | ಒಟ್ಟು ಉಪಕರಣ ೧೫೭ | ಶೇ ೨೭.೩೫ |
| ೪. | ದ್ವಿತೀಯ ಶ್ರೇಣಿಯ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ | ಒಟ್ಟು ಉಪಕರಣ ೨೬ | ಶೇ ೪.೫೨ |
| ೫. | ಕಿರು ನೀಳಚಕ್ಕೆ | ಒಟ್ಟು ಉಪಕರಣ ೧೫೯ | ಶೇ ೨೭.೭೦ |
| ೬. | ಕೈಚಾಕು ನೀಳಚಕ್ಕೆ | ಒಟ್ಟು ಉಪಕರಣ ೧೧ | ಶೇ ೧.೯೧ |
| ೭. | ಗರಗಸದಂತಹ ನೀಳಚಕ್ಕೆ | ಒಟ್ಟು ಉಪಕರಣ ೬ | ಶೇ ೧.೦೪ |

ಪ್ರತಿ ಉಪಗುಂಪಿನ ಉಪಕರಣಗಳು ದೊರಕಿರುವ ನೆಲೆ, ಉಪಕರಣಗಳ ಸಂಖ್ಯೆ ಮತ್ತು ನೀಳಚಕ್ಕೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೪ ಮತ್ತು ಒಟ್ಟು ಉಪಕರಣಗಳನ್ವಯದಂತೆ ವೃತ್ತ ನಕ್ಷೆ ರೂಪಿಸಿದ್ದು ವಿವರಣೆಯನ್ನು ವೃತ್ತ ನಕ್ಷೆ ಸಂಖ್ಯೆ ೭.ಇ ರಲ್ಲಿ ನೀಡಿದೆ.

**ಸೂಕ್ಷ್ಮ ಶಿಲಾಯುಗದ ನೀಳಚಕ್ಕೆ ಉಪಕರಣ ಮಾದರಿ**

**ಮೊದಲನೆಯ ಹಂತ**

(ಹಳೆ ಶಿಲಾಯುಗದ ನೆಲೆಗಳ ಜೊತೆಗಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು)

ಕೋಷ್ಟಕ ಸಂಖ್ಯೆ ೭.೪

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆಯಂತಹ ಚಕ್ಕೆ Bladish Flake | ಒಬ್ಬದಿ ನೀಳಚಕ್ಕೆ Single Sided Blade | ಇಬ್ಬದಿ ನೀಳಚಕ್ಕೆ Paralel Sided Blade | ದ್ವಿತೀಯ ಶ್ರೇಣಿಯ ಚಕ್ಕೆ ಎಬ್ಬಿಸಿದ ನೀಳಚಕ್ಕೆ Retouched Blade | ಕಿರು ನೀಳಚಕ್ಕೆ Bladelet | ಕೈ ಚಾಕು ನೀಳಚಕ್ಕೆ Penknife Blade | ಗರಗಸಂದಂತಹ ನೀಳಚಕ್ಕೆ Saw like Blade | ಒಟ್ಟು | ಶೇ |
|---|---|---|---|---|---|---|---|---|---|---|
| ೧ | ಅಪ್ಪಾನಹಳ್ಳಿ | ೧ | ೨ | ೧ | | ೪ | | | ೮ | ೧.೩೯ |
| ೨ | ಇರಕಸಂದ್ರ ಕಾಲೋನಿ | ೨ | ೧ | | | ೧ | ೧ | | ೫ | ೦.೮೭ |
| ೩ | ಉನಗನಾಲ | ೨ | ೧ | ೨ | ೨ | ೪ | | | ೧೧ | ೧.೯೧ |
| ೪ | ಓಬಳಾಪುರ | | | ೩ | | | | | ೩ | ೦.೫೨ |
| ೫ | ಕರಡಿ | ೧ | ೪ | ೩ | | ೩ | | | ೧೧ | ೧.೯೧ |
| ೬ | ಕಾರೇಕುರ್ಚಿ | | | | | | | | | |
| ೭ | ಕಾವಲಹಟ್ಟಿ | ೩ | | ೩ | | | | | ೬ | ೧.೦೪ |
| ೮ | ಗಳಿಗೆಕೆರೆ | ೬ | ೫ | ೬ | ೨ | ೧೪ | | | ೩೩ | ೫.೭೪ |
| ೯ | ಗುಟ್ಟೆ | | | | | | | | | |
| ೧೦ | ಚಿಕ್ಕೇಗೌಡನರೊಪ್ಪ | | | ೩ | | | | | ೩ | ೦.೫೨ |
| ೧೧ | ಗಣಾಪುರ | | ೧೨ | ೧೪ | ೨ | ೧೪ | | ೨ | ೪೪ | ೭.೬೬ |
| ೧೨ | ದೊಡ್ಡಗುಣಿ | ೪ | | ೭ | | ೩ | | | ೧೪ | ೨.೪೩ |
| ೧೩ | ಬೊಮ್ಮೇನಹಳ್ಳಿ | ೧ | ೧ | ೩ | | | | | ೫ | ೦.೮೭ |
| ೧೪ | ಮೂಗನಾಯಕನಕೋಟೆ ಉತ್ತರ | ೫ | ೪ | ೩ | | ೧ | | | ೧೩ | ೨.೨೬ |
| ೧೫ | ಮೂಗನಾಯಕನಕೋಟೆ ಪೂರ್ವ | ೨೭ | ೧೮ | ೨೩ | ೮ | ೩೫ | ೧ | ೧ | ೧೧೩ | ೧೯.೬೮ |
| ೧೬ | ಮೂಗನಾಯಕನಕೋಟೆ ದಕ್ಷಿಣ | ೧೧ | ೧೫ | ೨೧ | | ೨೮ | ೩ | ೨ | ೮೦ | ೧೩.೯೩ |
| ೧೭ | ಮೂಗನಾಯಕನಕೋಟೆ ಪಶ್ಚಿಮ | ೧೫ | ೧೩ | ೨೪ | ೩ | ೨೫ | | | ೮೦ | ೧೩.೯೩ |
| ೧೮ | ಮಂಚಕಲ್‌ಕುಪ್ಪೆ | ೫ | ೧೦ | ೧೪ | ೩ | ೧೬ | | | ೪೮ | ೮.೩೬ |
| ೧೯ | ಮಂಚಲಿದ್ದೊರೆ | ೨ | | ೧ | | ೨ | | | ೫ | ೦.೮೭ |
| ೨೦ | ಯಕ್ಕಲಕಟ್ಟೆ | ೪ | ೨ | | | ೨ | | | ೮ | ೧.೩೯ |
| ೨೧ | ಯಲ್ಲಾಪುರ | ೨ | ೫ | ೪ | | | | | ೧೧ | ೧.೯೧ |
| ೨೨ | ಶಿವಪುರ | | ೧ | ೮ | ೩ | | ೧ | | ೧೩ | ೨.೨೬ |
| ೨೩ | ಶೆಟ್ಟಿಹಳ್ಳಿ | ೫ | ೫ | ೪ | | ೧ | ೧ | | ೧೬ | ೨.೭೮ |
| ೨೪ | ಸಾಲುಟ್ಟಿ | | ೩ | ೨ | ೩ | | ೧ | | ೯ | ೧.೫೬ |
| ೨೫ | ಸಿದ್ದೇಹಳ್ಳಿ | ೩ | ೨ | ೨ | | | | | ೭ | ೧.೨೧ |
| ೨೬ | ಹರೇನಹಳ್ಳಿ | | ೧ | ೧ | | | | | ೨ | ೦.೩೪ |
| ೨೭ | ಹಿಮಗಿರಿ | ೫ | | | | | | | ೫ | ೦.೮೭ |
| ೨೮ | ಹಿರೇಹಳ್ಳಿ | ೨ | | | | | ೩ | | ೫ | ೦.೮೭ |
| ೨೯ | ಹೊನ್ನೇಮಾರನಹಳ್ಳಿ | | ೪ | ೫ | | ೭ | | | ೧೬ | ೨.೭೮ |
| | ಒಟ್ಟು | ೧೦೬ | ೧೦೯ | ೧೫೭ | ೨೬ | ೧೫೯ | ೧೧ | ೬ | ೫೭೪ | |
| | ಶೇ | ೧೮.೪೬ | ೧೮.೯೮ | ೨೭.೩೫ | ೪.೫೨ | ೨೭.೭೦ | ೧.೯೧ | ೧.೦೪ | | |

ವೃತ್ತ ನಕ್ಷೆ ಸಂಖ್ಯೆ ೭.೩




ಮೇಲಿನ ಕೋಷ್ಟಕದಲ್ಲಿ ಕಾಣುವಂತೆ ಈ ಸಮೂಹದಲ್ಲಿ ಕಿರು ನೀಳಚಕ್ಕೆಗಳು ಅತಿ ಹೆಚ್ಚು ಸಂಖ್ಯೆಯಲ್ಲಿ ೧೫೯ (ಶೇ. ೨೭.೭೦) ಇವೆ. ನೀಳಚಕ್ಕೆ ಗುಂಪಿನ ಇತರ ಮುಖ್ಯ ಉಪ ಗುಂಪುಗಳು ಅನುಕ್ರಮವಾಗಿ ಕಡಿಮೆ ಇವೆ. ಈ ಗುಂಪಿನ ವಿಶೇಷ ಉಪಕರಣಗಳು ಒಟ್ಟು ೪೩ ಇದ್ದು, ಸೂಕ್ಷ್ಮ ರೀತಿಯಲ್ಲಿ ಪುನರ್ ನವೀಕರಿಸಿ ಗರಗಸದಂತೆ ಉಪಯೋಗವಾಗುತ್ತಿದ್ದ ಉಪಕರಣಗಳು ಅತ್ಯಂತ ಕಡಿಮೆ ಪ್ರಮಾಣದಲ್ಲಿವೆ.
ಪ್ರತಿ ಉಪಗಂಪಿನ ಉಪಕರಣಗಳ ವಿಶ್ಲೇಷಣೆಯನ್ನು ಪ್ರತ್ಯೇಕವಾಗಿ ವಿವರಿಸಿದೆ.

**೧.೧ ನೀಳಚಕ್ಕೆಯಂತಹ ಚಕ್ಕೆ**

ನೀಳಚಕ್ಕೆಯ ವಿವಿಧ ಮಾದರಿಗಳನ್ನು ರೂಪಿಸುವ ಹಂತದಲ್ಲಿ ಮೊದಲ ಹಂತವೆನ್ನಬಹುದಾದ ನೀಳಚಕ್ಕೆಯನ್ನು ಹೋಲುವ ಚಕ್ಕೆಗಳು ಒಟ್ಟು ೨೧ ನೆಲೆಗಳಲ್ಲಿ ೧೦೬ (ಶೇ. ೧೮.೪೬) ಉಪಕರಣಗಳು ದೊರೆತಿವೆ. ಸಾಧಾರಣವಾಗಿ ಇವು ಪ್ರಾಥಮಿಕ ಚಕ್ಕೆಗಳಾಗಿರುವುದರಿಂದ ಒರಟಾಗಿದ್ದು ನಾಜೂಕಾದ ಪುಡಿಗೆಲಸ ಕಂಡು ಬರುವುದಿಲ್ಲ. ಹೆಚ್ಚಿನ ಉಪಕರಣಗಳಲ್ಲಿ ಕೆಳತುದಿಯು ದಪ್ಪಗಿದ್ದು ಸಮತಲ ತಾಡನ ವೇದಿಕೆಯನ್ನು ಹೊಂದಿವೆ. ಅಲ್ಲಲ್ಲಿ ಮೂಲ ಶಿಲಾ ತೊಗಟೆಯ ಅಂಶವಿರುವುದು ಕಂಡು ಬರುತ್ತದೆ. ಹಿಂಬದಿಯಲ್ಲಿ ಸಮತಲ, ನಿಮ್ನತೆ ಮತ್ತು ಅಲೆ ಅಲೆಯಾದ ಮೇಲ್ಮೈ ಕಾಣುತ್ತದೆ. ತ್ರಿಭುಜಾಕಾರ ಹೆಚ್ಚಾಗಿದ್ದರೂ ಆಯತ, ಅರ್ಧ ಚಂದ್ರಾಕೃತಿ, ಮತ್ತು ಬಹು ಬುಜಾಕೃತಿಗಳೂ ಇವೆ. ಅಡ್ಡ ವಿನ್ಯಾಸದಲ್ಲಿಯೂ ಹೆಚ್ಚಿನ ಉಪಕರಣಗಳು ತ್ರಿಭುಜಾಕೃತಿಯನ್ನು ತೋರ್ಪಡಿಸಿದರೆ ಕೆಲವು ತ್ರಾಪಿಜ್ಯ, ಆಯತ, ಅರ್ಧ ಚಂದ್ರಾಕೃತಿ ಮತ್ತು ಅಜ್ಯಾಮಿತೀಯ ಆಕೃತಿಗಳನ್ನು ಹೊಂದಿವೆ. ಮುಂಬದಿಯಲ್ಲಿ ಮಧ್ಯ ಉಬ್ಬೇಣು ಎದ್ದು ಕಾಣುತ್ತದೆ. ಹೆಚ್ಚಿನ ಉಪಕರಣಗಳಲ್ಲಿ ಮೇಲ್ತುದಿ ಮೊನಚಾಗಿದ್ದರೆ ಕೆಲವು ಸರಳರೇಖೆ, ವಕ್ರರೇಖೆ ಮತ್ತು ದುಂಡಾಗಿರುವುದನ್ನು ಗುರುತಿಸಬಹುದು. ಬಹುಮಟ್ಟಿಗೆ ಉಪಕರಣದ ಒಂದೇ ಪಾರ್ಶ್ವದಲ್ಲಿ ಹರಿತ ಅಲಗಿದ್ದು ಯಾವುದೇ ಪುಡಿಗೆಲಸ ಕಾಣುವುದಿಲ್ಲ.

ಒಟ್ಟು ಉಪಕರಣಗಳಲ್ಲಿ ೫ ಅದಿರುಯುಕ್ತ ಜಾಸ್ಪರ್, ೧೨ ಅದಿರುಯುಕ್ತ ಕ್ವಾರ್ಟ್ಸ್ ಹಾಗೂ ಉಳಿದ ೮೯

ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿತವಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೫ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೫**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೪೨ | ೪೪.೩೪ | ೫-೧೦ | ೧೮ | ೧೬.೯೮ | ೧-೫ | ೯ | ೮.೪೯ |
| ೨೦-೩೦ | ೪೫ | ೪೨.೪೫ | ೧೦-೧೫ | ೬೨ | ೧೫೮.೪೯ | ೫-೧೦ | ೯೦ | ೮೪.೯೧ |
| ೩೦-೪೦ | ೧೪ | ೧೩.೨೧ | ೧೫-೨೦ | ೨೬ | ೨೪.೫೩ | ೧೦-೧೫ | ೭ | ೬.೬೦ |
| ಒಟ್ಟು | ೧೦೬ | | | ೧೦೬ | | | ೧೦೬ | |

ಈ ಗುಂಪಿನ ಒಟ್ಟು ಉಪಕರಣಗಳಲ್ಲಿ ಉದ್ದ ಕನಿಷ್ಠ ೧೫ ಗರಿಷ್ಠ ೩೮ ಮಿ.ಮೀ. ಇದ್ದು ಇವುಗಳಲ್ಲಿ ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಇವುಗಳಲ್ಲಿ ಅಗಲ ಕನಿಷ್ಠ ೭ಗರಿಷ್ಠ೨೦ ಮಿ.ಮೀ. ಇದ್ದು ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಅದೇ ರೀತಿ ದಪ್ಪ ಕನಿಷ್ಠ ೩ ಹಾಗೂ ಗರಿಷ್ಠ ೧೨ ಮಿ.ಮೀ. ಗಳಾಗಿದ್ದು ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ.

**೧.೨ ಒಬ್ಬದಿ ನೀಳಚಕ್ಕೆ**

ಒಂದೇ ಪಾರ್ಶ್ವ ಅಥವಾ ಬದಿಯಲ್ಲಿ ಹರಿತವಾದ ಅಲಗಿರುವ ನೀಳಚಕ್ಕೆಗಳು ಒಟ್ಟು ೧೦೯ (ಶೇ. ೧೮.೯೮) ಇವೆ. ಅಧ್ಯಯನ ಪ್ರದೇಶದ ೨೦ ನೆಲೆಗಳಲ್ಲಿ ಇಂತಹ ಉಪಕರಣಗಳು ದೊರಕಿದ್ದು ಇವು ಜಾಸ್ಪರ್ ನಲ್ಲಿ ೪, ಅದಿರುಯುಕ್ತ ಜಾಸ್ಪರ್‌ನಲ್ಲಿ ೮, ಅದಿರುಯುಕ್ತ ಕ್ವಾರ್ಟ್ಸ್‌ನಲ್ಲಿ ೧೦ ಹಾಗೂ ಕ್ವಾರ್ಟ್ಸ್ ಶಿಲೆಗಳಲ್ಲಿ ೮೭ ಇವೆ. ಹೆಚ್ಚಿನ ಉಪಕರಣಗಳು ಪ್ರಾಥಮಿಕ ಚಕ್ಕೆಗಳಾಗಿದ್ದು ದಪ್ಪನೆಯ ಬುಡದಲ್ಲಿ ಮತ್ತು ಪಾರ್ಶ್ವಗಳಲ್ಲಿ ಮೂಲ ಶಿಲಾ ತೊಗಟೆಯ ಭಾಗಗಳು ಕಂಡು ಬರುತ್ತವೆ. ಪಾರ್ಶ್ವ ಮತ್ತು ತುದಿ ಚಕ್ಕೆಗಳೆರಡನ್ನೂ ಉಪಕರಣ ರೂಪಿಸಲು ಬಳಸಿದೆ. ಹೆಚ್ಚಿನ ಉಪಕರಣಗಳಲ್ಲಿ ಒಂದು ಪಾರ್ಶ್ವ ಹೆಚ್ಚು ಹರಿತವಾಗಿದ್ದು ಇನ್ನೊಂದು ಪಾರ್ಶ್ವ ದಪ್ಪಗಿದೆ. ಕೆಳತುದಿಯು ದಪ್ಪವಾಗಿದ್ದು ಸಮತಲ ತಾಡನ ವೇದಿಕೆಯನ್ನು ಹೊಂದಿದೆ. ಹಿಂಬದಿಯಲ್ಲಿ ಪ್ರಾಥಮಿಕ ಚಕ್ಕೆಯನ್ನಬ್ಬಿಸಲು ಬಳಸಿರುವ ತಂತ್ರವನ್ನು ಅನುಸರಿಸಿ ಸಮತಲ ಹಾಗೂ ನಿಮ್ನತೆಗಳು ಕಾಣುತ್ತವೆ. ಉತ್ತಮ ದರ್ಜೆಯ ಶಿಲಾ ಮಾದರಿಗಳಲ್ಲಿ ಹಿಂಬದಿ ಅಲೆ ಅಲೆಯಾಗಿರುವುದು ಕಂಡು ಬರುತ್ತದೆ. ಮೇಲ್ತುದಿಯು ಹೆಚ್ಚಿನ ಉಪಕರಣಗಳಲ್ಲಿ ಸರಳರೇಖೆಯಲ್ಲಿದ್ದರೆ ಕೆಲವು ವಕ್ರರೇಖೆಯಲ್ಲಿ, ಮೊನೆಯಲ್ಲಿ, ಅರ್ಧ ವೃತ್ತಾಕಾರದಲ್ಲಿ ಕೊನೆಯಾಗಿವೆ. ಸಾಧಾರಣವಾಗಿ ಮುಂಬದಿಯಲ್ಲಿ ಸರಳರೇಖೆಯಲ್ಲಿ ನೇರವಾಗಿ ಸಾಗುವ ಪ್ರಮುಖ ಉಬ್ಬೇಣು

ಇದ್ದರೆ ಕೆಲವದರಲ್ಲಿ ಅದನ್ನು ತೆಗೆದಿದೆ. ಒಂದೆರಡು ಉಪಕರಣಗಳಲ್ಲಿ ಅಲಗನ್ನು ಹೆಚ್ಚು ಹರಿತಗೊಳಿಸಲು ಪುಡಿಗೆಲಸ ಮಾಡಿರುವುದು ಕಾಣುತ್ತದೆ. ಒಟ್ಟು ವಿನ್ಯಾಸದಲ್ಲಿ ತ್ರಿಭುಜಾಕೃತಿಗಳು ಹೆಚ್ಚಾಗಿದ್ದರೂ ಆಯತ ಹಾಗೂ ಅಂಡಾಕೃತಿಗಳೂ ಇವೆ. ಅಡ್ಡ ವಿನ್ಯಾಸದಲ್ಲಿಯೂ ವಿವಿಧ ಮಾದರಿಯ ತ್ರಿಭುಜ, ತ್ರಾಪಿಜ್ಯ, ಆಯತ ಮತ್ತು ಚತುರ್ಭುಜಾಕೃತಿಗಳಲ್ಲದೆ ಅಜ್ಯಾ-ಮಿತೀಯ ರೂಪಗಳೂ ಕಾಣುತ್ತವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೬ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೬

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೫೦ | ೪೫.೮೭ | ೫-೧೦ | ೪೩ | ೩೯.೪೫ | ೧-೫ | ೧೦ | ೯.೧೭ |
| ೨೦-೩೦ | ೫೭ | ೫೨.೨೯ | ೧೦-೧೫ | ೪೫ | ೪೧.೨೮ | ೫-೧೦ | ೯೭ | ೮೮.೯೯ |
| ೩೦-೨೫ | ೨ | ೧.೮೩ | ೧೫-೨೦ | ೨೧ | ೧೯.೨೭ | ೧೦-೧೫ | ೨ | ೧.೮೩ |
| ಒಟ್ಟು | ೧೦೯ | | | ೧೦೯ | | | ೧೦೯ | |

ಈ ಗುಂಪಿನ ಒಟ್ಟು ಉಪಕರಣಗಳಲ್ಲಿ ಉದ್ದ ಕನಿಷ್ಠ ೧೧ ಗರಿಷ್ಠ ೩೧ ಮಿ.ಮೀ. ಇದ್ದು ಇವುಗಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣ ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಇವುಗಳ ಆಗಲ ಕನಿಷ್ಠ ೫ ಗರಿಷ್ಠ ೨೦ ಮಿಮೀ.ಗಳಾಗಿದ್ದು ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಅದೇ ರೀತಿ ಇವುಗಳ ದಪ್ಪ ಕನಿಷ್ಠ ೨ ಗರಿಷ್ಠ ೧೧ ಮಿ.ಮೀ. ಇದ್ದು ಇವುಗಳಲ್ಲಿ ೫ ರಿಂದ ೧೦ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ.

## ೧.೩ ಇಬ್ಬದಿ ನೀಳಚಕ್ಕೆ

ನೀಳಚಕ್ಕೆ ಗುಂಪಿನಲ್ಲಿ ಕಿರು ನೀಳಚಕ್ಕೆಗಳ ನಂತರ ಅತಿ ಹೆಚ್ಚು ಸಂಖ್ಯೆಯಲ್ಲಿ ದೊರೆಯುವ ಮಾದರಿ ಇಬ್ಬದಿ ನೀಳಚಕ್ಕೆಗಳದು. ಅಧ್ಯಯನ ಪ್ರದೇಶದ ೨೩ ನೆಲೆಗಳಿಂದ ಒಟ್ಟು ೧೫೭ (ಶೇ. ೨೭.೩೫) ಉಪಕರಣಗಳನ್ನು ಸಂಗ್ರಹಿಸದೆ. ಈ ಉಪಕರಣಗಳನ್ನು ೫ ಜಾಸ್ಪರ್, ೧೮ ಅದಿರುಯುಕ್ತ ಜಾಸ್ಪರ್ ೧೨೩ ಕ್ವಾರ್ಟ್ಜ಼ ಹಾಗೂ ೧೧ ಅದಿರುಯುಕ್ತ ಕ್ವಾರ್ಟ್ಜ಼ ಶಿಲೆ-ಯಲ್ಲಿ ರೂಪಿಸಲಾಗಿದೆ. ಹೆಚ್ಚಿನ ಉಪಕರಣಗಳು ಪ್ರಾಥಮಿಕ ಚಕ್ಕೆಗಳಾಗಿದ್ದು ಬುಡದಲ್ಲಿ ಅಗಲ ಹೆಚ್ಚಾಗಿದ್ದು ಕ್ರಮೇಣ ಕಡಿ-ಮೆಯಾಗುತ್ತವೆ. ಕೆಲವು ಉಪಕರಣಗಳಲ್ಲಿ ಮಾತ್ರ ದಪ್ಪನೆಯ ಬುಡದಲ್ಲಿ ಅಗಲ ಕಡಿಮೆ ಇದ್ದು ಮೇಲ್ತುದಿಯಲ್ಲಿ ಹೆಚ್ಚಾಗಿದೆ. ಇಂತಹ ಉಪಕರಣಗಳಲ್ಲಿ ಕೆಳತುದಿಯು ಸಮತಲವಿದ್ದು ತಾಡನ ವೇದಿಕೆಯು ಇದೆ. ಕೆಳತುದಿ ಮತ್ತು ಇತರ ಕಡೆಗಳಲ್ಲಿ

ಮೂಲಶಿಲಾ ತೊಗಟೆಯ ಭಾಗವು ಉಳಿದಿದೆ. ಕೆಳತುದಿ ಸಾಧಾರಣವಾಗಿ ಸರಳರೇಖೆಯಲ್ಲಿದ್ದರೆ ಮೇಲ್ತುದಿಯಲ್ಲಿ ಸರಳರೇ-ಖೆ, ವಕ್ರರೇಖೆ, ಮೊನೆ ಹಾಗೂ ದುಂಡನೆಯ ಆಕಾರಗಳು ಕಾಣುತ್ತವೆ. ಹೆಚ್ಚಿನ ಉಪಕರಣಗಳಲ್ಲಿ ಹರಿತವಾದ ಅಲಗುಗಳು ಸಮಾನಾಂತರದಲ್ಲಿದ್ದರೂ ಮೇಲ್ತುದಿ ಮೊನಚಾಗಿರುವ ಮಾದರಿಗಳಲ್ಲಿ ಸಮಾನ ಅಂತರ ಕಾಣುವುದಿಲ್ಲ. ಪ್ರಾಥಮಿಕ ಚಕ್ಕೆ ಎಬ್ಬಿಸಿರುವ ವಿಧಾನಕ್ಕನುಗುಣವಾಗಿ ಹಿಂಬದಿ ಸಮತಲ ಇಲ್ಲವೇ ನಿಮ್ನವಾಗಿದೆ. ಕೆಲವು ಉಪಕರಣಗಳಲ್ಲಿ ತಾಡನ ಶಂಖುವು ಎದ್ದು ಕಾಣುತ್ತದೆ. ಮುಂಬದಿಯಲ್ಲಿ ಹೆಚ್ಚಿನ ಉಪಕರಣಗಳಲ್ಲಿ ಮಧ್ಯಮ ಪ್ರಧಾನವಾಗಿದೆ. ಉಬ್ಬೇಣುನ್ನು ಕೆಲವು ಉಪಕರ-ಣಗಳಲ್ಲಿ ಮಾತ್ರ ಕತ್ತರಿಸಿದೆ. ಮತ್ತೆ ಕೆಲವು ಉದಾಹರಣಗಳಲ್ಲಿ ಮಾತ್ರ ಪುಡಿಗೆಲಸ ಮಾಡಿ ಅಲಗನ್ನು ಹರಿತಗೊಳಿಸಿರುವುದು ಕಾಣುತ್ತದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೭ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೭

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೫೦ | ೩೧.೮೫ | ೫-೧೦ | ೩೨ | ೨೦.೩೮ | ೧-೫ | ೧೧೭ | ೭೪.೫೨ |
| ೨೦-೩೦ | ೯೪ | ೫೯.೮೭ | ೧೦-೧೫ | ೫೮ | ೩೬.೯೪ | ೫-೧೦ | ೪೦ | ೨೫.೪೮ |
| ೩೦-೪೦ | ೧೩ | ೮.೨೮ | ೧೫-೨೫ | ೬೭ | ೪೨.೬೮ | | | |
| ಒಟ್ಟು | ೧೫೭ | | | ೧೫೭ | | | ೧೫೭ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೧೫ ಗರಿಷ್ಠ ೩೬ ಮಿ.ಮೀ. ಇದ್ದು, ಇವುಗಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಇವುಗಳ ಅಗಲ ಕನಿಷ್ಠ ೬ ಗರಿಷ್ಠ ೨೨ ಮಿ.ಮೀ. ಗಳಾಗಿದ್ದು, ಇವುಗಳಲ್ಲಿ ೧೫ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯವುಗಳಾಗಿವೆ. ಅದೇ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೧೦ ಮಿ.ಮೀ. ಗಳಾಗಿದ್ದು, ಇವುಗಳಲ್ಲಿ ೧ ರಿಂದ ೫ ಮಿ.ಮೀ. ವ್ಯಾಪ್ತಿಯ ಉಪಕರಣ ಸಂಖ್ಯೆ ಅತಿ ಹೆಚ್ಚು ಇವೆ.

## ೧.೪ ದ್ವಿತೀಯ ಶ್ರೇಣಿಯ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ

ಮೊದಲಿಗೆ ನೀಳಚಕ್ಕೆಯಾಗಿ ಉಪಯೋಗಿಸಲ್ಪಟ್ಟು, ಅಲಗುಗಳ ಹರಿತತೆ ಕಡಿಮೆಯಾದಾಗ ಸಣ್ಣ ಮರುಚ-ಕ್ಕೆಗಳನ್ನೆಬ್ಬಿಸಿ ಉಪಕರಣವನ್ನು ಪುನರ್ ಉಪಯೋಗಕ್ಕೆ ಸಿದ್ಧ ಪಡಿಸಿದೆ. ಸಾಧಾರಣವಾಗಿ ಮುಂಬದಿಯಿಂದ ಅಥವಾ ಹಿಂಬದಿಯಿಂದ ಈ ಪುಡಿಗೆಲಸನ್ನು ಮಾಡಿರುತ್ತದೆ. ಪುನರ್ ನವೀಕರಿಸಿದ ಈ ಹರಿತ ಅಲಗು ಒಂದು ಅಥವಾ ಎರಡೂ ಪಾರ್ಶ್ವಗಳಲ್ಲೂ ಇರಬಹುದು. ಉಳಿದೆಲ್ಲಾ ಲಕ್ಷಣಗಳಲ್ಲಿ ಇವು ಸಮಾನಾಂತರ ನೀಳಚಕ್ಕೆಗಳನ್ನೇ ಹೋಲುತ್ತವೆ.

ಪ್ರಸ್ತುತ ಅಧ್ಯಯನ ಪ್ರದೇಶದ ೮ ನೆಲೆಗಳಿಂದ ಒಟ್ಟು ೨೬ (ಶೇ. ೪.೫೨) ಉಪಕರಣ ದೊರೆತಿವೆ. ಇವು-ಗಳಲ್ಲಿ ೨ ಜಾಸ್ಪರ್, ೬ ಅದಿರುಯುಕ್ತ ಜಾಸ್ಪರ್ ಹಾಗೂ ೧೮ ಕ್ವಾರ್ಟ್ಜನ ವಿವಿಧ ವರ್ಣದ ಶಿಲೆಗಳಲ್ಲಿ ರೂಪಿಸಲಾಗಿದೆ.

ಹೆಚ್ಚಿನ ಉಪಕರಣಗಳ ಹಿಂಬದಿ ಸಮತಲವಿದ್ದರೆ ಕೆಲವು ನಿಮ್ನವಾಗಿವೆ. ಮುಂಬದಿಯ ಮಧ್ಯದಲ್ಲಿ ಉಬ್ಬೇಣು ಅಥವಾ ಅದನ್ನು ಕತ್ತರಿಸಿ ತೆಗೆದ ಕಲೆಗಳಿವೆ. ಒಂದು ಅಥವಾ ಎರಡೂ ಪಾರ್ಶ್ವಗಳಲ್ಲಿ ಪುಡಿ ಚಕ್ಕೆಕಲೆಗಳಿವೆ. ಎಲ್ಲಾ ಉಪಕರಣಗಳ ಮೇಲ್ತುದಿ ಚೂಪಾಗಿದ್ದು ಮೊನೆಯಂತಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೮ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೮

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೯ | ೩೪.೬೨ | ೫-೧೦ | ೬ | ೨೩.೦೭ | ೧-೫ | ೧೭ | ೬೫.೩೮ |
| ೨೦-೨೫ | ೧೬ | ೬೧.೫೪ | ೧೦-೧೫ | ೧೫ | ೫೭.೬೯ | ೫-೧೦ | ೯ | ೩೪.೬೨ |
| ೨೫-೩೫ | ೧ | ೩.೮೪ | ೧೫-೨೦ | ೫ | ೧೯.೨೩ | | | |
| ಒಟ್ಟು | ೨೬ | | | ೨೬ | | | ೨೬ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೧೬ ಗರಿಷ್ಠ ೩೨ ಮಿ.ಮೀ. ಇದ್ದು, ಇವುಗಳಲ್ಲಿ ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯವುಗಳಾಗಿವೆ. ಅಗಲ ಕನಿಷ್ಠ ೬ ಗರಿಷ್ಠ ೧೮ ಮಿ.ಮೀ. ಗಳಾಗಿದ್ದು, ಇವುಗಳಲ್ಲಿ ೧೦ ರಿಂದ ೧೫ ಮಿ.ಮೀನ ಉಪಕರಣಗಳ ವ್ಯಾಪ್ತಿಯಲ್ಲಿನ ಉಪಕರಣಗಳು ಹೆಚ್ಚು ಇವೆ. ದಪ್ಪ ಕನಿಷ್ಠ ೩ ಗರಿಷ್ಠ ೯ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೧ ರಿಂದ ೫ ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚು ಸಂಖ್ಯೆಯಲ್ಲಿವೆ.

**೧.೫ ಕಿರು ನೀಳಚಕ್ಕೆ**

ನೀಳಚಕ್ಕೆ ಗುಂಪಿನ ಉಪಕರಣಗಳ ತಯಾರಿಕೆಯಲ್ಲಿ ಉದ್ದೇಶಿತ ಸ್ವರೂಪದ ಸಿದ್ಧ ಉಪಕರಣ ನೀಡದೆ ಮುರಿದ ಭಾಗಗಳು, ಉಳಿದ ಜ್ಯಾಮಿತೀಯ ಆಕಾರದ ತಯಾರಿಕೆಯ ಸಂದರ್ಭದಲ್ಲಿ ತ್ಯಾಜ್ಯವಾದ ಕಿರು ನೀಳಚಕ್ಕೆಗಳು ಈ ಗುಂಪಿನ ಅತಿ ಹೆಚ್ಚು ಸಂಖ್ಯೆಯ ಉಪಕರಣಗಳು. ಪ್ರಸ್ತುತ ಅಧ್ಯಯನ ಪ್ರದೇಶದ ೧೫ ನೆಲೆಗಳಿಂದ ಒಟ್ಟು ೧೫೯ (ಶೇ. ೨೭.೬೦) ಉಪಕರಣಗಳನ್ನು ಸಂಗ್ರಹಿಸಲಾಗಿದೆ. ನೀಳಚಕ್ಕೆ ಗುಂಪಿನಲ್ಲಿಯೇ ಇವು ಅತ್ಯಂತ ಗರಿಷ್ಠ ಪ್ರಮಾಣದಲ್ಲಿರುವುದು ಗಮನಾರ್ಹ. ಹೆಚ್ಚಿನ ಉಪಕರಣಗಳಲ್ಲಿ ಹಿಂಬದಿ ಸಮತಲವಾಗಿದ್ದು ಮುಂಬದಿಯಲ್ಲಿ ನೇರವಾಗಿ ಸಾಗುವ ಉಬ್ಬೇಣು ಇದೆ. ಅಲ್ಪ ಪ್ರಮಾಣದ ಉಪಕರಣಗಳಲ್ಲಿ ಈ ಉಬ್ಬೇಣನ್ನು ತೆಗೆದು ಉಪಕರಣವನ್ನು ತೆಳ್ಳಗಾಗಿಸಿದೆ. ಆದ್ದರಿಂದ ಮುಂಬದಿಯ-

ಲ್ಲಿಯೂ ಚಕ್ಕೆಕಲೆಗಳನ್ನು ಕಾಣಬಹುದು. ಉಳಿದಂತೆ ಈ ಉಪಕರಣಗಳು ಸಮಾನಾಂತರ ನೀಳಚಕ್ಕೆಗಳ ಎಲ್ಲ ಲಕ್ಷಣಗಳನ್ನೂ ಹೊಂದಿವೆ. ಕೆಲವು ಉಪಕರಣಗಳಲ್ಲಿ ಬುಡ ದಪ್ಪಗಿದ್ದು ಮೇಲ್ತುದಿಯಲ್ಲಿ ತೆಳ್ಳಗಿದೆ. ತಯಾರಿಕೆಯ ವಿಧಾನವನ್ನನಸರಿಸಿ ಹೆಚ್ಚಿನ ಉಪಕರಣಗಳ ಮೇಲ್ತುದಿಯಲ್ಲಿ ಮೊಂಡಾದ ಮೊನೆ ಇದ್ದರೆ ಉಳಿದವು ಎರಡೂ ತುದಿಗಳಲ್ಲಿ ಸರಳರೇಖೆಯನ್ನು ಹೊಂದಿವೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜ, ಆಯತ ಮತ್ತು ತ್ರಾಪಿಜ್ಯಗಳು ಕಾಣುತ್ತವೆ. ಒಂದು ಅಥವಾ ಎರಡೂ ಪಾರ್ಶ್ವಗಳು ಹರಿತ ಅಲಗನ್ನು ಹೊಂದಿವೆ. ಕೆಲವು ಉಪಕರಣಗಳಲ್ಲಿ ಕಿರು ಮರು ಚಕ್ಕೆಗಳನ್ನೆಬ್ಬಿಸಿ ಅಲಗನ್ನು ಪುನರ್ ನವೀ ಕರಿಸಿದೆ ಮತ್ತು ಗರಗಸದಂತಹ ಅಲಗನ್ನು ಮೂಡಿಸಿರುವುದು ಕಾಣಿಸುತ್ತದೆ. ಒಂದೆರಡು ಉಪಕರಣಗಳಲ್ಲಿ ಮೊನೆಯ ಪಾರ್ಶ್ವಗಳಲ್ಲಿ ಕಚ್ಚ-ನ್ನುಂಟು ಮಾಡಿ ಮೊನೆಯಾಗಿಯೂ ಬಳಸಿರುವ ಗುರುತುಗಳಿವೆ. ಉಪಯೋಗಿಸಿರುವ ಮೂಲ ಶಿಲಾ ಸಾಮಗ್ರಿಗಳಿಗನುಗು-ಣವಾಗಿ ೬ ಜಾಸ್ಪರ್ , ೧೨ ಅದಿರುಯುಕ್ತ ಜಾಸ್ಪರ್, ೧೬ ಅದಿರುಯುಕ್ತ ಕ್ವಾರ್ಟ್ಸ್ ಹಾಗೂ ೧೨೫ ಕ್ವಾರ್ಟ್ಸ್ ಶಿಲೆಯಲ್ಲಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೯ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೯**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೫-೧೦ | ೩೬ | ೨೧.೬೪ | ೧-೫ | ೪೨ | ೨೬.೪೨ | ೧-೫ | ೧೪೧ | ೮೮.೬೮ |
| ೧೦-೧೫ | ೮೫ | ೫೩.೪೬ | ೫-೧೦ | ೯೫ | ೫೯.೭೫ | ೫-೧೦ | ೧೮ | ೧೧.೩೨ |
| ೧೫-೨೦ | ೩೮ | ೨೩.೯೦ | ೧೦-೨೦ | ೨೨ | ೧೩.೮೩ | | | |
| ಒಟ್ಟು | ೧೫೯ | | | ೧೫೯ | | | ೧೫೯ | |

ಈ ಗುಂಪಿನ ಒಟ್ಟು ಉಪಕರಣಗಳಲ್ಲಿ ಉದ್ದ ಕನಿಷ್ಠ ೭ ಗರಿಷ್ಠ ೨೦ ಮಿ.ಮೀ. ಇದ್ದು, ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೩ ಗರಿಷ್ಠ ೧೭ ಮಿ.ಮೀ. ಗಳಾಗಿದ್ದು, ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ದಪ್ಪ ಕನಿಷ್ಠ ೨ ಗರಿಷ್ಠ ೯ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೧ ರಿಂದ ೫ ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚು ಸಂಖ್ಯೆಯಲ್ಲಿವೆ.

### ೧.೬ ಕೈ ಚಾಕು ನೀಳಚಕ್ಕೆ

ಈ ಗುಂಪಿನ ಒಂದು ವಿಶಿಷ್ಟ ಉಪಕರಣವಾದ ಕೈಚಾಕು ನೀಳಚಕ್ಕೆ ಒಟ್ಟು ೧೧ ಇದ್ದು (ಶೇ. ೧.೯೧), ೧ ಅದಿರುಯುಕ್ತ ಜಾಸ್ಪರ್, ೨ ಅದಿರುಯುಕ್ತ ಕ್ವಾರ್ಟ್ಸ್ ೮ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಸ್ವಲ್ಪ ನೀಳವಾದ ನೀಳಚಕ್ಕೆಗಳಲ್ಲಿ ದಪ್ಪಗಿನ ಬುಡದ ಭಾಗವನ್ನು ಹಿಡಿಯಲನುಕೂಲವಾಗುವಂತೆ ಚಕ್ಕೆ ತೆಗೆದು ಮೇಲ್ಭಾಗದಲ್ಲಿ ಅಲಗು ಮೂಡಿಸಿದೆ. ಸಾಧಾರಣವಾಗಿ ಎಲ್ಲಾ ಉಪಕರಣಗಳಲ್ಲಿ ಮೇಲರ್ಧ ಭಾಗವನ್ನು ಅರ್ಧ ಚಂದ್ರಾಕೃತಿಯಂತೆ ಮೂಡಿಸಿ ಉಬ್ಬೇಣಿನ ನೇರಕ್ಕೆ ಹರಿತವಾದ ಅಲಗು ಮೂಡಿಸಿದೆ. ಇನ್ನೊಂದು ಪಾರ್ಶ್ವವನ್ನು ದಪ್ಪನೆಯ ಅರ್ಧ ಚಂದ್ರಾಕೃತಿಯ ಹಿಂಭಾಗದಂತೆ ಮೂಡಿಸಿದ್ದು ಬೆರಳಿನಿಂದ ಒತ್ತಿ ಹಿಡಿಯಲು ಅನುಕೂಲವಾಗಿದೆ. ಒಂದೆರಡು ಉಪಕರಣಗಳಲ್ಲಿ ಇದೇ ಉದ್ದೇಶದಿಂದ ಮೇಲ್ತುದಿಯಲ್ಲಿ ಚಕ್ಕೆ ತೆಗೆದು ಸಮತಲವಾಗಿಸಿದೆ. ಕೆಲವು ಉಪಕರಣಗಳಲ್ಲಿ ಹಿಂಬದಿಯಿಂದ ಮರು ಚಕ್ಕೆ ಎಬ್ಬಿಸಿ ಅಲಗನ್ನು ಹೆಚ್ಚು ಹರಿತಗೊಳಿಸಿದೆ ಮತ್ತು ಒಳಬಾಗುಳ್ಳ ಕಚ್ಚನ್ನು ಮೂಡಿಸಿದೆ. ಎರಡೂ ಬದಿಗಳಲ್ಲಿ ಹೆಚ್ಚು ಚಕ್ಕೆ ಕಲೆಗಳಿರುವುದರಿಂದ ಒಂದೆರಡು ಉಪಕರಣಗಳನ್ನು ಹೊರತುಪಡಿಸಿ ಮಿಕ್ಕವುಗಳ ಬದಿಗಳು ಸಮತಲವಾಗಿಲ್ಲ. ಒಂದೆರಡು ಉಪಕರಣಗಳಲ್ಲಿ ಕೆಳಭಾಗವನ್ನು ಹೆಚ್ಚಿನ ಚಕ್ಕೆ ತೆಗೆಯುವುದರ ಮೂಲಕ ತೆಳ್ಳಗಾಗಿಸಿ ಮರ ಅಥವಾ ಮೂಳೆಯ ಹಿಡಿಕೆಗೆ ಜೋಡಿಸಲು ಅನುಕೂಲವಾಗುವಂತೆ ಮಾಡಿದೆ. ಒಂದೆರಡು ಉಪಕರಣಗಳಲ್ಲಿ ಪುಡಿಗೆಲಸವೂ ಕಂಡು ಬರುತ್ತವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೦ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೧೦

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೨೦-೨೫ | ೨ | ೧೮.೧೮ | ೫-೧೦ | ೩ | ೨೭.೨೭ | ೧-೫ | ೪ | ೩೬.೩೬ |
| ೨೫-೩೦ | ೭ | ೬೩.೬೪ | ೧೦-೧೫ | ೮ | ೭೨.೭೩ | ೫-೧೦ | ೭ | ೬೩.೬೪ |
| ೩೦-೪೦ | ೨ | ೧೮.೧೮ | | | | | | |
| ಒಟ್ಟು | ೧೧ | | | ೧೧ | | | ೧೧ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೨೨ ಗರಿಷ್ಠ ೪೦ ಮಿ.ಮೀ. ಇದ್ದು, ಇವುಗಳಲ್ಲಿ ೨೫ ರಿಂದ ೩೦ ಮಿಮೀ.ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೮ ಗರಿಷ್ಠ ೧೫ ಮಿ.ಮೀ. ಗಳಾಗಿದ್ದು, ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ದಪ್ಪ ಕನಿಷ್ಠ ೨ ಗರಿಷ್ಠ ೧೦ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚು ಸಂಖ್ಯೆಯಲ್ಲಿವೆ.

## ೧.೨ ಗರಗಸದಂತಹ ನೀಳಚಕ್ಕೆ

ಕಚ್ಚುಳ್ಳ ನೀಳಚಕ್ಕೆಯು ಈ ಗುಂಪಿನ ಒಂದು ವಿಶಿಷ್ಟ ಉಪಕರಣ. ಮೂಲ ನೀಳಚಕ್ಕೆಯ ಅಲಗು ಹೆಚ್ಚಿನ ಬಳಕೆಯಿಂದಾಗಿ ಹರಿತವನ್ನು ಕಳೆದುಗೊಂಡಾಗ ಅದರ ಒಂದು ಅಥವಾ ಎರಡೂ ಬದಿಗಳಿಂದ ಅಲ್ಲಲ್ಲಿ ಕಚ್ಚುಗಳನ್ನೆಬ್ಬಿಸಿ ಈ ಉಪಕರಣವನ್ನು ಪುನರ್ ಬಳಕೆಗೆ ಬರುವಂತೆ ತಯಾರಿಸಲಾಗಿದೆ. ಆಳ ಚಕ್ಕೆಯನ್ನೆಬ್ಬಿಸಿ ಕಚ್ಚುಗಳನ್ನುಂಟು ಮಾಡಲು ಸಾಧಾರಣವಾಗಿ ಕೊಳವೆಯಾಕಾರದ ಸುತ್ತಿಗೆಯನ್ನು ಉಪಯೋಗಿಸಲಾಗುತ್ತದೆ. ಹೀಗೆ ಕಚ್ಚು ಮೂಡಿಸಿದ ಪಾರ್ಶ್ವ ಅಥವಾ ಪಾರ್ಶ್ವಗಳು ಗರಗಸದಂತಹ ಅಲಗನ್ನು ಹೊಂದಿರುತ್ತವೆ.

ಪ್ರಸ್ತುತ ೪ ನೆಲೆಗಳಿಂದ ೬ (ಕೋ. ೧.೦೪) ಉಪಕರಣಗಳನ್ನು ಸಂಗ್ರಹಿಸಲಾಗಿದೆ. ಅವುಗಳಲ್ಲಿ ಒಂದು ಜಾಸ್ಪರ್ ಹಾಗೂ ಉಳಿದ ಐದು ಕ್ವಾರ್ಟ್ಸ್ ಶಿಲೆಯಲ್ಲಿವೆ. ಜಾಸ್ಪರ್ ಗುಂಪಿನ ಒಂದು ಉಪಕರಣದ ಎರಡೂ ಪಾರ್ಶ್ವಗಳಲ್ಲಿ ಕಚ್ಚುಗಳನ್ನು ಮೂಡಿಸಿದ್ದರೂ ಹೆಚ್ಚಿನ ಉಪಯೋಗದಿಂದ ಸವೆದಿದೆ. ಕ್ವಾರ್ಟ್ಸ್ ಗುಂಪಿನ ಉಪಕರಣದಲ್ಲಿ ಒಂದು ಪಾರ್ಶ್ವ ಮಾತ್ರ ಒಂದೆರಡು ಕಚ್ಚುಗಳನ್ನು ಮೂಡಿಸಿದೆ. ಮೂಲಚಕ್ಕೆಯ ಸ್ವಭಾವವನ್ನನುಸರಿಸಿ ಕೆಲವು ಉಪಕರಣಗಳ ಹಿಂಬದಿ ಸಮ-ತಲ ಇಲ್ಲವೇ ನಿಮ್ನವಾಗಿವೆ. ಮೂರು ಉಪಕರಣಗಳಲ್ಲಿ ಮುಂಬದಿಯ ಉಬ್ಬೇಣು ಪ್ರಮುಖವಾಗಿದ್ದರೆ .ಉಳಿದವುಗಳಲ್ಲಿ ಅವುಗಳನ್ನು ಕತ್ತರಿಸಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಇವುಗಳ ಉದ್ದ ಕನಿಷ್ಠ ೧೫ ಗರಿಷ್ಠ ೨೬ ಮಿ.ಮೀ. ಗಳು, ಅಗಲ ಕನಿಷ್ಠ ೫ ಗರಿಷ್ಠ ೧೨ ಮಿ.ಮೀ. ಹಾಗೂ ದಪ್ಪ ಕನಿಷ್ಠ ೨ ಗರಿಷ್ಠ ೭ಮಿಮೀ.ಗಳಾಗಿವೆ.

## ೨. ಹೆರೆಚಕ್ಕೆ ಉಪಕರಣಗಳ ವಿವರಣೆ (ಮೊದಲನೆಯ ಹಂತ)

ಅಂತ್ಯ ಹಳೆಶಿಲಾಯುಗದ ಉಪಕರಣ ಸಮೂಹದಂತೆಯೇ ಸೂಕ್ಷ್ಮ ಶಿಲಾಯುಗದ ಉಪಕರಣಗಳಲ್ಲಿಯೂ ಹೆರೆಚಕ್ಕೆ ಗುಂಪಿನ ಉಪಕರಣಗಳು ಎರಡನೆಯ ಅತಿ ಹೆಚ್ಚು ಸಂಖ್ಯೆಯವುಗಳಾಗಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಈ ಹಂತದ ೨೫ ನೆಲೆಗಳಲ್ಲಿ ಮಾತ್ರವೇ ದೊರಕಿ-ರುವ ಒಟ್ಟು ಉಪಕರಣಗಳು ೩೩೬ (ಕೋ. ೨೫.೧೩) ಇವುಗಳನ್ನು ತುದಿ ಮತ್ತು ಪಾರ್ಶ್ವ ಚಕ್ಕೆಗಳೆರಡರ ಮೇಲೂ ರೂಪಿಸ-ಲಾಗಿವೆ. ನೀಳವಾದ ಮತ್ತು ಕಡಿಮೆ ಉದ್ದದ ಅಗಲವಾದ ಆಯತ, ತ್ರಿಭುಜ ಮತ್ತು ಅಂಡಾಕಾರದ ತೆಳು ಚಕ್ಕೆಯ ಮೇಲೆ

ಈ ಉಪಕರಣಗಳನ್ನು ರೂಪಿಸಲಾಗಿದೆ. ಅತಿ ಸೂಕ್ಷ್ಮ ಚಕ್ಕೆಗಳನ್ನು ತೆಗೆದು ಉಳಿದ ಮೂಲ ಗಟ್ಟಿಗಳಿಂದಲೂ ಹೆರೆಚಕ್ಕೆಗ-ಳನ್ನು ರೂಪಿಸಲಾಗಿದೆ. ಉಪಯೋಗಿಸಿದ ಮೂಲ ಶಿಲಾ ಸಾಮಗ್ರಿಯ ದೃಷ್ಟಿಯಿಂದ ವಿವಿಧ ವರ್ಣಗಳ ಕ್ವಾರ್ಟ್ಸ ಶಿಲೆಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆ (೭೧.೧೩ ಶೇ. ೭.೧೩) ಯಲ್ಲಿವೆ. ಅದಿರುಯುಕ್ತ ಕ್ವಾರ್ಟ್ಸನಲ್ಲಿ ರೂಪಿಸಿರುವ ಉಪಕರ-ಣಗಳು ಎರಡನೇ ಸ್ಥಾನದಲ್ಲಿವೆ. (೪೪ ಶೇ. ೧೩.೦೯) ಅದಿರುಯುಕ್ತ ಜಾಸ್ಪರ್ ನಲ್ಲಿರುವ ಉಪಕರಣಗಳು ಮೂರನೇ ಸ್ಥಾನದಲ್ಲಿವೆ. (೪೨ ಶೇ. ೧೨.೫) ನಾಲ್ಕನೇ ಸ್ಥಾನವನ್ನು ಜಾಸ್ಪರ್ ಶಿಲೆಯ ಉಪಕರಣಗಳು ಪಡೆದಿವೆ. (೧೧ ಶೇ. ೩.೨೭) ಒಂದೇ ಒಂದು (ಶೇ. ೦.೨೯) ಉಪಕರಣವನ್ನು ಫೆಲ್ಸಪರ್ ಶಿಲೆಯಲ್ಲಿ ರೂಪಿಸಲಾಗಿದೆ. ಉಪಯೋಗಿಸಿರುವ ಮೂಲ ಶಿಲಾ ಸಾಮಗ್ರಿ, ಕಾರ್ಯನಿರ್ವಾಹಕ ಅಲಗು, ಅದು ಇರುವ ಭಾಗ, ಉಪಕರಣದ ಆಕಾರ ಇವುಗಳನ್ನನುಸರಿಸಿ ಈ ಉಪ-ಕರಣಗಳನ್ನು ೬ ವಿಭಾಗ ಮಾಡಲಾಗಿದೆ. ಅವುಗಳೆಂದರೆ:

| | | |
|---|---|---|
| ೧.ಒಬ್ಬದಿ ಹೆರೆಚಕ್ಕೆ (Single Sided Scraper) | ಒಟ್ಟು ಉಪಕರಣ ೫೯ | (ಶೇ. ೨೦.೮೩) |
| ೨.ಇಬ್ಬದಿ ಹೆರೆಚಕ್ಕೆ (Paralel Sided Scraper) | ಒಟ್ಟು ಉಪಕರಣ ೭೦ | (ಶೇ. ೧೭.೫೫) |
| ೩.ತುದಿ ಹೆರೆಚಕ್ಕೆ (End Scraper) | ಒಟ್ಟು ಉಪಕರಣ ೧೦೧ | (ಶೇ. ೩೦.೦೫) |
| ೪.ದುಂಡು ಹೆರೆಚಕ್ಕೆ (Round Scraper) | ಒಟ್ಟು ಉಪಕರಣ ೨೮ | (ಶೇ. ೮.೩೩) |
| ೫.ಒಳಬಾಗಿದ ಅಂಚಿನ ಹೆರೆಚಕ್ಕೆ (Hollow Scraper) | ಒಟ್ಟು ಉಪಕರಣ ೩೪ | (ಶೇ. ೧೦.೧೧) |
| ೬.ಮೂಲಗಟ್ಟಿ ಹೆರೆಚಕ್ಕೆ (Core Scraper) | ಒಟ್ಟು ಉಪಕರಣ ೪೪ | (ಶೇ. ೧೩.೦೯) |

ಈ ಮೇಲೆ ಹೇಳಿದ ಹೆರೆಚಕ್ಕೆ ಮಾದರಿಯ ಉಪ ಗುಂಪಿನ ಉಪಕರಣಗಳು, ದೊರಕಿರುವ ನೆಲೆ, ಉಪಕರ-ಣಗಳ ಸಂಖ್ಯೆ ಮತ್ತು ಹೆರೆಚಕ್ಕೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೧೧ ಮತ್ತು ವೃತ್ತ ನಕ್ಷೆ ಸಂಖ್ಯೆ ೭೫ ರಲ್ಲಿ ನೀಡಿದೆ.

## ಸೂಕ್ಷ್ಮ ಶಿಲಾಯುಗದ ಹೆರೆಚಕ್ಕೆ ಉಪಕರಣಗಳ ಮಾದರಿ. ಮೊದಲನೆಯ ಹಂತ

(ಹಳೆಶಿಲಾಯುಗದ ನೆಲೆಗಳ ಜೊತೆಗಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು)

ಕೋಷ್ಟಕ ಸಂಖ್ಯೆ ೭.೧೧

| ಕ್ರಮ ಸಂಖ್ಯೆ | ನೆಲೆ | ಒಬ್ಬದಿ ಹೆರೆಚಕ್ಕೆ | ಇಬ್ಬದಿ ಹೆರೆಚಕ್ಕೆ | ತುದಿ ಹೆರೆಚಕ್ಕೆ | ದುಂಡು ಹೆರೆಚಕ್ಕೆ | ಒಳಬಾಗಿದ ಅಂಚಿನ ಹೆರೆಚಕ್ಕೆ | ಮೂಲಗಟ್ಟಿ ಹೆರೆಚಕ್ಕೆ | ಒಟ್ಟು | ಶೇ |
|---|---|---|---|---|---|---|---|---|---|
| ೧ | ಅಪ್ಪಾನಹಳ್ಳಿ | | ೨ | | | | ೧ | ೩ | ೦.೮೯ |
| ೨ | ಇರಕಸಂದ್ರ ಕಾಲೋನಿ | ೧ | ೧ | | ೧ | | | ೩ | ೦.೮೯ |
| ೩ | ಉನಗನಾಲ | | ೧ | ೨ | | | | ೩ | ೦.೮೯ |
| ೪ | ಓಬಳಾಪುರ | | ೫ | | | | | ೫ | ೧.೪೮ |
| ೫ | ಕರಡಿ | | ೨ | | | ೧ | | ೩ | ೦.೮೯ |
| ೬ | ಕಾರೇಕುರ್ಚಿ | | | ೧ | | | | ೧ | ೦.೨೯ |
| ೭ | ಕಾವಲಹಟ್ಟಿ | | ೧ | | | | | ೧ | ೦.೨೯ |
| ೮ | ಗಳಿಗೆಕೆರೆ | | ೫ | ೨ | ೨ | ೨ | | ೧೧ | ೩.೨೭ |
| ೯ | ಗುಟ್ಟೆ | | ೨ | ೧ | | | | ೩ | ೦.೮೯ |
| ೧೦ | ಚಿಕ್ಕೇಗೌಡನರೊಪ್ಪ | | | | | | | | |
| ೧೧ | ಥಣಾಪುರ | ೧೦ | | ೬ | ೩ | ೧ | | ೨೦ | ೫.೯೫ |
| ೧೨ | ದೊಡ್ಡಗುಣಿ | ೩ | ೪ | ೪ | | | | ೧೧ | ೩.೨೭ |
| ೧೩ | ಬೊಮ್ಮೇನಹಳ್ಳಿ | | | | | | | | |
| ೧೪ | ಮೂಗನಾಯಕನಕೋಟೆ ಉತ್ತರ | | ೧ | ೫ | | | ೩ | ೯ | ೨.೬೭ |
| ೧೫ | ಮೂಗನಾಯಕನಕೋಟೆ ಪೂರ್ವ | | ೨೪ | ೧೯ | ೫ | ೧೩ | ೧೩ | ೭೪ | ೨೨.೦೨ |
| ೧೬ | ಮೂಗನಾಯಕನಕೋಟೆ ದಕ್ಷಿಣ | ೮ | | ೨೬ | ೭ | ೪ | ೧೬ | ೬೧ | ೧೮.೧೫ |
| ೧೭ | ಮೂಗನಾಯಕನಕೋಟೆ ಪಶ್ಚಿಮ | ೨೫ | | ೧೬ | ೯ | ೪ | ೧೧ | ೬೫ | ೧೯.೩೪ |
| ೧೮ | ಮಂಚಕಲ್‌ಕುಪ್ಪೆ | | ೫ | ೪ | | ೪ | | ೧೩ | ೩.೮೬ |
| ೧೯ | ಮಂಚಲ್ದೊರೆ | | | ೨ | | ೧ | | ೩ | ೦.೮೯ |
| ೨೦ | ಯಕ್ಕಲಕಟ್ಟೆ | ೬ | ೪ | ೧ | | ೧ | | ೧೨ | ೩.೫೭ |
| ೨೧ | ಯಲ್ಲಾಪುರ | | ೨ | ೧ | | | | ೩ | ೦.೮೯ |
| ೨೨ | ಶಿವಪುರ | | | | | | | | |
| ೨೩ | ಕೆಟ್ಟಿಹಳ್ಳಿ | ೬ | ೪ | ೧ | | ೧ | | ೧೨ | ೩.೫೭ |
| ೨೪ | ಸಾಲುಕಟ್ಟೆ | | ೨ | ೨ | | | | ೪ | ೧.೧೯ |
| ೨೫ | ಸಿಡ್ಲೇಹಳ್ಳಿ | | | | ೧ | | | ೧ | ೦.೨೯ |
| ೨೬ | ಹರೇನಹಳ್ಳಿ | | ೧ | | | | | ೧ | ೦.೨೯ |
| ೨೭ | ಹಿಮಗಿರಿ | | | | | | | | |
| ೨೮ | ಹಿರೇಹಳ್ಳಿ | | ೨ | ೬ | | ೨ | | ೧೦ | ೨.೯೭ |
| ೨೯ | ಹೋನ್ನೇಮಾರನಹಳ್ಳಿ | | ೨ | ೨ | | | | ೪ | ೧.೧೯ |
| | ಒಟ್ಟು | ೫೯ | ೭೦ | ೧೦೧ | ೨೮ | ೩೪ | ೪೪ | ೩೩೬ | |
| | ಶೇ | ೧೭.೫೫ | ೨೦.೮೩ | ೩೦.೦೫ | ೮.೩೩ | ೧೦.೧೧ | ೧೩.೦೯ | | |

ವೃತ್ತ ನಕ್ಷೆ ಸಂಖ್ಯೆ ೭ಈ



ಮೇಲಿನ ಕೋಷ್ಟಕದಲ್ಲಿ ಹೆರೆಚಕ್ಕೆ ಸಮೂಹದಲ್ಲಿ ತುದಿ ಹೆರೆಚಕ್ಕೆ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿ (೧೦೧ ಶೇ. ೩೦.೦೫) ಇವೆ. ಹೆರೆಚಕ್ಕೆ ಗುಂಪಿನ ಇತರ ಉಪಗುಂಪುಗಳು ಅನುಕ್ರಮವಾಗಿ ಕಡಿಮೆ ಇವೆ.
ಪ್ರತಿ ಉಪ ಗುಂಪಿನ ಉಪಕರಣಗಳ ವಿಶ್ಲೇಷಣೆಯನ್ನು ಪ್ರತ್ಯೇಕವಾಗಿ ವಿವರಿಸಿದೆ.

### ೨.೧ ಒಬ್ಬದಿ ಹೆರೆಚಕ್ಕೆ

ಒಬ್ಬದಿ ಹೆರೆಚಕ್ಕೆ ಉಪಕರಣಗಳಲ್ಲಿ ಇಡಿಯಾದ ಒಂದು ಪಾರ್ಶ್ವ ಅಥವಾ ಅದರ ಒಂದು ಭಾಗವನ್ನು ಹರಿತಗೊಳಿಸಿ ಕಾರ್ಯ ನಿರ್ವಾಹಕ ಅಲಗನ್ನು ರೂಪಿಸಿದೆ. ನೀಳಗತ್ತಿಯಂತಹ ಪ್ರಾಥಮಿಕ ಚಕ್ಕೆಗಳನ್ನು ತೆಗೆದು ಅವುಗಳ ಒಂದು ಪಾರ್ಶ್ವದಲ್ಲಿ ಮರುಚಕ್ಕೆ ಎಬ್ಬಿಸಿ ಹರಿತಗೊಳಿಸಿ ಹೆರೆಯುವ ಅಲಗನ್ನು ರೂಪಸಿದೆ. ತ್ರಿಭುಜ, ಪಂಚಭುಜ, ಆಯತ, ಅಂಡಾಕಾರ ಮುಂತಾದ ಅನೇಕ ಆಕೃತಿಗಳಲ್ಲಿರುವ ಇಂತಹ ಉಪಕರಣಗಳು ಒಟ್ಟು ೬೯ (ಶೇ. ೧೭.೫೫) ಇವೆ. ಉಪ-ಯೋಗಿಸಿರುವ ಶಿಲಾಮಾದರಿಗಳಿಗನುಗುಣವಾಗಿ ೩ ಜಾಸ್ಪರ್, ೪ ಅದಿರುಯುಕ್ತ ಜಾಸ್ಪರ್, ೬ ಅದಿರುಯುಕ್ತ ಕ್ವಾರ್ಟ್ಸ್ ಹಾಗೂ ೪೬ ಕ್ವಾರ್ಟ್ಸ್ ಶಿಲೆಗಳಲ್ಲಿ ರೂಪಸಲಾಗಿದೆ.

ಪ್ರಾಥಮಿಕ ಚಕ್ಕೆಗಳನ್ನನುಸರಿಸಿ ಇವುಗಳ ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಕೆಲವು ಉಪಕರಣಗಳಲ್ಲಿ ತಾಡನಶಂಖು ಎದ್ದು ಕಾಣುತ್ತವೆ. ಮುಂಭಾಗದಲ್ಲಿ ಮಧ್ಯದ ಉಬ್ಬೇಣು ಹೆಚ್ಚು ಉಪಕರಣಗಳಲ್ಲಿ ಹಾಗೆಯೇ ಉಳಿದಿದ್ದರೆ ಉಳಿದವುಗಳಲ್ಲಿ ಚಕ್ಕೆ ಎಬ್ಬಿಸಿ ಉಬ್ಬೇಣನ್ನು ತೆಗೆದು ದಪ್ಪವನ್ನು ಕಡಿಮೆ ಮಾಡಿದೆ. ಒಂದು ಪಾರ್ಶ್ವದ ಕಡೆಗೆ ಮರು ಚಕ್ಕೆ ಎಬ್ಬಿಸಿ ಹೆರೆಯುವ ಅಲಗನ್ನು ರೂಪಿಸಿದೆ. ಕೆಲವು ಉಪಕರಣಗಳಲ್ಲಿ ಸಣ್ಣ ಮರುಚಕ್ಕೆಗಳನ್ನೆಬ್ಬಿಸಿವೆ. ಹೀಗಾಗಿ ಮುಂಬದಿ ಯಲ್ಲಿ ಅನೇಕ ಚಕ್ಕೆಕಲೆಗಳು ಕಾಣುತ್ತವೆ. ಪ್ರಾಥಮಿಕ ಚಕ್ಕೆಯನ್ನನುಸರಿಸಿ ಕೆಲವು ಉಪಕರಣಗಳು ಬುಡದಲ್ಲಿ ದಪ್ಪಗಿದ್ದರೆ ಇನ್ನು ಕೆಲವು ಮಧ್ಯದಲ್ಲಿ ದಪ್ಪಗಿವೆ. ಮೇಲ್ತುದಿ ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳಲ್ಲಿ ತೆಳ್ಳಗಿದ್ದು ಕೆಲವು ಮೊನಚಾಗಿದ್ದರೆ ಉಳಿದವು ಮೊಂಡಾಗಿವೆ. ಹೆರೆಯುವ ಅಲಗು ರೂಪಿಸಿದ ಪಾರ್ಶ್ವವು ಸಾಧಾರಣವಾಗಿ ದಪ್ಪಗಿದ್ದು ಹಿಡಿಯಲು ಅನುಕೂಲ-ವಾಗುವಂತೆ ಒಂದೆರಡು ಕಡೆ ಚಕ್ಕೆಗಳನ್ನೆಬ್ಬಿಸಿದೆ.
ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೨ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೧೨

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೧೭ | ೨೮.೮೧ | ೧೦-೧೫ | ೧೮ | ೩೦.೫೧ | ೧-೫ | ೧೩ | ೨೨.೦೩ |
| ೨೦-೩೦ | ೪೧ | ೬೯.೪೯ | ೧೫-೨೦ | ೩೨ | ೫೪.೨೪ | ೫-೧೦ | ೪೩ | ೭೨.೮೮ |
| ೩೦-೪೦ | ೧ | ೧.೬೪ | ೨೦-೨೫ | ೯ | ೧೫.೨೫ | ೧೦-೧೫ | ೩ | ೫.೦೮ |
| ಒಟ್ಟು | ೫೯ | | | ೫೯ | | | ೫೯ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೧೦ ಗರಿಷ್ಠ ೪೦ ಮಿ.ಮೀ. ಇದ್ದು, ಇವುಗಳಲ್ಲಿ ೨೦ ರಿಂದ ೩೦ ಮಿಮೀ.ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೧೦ ಗರಿಷ್ಠ ೨೩ ಮಿ.ಮೀ. ಗಳಾಗಿದ್ದು, ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚಿದೆ. ಅದೆ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೧೨ ಮಿ.ಮೀ. ಗಳಾ-ಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚು ಸಂಖ್ಯೆಯಲ್ಲಿರುವುದನ್ನುಕಾಣಬಹುದು.

### ೨.೨ ಇಬ್ಬದಿ ಹೆರೆಚಕ್ಕೆ

ಒಂದಕ್ಕಿಂತ ಹೆಚ್ಚು ಬದಿಗಳಲ್ಲಿ ಹೆರೆಯುವ ಅಲಗನ್ನು ಹೊಂದಿರುವ ಇಂತಹ ಉಪಕರಣಗಳು ಒಟ್ಟು ೭೦ (ಶೇ. ೨೦.೮೩) ಇವೆ. ನಿಯಂತ್ರಿತ ಬಲ ಪ್ರಯೋಗದಿಂದ ಎಬ್ಬಿಸಿದ ಪ್ರಾಥಮಿಕ ಚಕ್ಕೆಗಳೇ ಕೆಲವೊಮ್ಮೆ ಎರಡೂ ಬದಿಗ-ಳಲ್ಲಿ ಹರಿತ ಅಲಗನ್ನು ಮೂಡಿಸಿದೆ. ಇಂತಹ ಉಪಕರಣಗಳಲ್ಲಿ ಮಧ್ಯದ ಉಬ್ಬೇಣು ಪ್ರಧಾನವಾಗಿದೆ. ಅಲ್ಲದೆ ಮೂಲಶಿ-ಲೆಯ ಹೊರ ತೊಗಟೆಯು ಅಲ್ಲಲ್ಲಿ ಉಳಿದಿದೆ. ತ್ರಿಭುಜ, ಪಂಚಭುಜ, ಆಯತ, ಅರ್ಧವೃತ್ತ ಮತ್ತು ಅಂಡಾಕಾರಗಳಲ್ಲಿ ಇವು ರೂಪಿತವಾಗಿವೆ. ಕೆಲವು ಉಪಕರಣಗಳಲ್ಲಿ ಹಿಂಬದಿ ಸಮತಲವಾಗಿದ್ದರೆ ಇನ್ನು ಕೆಲವು ಉಪಕರಣಗಳಲ್ಲಿ ತಾಡನ ಶಂಖು ಪ್ರಧಾನವಾಗಿದ್ದು ಹಿಂಬದಿ ನಿಮ್ನವಾಗಿದೆ. ಮುಂಬದಿಯಲ್ಲಿ ಉಬ್ಬೇಣು ಹೆಚ್ಚಿನ ಉಪಕರಣದಲ್ಲಿ ಉಳಿದಿದ್ದರೆ ಕೆಲವ-ದರಲ್ಲಿ ಉಬ್ಬೇಣನ್ನು ಚಕ್ಕೆ ಎಬ್ಬಿಸಿ ತೆಗೆದು ಉಪಕರಣದ ದಪ್ಪವನ್ನು ಕಡಿಮೆ ಮಾಡಿದೆ. ಹೆಚ್ಚಿನ ಉಪಕರಣಗಳಲ್ಲಿ ಎರಡೂ ಪಾರ್ಶ್ವಗಳನ್ನು ಹೆರೆಯುವುದಕ್ಕೆ ಉಪಯೋಗಿಸಲು ಅನುಕೂಲವಾಗುವಂತೆ ಹಿಡಿಯಲು ಸಣ್ಣಸಣ್ಣ ಚಕ್ಕೆಗಳನ್ನು ತೆಗೆದಿದೆ. ಕೆಲವು ಉಪಕರಣಗಳಲ್ಲಿ ಕಚ್ಚುಗಳು ಮತ್ತು ಮರುಚಕ್ಕೆಗಳನ್ನೆಬ್ಬಿಸಿ ಹೆರೆಯುವ ಅಲಗನ್ನು ಹೆಚ್ಚು ಉಪಯುಕ್ತಗೊಳಿಸಿದೆ. ಉಪಯೋಗಿಸಿರುವ ಶಿಲಾ ಮಾದರಿಗಳಿಗೆ ಅನುಗುಣವಾಗಿ ಹೆಚ್ಚಿನ ಉಪಕರಣಗಳು ಕ್ವಾರ್ಟ್ಜ್ ನಲ್ಲಿದ್ದರೆ (೪೭) ಉಳಿದವು ಜಾಸ್ಪರ್ (೮) ಮತ್ತು ಅದಿರುಯುಕ್ತ ಜಾಸ್ಪರ್ (೧೫) ನಲ್ಲಿ ರೂಪಿತವಾಗಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೩ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೧೩

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೨೧ | ೩೦.೦೦ | ೧೦-೧೫ | ೧೯ | ೨೭.೧೪ | ೧-೫ | ೩೪ | ೪೮.೫೭ |
| ೨೦-೨೫ | ೩೩ | ೪೭.೧೪ | ೧೫-೨೦ | ೪೪ | ೬೨.೮೬ | ೫-೧೦ | ೩೩ | ೪೭.೧೪ |
| ೨೫-೩೫ | ೧೬ | ೨೨.೮೬ | ೨೦-೩೦ | ೭ | ೧೦.೦೦ | ೧೦-೧೫ | ೩ | ೪.೨೯ |
| ಒಟ್ಟು | ೭೦ | | | ೭೦ | | | ೭೦ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೧೭ ಗರಿಷ್ಠ ೩೨ ಮಿ.ಮೀ. ಗಳಾಗಿದ್ದು, ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೧೨ ಗರಿಷ್ಠ ೨೬ ಮಿ.ಮೀ. ಗಳಾಗಿದ್ದು, ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚು ಇವೆ. ದಪ್ಪ ಕನಿಷ್ಠ ೨ ಗರಿಷ್ಠ ೧೨ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿರುವುದನ್ನು ಕಾಣಬಹುದು.

**೭.೩ ತುದಿ ಹೆರೆಚಕ್ಕೆ**

ಸಣ್ಣ ಹಾಗೂ ಮಧ್ಯಮ ಗಾತ್ರದ ಪ್ರಾಥಮಿಕ ಚಕ್ಕೆ ಮತ್ತು ಸಣ್ಣ ಗಾತ್ರದ ದ್ವಿತೀಯ ಶ್ರೇಣಿ ಚಕ್ಕೆಗಳ ಒಂದು ತುದಿಯಲ್ಲಿ ಹರಿತ ಅಲಗನ್ನು ಹೊಂದಿರುವ ಇಂತಹ ಉಪಕರಣಗಳು ೧೦೧ (ಶೇ. ೩೦.೦೫) ಇವೆ. ಸಾಧಾರಣವಾಗಿ ತ್ರಿಭುಜ, ಆಯತ, ಅಂಡಾಕಾರ ಹಾಗೂ ಅರೆ ವೃತ್ತಾಕಾರವಾಗಿರುವ ಈ ಉಪಕರಣಗಳಲ್ಲಿ ತೆಳ್ಳನೆಯ ಅಗಲವಾದ ತುದಿ-ಯಲ್ಲಿ ಹರಿತ ಅಲಗು ರೂಪಿಸಿದೆ. ಪ್ರಾಥಮಿಕ ಚಕ್ಕೆಯ ಗುಣಗಳನ್ನನುಸರಿಸಿ ಹೆಚ್ಚಿನ ಚಕ್ಕೆಗಳ ಹಿಂಬದಿ ಸಮತಲವಾಗಿದ್ದರೆ ಕೆಲವು ಉಪಕರಣಗಳಲ್ಲಿ ತಾಡನ ಶಂಖು ಎದ್ದು ಕಾಣುತ್ತದೆ. ಪ್ರಾಥಮಿಕ ಚಕ್ಕೆಗಳಿಂದ ರೂಪಿಸಿರುವ ಉಪಕರಣಗಳಲ್ಲಿ ಕೆಲವು ಭಾಗಗಳಲ್ಲಿ ಮಾತ್ರ ಮೂಲ ಶಿಲಾ ತೊಗಟೆ ಅಂಶ ಉಳಿದಿದೆ. ಸಾಧಾರಣವಾಗಿ ಮುಂಬದಿಯಲ್ಲಿ ಅನೇಕ ಚಕ್ಕೆಕಲೆಗಳಿದ್ದು ದಪ್ಪನೆಯ ತುದಿಯಲ್ಲಿ ಆಳವಾದ ಚಕ್ಕೆ ತೆಗೆದು ಹರಿತ ಅಲಗು ರೂಪಿಸಿದ ಕಲೆಗಳನ್ನು ಕಾಣಬಹುದು. ಹೆಚ್ಚಿನ ಉಪಕರಣ-ಗಳಲ್ಲಿ ಒಂದೇ ಚಕ್ಕೆ ತೆಗೆದು ಹೆರೆಯುವ ಅಲಗು ಮೂಡಿಸಿದ್ದರೆ ಕೆಲವು ಉಪಕರಣಗಳಲ್ಲಿ ಮರುಚಕ್ಕೆ ತೆಗೆದು ಅಲಗನ್ನು ಹೆಚ್ಚು ಉಪಯುಕ್ತಗೊಳಿಸಿದೆ. ಅಲಗಿನ ವಿರುದ್ಧ ತುದಿಯಲ್ಲಿ ಹಿಂಬದಿ ಅಥವಾ ಮುಂಬದಿಯಿಂದ ಚಕ್ಕೆ ಎಬ್ಬಿಸಿ ಹಿಡಿಕೆಗೆ ಅನುಕೂಲ ಮಾಡಿದೆ.

ಒಟ್ಟು ಉಪಕರಣಗಳ ಶಿಲಾ ಮಾದರಿಯಂತೆ ೩ ಜಾಸ್ಪರ್, ೨೨ ಅದಿರುಯುಕ್ತ ಜಾಸ್ಪರ್, ೬೮ ಕ್ವಾರ್ಟ್ಸ್ ಹಾಗೂ ೮ ಅದಿರುಯುಕ್ತ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೪ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೧೪**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೨೭ | ೨೬.೭೩ | ೧೦-೧೫ | ೨೫ | ೨೪.೭೫ | ೧-೫ | ೩೭ | ೩೬.೬೩ |
| ೨೦-೨೫ | ೬೨ | ೬೧.೩೯ | ೧೫-೨೦ | ೪೮ | ೪೭.೫೨ | ೫-೧೦ | ೪೪ | ೪೩.೫೬ |
| ೨೫-೩೫ | ೧೨ | ೧೧.೮೮ | ೨೦-೨೫ | ೨೮ | ೨೭.೭೨ | ೧೦-೧೫ | ೨೦ | ೧೯.೮೦ |
| ಒಟ್ಟು | ೧೦೧ | | | ೧೦೧ | | | ೧೦೧ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೧೫ ಗರಿಷ್ಠ ೩೫ ಮಿ.ಮೀ. ಇದ್ದು, ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೧೦ ಗರಿಷ್ಠ ೨೫ ಮಿ.ಮೀ. ಗಳಾಗಿದ್ದು, ಇವುಗಳಲ್ಲಿ ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಈ ಉಪಕರಣಗಳ ದಪ್ಪ ಕನಿಷ್ಠ ೩ ಗರಿಷ್ಠ ೧೨ ಮಿ.ಮೀ. ಗಳಾಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ.

### ೨.೪ ದುಂಡು ಹೆರೆಚಕ್ಕೆ

ಅಂತ್ಯ ಹಳೆಶಿಲಾಯುಗದ ಹೆರೆಚಕ್ಕೆ ಗುಂಪಿನ ಮುಂದುವರಿಕೆಯಾಗಿ ಸೂಕ್ಷ್ಮ ಶಿಲಾಯುಗದಲ್ಲಿಯೂ ಈ ಗುಂಪಿನ ಉಪಕರಣಗಳು ದೊರೆತಿವೆ. ಸಣ್ಣ ಹಾಗೂ ಮಧ್ಯಮ ಗಾತ್ರದ ಮೂಲಗಟ್ಟಿ ಹಾಗೂ ಚಕ್ಕೆಗಳಿಂದ ಇತರ ಸೂಕ್ಷ್ಮ ಉಪಕರಣಗಳ ತಯಾರಿಕೆಗಾಗಿ ಚಕ್ಕೆ ಎಬ್ಬಿಸಿ ಆನಂತರ ಉಳಿದ ಮೂಲಗಟ್ಟಿ ಅಥವಾ ಚಕ್ಕೆಯ ಅಂಚು, ತುದಿ, ಪಾರ್ಶ್ವಗಳು ಮತ್ತು ಪರಿಧಿಯ ಸುತ್ತಲೂ ಮರುಚಕ್ಕೆಗಳನ್ನೆಬ್ಬಿಸಿ ಹೆರೆಯುವ ಅಲಗು ಮೂಡಿಸಿದೆ. ಸಾಧಾರಣವಾಗಿ ಎರಡೂ ಬದಿಗಳಲ್ಲಿ ಹೆಚ್ಚು ಚಕ್ಕೆ ತೆಗೆದಿರುವುದರಿಂದ ಉಪಕರಣಗಳು ತೆಳ್ಳಗಿದ್ದು ಸಮತಲಾಗಿವೆ. ಉಪಕರಣದ ಮೇಲೆಲ್ಲ ಸಣ್ಣ ಹಾಗೂ ದೊಡ್ಡ ಚಕ್ಕೆಕಲೆಗಳಿವೆ. ಹೆಚ್ಚಿನ ಉಪಕರಣಗಳಲ್ಲಿ ಹೆಬ್ಬೆರಳನ್ನು ಒತ್ತಿ ಉಪಯೋಗಿಸಲು ಅನುವಾಗುವಂತೆ ಕಲೆಗಳನ್ನು ಮೂಡಿಸಿದೆ. ಸಾಧಾರಣವಾಗಿ ವೃತ್ತಾಕಾರ ಮತ್ತು ಅಂಡಾಕಾರಗಳು ಹೆಚ್ಚಾಗಿ ಕಂಡು ಬಂದರೂ ತ್ರಿಭುಜ, ಆಯತ ಮತ್ತು ಬಹುಭುಜಾಕೃತಿಗಳೂ ಕೆಲವು ಇವೆ.

ಈ ಗುಂಪಿನ ಒಟ್ಟು ಉಪಕರಣಗಳು ೨೮ (ಶೇ. ೮.೩೩) ದೊರೆತಿವೆ. ಇವುಗಳಲ್ಲಿ ೧ ಕಂದು ಫೆಲ್ಸಪರ್, ಅದಿರುಯುಕ್ತ ಕ್ವಾರ್ಟ್ಜ್ ಹಾಗೂ ೨೧ ಕ್ವಾರ್ಟ್ಜ್ ಶಿಲೆಯಲ್ಲಿ ರೂಪಿತವಾಗಿವೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೫ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೧೫**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೭ | ೨೫.೦೦ | ೧೦-೧೫ | ೨ | ೭೧.೪೩ | ೧-೫ | ೪ | ೧೪.೨೯ |
| ೨೦-೨೫ | ೧೧ | ೩೯.೨೯ | ೧೫-೨೦ | ೧೯ | ೬೭.೮೬ | ೫-೧೦ | ೨೪ | ೮೫.೭೧ |
| ೨೫-೩೫ | ೧೦ | ೩೫.೭೧ | ೨೦-೨೫ | ೭ | ೨೫.೦೦ | | | |
| ಒಟ್ಟು | ೨೮ | | | ೨೮ | | | ೨೮ | |

ಈ ಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೫ ಗರಿಷ್ಠ ೩೨ ಮಿ.ಮೀ. ಇದ್ದು, ಇವುಗಳಲ್ಲಿ ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೧೧ ಗರಿಷ್ಠ ೨೫ ಮಿ.ಮೀ. ಗಳಾಗಿದ್ದು, ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ದಪ್ಪ ಕನಿಷ್ಠ ೨ ಗರಿಷ್ಠ ೧೦ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣ ಸಂಖ್ಯೆ ಹೆಚ್ಚು ಇರುವುದನ್ನು ಕಾಣಬಹುದು.

### ೨.೫ ಒಳಬಾಗಿದ ಅಂಚಿನ ಹೆರೆಚಕ್ಕೆ

ನೀಳಚಕ್ಕೆಯನ್ನು ಹೋಲುವ ಚಕ್ಕೆ, ತ್ಯಾಜ್ಯ ಪ್ರಾಥಮಿಕ ಚಕ್ಕೆಗಳನ್ನು ನೀಳವಾದ ಒಂದು ಪಾರ್ಶ್ವದಲ್ಲಿ ಕಚ್ಚನ್ನುಂಟು ಮಾಡಿ ಅಥವಾ ಆಳವಾದ ಚಕ್ಕೆ ತೆಗೆದು ಈ ಉಪಕರಣಗಳನ್ನು ರೂಪಿಸಲಾಗಿದೆ. ಸಣ್ಣ ಮತ್ತು ಮಧ್ಯಮ ಗಾತ್ರದ ಈ ಉಪಕರಣಗಳ ಒಂದು ಅಂಚು ಸರಳರೇಖೆಯಲ್ಲಿರದೆ ಒಳಬಾಗಿದ್ದು ವಕ್ರರೇಖೆಯಲ್ಲಿರುತ್ತವೆ. ಸಹಜವಾಗಿ ಹಿಂಬದಿ ಹಾಗೂ ಮುಂಬದಿ ಸಮತಲದಲ್ಲಿರದೆ ಕ್ರಮವಾಗಿ ನಿಮ್ನ ಹಾಗೂ ಪೀನವಾಗಿರುತ್ತವೆ. ಆಯತ, ಅರ್ಧವೃತ್ತ, ತ್ರಿಭುಜ, ಮತ್ತು ಅನಿರ್ದಿಷ್ಟ ಆಕಾರದಲ್ಲಿರುವ ಈ ಉಪಕರಣಗಳನ್ನು ಮುಂಬದಿ ಮತ್ತು ಮೂಳೆಯನ್ನು ಹೆರೆಯಲು ಉಪಯೋಗಿಸಲಾಗುತ್ತದೆ. ಕೆಲವು ಉಪಕರಣಗಳಲ್ಲಿ ಒಳಬಾಗಿದ ಅಂಚಿಗೆ ಸಮಾನಾಂತರವಾಗಿ ಹೊರ ಬಾಗಿರುವ ಅಂಚು ಉಬ್ಬಿರುತ್ತದೆ.

ಈ ಗುಂಪಿನ ಉಪಕರಣಗಳು ಒಟ್ಟು ೩೪ (ಶೇ. ೧೦.೧೧) ಇವೆ. ಇವುಗಳಲ್ಲಿ ೨ ಅದಿರುಯುಕ್ತ ಜಾಸ್ಪರ್, ೬ ಅದಿರಯುಕ್ತ ಕ್ವಾರ್ಟ್ಸ್ ಹಾಗೂ ೨೬ ಕ್ವಾರ್ಟ್ಸ್ ಶಿಲೆಯಲ್ಲಿ ರೂಪತವಾಗೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೬ ನಲ್ಲಿ ನೀಡಿದೆ. .

ಕೋಷ್ಟಕ ಸಂಖ್ಯೆ ೭.೧೬

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೬ | ೧೭.೬೫ | ೧೦-೧೫ | ೧೨ | ೩೫.೨೯ | ೧-೫ | ೯ | ೨೬.೪೭ |
| ೨೦-೨೫ | ೧೬ | ೪೭.೦೬ | ೧೫-೨೦ | ೧೧ | ೩೨.೩೫ | ೫-೧೦ | ೨೪ | ೭೦.೫೯ |
| ೨೫-೪೦ | ೧೨ | ೩೫.೨೯ | ೨೦-೩೦ | ೧೧ | ೩೨.೩೫ | ೧೦-೧೫ | ೧ | ೨.೯೪ |
| ಒಟ್ಟು | ೩೪ | | | ೩೪ | | | ೩೪ | |

ಈ ಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೭ ಗರಿಷ್ಠ ೩೮ ಮಿ.ಮೀ. ಗಳಾಗಿದ್ದು, ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚಳವಿರುವುದು ತಿಳಿಯುತ್ತದೆ. ಅಗಲ ಕನಿಷ್ಠ ೫ ಗರಿಷ್ಠ ೨೯ ಮಿ.ಮೀ. ಗಳಾಗಿದ್ದು, ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ಅದೇ ರೀತಿ ದಪ್ಪ ಕನಿಷ್ಠ ೨ ಗರಿಷ್ಠ ೧೨ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣ ಸಂಖ್ಯೆ ಹೆಚ್ಚಿ-ರುವುದು ಕಂಡುಬರುತ್ತದೆ.

### ೨.೬ ಮೂಲಗಟ್ಟಿ ಹೆರೆಚಕ್ಕೆ

ಸಣ್ಣ ಮತ್ತು ಮಧ್ಯಮ ಗಾತ್ರದ ಮೂಲಶಿಲೆ ಹಾಗೂ ಸಣ್ಣಸಣ್ಣ ಪ್ರಾಥಮಿಕ ಚಕ್ಕೆಗಳನ್ನು ತೆಗೆದು ಉಳಿದ ಮೂಲಗಟ್ಟಿ, ಇವುಗಳ ಪಾರ್ಶ್ವ ಅಥವಾ ತುದಿಗಳಲ್ಲಿ ಮರುಚಕ್ಕೆಗಳನ್ನೆಬ್ಬಿಸಿ ಹೆರೆಯುವ ಅಲುಗು ಮೂಡಿಸಿ ಈ ಉಪಕರಣ-ಗಳನ್ನು ತಯಾರಿಸಿದೆ. ಸಹಜವಾಗಿ ಇವುಗಳ ಹೆರೆಯುವ ಅಲಗು ಒಂದು ಅಥವಾ ಎರಡೂ ಪಾರ್ಶ್ವಗಳಲ್ಲಿ ಅಥವಾ ತುದಿ-ಗಳಲ್ಲಿಯೂ ಇರುತ್ತವೆ. ಬಾಹ್ಯ ಸ್ವರೂಪದಲ್ಲಿ ಇವು ತ್ರಿಭುಜ, ಆಯತ, ಪಂಚಭುಜ, ವೃತ್ತ ಮತ್ತು ಅನಿರ್ದಿಷ್ಟ ಆಕಾರಗಳ-ಲ್ಲಿಯೂ ಇವೆ. ಮೂಲಗಟ್ಟಿಯ ಉಳಿದ ಭಾಗವನ್ನೇ ಮತ್ತೆ ಉಪಯೋಗಿಸಿರುವುದರಿಂದ ಕೆಲವು ಉಪಕರಣಗಳು ಗಾತ್ರದ-ಲ್ಲಿಯೂ ದೊಡ್ಡವು. ಈ ಗುಂಪಿನ ಉಪಕರಣಗಳು ಒಟ್ಟು ೪೪ (ಶೇ. ೧೩.೦೯)ಇದ್ದು, ಇವು ಅದಿರುಯುಕ್ತ ಜಾಸ್ಪರ್ ನಲ್ಲಿ ೬, ಅದಿರುಯುಕ್ತ ಕ್ವಾರ್ಟ್ಸ್ ನಲ್ಲಿ ೧೩ ಹಾಗೂ ಕ್ವಾರ್ಟ್ಸ್ ಶಿಲೆಯಲ್ಲಿ ೨೫ ರೂಪಿತವಾಗಿವೆ. ಹೆಚ್ಚಿನ ಉಪಕರಣಗಳ ಎರಡೂ ಬದಿಗಳಲ್ಲಿ ವಿವಿಧ ಗಾತ್ರ ಮತ್ತು ಆಕಾರದ ಚಕ್ಕೆಗಳನ್ನು ತೆಗೆದರುವುದರಿಂದ ಇವು ಮಧ್ಯದಲ್ಲಿ ದಪ್ಪಗಿದ್ದು ಅನೇಕ ಚಕ್ಕೆ ಕಲೆಗ-ಳಿಂದ ಕೂಡಿದೆ. ಇವುಗಳ ಶೇಕಡಾವಾರು ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೭.೧೭ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೧೭

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೧೩ | ೨೯.೫೫ | ೧೦-೨೦ | ೨೧ | ೪೭.೭೩ | ೫-೧೦ | ೩೨ | ೭೨.೭೩ |
| ೨೦-೩೦ | ೨೫ | ೫೬.೮೨ | ೨೦-೨೫ | ೧೫ | ೩೪.೦೯ | ೧೦-೧೫ | ೧೨ | ೨೭.೨೭ |
| ೩೦-೪೦ | ೬ | ೧೩.೬೩ | ೨೫-೩೦ | ೮ | ೧೮.೧೮ | | | |
| ಒಟ್ಟು | ೪೪ | | | ೪೪ | | | ೪೪ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೬ ಗರಿಷ್ಠ ೩೮ ಮಿ.ಮೀ. ಇದ್ದು, ಇವುಗಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ಅಗಲ ಕನಿಷ್ಠ ೧೩ ಗರಿಷ್ಠ ೩೦ ಮಿ.ಮೀ. ಗಳಿದ್ದು, ೧೦ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೫ ಗರಿಷ್ಠ ೧೫ ಮಿ.ಮೀ. ಗಳಾಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣ ಸಂಖ್ಯೆ ಹೆಚ್ಚು ಸಂಖ್ಯೆಯಲ್ಲಿವೆ.

**೩. ಮೊನೆ ಮಾದರಿ ಉಪಕರಣಗಳ ವಿವರಣೆ (ಮೊದಲನೆ ಹಂತ)**

ಸೂಕ್ಷ್ಮ ಶಿಲಾಯುಗದ ಉಪಕರಣ ಸಮೂಪದಲ್ಲಿ ನೀಳಚಕ್ಕೆ ಮತ್ತು ಹೆರೆಚಕ್ಕೆ ಗುಂಪುಗಳ ಸಂಖ್ಯೆಯ ನಂತರ ಅತಿ ಹಚ್ಚಿನವು ಮೊನೆಯುಳ್ಳ ಉಪಕರಣಗಳು. ಸಾಧಾರಣವಾಗಿ ನೀಳಚಕ್ಕೆ, ಹೆರೆಚಕ್ಕೆ ಮತ್ತು ತ್ಯಾಜ್ಯವೆನ್ನಬಹುದಾದ ನಿರುಪಯುಕ್ತ ಚಕ್ಕೆಗಳ ಮೇಲೆ ಇವುಗಳನ್ನು ರೂಪಿಸಲಾಗಿರುತ್ತವೆ. ನಿಯಮಿತ ಬಲಪ್ರಯೋಗದಿಂದ ನೀಳಚಕ್ಕೆ ಎಬ್ಬಿಸುವಾಗಲೇ ಮಧ್ಯ ಉಬ್ಬೇಣಿನ ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ಮೂಡುವಂತೆ ಮೇಲ್ತುದಿಯಲ್ಲಿ ಮೊನೆಯನ್ನೂ ಮೂಡಿಸಿರಲಾಗುತ್ತದೆ. ಹೆರೆಚಕ್ಕೆಗಳಲ್ಲಿಯೂ ಹೆಚ್ಚು ಕಡಿಮೆ ತ್ರಿಭುಜಾಕಾರವನ್ನು ಹೋಲುವ ಉಪಕರಣದ ಒಂದು ತುದಿಯನ್ನು ಮೊನೆಯನ್ನಾಗಿ ಪರಿವರ್ತಿಸಿರುತ್ತದೆ. ಕೆಲವೊಮ್ಮೆ ಉಪಯೋಗಕ್ಕೆ ತಕ್ಕ ಆಕಾರವುಳ್ಳ ನಿರುಪಯುಕ್ತ ಪ್ರಾಥಮಿಕ ಚಕ್ಕೆಗಳನ್ನೇ ವಿಶೇಷವಾಗಿ ಮೊನೆಯಂತೆ ರೂಪಿಸಲಾಗಿರುತ್ತದೆ. ಹೆಚ್ಚಿನ ಮತ್ತು ವಿಶೇಷ ಉಪಯೋಗಗಳಿಗಾಗಿ ವಿವಿಧ ರೀತಿಯ ಕೊಕ್ಕು ಮತ್ತು ಹಿಡಿತಕ್ಕೆ ಅನುಕೂಲವಾಗುವಂತೆ ಕೆಳತುದಿಯಲ್ಲಿ ಗೂಟಗಳನ್ನೂ ಮೂಡಿಸಿರಲಾಗುತ್ತದೆ.

ಅಂತ್ಯ ಹಳೆಶಿಲಾಯುಗದ ಉಪಕರಣಗಳಂತೆಯೇ ಸೂಕ್ಷ್ಮ ಶಿಲಾಯುಗದಲ್ಲಿಯೂ ನಿರ್ದಿಷ್ಟ ಜ್ಯಾಮಿತೀಯ ಆಕಾರದ ಉಪಕರಣಗಳು ಮತ್ತು ಯಾವದೇ ರೀತಿಯ ಜ್ಯಾಮಿತೀಯ ಆಕಾರಗಳನ್ನು ಹೋಲದ, ಅಸಮ ಅಥವಾ ಅಜ್ಯಾಮಿತೀಯ ಉಪಕರಣಗಳೂ ಇವೆ. ಹಾಗಿದ್ದರೂ ಅಜ್ಯಾಮಿತೀಯ ಉಪಕರಣಗಳಿಗೆ ಹೋಲಿಸಿದರೆ ಜ್ಯಾಮಿತೀಯ ಉಪಕರಣಗಳ ಸಂಖ್ಯೆ ಮತ್ತು ಶೇಕಡಾವಾರು ಪ್ರಮಾಣ ಹೆಚ್ಚಾಗಿರುತ್ತವೆ.

ಪ್ರಸ್ತುತ ಪರಿಶೋಧನೆಯ ಪ್ರದೇಶದಲ್ಲಿನ ಒಟ್ಟು ೨೧೦ ಮೊನೆ ಉಪಕರಣಗಳು ದೊರೆತಿವೆ.

ದೊರೆತಿರುವ ಉಪಕರಣಗಳು ೧೫ ಜಾಸ್ಪರ್, ೧೬ ಆದಿರುಯುಕ್ತ ಜಾಸ್ಪರ್, ೧೬೧ ಕ್ವಾರ್ಟ್ಸ ಮತ್ತು ೧೮ ಆದಿರುಯುಕ್ತ ಕ್ವಾರ್ಟ್ಸ ಶಿಲೆಗಳಲ್ಲಿದ್ದು ವಿವಿಧ ವರ್ಣವನ್ನು ಹೊಂದಿವೆ.

ಭಾರತದ ಇತರ ಸೂಕ್ಷ್ಮ ಶಿಲಾಯುಗ ನೆಲೆಗಳಲ್ಲಿರುವಂತೆಯೇ ಕ್ವಾರ್ಟ್ಸ ಶಿಲಾ ಮಾದರಿಗಳ ಸಂಖ್ಯೆ ಹಾಗೂ ಶೇಕಡಾವಾರು ಪ್ರಮಾಣ ಅತಿ ಹೆಚ್ಚು.

ಉಪಕರಣವನ್ನು ರೂಪಿಸಲು ಬಳಸಿರುವ ಚಕ್ಕೆ, ರೂಪಣಾ ವಿಧಾನ ಮತ್ತು ಉಪಯೋಗ ಇವುಗಳನ್ನನುಸ-ರಿಸಿ ಮೊನೆ ಉಪಕರಣಗಳನ್ನು ೫ ಗುಂಪುಗಳಾಗಿ ವರ್ಗೀಕರಿಸಲಾಗಿದೆ. ಅವುಗಳೆಂದರೆ

೧. ಸಾಮಾನ್ಯ ಮೊನೆ (Simple Point) ಒಟ್ಟು ಉಪಕರಣ ೯೫ ಶೇ. ೪೫.೨೩
೨. ತ್ರಿಭುಜಾಕಾರದ ಮೊನೆ (Triangular Point) ಒಟ್ಟು ಉಪಕರಣ ೩೧ ಶೇ. ೧೪.೭೬
೩. ಕೊಕ್ಕುಳ್ಳ ಮೊನೆ (Beaked Point) ಒಟ್ಟು ಉಪಕರಣ ೬೨ ಶೇ. ೨೯.೫೨
೪. ಗೂಟ ಸಹಿತ ಮೊನೆ (Tanged Point) ಒಟ್ಟು ಉಪಕರಣ ೧೩ ಶೇ. ೬.೧೯
೫. ಅರ್ಧ ಚಂದ್ರಾಕೃತಿ ಮೊನೆ (Lunate Point) ಒಟ್ಟು ಉಪಕರಣ ೯ ಶೇ. ೪.೨೮

ಈ ಮೇಲೆ ಹೇಳಿದ ಉಪ ಗುಂಪಿನ ಉಪಕರಣಗಳು, ದೊರಕಿರುವ ನೆಲೆ, ಅವುಗಳ ಸಂಖ್ಯೆ ಮತ್ತು ಮೊನೆ ಗುಂಪಿನಲ್ಲಿ ಪ್ರತಿಯೊಂದರ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ೭.೧೮ ಮತ್ತು ವೃತ್ತ ನಕ್ಷೆ ಸಂಖ್ಯೆ ೭.ಉ ನಲ್ಲಿ ನೀಡಿದೆ.

ಕೋಷ್ಟಕದಲ್ಲಿ ತಿಳಿದು ಬರುವಂತೆ ಮೊನೆ ಸಮೂಹದಲ್ಲಿ ಸಾಮಾನ್ಯ ಮೊನೆ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿ (೯೫ ಶೇ. ೪೫.೨೩) ಇವೆ. ಮೊನೆ ಗುಂಪಿನ ಇತರ ಉಪ ಗುಂಪುಗಳು ಅನುಕ್ರಮವಾಗಿ ಕಡಿಮೆ ಸಂಖ್ಯೆಯ-ಲ್ಲಿರುವುದು ಕಂಡು ಬರುತ್ತದೆ.

ಪ್ರತಿ ಉಪ ಗುಂಪಿನ ಉಪಕರಣಗಳ ವಿಶ್ಲೇಷಣೆಯನ್ನು ಪ್ರತ್ಯೇಕವಾಗಿ ವಿವರಿಸಿದೆ.

ಸೂಕ್ಷ್ಮ ಶಿಲಾಯುಗದ ಮೊನೆ ಉಪಕರಣಗಳ ಮಾದರಿ (ಮೊದಲನೆಯ ಹಂತ)

(ಹಳೆ ಶಿಲಾಯುಗದ ನೆಲೆಗಳ ಜೊತೆಗಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು)

ಕೋಷ್ಟಕ ಸಂಖ್ಯೆ ೭.೧೮

| ಕ್ರಮ ಸಂಖ್ಯೆ | ನೆಲೆ | ಸಾಮಾನ್ಯ ಮೊನೆ | ತ್ರಿಭುಜಾಕಾರದ ಮೊನೆ | ಕೊಕ್ಕುಳ್ಳ ಮೊನೆ | ಅರ್ಧಚಂದ್ರಾಕೃತಿ ಮೊನೆ | ಗೂಟವಿರುವ ಮೊನೆ | ಒಟ್ಟು | ಶೇ |
|---|---|---|---|---|---|---|---|---|
| ೧ | ಅಪ್ಪಾನಹಳ್ಳಿ | | ೧ | ೨ | | | ೩ | ೧.೪೨ |
| ೨ | ಇರಕಸಂದ್ರ ಕಾಲೋನಿ | ೨ | ೨ | ೧ | | | ೫ | ೨.೩೮ |
| ೩ | ಉನಗನಾಲ | | ೩ | | | ೨ | ೫ | ೨.೩೮ |
| ೪ | ಓಬಳಾಪುರ | ೧ | | | | ೨ | ೩ | ೧.೪೨ |
| ೫ | ಕರಡಿ | | ೨ | ೧ | | | ೩ | ೧.೪೨ |
| ೬ | ಕಾರೇಕುರ್ಚಿ | | | ೧ | | | ೧ | ೦.೪೭ |
| ೭ | ಕಾವಲಹಟ್ಟಿ | | | ೧ | | | ೧ | ೦.೪೭ |
| ೮ | ಗಳಿಗೆಕೆರೆ | ೨ | | ೩ | | ೩ | ೮ | ೩.೮೦ |
| ೯ | ಗುಟ್ಟೆ | | | | | | | |
| ೧೦ | ಚಿಕ್ಕೇಗೌಡನರೊಪ್ಪ | | | ೧ | | | ೧ | ೦.೪೭ |
| ೧೧ | ಢಣಾಪುರ | ೬ | ೫ | ೧೦ | | ೬ | ೨೭ | ೨೨.೩೮ |
| ೧೨ | ದೊಡ್ಡಗುಣಿ | ೧ | ೨ | ೧ | | | ೪ | ೧.೯೦ |
| ೧೩ | ಬೊಮ್ಮೇನಹಳ್ಳಿ | | | ೧ | | | ೧ | ೦.೪೭ |
| ೧೪ | ಮೂಗನಾಯಕನಕೋಟೆ ಉತ್ತರ | ೪ | | ೨ | | | ೬ | ೨.೮೫ |
| ೧೫ | ಮೂಗನಾಯಕನಕೋಟೆ ಪೂರ್ವ | ೩೧ | ೩ | ೧೪ | ೩ | | ೫೧ | ೨೪.೨೮ |
| ೧೬ | ಮೂಗನಾಯಕನಕೋಟೆ ದಕ್ಷಿಣ | ೨೯ | | ೯ | ೨ | | ೪೦ | ೧೯.೦೪ |
| ೧೭ | ಮೂಗನಾಯಕನಕೋಟೆ ಪಶ್ಚಿಮ | ೮ | ೫ | ೧ | | | ೪೦ | ೧೯.೦೪ |
| ೧೮ | ಮಂಚಕಲ್‌ಕುಪ್ಪೆ | ೫ | ೫ | ೧ | | | ೧೧ | ೫.೨೩ |
| ೧೯ | ಮಂಚಲ್ದೊರೆ | | | | | | | |
| ೨೦ | ಯಕ್ಕಲಕಟ್ಟೆ | | | ೨ | ೧ | | ೩ | ೧.೪೨ |
| ೨೧ | ಯಲ್ಲಾಪುರ | ೩ | | ೧ | | | ೪ | ೧.೯೦ |
| ೨೨ | ಶಿವಪುರ | | | ೧ | ೧ | | ೨ | ೦.೯೫ |
| ೨೩ | ಶೆಟ್ಟಿಹಳ್ಳಿ | | ೩ | ೫ | | | ೮ | ೩.೮೦ |
| ೨೪ | ಸಾಲುಕಟ್ಟೆ | | | | | | | |
| ೨೫ | ಸಿಡ್ಲೇಹಳ್ಳಿ | | | ೧ | | | ೧ | ೦.೪೭ |
| ೨೬ | ಹರೇನಹಳ್ಳಿ | | | | | | | |
| ೨೭ | ಹಿಮಗಿರಿ | | | | | | | |
| ೧೮ | ಹಿರೇಹಳ್ಳಿ | ೨ | | ೨ | | | ೪ | ೧.೯೦ |
| ೨೯ | ಹೋನ್ನೇಮಾರನಹಳ್ಳಿ | ೧ | | ೧ | ೨ | | ೪ | ೧.೯೦ |
| | ಒಟ್ಟು | ೯೫ | ೩೧ | ೬೨ | ೯ | ೧೩ | ೨೧೦ | |
| | ಶೇ | ೪೫.೨೩ | ೧೪.೭೬ | ೨೯.೫೨ | ೪.೨೮ | ೬.೧೯ | | |

ವೃತ್ತ ನಕ್ಷೆ ಸಂಖ್ಯೆ ೭.ಉ



### ೩.೧ ಸಾಮಾನ್ಯ ಮೊನೆ

ಮೊನೆ ಉಪಕರಣಗಳಲ್ಲಿ ಸಾಮಾನ್ಯ ಮೊನೆಗಳು ೯೫ (ಶೇ. ೪೫.೨೩) ಇವೆ. ಸಣ್ಣ ಮತ್ತು ಮಧ್ಯಮ ಗಾತ್ರದ ನೀಳಚಕ್ಕೆ, ಹೆರೆಚಕ್ಕೆ ಮತ್ತು ತ್ಯಾಜ್ಯ ಚಕ್ಕೆಗಳ ಮೇಲೆ ಇವುಗಳನ್ನು ರೂಪಿಸಿದೆ. ತ್ರಿಭುಜ, ಪಂಚಭುಜ, ಅಂಡಾಕೃತಿಗಳನ್ನು ಕೆಲವಾದರೂ ಉಪಕರಣಗಳಲ್ಲಿ ಗುರುತಿಸಬಹುದು. ಹೆಚ್ಚಿನ ಉಪಕರಣಗಳನ್ನು ನೀಳಚಕ್ಕೆಯನ್ನು ಹೋಲುವ ಚಕ್ಕೆಗಳ ತೆಳ್ಳನೆಯ ಮೇಲ್ತುದಿಯಲ್ಲಿ ರೂಪಿಸಿದೆ. ಪಾರ್ಶ್ವಗಳಲ್ಲಿ ಮತ್ತು ಬದಿಗಳಲ್ಲಿ ಮರುಚಕ್ಕೆಗಳನ್ನೆಬ್ಬಿಸಿ ಮೊನೆಯನ್ನು ರೂಪಿಸಿದೆ. ಎಲ್ಲ ಉಪಕರಣಗಳೂ ಸಮತಲ ಹಿಂಬದಿಯನ್ನು ಹೊಂದಿದ್ದು ಮುಂಬದಿಯಲ್ಲಿ ಮಧ್ಯ ಉಬ್ಬೇಣು ಪಾರ್ಶ್ವಗಳ ಕಡೆಗೆ ತೆಗೆದಿರುವ ಚಕ್ಕೆ ಕಲೆಗಳು ಮತ್ತು ಮರುಚಕ್ಕೆ ಕಲೆಗಳು ಕಾಣುತ್ತವೆ. ತ್ರಿಭುಜಾಕಾರದ ಉಪಕರಣಗಳಲ್ಲಿ ಒಂದು ಅಥವಾ ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಸಾಧಾರಣವಾಗಿ ಮೊನೆಯು ಉಪಕರಣದ ಮಧ್ಯದಲ್ಲಿ ಉಬ್ಬೇಣಿನ ಮೇಲೆ ಇದೆ. ಕೆಲವು ಉಪಕರಣದಲ್ಲಿ ಮೊನೆಯು ಎಡ ಅಥವಾ ಬಲಪಾರ್ಶ್ವಕ್ಕೆ ಹೊಂದಿಕೊಂಡಂತೆ ಇವೆ.

ಒಟ್ಟು ಉಪಕರಣಗಳಲ್ಲಿ ೧೨ ಜಾಸ್ಪರ್, ೯ ಅದಿರುಯುಕ್ತ ಜಾಸ್ಪರ್, ೬೭ ಕ್ವಾರ್ಟ್ಸ್ ಹಾಗೂ ೭ ಅದಿರುಯುಕ್ತ ಕ್ವಾರ್ಟ್ಸ್‌ನ ವಿವಿಧ ವರ್ಣದ ಶಿಲೆಗಳಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೧೯ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೧೯

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೨೧ | ೨೨.೧೧ | ೫-೧೦ | ೪೬ | ೪೮.೪೨ | ೧-೫ | ೪೨ | ೪೪.೨೧ |
| ೧೫-೨೦ | ೩೯ | ೪೧.೦೫ | ೧೦-೧೫ | ೩೫ | ೩೬.೮೪ | ೫-೧೦ | ೫೩ | ೫೫.೭೮ |
| ೨೦-೩೦ | ೩೫ | ೩೬.೮೪ | ೧೫-೨೫ | ೧೪ | ೧೪.೭೪ | | | |
| ಒಟ್ಟು | ೯೫ | | | ೯೫ | | | ೯೫ | |

ಈ ಗುಂಪಿನ ಒಟ್ಟು ಉಪಕರಣಗಳ ಉದ್ದ ಕನಿಷ್ಠ ೫ ಗರಿಷ್ಠ ೨೮ ಮಿ.ಮೀ. ಇದ್ದು, ಇವುಗಳಲ್ಲಿ ೧೫ ರಿಂದ ೨೦ ಮಿಮೀ.ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೬ ಗರಿಷ್ಠ ೨೨ ಮಿ.ಮೀ. ಗಳಾಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿರುವುದು ತಿಳಿಯುತ್ತದೆ. ಈ ಉಪಕರಣಗಳ ದಪ್ಪ ಕನಿಷ್ಠ ೨ ಗರಿಷ್ಠ ೯ ಮಿಮೀ.ಗಳಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿರುವುದು ಕಂಡು ಬರುತ್ತದೆ.

## ೩.೨ ತ್ರಿಭುಜಾಕಾರದ ಮೊನೆ

ತ್ರಿಭುಜಾಕಾರದ ಮೊನೆ ಉಪಕರಣಗಳು ಒಟ್ಟು ೩೧ (ಶೇ. ೧೪.೭೬) ದೊರಕಿದ್ದು ಇವುಗಳನ್ನು ತೆಳ್ಳನೆಯ ಕಿರು ಹಾಗೂ ಮಧ್ಯಮ ಗಾತ್ರದ ಚಕ್ಕೆಗಳ ಮೇಲೆ ರೂಪಿಸಲಾಗಿದೆ. ಕೆಲವು ಉಪಕರಣಗಳನ್ನು ನೀಳಚಕ್ಕೆಯ ಎರಡೂ ಪಾರ್ಶ್ವಗಳಿಂದ ಲಘು ಕೋನದಲ್ಲಿ ಕತ್ತರಿಸಿ ರೂಪಿಸಿದೆ. ಒಟ್ಟಾರೆ ತ್ರಿಭುಜಾಕಾರದಲ್ಲಿದ್ದರೂ ವಜ್ರಾಕೃತಿ ಪಂಚಭುಜಾಕೃತಿಗಳೂ ಕಾಣುತ್ತವೆ. ಕೆಲವು ಉಪಕರಣಗಳಲ್ಲಿ ಮೇಲ್ತುದಿಯಲ್ಲಿ ಮುಂಬದಿಯಿಂದ ಒಂದೇ ಚಕ್ಕೆ ತೆಗೆದು ಮೊನೆಯನ್ನು ರೂಪಿಸಿದೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳ ಹಿಂಬದಿ ಸಮತಲವಾಗಿದ್ದು ಮುಂಬದಿಯಲ್ಲಿ ಉಬ್ಬೇಣಿನ ಚಕ್ಕೆ ತೆಗೆದು ಉಪಕರಣ-ವನ್ನು ತೆಳ್ಳಗಾಗಿಸಿದೆ. ಒಂದೆರಡು ಉಪಕರಣಗಳಲ್ಲಿ ಉಬ್ಬೇಣು ಹಾಗೆಯೇ ಉಳಿದಿದೆ. ಕೆಲವು ಉಪಕರಣಗಳಲ್ಲಿ ತ್ರಿಭುಜದ ಒಂದು ಅಥವಾ ಎರಡೂ ಭುಜಗಳೂ ಹರಿತವಾಗಿವೆ.

ಒಟ್ಟು ಉಪಕರಣಗಳಲ್ಲಿ ೨೭ ಕ್ವಾರ್ಟ್ಸ್, ೩ ಅದಿರುಯುಕ್ತ ಕ್ವಾರ್ಟ್ಸ್ ಹಾಗೂ ೧ ಅದಿರುಯುಕ್ತ ಜಾಸ್ಪರ್ ಶಿಲೆ-ಯಲ್ಲಿವೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೦ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೦

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೧೧ | ೩೫.೪೮ | ೫-೧೦ | ೪ | ೧೨.೯೦ | ೧-೫ | ೯ | ೨೯.೦೩ |
| ೧೫-೨೦ | ೧೩ | ೪೧.೯೪ | ೧೦-೧೫ | ೧೮ | ೫೮.೦೬ | ೫-೧೦ | ೨೨ | ೭೦.೯೭ |
| ೨೦-೩೦ | ೭ | ೨೨.೫೮ | ೧೫-೩೦ | ೯ | ೨೯.೦೩ | | | |
| ಒಟ್ಟು | ೩೧ | | | ೩೧ | | | ೩೧ | |

ಈ ಗುಂಪಿನ ಒಟ್ಟು ಉಪಕರಣಗಳಲ್ಲಿ ಉದ್ದ ಕನಿಷ್ಠ ೬ ಗರಿಷ್ಠ ೨೬ ಮಿ.ಮೀ. ಇದ್ದು, ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಅದೇ ರೀತಿ ಅಗಲ ಕನಿಷ್ಠ ೭ ಗರಿಷ್ಠ ೩೦ ಮಿ.ಮೀ. ಗಳಾಗಿ-ದ್ದು, ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ಹಾಗೂ ದಪ್ಪ ಕನಿಷ್ಠ ೨ ಗರಿಷ್ಠ ೯ ಮಿ.ಮೀ. ನಲ್ಲಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣ ಸಂಖ್ಯೆ ಹೆಚ್ಚಿರುವುದು ತಿಳಿಯುತ್ತದೆ.

## ೩.೩ ಕೊಕ್ಕುಳ್ಳ ಮೊನೆ

ಪ್ರಸ್ತುತ ಅಧ್ಯಯನ ಪ್ರದೇಶದ ೨೧ ನೆಲೆಗಳಲ್ಲಿ ಮಾತ್ರ ಕಂಡು ಬರುವ ಈ ಗುಂಪಿನ ಉಪಕರಣಗಳು ಒಟ್ಟು ೬೨ (ಶೇ. ೨೯.೫೨)ಇವೆ. ನೀಳಚಕ್ಕೆ ಗುಂಪಿನ ಉಪಕರಣಗಳ ಮೇಲೆ ರೂಪಿಸಿರುವ ಕೊಕ್ಕಿನ ಮೊನೆಗಳು ಅತಿ ಹೆಚ್ಚಿನ ಪ್ರಮಾಣದಲ್ಲಿದ್ದು, ಹೆರೆಚಕ್ಕೆ ಮತ್ತು ತ್ಯಾಜ್ಯ ಚಕ್ಕೆಗಳ ಮೇಲೂ ಕೆಲವು ಉಪಕರಣಗಳನ್ನು ರೂಪಿಸಿವೆ. ಉದ್ದೇಶಿತ

ಮೊನೆ ಯನ್ನು ವಿವಿಧ ರೀತಿಯ ತಂತ್ರಗಳನ್ನು ಉಪಯೋಗಿಸಿ ರೂಪಿಸಿದೆ. ಮೊನೆ ಉಪಕರಣದ ಮೇಲ್ತುದಿಯ ಮಧ್ಯದಲ್ಲಿ ಇರದೆ ಒಂದು ಪಾರ್ಶ್ವಕ್ಕೆ ಹೊಂದಿ ಕೊಂಡಂತೆ ಅಧಿಕ ಕೋನದಲ್ಲಿ ಮುಂಚಾಚಿರುವುದು ಸಾಧಾರಣವಾಗಿ ಕಂಡು ಬರುತ್ತದೆ. ಒಂದೆರಡು ಉಪಕರಣಗಳಲ್ಲಿ ಮಾತ್ರ ಮೊನೆಯ ಮೇಲ್ತುದಿಯು ಮಧ್ಯದಲ್ಲಿದೆ.

ಹೆಚ್ಚಿನ ಉಪಕರಣಗಳಲ್ಲಿ ನೀಳಚಕ್ಕೆಯ ಮೇಲ್ತುದಿಯಲ್ಲಿಯೇ ಕೊಕ್ಕಿನ ಮೊನೆ ಮೂಡಿಸಿದೆ. ಸಾಧಾರಣವಾಗಿ ದಪ್ಪನೆಯ ತುದಿಯನ್ನು ಒಂದು ಪಾರ್ಶ್ವದಿಂದ ಅಧಿಕ ಕೋನದಲ್ಲಿ ಕತ್ತರಿಸಿ ಮೇಲ್ತುದಿಯನ್ನು ಅಗಲವಾದ ಸಮತಲವನ್ನಾಗಿ ರೂಪಿಸಿ ಇನ್ನೊಂದು ತುದಿಯಲ್ಲಿ ಮುಂಚಾಚಿದ ಮೊನೆ ಮೂಡಿಸಿರುವುದು ಬಳಸಿರುವ ಒಂದು ತಾಂತ್ರಿಕ ವಿಧಾನ. ಹೀಗೆ ಮೂಡಿಸಿರುವ ಕೊಕ್ಕಿನ ಎರಡೂ ಪಾರ್ಶ್ವಗಳಲ್ಲೂ ಮೇಲಿನಿಂದ ಮರುಚಕ್ಕೆ ತೆಗೆದು ಅಥವಾ ಕಚ್ಚು ಮೂಡಿಸಿ ಕೊಕ್ಕನ್ನು ಪ್ರಧಾನವಾಗಿ ಕಾಣುವಂತೆ ಮೂಡಿಸಿರುವುದು ಎರಡನೇ ವಿಧಾನ. ಕೊಕ್ಕು ಮೂಡಿರುವ ತುದಿಯಲ್ಲಿ ಕೊಕ್ಕಿನಿಂದ ಸ್ವಲ್ಪ ಕೆಳಗೆ ಒಂದು ಪಾರ್ಶ್ವದಲ್ಲಿ ಹಿಂಬದಿಯಿಂದ ಅಥವಾ ಮುಂಬದಿಯಿಂದ ಆಳವಾದ ಕಚ್ಚು ತೆಗೆದು ಮೊನೆಯನ್ನು ಮುಂಚಾಚಿರುವಂತೆ ರೂಪಿಸಿರುವುದು ಮೂರನೆಯ ವಿಧಾನ. ಕೆಲವು ಉಪಕರಣಗಳಲ್ಲಿ ನೀಳಚಕ್ಕೆಯ ಒಂದು ಅಥವಾ ಎರಡೂ ಪಾರ್ಶ್ವಗಳು ಸಾಕಷ್ಟು ಹರಿತವಾಗಿದ್ದು ಉಪಕರಣವನ್ನು ನೀಳಚಕ್ಕೆಯಂತೆಯೂ ಉಪಯೋಗಿಸಬಹುದಾಗಿದೆ.

ಸಾಧಾರಣವಾಗಿ ಎಲ್ಲಾ ಉಪಕರಣಗಳ ಹಿಂಬದಿ ಸಮತಲವಾಗಿದೆ. ಕೆಲವು ಉಪಕರಣಗಳಲ್ಲಿ ಮೇಲ್ತುದಿಯಲ್ಲಿ ತಾಡನ ಶಂಕು ಎದ್ದು ಕಾಣುತ್ತದೆ. ಮುಂಬದಿಯಲ್ಲಿ ಉಬ್ಬೇಣು ಇದ್ದು, ಹೆಚ್ಚಿನ ಉಪಕರಣಗಳಲ್ಲಿ ಚಕ್ಕೆ ತೆಗೆದು ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳ್ಳಗಾಗಿಸಿದೆ. ಕೆಲವು ಉಪಕರಣಗಳಲ್ಲಿ ಮಾತ್ರ ಪುಡಿಗೆಲಸ ಮಾಡಿ ಕಾರ್ಯ ಸಾಧಕ ಮೊನೆಯನ್ನು ಬಲಗೊಳಿಸಲಾಗಿದೆ.

ಒಟ್ಟು ಉಪಕರಣಗಳಲ್ಲಿ ೩ ಅದಿರುಯುಕ್ತ ಜಾಸ್ಪರ್, ೮ ಅದಿರುಯುಕ್ತ ಕ್ವಾರ್ಟ್ಸ್ ಮತ್ತು ೫೧ ಕ್ವಾರ್ಟ್ಸ್ ಶಿಲೆಯಲ್ಲಿ ರೂಪತವಾಗಿವೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೨೧ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೬.೨೧

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೬ | ೯.೬೭ | ೫-೧೦ | ೧೮ | ೨೯.೦೩ | ೧-೫ | ೧೯ | ೩೦.೬೫ |
| ೧೫-೨೦ | ೩೨ | ೫೧.೬೧ | ೧೦-೨೦ | ೪೨ | ೬೭.೭೪ | ೫-೧೦ | ೩೪ | ೫೪.೮೪ |
| ೨೦-೩೫ | ೨೪ | ೩೮.೭೧ | ೨೦-೩೦ | ೨ | ೩.೨೨ | ೧೦-೧೫ | ೯ | ೧೪.೫೧ |
| ಒಟ್ಟು | ೬೨ | | | ೬೨ | | | ೬೨ | |

ಮೇಲಿನ ಪ್ರಮಾಣ ವಿಶ್ಲೇಷಣೆಯಂತೆ ಒಟ್ಟು ಉಪಕರಣಗಳಲ್ಲಿ ಉದ್ದ ಕನಿಷ್ಠ ೧೧ ಗರಿಷ್ಠ ೩೨ ಮಿ.ಮೀ. ಇದ್ದು, ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೭ ಗರಿಷ್ಠ ೨೮ ಮಿ.ಮೀ. ಗಳಿದ್ದು, ಇವುಗಳಲ್ಲಿ ೧೦ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚು ಇರುವುದು ಕಂಡು ಬರುತ್ತದೆ. ಹಾಗೂ ದಪ್ಪ ಕನಿಷ್ಠ ೫ ಗರಿಷ್ಠ ೧೫ ಮಿ.ಮೀ. ಗಳಾಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚಿರುವುದು ತಿಳಿದು ಬರುತ್ತದೆ.

**೩.೪ ಗೂಟ ಸಹಿತ ಮೊನೆ**

ಸಾಧಾರಣವಾಗಿ ತ್ರಿಭುಜಾಕೃತಿ ಮೊನೆಗಳ ಎಲ್ಲ ಲಕ್ಷಣಗಳನ್ನೂ ತೋರ್ಪಡಿಸುವ ಈ ಉಪಕರಣಗಳು ಮರ ಅಥವಾ ಮೂಳೆಯ ಹಿಡಿಕೆ ಅಥವಾ ಬಾಣದ ತುದಿಯಲ್ಲಿ ಸಿಕ್ಕಿಸಲು ಅನುಕೂಲವಾಗುವಂತೆ ಕೆಳತುದಿಯಲ್ಲಿ ಗೂಟದಂತಹ ಮುಂಚಾಚು ಇದೆ. ಹಿಡಿಕೆಯ ತುದಿಗೆ ಕಟ್ಟಲು ಮತ್ತು ಮೊನೆಯನ್ನು ಹಿಡಿತದಲ್ಲಿ ಬಿಗಿಯಾಗಿ ಹಾಗೂ ಸ್ಥಿರವಾಗಿ ಕೂರಿಸಲು ಈ ಗೂಟದಂತಹ ಮುಂಚಾಚು ಸಹಕರಿಸುತ್ತದೆ. ಈ ಉಪಗುಂಪಿನ ಉಪಕರಣಗಳು ಒಟ್ಟು ೧೩ (ಶೇ. ೬.೧೯) ಇದ್ದು ಒಂದೆರಡು ಉಪಕರಣಗಳಲ್ಲಿ ಸ್ಪಷ್ಟವಾಗಿ ಕಾಣುವ ಮುಂಚಾಚು ಇದೆ. ಕೆಳತುದಿಯ ಒಂದು ಪಾರ್ಶ್ವದಲ್ಲಿ ಕಚ್ಚನ್ನುಂಟು ಮಾಡಿ ಅಥವಾ ಲಘುಕೋನದಲ್ಲಿ ಆಳವಾದ ಚಕ್ಕೆ ತೆಗೆದು ಈ ಮುಂಚಾಚನ್ನು ಮೂಡಿಸರುತ್ತದೆ. ಒಂದೆರಡು ಉದಾಹರ-ಣೆಯಲ್ಲಿ ಮೇಲ್ಬದಿಯಿಂದ ಅಥವಾ ಕೆಳಬದಿಯಿಂದ ಚಕ್ಕೆ ತೆಗೆದು ಕೆಳತುದಿಯನ್ನು ಹರಿತವಾದ ಅಲಗಿನಂತೆ ರೂಪಿಸಿರು-ವುದು ಕಂಡು ಬರುತ್ತದೆ. ಈ ಗೂಟವಿರುವ ಭಾಗವು ತೆಳ್ಳಗಿದ್ದು ಹಿಡಿಕೆಗೆ ಜೋಡಿಸಲು ಅನುಕೂಲವಾಗುವಂತಿದೆ.

ಒಟ್ಟು ಉಪಕರಣಗಳಲ್ಲಿ ೨ ಅದಿರುಯುಕ್ತ ಕ್ವಾರ್ಟ್ಸ ಹಾಗೂ ಉಳಿದ ೧೧ ಕ್ವಾರ್ಟ್ಸ ಶಿಲೆಯಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೨ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೨೨**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೪ | ೩೦.೭೭ | ೫-೧೫ | ೩ | ೨೩.೦೮ | ೫-೧೦ | ೯ | ೬೯.೨೩ |
| ೨೦-೩೦ | ೬ | ೪೬.೧೫ | ೧೫-೨೫ | ೬ | ೪೬.೧೫ | ೧೦-೧೫ | ೪ | ೩೦.೭೭ |
| ೩೦-೪೦ | ೩ | ೨೩.೦೮ | ೨೫-೩೦ | ೪ | ೩೦.೭೭ | | | |
| ಒಟ್ಟು | ೧೩ | | | ೧೩ | | | ೧೩ | |

ಮೇಲಿನ ಪ್ರಮಾಣ ವಿಶ್ಲೇಷಣೆಯ ಅನ್ವಯದಂತೆ ಉದ್ದ ಕನಿಷ್ಠ ೧೬ ಗರಿಷ್ಠ ೩೬ ಮಿ.ಮೀ. ಗಳಾಗಿದ್ದು, ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೯ ಗರಿಷ್ಠ ೨೬ ಮಿ.ಮೀ. ಗಳಾಗಿದ್ದು, ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚಿವೆ. ಅಲ್ಲದೆ ದಪ್ಪ ಕನಿಷ್ಠ ೩ ಗರಿಷ್ಠ ೧೧ ಮಿ.ಮೀ. ಗಳಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವುದು ತಿಳಿಯುತ್ತದೆ.

**೩.೫ ಅರ್ಧ ಚಂದ್ರಾಕೃತಿ ಮೊನೆ**

ಸೂಕ್ಷ್ಮ ಶಿಲಾಯುಗದ ಉಪಕರಣ ಸಮೂಹದ ಸಂದರ್ಭದಲ್ಲಿ ಮೊನೆ ಗುಂಪಿನ .ಈ ಉಪಕರಣ ಒಂದು ವಿಶೇಷ ಉಪ ಗುಂಪಾಗಿದೆ. ಇದು ಅರ್ಧ ಚಂದ್ರಾಕೃತಿ ಮತ್ತು ಅಥವಾ ದಬ್ಬಳ ಇವೆರಡರ ನಡುವಣ ವಿವಿಧ ಹಂತಗಳನ್ನು ಪ್ರದರ್ಶಿಸುತ್ತದೆ ಎಂದು ಕಾಣುತ್ತದೆ. ಹೆಚ್ಚು ಕಡಿಮೆ ಅರ್ಧ ಚಂದ್ರಾಕೃತಿಯಂತೆ ರೂಪಿಸಿರುವ ಈ ಉಪಕರಣದ ಒಂದು ತುದಿಯಲ್ಲಿ ಒಂದು ಅಥವಾ ಎರಡೂ ಬದಿಯಿಂದ ಕಚ್ಚನ್ನುಂಟು ಮಾಡಿ ಮರುಚಕ್ಕೆಗಳನ್ನೆಬ್ಬಿಸಿ ಮೊನಚಾದ ತುದಿಯನ್ನು ರೂಪಿಸಿದೆ. ಹೆಚ್ಚಿನ ಉಪಕರಣಗಳಲ್ಲಿ ನೇರವಾದ ಸರಳರೇಖೆಯಲ್ಲಿರುವ ಒಳ ಅಲಗು ಹರಿತವಾಗಿದ್ದರೆ ಒಂದೆರಡು ಉಪಕರಣಗಳಲ್ಲಿ ಅರ್ಧ ಚಂದ್ರಾಕೃತಿಯ ಹೊರ ಅಲಗು ನೇರವಾಗಿದೆ. ಮುಖ್ಯವಾಗಿ ಮೇಲ್ತುದಿಯಲ್ಲಿರುವ ಮೊನೆ ಹೆಚ್ಚು ಉಪಯುಕ್ತವಾದಂತೆ ಕಾಣುತ್ತದೆ.

ಪ್ರಸ್ತುತ ಪರಿಶೋಧನೆಯಲ್ಲಿ ೫ ನೆಲೆಗಳಲ್ಲಿ ಮಾತ್ರ ೯ ( ಚಿ. ೪.೨೮ ) ಉಪಕರಣಗಳು ದೊರೆತಿವೆ. ಉಪಕರಣಗಳ ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಮುಂಬದಿಯಲ್ಲಿ ಉಬ್ಬೇಣು ಅಥವಾ ಲಘುಕೋನದಲ್ಲಿ ನೀಳ-ಚಕ್ಕೆ ಎಬ್ಬಿಸಿ ಒಂದು ಪಾರ್ಶ್ವವನ್ನು ಹರಿತವಾಗಿಸಿ ಇನ್ನೊಂದು ಪಾರ್ಶ್ವವನ್ನು ಮೊಂಡಾಗಿಸಿದೆ. ಒಂದೆರಡು ಉಪಕರಣಗಳಲ್ಲಿ ಉಬ್ಬೇಣನ್ನು ತೆಗೆದು ಉಪಕರಣವನ್ನು ತೆಳ್ಳಗಾಗಿಸಿದೆ.

ಒಟ್ಟು ಉಪಕರಣಗಳಲ್ಲಿ ೩ ಜಾಸ್ಪರ್, ೧ ಅದಿರುಯುಕ್ತ ಜಾಸ್ಪರ್ ಹಾಗೂ ೫ ಕ್ವಾರ್ಟ್ಸನಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೨೩ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೩

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೨ | ೨೨.೨೨ | ೫-೧೦ | ೪ | ೪೪.೪೪ | ೧-೫ | ೬ | ೬೬.೬೬ |
| ೨೦-೨೫ | ೫ | ೫೫.೫೫ | ೧೦-೧೫ | ೩ | ೩೩.೩೩ | ೫-೧೦ | ೩ | ೩೩.೩೩ |
| ೨೫-೩೦ | ೨ | ೨೨.೨೨ | ೧೫-೨೦ | ೨ | ೨೨.೨೨ | | | |
| ಒಟ್ಟು | ೯ | | | ೯ | | | ೯ | |

ಪ್ರಮಾಣ ವಿಶ್ಲೇಷಣೆಯ ವಿವರದಂತೆ ಉಪಕರಣಗಳ ಉದ್ದ ಕನಿಷ್ಠ ೧೨ ಗರಿಷ್ಠ ೨೫ ಮಿ.ಮೀ. ಇದ್ದು, ಇವುಗಳಲ್ಲಿ ೨೦ ರಿಂದ ೨೫ ಮಿಮೀ.ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಅಗಲ ಕನಿಷ್ಠ ೭ ಗರಿಷ್ಠ ೧೭ ಮಿ.ಮೀ. ಗಳಾಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಳವಿರುವುದು ತಿಳಿಯುತ್ತದೆ. ಅಲ್ಲದೆ ದಪ್ಪ ಕನಿಷ್ಠ ೨ ಗರಿಷ್ಠ ೮ ಮಿ.ಮೀ. ಗಳಾಗಿದ್ದು, ೧ ರಿಂದ ೫ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಹೆಚ್ಚಿರುವುದು ತಿಳಿ-ಯುತ್ತದೆ.

೪. ಬಾಣದ ಮೊನೆ

ಸಾಧಾರಣವಾಗಿ ತ್ರಿಭುಜಾಕಾರದ ಮತ್ತು ಎಲೆಯಾಕಾರದ ಮೊನೆಗಳ ಲಕ್ಷಣಗಳನ್ನು ಹೊಂದಿರುವ ಬಾಣದ ಮೊನೆ ಈಟಿ ಅಥವಾ ಬಾಣದ ತುದಿಗೆ ಜೋಡಿಸಲು ಅನುಕೂಲವಾಗುವಂತೆ ಕೆಳತುದಿಯಲ್ಲಿ ವಿಶೇಷ ರೀತಿಯ ಏರ್ಪಾ-ಟನ್ನು ಹೊಂದಿವೆ.

ಮೊದಲನೆಯ ಹಂತದ ೧೪ ನೆಲೆಗಳಲ್ಲಿ ಮಾತ್ರ ಬಾಣದ ಮೊನೆಯ ೬೭ (ಶೇ. ೫.೦೧) ಉಪಕರಣಗಳು ದೊರೆತಿವೆ. ಇವುಗಳನ್ನು ೩ ಜಾಸ್ಪರ್, ೪ ಅದಿರುಯುಕ್ತ ಜಾಸ್ಪರ್, ೭ ಅದಿರುಯುಕ್ತ ಕ್ವಾರ್ಟ್ಸ ಹಾಗೂ ೫೩ ಕ್ವಾರ್ಟ್ಸ ಶಿಲೆಗ-ಳಲ್ಲಿ ರೂಪಿಸಲಾಗಿದೆ.

ಈ ಉಪಕರಣಗಳಲ್ಲಿ ನಾಲ್ಕು ವಿಧಗಳನ್ನು ಗುರುತಿಸಬಹುದಾಗಿದೆ. ಮೊದಲನೆಯ ವಿಧದ ಉಪಕರಣಗಳಲ್ಲಿ ಕೆಳತುದಿಯ ಒಂದು ಪಾರ್ಶ್ವದಲ್ಲಿ ಕಚ್ಚನ್ನುಂಟುಮಾಡಿ ಹಿಡಿಕೆಯಲ್ಲಿ ಬಿಗಿಯಾಗಿ ಕೂರಿಸಲು ಏರ್ಪಾಟು ಮಾಡಲಾಗಿದೆ. ಇಲ್ಲವೇ ಯಾವದಾದರೊಂದು ಬದಿಯಿಂದ ಕೆಳತುದಿಯ ಕಡೆಗೆ ಆಳವಾದ ಚಕ್ಕೆ ತೆಗೆದು ಉಪಕರಣವನ್ನು ತೆಳ್ಳಗಾಗಿಸಿದೆ. ಇಂತಹ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ (೩೦ ಶೇ. ೪೪.೭೮). ಎರಡನೆಯ ವಿಧದ ಉಪಕರಣಗಳಲ್ಲಿ ಮುಂಬ-

ದಿಯ ಮಧ್ಯ ಉಬ್ಬೇಣಿನ ನೇರಕ್ಕೆ ಕೆಳತುದಿಯಲ್ಲಿ ಕಚ್ಚುಗಳನ್ನು ಮೂಡಿಸಿ ಸ್ಪಷ್ಟವಾದ ಗೂಟದಂತಹ ಮುಂಚಾಚನ್ನು ಮೂಡಿಸಿದೆ. ಒಂದು ಪಾರ್ಶ್ವದಲ್ಲಿ ಮಾತ್ರ ಕಚ್ಚನ್ನುಂಟು ಮಾಡಿರುವ ಉಪಕರಣಗಳು ಮತ್ತು ಎರಡೂ ಪಾರ್ಶ್ವಗಳಿಂದ ಕಚ್ಚ-ನ್ನುಂಟು ಮಾಡಿ ಚಕ್ಕೆ ತೆಗೆದು ಸ್ಪಷ್ಟ ಗೂಟವನ್ನು ಪಡೆದಿರುವ ಉಪಕರಣಗಳು (ಒಟ್ಟು ೨೦ ಶೇ. ೨೯.೮೫) ಈ ವಿಧದಲ್ಲಿವೆ. ಇಂತಹ ಉಪಕರಣಗಳು ಮೂರನೇ ವಿಧದ ಉಪಕರಣಗಳು ತ್ರಾಪಿಜ್ಯಗಳು. ನೀಳಚಕ್ಕೆಗಳನ್ನು ಉದ್ದೇಶಿತ ಆಕಾರಕ್ಕೆ ತಕ್ಕಂತೆ ನೇರವಾಗಿ ಇಲ್ಲವೇ ಲಘುಕೋನದಲ್ಲಿ ಕತ್ತರಿಸಿ ಈ ಉಪಕರಣಗಳನ್ನು ರೂಪಿಸಿದೆ. ಹರಿತವಾದ ಅಲಗಿನ ತುದಿಯನ್ನು ರೂಪಿಸಿದೆ. ಹರಿತವಾದ ಅಲಗಿನ ತುದಿಯನ್ನು ಹೆಚ್ಚು ಉಪಯುಕ್ತವಾಗುವಂತೆ ಮರುಚಕ್ಕೆಗಳನ್ನೆಬ್ಬಿಸಿ ಗರಗಸದ ಅಲಗಿನಂತೆ ಇವು ರೂಪಿತವಾಗಿವೆ. ಹರಿತ ಅಲಗಿನ ವಿರುದ್ಧ ತುದಿಯಲ್ಲಿ ಸಾಧಾರಣವಾಗಿ ಮಧ್ಯದ ಉಬ್ಬೇಣಿನವರೆಗೆ ಹಿಡಿಕೆಯೊಳಗೆ ಬಿಗಿದು ಈ ಉಪಕರಣಗಳನ್ನು ಉಪಯೋಗಿಸಲಾಗುತ್ತದೆ (೧೦ ಶೇ. ೧೪.೯೩). ನಾಲ್ಕನೇ ವಿಧದ ಉಪಕರಣಗಳು ಮುಖ್ಯವಾಗಿ ತ್ರಿಭುಜಾಕಾರದಲ್ಲಿವೆ. ಮೊನೆಗೆ ವಿರುದ್ಧವಾಗಿರುವ ಕೆಳತುದಿಯ ಭುಜದಲ್ಲಿ ಒಳಭಾಗಿದೆ. ಕಚ್ಚು ಉಂಟಾಗುವಂತೆ ನಿಯಂತ್ರಿತ ಬಲಪ್ರಯೋಗದಿಂದ ಚಕ್ಕೆ ತೆಗೆದು ಈ ಉಪಕರಣಗಳನ್ನು ರೂಪಿಸಿದೆ (೭ ಶೇ. ೧೦.೪೫)

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೪ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೪

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೫-೧೫ | ೨೭ | ೪೦.೩೦ | ೧೦-೧೫ | ೪೮ | ೭೧.೬೪ | ೧-೫ | ೪೪ | ೬೫.೬೭ |
| ೧೫-೨೫ | ೩೧ | ೪೬.೨೬ | ೧೫-೨೦ | ೧೧ | ೧೬.೪೧ | ೫-೧೦ | ೨೨ | ೩೨.೮೪ |
| ೨೫-೩೫ | ೯ | ೧೩.೪೩ | ೨೦-೩೦ | ೬ | ೮.೯೫ | ೧೦-೧೫ | ೧ | ೧.೪೯ |
| ಒಟ್ಟು | ೬೭ | | | ೬೭ | | | ೬೭ | |

ಮೇಲಿನ ಪ್ರಮಾಣ ವಿಶ್ಲೇಷಣೆಯಿಂದ ತಿಳಿದು ಬರುವಂತೆ ಉದ್ದ ಕನಿಷ್ಠ ೧೦ ಗರಿಷ್ಠ ೩೧ ಮಿ.ಮೀ. ಗಳಾಗಿ-ದ್ದು, ೧೫ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಲು ಹೆಚ್ಚಿರುವುದು ತಿಳಿದು ಬರುತ್ತದೆ. ಹಾಗೆಯೇ ಅಗಲ ಕನಿಷ್ಠ ೭ ಗರಿಷ್ಠ ೨೮ ಮಿ.ಮೀ. ಗಳಾಗಿದ್ದು ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿರುವುದು ತಿಳಿಯುತ್ತದೆ. ಅದೇ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೧೨ ಮಿ.ಮೀ. ಗಳಾಗಿದ್ದು ೧ ರಿಂದ ೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿವೆ.

೫. ಕೊರೆಗ

ಸಣ್ಣ ಹಾಗೂ ಮಧ್ಯಮ ಗಾತ್ರದ ನೀಳಚಕ್ಕೆ, ಹೆರೆಚಕ್ಕೆ ಹಾಗೂ ಅನುಪಯುಕ್ತವೆನಿಸುವ ಚಕ್ಕೆಗಳ ಮೇಲೆ ಈ ಉಪಕರಣವನ್ನು ರೂಪಿಸಿದೆ. ಅನಿರ್ದಿಷ್ಟ ಆಕಾರದಲ್ಲಿರುವ ಈ ಉಪಕರಣಗಳಲ್ಲಿ ಬಳಸಿರುವ ತಂತ್ರ ಮತ್ತು ಉಪಕರಣದ ಬಾಹ್ಯ ರೂಪವನ್ನು ಅನುಸರಿಸಿ ವಿವಿಧ ಉಪ ಗುಂಪುಗಳನ್ನಾಗಿ ವರ್ಗೀಕರಿಸಲಾಗಿದೆ. ಉದಾಹರಣೆಗೆ ಹೆರೆಚಕ್ಕೆ ಮತ್ತು ನಿರುಪಯುಕ್ತ ಚಕ್ಕೆಗಳ ಮೇಲೆ ರೂಪಿಸಿರುವ ಕೊರೆಗಗಳು ಮತ್ತು ವಿವಿಧ ರೀತಿಯ ನೀಳಚಕ್ಕೆಗಳಿಂದ ರೂಪಿಸಿರುವ ಕೊರೆಗಗಳು ಈ ಬಗೆಯ ಕೊರೆಗಗಳನ್ನು ನಿರ್ದಿಷ್ಟವಾದ ವಿಶೇಷ ಕಾರ್ಯಗಳಿಗಾಗಿ ಉಪಯೋಗಿಸಬಹುದಾಗಿದೆ.

ಪ್ರಸ್ತುತ ಅಧ್ಯಯನದ ಮೊದಲನೆ ಹಂತದ ೧೩ ನೆಲೆಗಳಲ್ಲಿ ದೊರೆತಿರುವ ೩೫ (ಶೇ. ೨.೬೧) ಉಪಕರಣಗಳಲ್ಲಿ ೨೬ (ಶೇ. ೭೪.೨೮) ಉಪಕರಣಗಳು ದಪ್ಪನೆಯ ನಿರುಪಯುಕ್ತ ಚಕ್ಕೆಗಳು ಮತ್ತು ಹೆರೆಚಕ್ಕೆ ಗುಂಪಿನ ಉಪಕರಣಗಳ ಮೇಲೆ ರೂಪಿತವಾಗಿವೆ. ಹೆಚ್ಚಿನ ಉಪಕರಣಗಳಲ್ಲಿ ಹೆಚ್ಚು ಕಡಿಮೆ ಸಮತಲ ಹಿಂಬದಿ ಕಾಣುತ್ತದೆ. ತೆಳ್ಳನೆಯ ಮೇಲ್ತುದಿಯಲ್ಲಿ ಎರಡೂ ಪಾರ್ಶ್ವಗಳಿಂದ ಕಿರು ಚಕ್ಕೆಗಳನ್ನೆಬ್ಬಿಸಿ ಅಥವಾ ಕಚ್ಚುಗಳನ್ನು ಮಾಡಿ ಉದ್ದೇಶಿತ ಮೊನೆಯನ್ನು ರೂಪಿಸಿದೆ. ಕೆಲವು ಉಪಕರಣಗಳಲ್ಲಿ ಮೊನೆಯು ಚೂಪಾಗಿದ್ದರೆ ಮತ್ತೆ ಕೆಲವದರಲ್ಲಿ ಸ್ವಲ್ಪ ಅಗಲವಾಗಿದ್ದು ಹರಿತ ಅಲಗಿದೆ. ಹೆಚ್ಚಿನ ಉಪಕರಣಗಳಲ್ಲಿ ಅಲಗು ಅಥವಾ ಮೊನೆ ಮೇಲ್ತುದಿಯ ಮಧ್ಯದಲ್ಲಿದ್ದರೆ ಇನ್ನು ಕೆಲವುದರಲ್ಲಿ ಎಡ ಇಲ್ಲವೇ ಬಲ ಪಾರ್ಶ್ವಕ್ಕೆ ಹೊಂದಿಕೊಂಡಂತೆ ಇದೆ. ಕೆಲವು ಉಪಕರಣಗಳನ್ನು ಪಾರ್ಶ್ವ, ತುದಿ ಹಾಗೂ ಒಳಬಾಗುಳ್ಳ ಹೆರೆಚಕ್ಕೆಗಳಾಗಿಯೂ ಉಪಯೋಗಿಸುವಂತೆ ಆಯಾ ಅಲಗನ್ನು ಹರಿತಗೊಳಿಸಿದೆ. ಇಂತಹ ಉಪಕರಣಗಳ ಮುಂಬದಿಯಲ್ಲಿ ಅನೇಕ ಚಕ್ಕೆ ಕಲೆಗಳನ್ನು ಕಾಣಬಹುದು (೯ ಶೇ. ೨೫.೭೧). ಉಪಕರಣಗಳು ಪಿವಿಧ ರೀತಿಯ ಚಕ್ಕೆಗಳನ್ನು ವಿಷಮಕೋನದಲ್ಲಿನ ಮೊನೆ ಚೂಪಾಗಿರದೆ ದಪ್ಪವಿದ್ದು ಮೊಂಡಾಗಿದೆ. ಒಂದೇ ಪಾರ್ಶ್ವದಿಂದ ಕತ್ತರಿಸಿ ರೂಪಿಸಿರುವ ಉಪಕರಣಗಳಲ್ಲಿ ಕಾರ್ಯ ನಿರ್ವಾಹಕ ತುದಿಯು ಒಂದು ಪಾರ್ಶ್ವದಲ್ಲಿದ್ದರೆ ಎರಡೂ ಕಡೆಯಿಂದ ಕತ್ತರಿಸಿದ ಉಪಕರಣಗಳಲ್ಲಿ ಇದು ಮಧ್ಯದಲ್ಲಿದೆ. ಒಂದೆರಡು ಉಪಕರಣಗಳಲ್ಲಿ ಕೊರೆಯುವ ತುದಿಯ ಒಂದು ಪಾರ್ಶ್ವದಲ್ಲಿ ವಿಷಮಕೋನದಲ್ಲಿ ಚಕ್ಕೆ ಎಬ್ಬಿಸಿ, ಇಲ್ಲವೇ ಕಚ್ಚುಂಟು ಮಾಡಿ ಉಪಕರಣದ ವಿಶಿಷ್ಟತೆಯನ್ನು ಹೆಚ್ಚಿಸಿರುವುದು ತಿಳಿಯುತ್ತದೆ.

ಒಟ್ಟು ಉಪಕರಣಗಳಲ್ಲಿ ೪ ಜಾಸ್ಪರ್, ೭ ಆದಿರುಯುಕ್ತ ಜಾಸ್ಪರ್ ಹಾಗೂ ೨೪ ವಿವಿಧ ವರ್ಣದ ಕ್ವಾರ್ಟ್ಸ್ ಶಿಲೆಯಲ್ಲಿವೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೫ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೫

| ಉದ್ದ ಮಿ.ಮೀ. | ಉಪಕರಣ | ಶೇ | ಆಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೮ | ೨೨.೮೬. | ೧೦-೧೫ | ೯ | ೨೫.೭೧ | ೧-೫ | ೭ | ೨೦.೦೦ |
| ೨೦-೨೫ | ೧೦ | ೨೮.೫೭ | ೧೫-೨೦ | ೧೬ | ೪೫.೭೧ | ೫-೧೦ | ೨೫ | ೭೧.೪೩ |
| ೨೫-೩೫ | ೧೭ | ೪೮.೫೭ | ೨೦-೩೦ | ೧೦ | ೨೮.೫೭ | ೧೦-೧೫ | ೩ | ೮.೫೭ |
| ಒಟ್ಟು | ೩೫ | | | ೩೫ | | | ೩೫ | |

ಮೇಲಿನ ಉಪಕರಣಗಳ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೦ ಗರಿಷ್ಠ ೩೨ ಮಿ.ಮೀ. ಇದ್ದು ೨೫ ರಿಂದ ೩೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಆದೇ ರೀತಿ ಆಗಲ ಕನಿಷ್ಠ ೧೧ ಗರಿಷ್ಠ ೨೮ ಮಿ.ಮೀ. ಗಳಾಗಿದ್ದು ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿವೆ. ಹಾಗೆಯೇ ದಪ್ಪ ಕನಿಷ್ಠ ೩ ಗರಿಷ್ಠ ೧೧ಮಿ.ಮೀ.ಗಳಾಗಿದ್ದು ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಸಂಖ್ಯೆ ಅತಿ ಹೆಚ್ಚು ಇರುವುದು ತಿಳಿಯುತ್ತದೆ.

**೬. ಕೊರೆಯುಳಿ**

ಅಂತ್ಯ ಹಳೆಶಿಲಾಯುಗದ ನೀಳಚಕ್ಕೆ ಗುಂಪಿನ ವಿಶಿಷ್ಟ ಉಪಕರಣವಾಗಿದ್ದು, ಸೂಕ್ಷ್ಮ ಶಿಲಾಯುಗದಲ್ಲಿಯೂ ಹೆಚ್ಚು ಕಡಿಮೆ ಆದೇ ಶೇಕಡಾವಾರು ಪ್ರಮಾಣದಲ್ಲಿ ಉಪಯುಕ್ತವಾಗಿರುವ ಉಪಕರಣಗಳಲ್ಲಿ ಕೊರೆಯುಳಿ ಮುಖ್ಯವಾದುದು. ಸಾಧಾರಣವಾಗಿ ನೀಳಚಕ್ಕೆ ಗುಂಪಿನ ಚಕ್ಕೆಗಳ ಮೇಲೆಯೇ ರೂಪಿಸಲಾಗಿರುವ ಈ ಉಪಕರಣವನ್ನು ಕೆಲವೊಮ್ಮೆ ಹೆರೆಚಕ್ಕೆ, ಮೊನೆ ಮತ್ತಿತರ ಉಪಕರಣ ಪ್ರಭೇದಗಳ ಮೇಲೂ ರೂಪಿಸಲಾತ್ತದೆ.

ಪ್ರಸ್ತುತ ಪರಿಶೋಧನೆಯಲ್ಲಿ ಮೊದಲನೆ ಗುಂಪಿನ ೫ ನೆಲೆಗಳಲ್ಲಿ ಮಾತ್ರ ಒಟ್ಟು ೧೩ (ಶೇ. ೦.೯೭) ಕೊರೆಯುಳಿ ಉಪಕರಣಗಳು ದೊರೆತಿವೆ. ಈ ಉಪಕರಣಗಳನ್ನು ೪ ಜಾಸ್ಪರ್, ೯ ವಿವಿಧ ವರ್ಣದ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಏಳು ನೀಳಚಕ್ಕೆ, ಐದು ಹೆರೆಚಕ್ಕೆ ಗುಂಪು ಹಾಗು ಒಂದು ಅರ್ಧ ಚಂದ್ರಾಕೃತಿ ಮೊನೆಯಲ್ಲಿ ರೂಪಿತವಾಗಿದೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳ ಅಲಗನ್ನು ಸಾಧಾರಣವಾಗಿ ದಪ್ಪನೆಯ ತುದಿಯ ಮೇಲೆ ರೂಪಿಸಲಾಗಿದೆ. ಎಲ್ಲಾ ಉಪಕರಣಗಳ ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಎರಡು ಉಪಕರಣಗಳಲ್ಲಿ ಎರಡೂ ತುದಿಗಳಲ್ಲಿ ಕೊರೆಯುಳಿ ಅಲಗನ್ನು ರೂಪಸಿದ್ದರೆ ಉಳಿದವುಗಳಲ್ಲಿ ಒಂದೇ ತುದಿ ಅಥವಾ ಪಾರ್ಶ್ವದಲ್ಲಿ ಅಲಗು ಮೂಡಿಸಿದೆ. ನೀಳಚಕ್ಕೆ ಗುಂಪಿನ ಒಂದೆರಡು ಮಾದರಿಗಳಲ್ಲಿ ಎರಡನೆಯ ತುದಿಯಲ್ಲಿ ಕೊರೆಯುಳಿ ಅಲಗು ಮೂಡಿಸುವ ಪ್ರಯತ್ನ ಮಾಡಿದೆ. ಹೆರೆಚಕ್ಕೆ ಗುಂಪಿನ ಉಪಕರಣಗಳಲ್ಲಿ ಮಧ್ಯಮ ಮತ್ತು ತೆಳು ಗಾತ್ರದ ಹೆಬ್ಬೆಟ್ಟುಗುರಿನ ಹೆರೆಚಕ್ಕೆ, ಪಾರ್ಶ್ವ ಹೆರೆಚಕ್ಕೆ ಮತ್ತು ತುದಿ ಹೆರೆಚಕ್ಕೆಗಳ ದಪ್ಪ-

ನೆಯ ತುದಿಯಲ್ಲಿ ಕೊರೆಯುಳಿ ಅಲಗನ್ನು ಮೂಡಿಸಿದೆ. ತಾಂತ್ರಿಕವಾಗಿಯೂ ಅಂತ್ಯ ಹಳೆ ಶಿಲಾಯುಗದ ಉಪಕರಣಗ-ಳಂತೆ ಇಲ್ಲಿಯೂ ಮೂರು ಮಾದರಿಗಳಿವೆ.

೧. ಕೊಕ್ಕುಳ್ಳ ಕೊರೆಯುಳಿ: ಸಮಾನಾಂತರ ಪಾರ್ಶ್ವಗಳುಳ್ಳ ನೀಳಚಕ್ಕೆಯ ಮೇಲೆ ರೂಪಿಸಿರುವ ಈ ಮಾದರಿಯ ಒಂದು (ಶೇ. ೭.೭೯)ಉಪಕರಣವಿದೆ. ಸಮತಲ ಹಿಂಬದಿ ಹರಿತ ಪಾರ್ಶ್ವಗಳು ಮತ್ತು ಹಲವಾರು ಚಕ್ಕೆ ಕಲೆಗಳಿಂದ ಕೂಡಿದ ಈ ಉಪಕರಣದ ತೆಳ್ಳನೆಯ ತುದಿಯಲ್ಲಿ ಕೊರೆಯುಳಿ ಅಲಗು ಮೂಡಿಸಿದೆ. ಮುಂಬದಿಯಿಂದ ಹಂತ ಹಂತವಾಗಿ ಚಕ್ಕೆ ತೆಗೆದು ಮೇಲ್ತುದಿಯನ್ನು ತುದಿ ಹೆರೆಚಕ್ಕೆಯಂತೆ ಹರಿತವಾಗಿಸಿ ಹಿಂಬದಿಯಿಂದ ಒಂದೇ ಹೊಡೆತದಿಂದ ಕೊರೆಯುಳಿ ಅಲಗನ್ನು ರೂಪಸಿದೆ. ಅಲಗು ಮೇಲ್ತುದಿಯ ಎಡ ಮೂಲೆಯಲ್ಲಿ ಸ್ವಲ್ಪವೇ ಮುಂಚಾಚಿದೆ. ಅಲಗಿನ ಪಾರ್ಶ್ವಗಳಲ್ಲಿ ಕಿರು ಚಕ್ಕೆಗಳನ್ನೆಬ್ಬಿಸಿ ಅಲಗನ್ನು ಬಲಗೊಳಿಸಿದೆ.

೨. ಏಕಘಟ್ಟಿತ ಕೊರೆಯುಳಿ: ಈ ಮಾದರಿಯ ನಾಲ್ಕು (ಶೇ. ೩೦.೭೬) ಉಪಕರಣಗಳು ದೊರೆತಿವೆ. ಎರಡು ಉಪಕರಣ-ಗಳನ್ನು ಸ್ವಲ್ಪ ದಪ್ಪವಾದ ನೀಳಚಕ್ಕೆಯನ್ನು ಹೋಲುವ ಚಕ್ಕೆಯ ದಪ್ಪನೆಯ ತುದಿಯಲ್ಲಿ ಕೊರೆಯುಳಿ ಅಲಗನ್ನು ಮೂಡಿಸಿ-ದೆ. ಉಬ್ಬೇಣಿನ ನೇರಕ್ಕೆ ಹಿಂಬದಿಯಲ್ಲಿ ಒಂದೇ ಹೊಡೆತದಿಂದ ಚಕ್ಕೆ ತೆಗೆದು ಅಲಗು ರೂಪಿಸಿದೆ. ಕೊರೆಯುಳಿ ಅಲಗು ಸರಳರೇಖೆಯಲ್ಲಿರದೆ ಸ್ವಲ್ಪ ತ್ರಿಭುಜಾಕಾರದ ಅಡ್ಡ ವಿನ್ಯಾಸವನ್ನು ಹೊಂದಿದೆ. ಮೂರನೆಯ ಉಪಕರಣದಲ್ಲಿ ತ್ರಿಭುಜಾಕಾ-ರದ ಅಡ್ಡ ವಿನ್ಯಾಸವುಳ್ಳ ನಿರುಪಯುಕ್ತ ಚಕ್ಕೆಯ ಮೇಲ್ತುದಿಯಲ್ಲಿ ಒಂದು ಪಾರ್ಶ್ವಕ್ಕೆ ಒಂದೇ ಹೊಡೆತದಿಂದ ಚಕ್ಕೆ ತೆಗೆದು ಅಲಗನ್ನು ರೂಪಿಸಿದೆ. ಅಲಗು ಹೆಚ್ಚು ಕಡಿಮೆ ಸರಳ ರೇಖೆಯಲ್ಲಿದೆ. ಉಳಿದ ಒಂದು ಉಪಕರಣವನ್ನು ಅರ್ಧ ಚಂದ್ರಾಕೃತಿ ಮೊನೆಯ ದಪ್ಪನೆಯ ತುದಿಯಲ್ಲಿ ಒಂದೇ ಹೊಡೆತದಿಂದ ಚಕ್ಕೆ ತೆಗೆದು ರೂಪಿಸಿದೆ. ಇದರ ಅಲಗು ಹೆಚ್ಚು ಕಡಿಮೆ ಸರಳ ರೇಖೆಯಲ್ಲಿದೆ.

೩. ಬೆಕ್-ಡಿ-ಫ್ಲೂಟ್ ಕೊರೆಯುಳಿ: ಈ ಮಾದರಿಯ ೮ (ಶೇ. ೬೧.೫೪) ಉಪಕರಣಗಳಿದ್ದು ತಲಾ ನಾಲ್ಕನ್ನು ಹೆರೆಚಕ್ಕೆ ಮತ್ತು ನೀಳಚಕ್ಕೆ ಮಾದರಿಗಳ ಮೇಲೆ ರೂಪಸಲಾಗಿದೆ. ನೀಳಚಕ್ಕೆ ಗುಂಪಿನ ಉಪಕರಣಗಳಲ್ಲಿ ದಪ್ಪನೆಯ ತುದಿಯಲ್ಲಿ ಎರಡೂ ಪಾರ್ಶ್ವಗಳಿಂದ ಲಘು ಕೋನದಲ್ಲಿ ನಿಯಂತ್ರಿತ ಚಕ್ಕೆ ಎಬ್ಬಿಸಿ ಅಲಗು ರೂಪಿಸಿದೆ. ಒಂದು ಉಪಕರಣದ ಕೆಳತುದಿ-ಯಲ್ಲಿ ಇದೇ ವಿಧಾನದಿಂದ ಅಲಗು ರೂಪಿಸಿದೆ.

ಹೆರೆಚಕ್ಕೆ ಗುಂಪಿನ ಚಕ್ಕೆಗಳ ಮೇಲೆ ದಪ್ಪನೆಯ ತುದಿಯಲ್ಲಿ ಎರಡೂ ಪಾರ್ಶ್ವಗಳಿಂದ ನಿಯಂತ್ರಿತ ಚಕ್ಕೆ ತೆಗೆದು ಅಲಗು ಮೂಡಿಸಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೬ ನಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೨೬**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೨ | ೧೫.೩೮ | ೫-೧೦ | ೬ | ೪೬.೧೫ | ೧-೫ | ೪ | ೩೦.೭೭ |
| ೨೦-೨೫ | ೭ | ೫೩.೮೫ | ೧೦-೧೫ | ೪ | ೩೦.೭೭ | ೫-೧೦ | ೮ | ೬೧.೫೪ |
| ೨೫-೩೦ | ೪ | ೩೦.೭೭ | ೧೫-೨೫ | ೩ | ೨೩.೦೭ | ೧೦-೧೫ | ೧ | ೭.೬೯ |
| ಒಟ್ಟು | ೧೩ | | | ೧೩ | | | ೧೩ | |

ಕೊರೆಯುಳಿ ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೨೦ ಗರಿಷ್ಠ ೩೦ ಮಿ.ಮೀ. ಗಳಾಗಿದ್ದು, ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚು ಇವೆ. ಹಾಗೆಯೇ ಅಗಲ ಕನಿಷ್ಠ ೮ ಗರಿಷ್ಠ ೨೩ ಮಿ.ಮೀ. ಗಳಾಗಿದ್ದು ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚು ಸಂಖ್ಯೆಯಲ್ಲಿವೆ. ಅದೇ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೧೨ ಮಿ.ಮೀ. ಗಳಾಗಿದ್ದು. ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿರುವುದು ತಿಳಿಯುತ್ತದೆ.

### ೭. ಅರ್ಧ ಚಂದ್ರಾಕೃತಿ

ಅಂತ್ಯ ಹಳೆ ಶಿಲಾಯುಗದ ಮುಖ್ಯ ಉಪಕರಣವಾದ ಅರ್ಧ ಚಂದ್ರಾಕೃತಿಗಳು ಸೂಕ್ಷ್ಮ ಶಿಲಾಯುಗದಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿ ಮುಂದುವರಿಯುತ್ತವೆ. ಪಾರ್ಶ್ವ ಇಲ್ಲವೆ ತುದಿ ಹೆರೆಚಕ್ಕೆ, ಕೈ ಚಾಕು, ಬಹುಶಃ ಕೊರೆಗ ಮತ್ತು ದಬ್ಬಳದ ರೂಪದಲ್ಲಿಯೂ ಉಪಯೋಗಿಸಬಹುದಾದ ಈ ಅರ್ಧ ಚಂದ್ರಾಕೃತಿಗಳು ಪ್ರಸ್ತುತ ಪರಿಶೋಧನೆಯಲ್ಲಿ ೫೦ (ಶೇ. ೩.೭೩) ದೊರೆತಿವೆ. ಅಂತ್ಯ ಹಳೆಶಿಲಾಯುಗದ ಉಪಕರಣಗಳಂತೆಯೇ ಈ ಕಾಲದಲ್ಲಿಯೂ ಪರಿಷ್ಕೃತ ಅರ್ಧ ಚಂದ್ರಾಕೃತಿಗಳು ರೂಪುಗೊಳ್ಳುತ್ತಿರುವ ಕೆಲವಾದರೂ ಹಂತಗಳನ್ನು ಈ ಉಪಕರಣಗಳಲ್ಲಿ ಗುರುತಿಸಬಹುದು. ಒರಟಾದ ರೋಮನ್ D ಅಕ್ಷರದಿಂದ ಹಿಡಿದು ತೆಳ್ಳಗಿನ ಬಿದಿಗೆ ಚಂದ್ರಾಕಾರದವರೆಗೆ, ತ್ರಿಭುಜ, ತ್ರಾಪಿಜ್ಯ ಮುಂತಾದ ಅನೇಕ ಆಕೃತಿಗಳಲ್ಲಿ ಇವು ದೊರೆಯುತ್ತವೆ. ಈ ಆಕೃತಿ ವೈವಿಧ್ಯಕ್ಕೆ ಉಪಯೋಗಿಸಿರುವ ಮೂಲ ಶಿಲಾ ಸಾಮಗ್ರಿಯೂ ಕಾರಣವಾಗಿರಬಹುದು. ಸಾಧಾರಣವಾಗಿ ನೇರ ಸರಳರೇಖೆಯಲ್ಲಿರುವ ಒಳಗಣ ಅಲಗು ಹರಿತವಾಗಿದ್ದರೆ ಕೆಲವು ಉಪಕರಣಗಳಲ್ಲಿ ಬಾಗಿರುವ ಹೊರ ಅಲಗು ಹರಿತವಾಗಿದೆ. ಯಾವುದಾದರೊಂದು ತುದಿಯು ಕೊರೆಗ ಅಥವಾ ದಬ್ಬಳದಂತೆ ರೂಪಿಸಿರುವುದೂ ಉಂಟು. ಒಳ ಅಲಗು ಹರಿತಾಗಿರುವ ಉಪಕರಣಗಳಲ್ಲಿ ಬಾಗಿರುವ ಹಿಂಭಾಗವು ದಪ್ಪಗಿದ್ದು ಒಳಮುಖನಾಗಿ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಹೊರ ಅಲಗು ಹರಿತವಾಗಿರುವ ಉಪಕರಣಗಳಲ್ಲಿ ಮಧ್ಯದಿಂದ ಎರಡೂ ಕಡೆಗೂ ಚಕ್ಕೆ ತೆಗೆದಿದೆ. ತ್ರಾಪಿಜ್ಯ ಆಕಾರದ ಒಂದೆರಡು ಉಪಕರಣಗಳಲ್ಲಿ ಚೂಪಾಗಿರುವ ಒಳ ಅಲಗು ಸ್ವಲ್ಪ ಒಳಕ್ಕೆ ಬಾಗಿದ್ದು ಅಗಲ

ಅಲಗಿನ ಬಾಣದ ಮೊನೆಯನ್ನಾಗಿಯೂ ಉಪಯೋಗಿಸಿದಂತೆ ಕಾಣುತ್ತದೆ. ಹೆಚ್ಚಿನ ಉಪಕರಣಗಳಲ್ಲಿ ಹಿಂಬದಿ ಸಮತಲವಾಗಿದ್ದರೆ ಕೆಲವು ಉಪಕರಣಗಳಲ್ಲಿ ಎರಡೂ ಬದಿಗಳು ಸಮತಲವಾಗಿವೆ.

ಒಟ್ಟು ಉಪಕರಣಗಳಲ್ಲಿ ೩ ಜಾಸ್ಪರ್, ೪ ಆದಿರುಯುಕ್ತ ಜಾಸ್ಪರ್ ಹಾಗೂ ಉಳಿದ ೪೩ ಕ್ವಾರ್ಟ್ಸ್ ಶಿಲೆಯಲ್ಲಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೭ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೭

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೨೭ | ೫೪.೦೦ | ೫-೧೦ | ೩೨ | ೬೪.೦೦ | ೧-೫ | ೧೦ | ೨೦.೦೦ |
| ೧೫-೨೦ | ೧೫ | ೩೦.೦೦ | ೧೦-೧೫ | ೧೫ | ೩೦.೦೦ | ೫-೧೦ | ೪೦ | ೮೦.೦೦ |
| ೨೦-೩೦ | ೮ | ೧೬.೦೦ | ೧೫-೨೦ | ೩ | ೬.೦೦ | | | |
| ಒಟ್ಟು | ೫೦ | | | ೫೦ | | | ೫೦ | |

ಈ ಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆ ಉದ್ದ ಕನಿಷ್ಠ ೧೦ ಗರಿಷ್ಠ ೨೮ ಮಿ.ಮೀ. ಇದ್ದು, ೧೦ ರಿಂದ ೧೫ ಮಿಮೀ.ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೫ ಗರಿಷ್ಠ ೧೬ ಮಿ.ಮೀ. ಗಳಾಗಿದ್ದು, ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ದಪ್ಪ ಕನಿಷ್ಠ ೩ ಗರಿಷ್ಠ ೧೦ ಮಿ.ಮೀ. ನಲ್ಲಿದ್ದು, ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿರುವುದು ತಿಳಿಯತ್ತದೆ.

## ೮. ದಬ್ಬಳ

ಅಂತ್ಯ ಹಳೆಶಿಲಾಯುಗದ ಉಪಕರಣಗಳಲ್ಲಿ ಪ್ರಸ್ತುತ ಸ್ಥಳ ಪರಿಶೋಧನೆಯಲ್ಲಿ ದೊರೆಯದೆ ಇದ್ದು, ಸೂಕ್ಷ್ಮ ಶಿಲಾಯುಗದಲ್ಲಿ ಮಾತ್ರವೇ ಕಂಡು ಬರುವ ಒಂದು ವಿಶೇಷ ಉಪಕರಣ ದಬ್ಬಳ, ಕೊರೆಗ ಅರ್ಧ ಚಂದ್ರಾಕೃತಿ ಮೊನೆ ಮತ್ತು ಅರ್ಧ ಚಂದ್ರಾಕೃತಿಗಳನ್ನು ಹೋಲುವ ಈ ಉಪಕರಣಗಳು ಪ್ರಸ್ತುತ ಪರಿಶೋಧನೆಯಲ್ಲಿ ೬ ನೆಲೆಗಳಲ್ಲಿ ಮಾತ್ರ ಒಟ್ಟು ೧೬ (ಶೇ. ೧.೧೯) ಉಪಕರಣಗಳು ದೊರೆತಿವೆ. ಕೊರೆಗ ಮತ್ತು ಅರ್ಧ ಚಂದ್ರಾಕೃತಿಗಳನ್ನು ತಯರಿಸುವ ತಂತ್ರಗಳನ್ನೇ ಉಪಯೋಗಿಸಿ ರೂಪಿಸಿರುವ ಈ ಉಪಕರಣದ ವಿಶೇಷವೆಂದರೆ ನೀಳವಾದ ಮತ್ತು ಚೂಪಾದ ಮೊನೆಯನ್ನು ಹೊಂದಿರುವುದು. ದೊರೆತಿರುವ ಉಪಕರಣಗಳಲ್ಲಿ ಒಂದೆರಡು ಮಾತ್ರವೇ ಹೆಚ್ಚು ಪರಿಷ್ಕೃತವಾದ ದಬ್ಬಳವಾಗಿದ್ದು, ಉಪಕರಣದ ಅಗಲಕ್ಕೆ ಹೋಲಿಸಿದರೆ ಇವು ಸಮಾರು ನಾಲ್ಕು ಪಟ್ಟು ಉದ್ದವಾಗಿವೆ. ಆಕಾರದಲ್ಲಿ ತ್ರಿಭುಜ, ತುದಿಗಳು ಚೂಪಾಗರುವ ಅಂಡಾಕಾರ ಮತ್ತು ಆಯತಾಕಾರಗಳೂ ಇವೆ. ಒರಟಾಗಿ ರೂಪಿಸಿರುವ ಒಂದೆರಡು ಉಪಕರಣಗಳಲ್ಲಿ ಎರಡೂ ಪಾರ್ಶ್ವಗಳಿಂದ ಚಕ್ಕೆ

ತೆಗೆದು ನೀಳ ಮೊನೆಯನ್ನು ರೂಪಿಸಿದ್ದರೆ, ನೀಳಗತ್ತಿ ಗುಂಪಿನ ಉಪಕರಣಗಳ ಮೇಲೆ ರೂಪಿಸಿರುವ ಉಪಕರಣಗಳಲ್ಲಿ ನೀಳ-ಚಕ್ಕೆಯನ್ನು ಲಘುಕೋನದಲ್ಲಿ ಕತ್ತರಿಸಿ ದಬ್ಬಳ ಮೊನೆಯನ್ನು ಸಾಧಿಸಿದೆ. ಹೆಚ್ಚು ಪರಿಷ್ಕೃತವಾದ ಒಂದೆರಡು ಉಪಕರಣಗ-ಳಲ್ಲಿ ಎರಡು ಅಥವಾ ಹೆಚ್ಚು ಕಡೆಗಳಿಂದ ತೆಳ್ಳನೆಯ ನೀಳಚಕ್ಕೆಗಳನ್ನೆಬ್ಬಿಸಿ ಉಪಕರಣದ ಉದ್ದ ಹೆಚ್ಚಾಗಿಸಿದೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳ ಹಿಂಬದಿ ಸಮತಲವಾಗಿದ್ದು ಮುಂಬದಿಯಲ್ಲಿ ಚಕ್ಕೆ ಕಲೆಗಳು ಕಾಣಿಸುತ್ತವೆ. ಸಾಧಾರಣವಾಗಿ ಚೂಪಾದ ಮೊನೆಯ ಮೇಲ್ತುದಿಯು ಮಧ್ಯದಲ್ಲಿದ್ದರೆ ಒಂದೆರಡು ಉಪಕರಣಗಳಲ್ಲಿ ಇವು ಒಂದು ಬದಿಗೆ ಹೊಂದಿಕೊಂ-ಡಂತೆ ಇವೆ.

ಒಟ್ಟು ಉಪಕರಣಗಳಲ್ಲಿ ೪ ಜಾಸ್ಪರ್ ನಲ್ಲಿಯೂ ಉಳಿದ ೧೨ ವಿವಿಧ ವರ್ಣದ ಕ್ವಾರ್ಟ್ಸ್ ಶಿಲೆಯೂ ಇವೆ. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೨೮ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೨೮

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೭ | ೪೩.೭೫ | ೫-೧೦ | ೮ | ೫೦.೦೦ | ೧-೫ | ೭ | ೪೩.೭೫ |
| ೧೫-೨೫ | ೬ | ೩೭.೫೦ | ೧೦-೧೫ | ೭ | ೪೩.೭೫ | ೫-೧೦ | ೯ | ೫೬.೨೫ |
| ೨೫-೩೦ | ೩ | ೧೮.೭೫ | ೧೫-೨೦ | ೧ | ೬.೨೫ | | | |
| ಒಟ್ಟು | ೧೬ | | | ೧೬ | | | ೧೬ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೩ ಗರಿಷ್ಠ ೨೭ ಮಿ.ಮೀ. ಗಳಿದ್ದು ೧೦ ರಿಂದ ೧೫ ಮಿಮೀ.ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೫ ಗರಿಷ್ಠ ೨೦ ಮಿ.ಮೀ. ಗಳಿದ್ದು ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ದಪ್ಪ ಕನಿಷ್ಠ ೩ ಗರಿಷ್ಠ ೧೦ ಮಿ.ಮೀ. ಗಳಾಗಿದ್ದು ೫ ರಿಂದ ೧೦ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚಿರುವುದು ತಿಳಿದು ಬರುತ್ತದೆ.

### ೯. ಮೂಲ ಶಿಲಾಗಟ್ಟಿ

ಅಂತ್ಯ ಹಳೆಶಿಲಾಯುಗದ ಉಪಕರಣಗಳಂತೆಯೇ ಸೂಕ್ಷ್ಮ ಶಿಲಾಯುಗದಲ್ಲಿಯೂ ಹೆಚ್ಚಿನ ಶೇಕಡಾವಾರು ಪ್ರಮಾಣದಲ್ಲಿ ನಯವಾದ ಸಾಂದ್ರಕಣಗಳುಳ್ಳ ಕ್ವಾರ್ಟ್ಸ್ ಗುಂಪಿನ ಶಿಲೆಗಳಿಂದ ರಚಿಸಿರುವ ಉಪಕರಣಗಳೇ ದೊರೆತಿವೆ. ಅಲ್ಪ ಪ್ರಮಾಣದಲ್ಲಿ ಜಾಸ್ಪರ್ ಗುಂಪಿನ ಶಿಲೆಗಳು ಉಪಯೋಗವಾಗಿವೆ. ಇದಕ್ಕನುಗುಣವಾಗಿ ದೊರೆತಿರುವ ಮೂಲ ಶಿಲಾಗಟ್ಟಿ-ಗಳೂ ಇವೆ.

ಪ್ರಸ್ತುತ ಪರಿಶೋಧನೆಯಲ್ಲಿ ಮೊದಲ ಹಂತದ ೧೦ ನೆಲೆಗಳಲ್ಲಿ ಒಟ್ಟು ೩೬ (ಶೇ. ೨.೬೯) ಮೂಲ ಶಿಲಾಗಟ್ಟಿಗಳು ದೊರಕಿವೆ. ಕ್ವಾರ್ಟ್ಸ್ ಶಿಲಾ ಗಂಪಿನ ಮೂಲ ಶಿಲಾಗಟ್ಟಿಗಳು ಹಾಲುಗಲ್ಲು, ಕೆನೆಬಿಳಿಪು, ನಸುಗೆಂಪು, ನಸುಗಪ್ಪಿನ ವರ್ಣಗಳಲ್ಲಿವೆ. ಬಹುತೇಕ ಮೂಲಗಟ್ಟಿಗಳು, ಉಂಡೆಕಲ್ಲುಗಳು, ವಿಷಮ ಕೋನದಲ್ಲಿ ಕತ್ತರಿಸದ ಚಕ್ಕೆ ಕಲ್ಲುಗಳು, ಶಂಖು, ತ್ರಿಭುಜ, ಆಯತ, ಮತ್ತು ಗೋಲಾಕಾರಗಳಲ್ಲಿವೆ. ಒಂದೆರಡು ಮೂಲಗಟ್ಟಿಯಲ್ಲಿ ದಪ್ಪನೆಯ ತುದಿಯಲ್ಲಿ ಮೂಲ ಶಿಲಾತೊಗಟೆ ಅಂಶ ಉಳಿದಿದೆ. ಸಮತಲಾಗಿರುವ ಈ ಭಾಗದಲ್ಲಿ ತಾಡನ ವೇದಿಕೆ ಇದೆ. ದೊರೆತಿರುವ ಗಟ್ಟಿಗಳಲ್ಲಿ ಕನಿಷ್ಠ ೩ ರಿಂದ ಗರಿಷ್ಠ ೧೦ ರವರೆಗೆ ಚಕ್ಕೆಕಲೆಗಳನ್ನು ಗುರುತಿಸಬಹುದು. ಈ ಚಕ್ಕೆಕಲೆಗಳ ಪರಿಶೀಲನೆಯಿಂದ ವಿವಿಧ ನೀಳಚಕ್ಕೆ ಮಾದರಿಗಳು ಸಣ್ಣ ಗಾತ್ರದ ಹೆರೆಚಕ್ಕೆಗಳು ಮತ್ತು ಮೊನೆ ಗುಂಪಿನ ಉಪಕರಣಗಳನ್ನು ತಯಾರಿಸಲು ಮೂಲ ಗಟ್ಟಿಗಳು ಉಪಯೋಗಿಸಿರಬಹುದೆಂದು ತಿಳಿಯುತ್ತದೆ.

ಕೆಲವು ಜಾಸ್ಪರ್ ಗುಂಪಿನ ಮೂಲ ಶಿಲಾಗಟ್ಟಿಗಳಲ್ಲಿಯೂ ಮೂಲಶಿಲಾ ತೊಗಟೆ ಅಂಶ ಉಳಿದಿದೆ. ಆಕೃತಿಯಲ್ಲಿ ಇವು ಹೆಚ್ಚು ವಿಷಮಾಕಾರದಲ್ಲಿವೆ. ಹಾಗಿದ್ದರೂ ಲಘು ಕೋನದಲ್ಲಿ ಕತ್ತರಿಸಿದ ಶಂಖು, ಆಯತ ಮತ್ತು ವರ್ತುಲಗಳು ಕಂಡ ಬರುತ್ತವೆ. ದಪ್ಪನೆಯ ತುದಿಯಲ್ಲಿ ಮೊದಲೇ ಕತ್ತರಿಸಿ ಮಾಡಿದ ಸಮತಲ ತಾಡನ ವೇದಿಕೆ ಇದೆ. ಉಪಯೋಗಿಸಿರುವ ಸಾಮಗ್ರಿಯು ಅಷ್ಟೊಂದು ಉತ್ತಮ ಜಾತಿಯದಾಗಿರದೆ ಸ್ವಾಭಾವಿಕವಾದ ಕಲ್ಮಷಗಳನ್ನು ಹೊಂದಿದ್ದು ಚಕ್ಕೆಗಳು ಉದ್ದೇಶಿತ ಅಲಗು ಅಥವಾ ಮೊನೆಯನ್ನು ಪೂರ್ಣ ಪ್ರಮಾಣದಲ್ಲಿ ನೀಡಿರುವಂತೆ ಕಾಣುವುದಿಲ್ಲ. ದೊರೆತಿರುವ ಮೂಲ ಗಟ್ಟಿಗಳಲ್ಲಿ ಕನಿಷ್ಠ ನಾಲ್ಕರಿಂದ ಗರಿಷ್ಠ ಒಂಭತ್ತರವರೆಗೆ ಚಕ್ಕೆ ಕಲೆಗಳನ್ನು ಗುರುತಿಸಬಹುದು. ಈ ಕಲೆಗಳ ಪರಿಶೀಲನೆಯಿಂದ ತೆಳ್ಳನೆಯ ನೀಳಚಕ್ಕೆ, ಹೆರೆಚಕ್ಕೆ ಮತ್ತು ಮೊನೆಯ ಗುಂಪಿನ ಸಣ್ಣ ಪ್ರಮಾಣದ ಉಪಕರಣಗಳನ್ನು ರೂಪಿಸಿರುವುದು ಕಂಡು ಬರುತ್ತದೆ.

ಒಟ್ಟು ಉಪಕರಣಗಳಲ್ಲಿ ೨ ಜಾಸ್ಪರ್, ೧೦ ಅದಿರುಯುಕ್ತ ಜಾಸ್ಪರ್, ೫ ಅದಿರುಯುಕ್ತ ಕ್ವಾರ್ಟ್ಸ್ ಹಾಗೂ ೧೯ ಕ್ವಾರ್ಟ್ಸ್ ಶಿಲೆಗಳಲ್ಲಿ ರೂಪಿಸಲಾಗಿದೆ. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಶಿಲಾಮಾದರಿಗಳನ್ವಯದಂತೆ ಕೋಷ್ಟಕ ಸಂಖ್ಯೆ ೬.೨೯ಅ ಮತ್ತು ೬.೨೯ಆ ನಲ್ಲಿ ನೀಡಿದೆ.

ಕ್ವಾರ್ಟ್ಸ್ ಶಿಲಾ ಮಾದರಿಯ ಮೂಲ ಗಟ್ಟಿಗಳ ಪ್ರಮಾಣ ವಿಶ್ಲೇಷಣೆ

**ಕೋಷ್ಟಕ ಸಂಖ್ಯೆ ೭.೨೯ಅ**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೨ | ೮.೩೩ | ೧೦-೨೦ | ೧೬ | ೬೬.೬೬ | ೧-೫ | ೬ | ೨೫.೦೦ |
| ೨೦-೩೦ | ೧೫ | ೬೨.೫೦ | ೨೦-೨೫ | ೩ | ೧೨.೫೦ | ೫-೧೫ | ೧೪ | ೫೮.೩೩ |
| ೩೦-೪೦ | ೭ | ೨೯.೧೭ | ೨೫-೩೦ | ೫ | ೨೦.೮೩ | ೧೫-೨೫ | ೪ | ೧೬.೬೭ |
| ಒಟ್ಟು | ೨೪ | | | ೨೪ | | | ೨೪ | |

ಜಾಸ್ಪರ್ ಶಿಲಾ ಮಾದರಿಯಲ್ಲಿರುವ ಮೂಲ ಗಟ್ಟಿಗಳ ಪ್ರಮಾಣ ವಿಶ್ಲೇಷಣೆ

**ಕೋಷ್ಟಕ ಸಂಖ್ಯೆ ೭.೨೯ಆ**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೨೦-೩೦ | ೩ | ೨೫.೦೦ | ೧೦-೨೦ | ೨ | ೧೬.೬೭ | ೫-೧೦ | ೧ | ೮.೩೩ |
| ೩೦-೪೦ | ೫ | ೪೧.೬೭ | ೨೦-೩೦ | ೭ | ೫೮.೩೩ | ೧೦-೧೫ | ೫ | ೪೧.೬೭ |
| ೪೦-೫೦ | ೪ | ೩೩.೩೩ | ೩೦-೪೦ | ೩ | ೨೫.೦೦ | ೧೫-೨೦ | ೬ | ೫೦.೦೦ |
| ಒಟ್ಟು | ೧೨ | | | ೧೨ | | | ೧೨ | |

ಕ್ವಾರ್ಟ್ಸ್ ಶಿಲಾ ಮಾದರಿಯ ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೬ ಗರಿಷ್ಠ ೩೭ ಮಿ.ಮೀ. ಗಳಾಗಿದ್ದು೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಇವೆ. ಅದೇ ರೀತಿ ಅಗಲ ಕನಿಷ್ಠ ೧೦ ಗರಿಷ್ಠ ೩೦ ಮಿ.ಮೀ. ಗಳಾಗಿದ್ದು ೧೦ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣ ಹೆಚ್ಚು ಇರುವುದು ತಿಳಿಯುತ್ತದೆ. ಅಲ್ಲದೆ ದಪ್ಪ ಕನಿಷ್ಠ ೫ ಗರಿಷ್ಠ ೨೫ ಮಿ.ಮೀ. ಗಳಾಗಿದ್ದು ೫ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ.

ಜಾಸ್ಪರ್ ಶಿಲಾ ಮಾದರಿಯ ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೨೧ ಗರಿಷ್ಠ ೪೭ ಮಿ.ಮೀ. ಗಳಾಗಿದ್ದು ೩೦ ರಿಂದ ೪೦ ಮಿ.ಮೀ. ವ್ಯಾಪ್ತಿಯ ಹೆಚ್ಚು ಉಪಕರಣಗಳಿವೆ. ಅಗಲ ಕನಿಷ್ಠ ೧೨ ಗರಿಷ್ಠ ೩೮ ಮಿ.ಮೀ. ಗಳಾಗಿದ್ದು, ೨೦ ರಿಂದ ೩೦ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ದಪ್ಪ ಕನಿಷ್ಠ ೬ ಗರಿಷ್ಠ ೨೦ ಮಿ.ಮೀ. ಗಳಿದ್ದು ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿರುವುದು ತಿಳಿಯುತ್ತದೆ.

**ಎರಡನೆಯ ಹಂತದ ನೆಲೆಗಳಲ್ಲಿ ದೊರೆತಿರುವ ಉಪಕರಣಗಳು**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿರುವ ಒಟ್ಟು ನೆಲೆಗಳಲ್ಲಿ ಈ ಗಂಪಿಗೆ ಸೇರವ ಕೇಲ ಮೂರು ನೆಲೆಗಳು ಬೆಳಕಿಗೆ ಬಂದಿವೆ. ಈ ನೆಲೆಗಳಲ್ಲಿ ದೊರಕಿರುವ ಉಪಕರಣಗಳೂ ಅತಿ ಕಡಿಮೆ ಸಂಖ್ಯೆ (ಒಟ್ಟು ೧೮ , ಶೇ.) ಯಲ್ಲಿವೆ. ವೈವಿಧ್ಯದಲ್ಲಿಯೂ ಯಾವುದೇ ವೈಶಿಷ್ಟ್ಯವಿಲ್ಲ. ಈ ನೆಲೆಗಳು ಮೊದಲ ಗುಂಪಿನ ನೆಲೆಗಳಿರುವ ಪ್ರದೇಶದಲ್ಲಿಯೇ ಇದ್ದು ಅವುಗಳಿಂದ ಸುಮಾರು ೫-೬ ಕಿ.ಮೀ. ಪರಿಧಿಯೊಳಗೆ ನೆಲೆಗೊಂಡಿವೆ. ಪ್ರತಿಯೊಂದು ನೆಲಯಲ್ಲಿಯೂ ದೊರೆತಿರುವ ಉಪಕರಣ ವೈವಿಧ್ಯವನ್ನು ಕೋಷ್ಟಕ ಸಂಖ್ಯೆ ೭.೩೦ ಮತ್ತು ಒಟ್ಟು ಉಪಕರಣಗಳ ಶೇಕಡಾವಾರು ಪ್ರಮಾಣದಂತೆ ವೃತ್ತ ನಕ್ಷೆ ರೂಪಿಸಿ ವೃತ್ತ ನಕ್ಷೆ ಸಂಖ್ಯೆ ೭.೯ ರಲ್ಲಿ ನೀಡಿದೆ. ಪ್ರತಿಯೊಂದು ಮಾದರಿಯ ಉಪಕರಣಗಳನ್ನು ಈ ಕೆಳಕಂಡಂತೆ ವರ್ಗೀಕರಿಸಲಾಗಿದೆ.

೧ ನೀಳಚಕ್ಕೆ ಮಾದರಿ ಒಟ್ಟು ಉಪಕರಣ ೫ ಶೇ. ೨೭.೭೭

೨ ಹೆರೆಚಕ್ಕೆ ಮಾದರಿ ಒಟ್ಟು ಉಪಕರಣ ೪ ಶೇ. ೨೨.೨೨

೩ ಮೊನೆ ಮಾದರಿ ಒಟ್ಟು ಉಪಕರಣ ೪ ಶೇ.೨೨.೨೨

೪ ಬಾಣದ ಮೊನೆ ಒಟ್ಟು ಉಪಕರಣ ೧ ಶೇ. ೫.೫೫

೫ ದಬ್ಬಳ ಒಟ್ಟು ಉಪಕರಣ ೧ ಶೇ. ೫.೫೫

೬ ಮೂಲ ಶಿಲಾಗಟ್ಟಿ ಒಟ್ಟು ಉಪಕರಣ ೩ ಶೇ. ೧೬.೬೬

ಈ ವಿವಿಧ ಮಾದರಿಯ ಉಪಕರಣಗಳನ್ನು ಅವುಗಳ ಆಕಾರ, ಗಾತ್ರ ಹಾಗೂ ಕಾರ್ಯ ನಿರ್ವಹಿಸುವ ಅಂಚು ಮೊನೆ ಮುಂತಾದವುಗಳನ್ನನುಸರಿಸಿ ಇವುಗಳನ್ನು ಇನ್ನಷ್ಟು ಉಪಗುಂಪುಗಳಾಗಿ ವಿಭಾಗಿಸಿದೆ. ಪ್ರತಿಯೊಂದು ಮಾದರಿಯ ಉಪಕರಣಗಳ ವೈವಿಧ್ಯ, ಅವುಗಳ ಉಪಗುಂಪುಗಳು ಹಾಗೂ ಶೇಕಡಾವಾರು ಪ್ರಮಾಣ ಮುಂತಾದ ವಿವರಣೆಯನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದೆ.

**ಕೋಷ್ಟಕ ಸಂಖ್ಯೆ ೭.೩೦**

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆ | ಹೆರೆಗತ್ತಿ | ಮೊನೆ | ಬಾಣದಮೊನೆ | ದಬ್ಬಳ | ಮೂಲಗಟ್ಟಿ | ಒಟ್ಟು | ಶೇ |
|---|---|---|---|---|---|---|---|---|---|
| ೧ | ದಬ್ಬೆಗಟ್ಟ | ೧ | ೧ | ೨ | | ೧ | ೩ | ೮ | ೪೪.೪೪ |
| ೨ | ಬಿಜ್ಜಾವರ | ೨ | ೨ | ೧ | | | | ೫ | ೨೭.೭೭ |
| ೩ | ಹುಲಿಯಾರದುರ್ಗ | ೨ | ೧ | ೧ | ೧ | | | ೫ | ೨೭.೭೭ |
| | ಒಟ್ಟು | ೫ | ೪ | ೪ | ೧ | ೧೩ | ೧೮ | | |
| | ಶೇ | ೨೭.೭೭ | ೨೨.೨೨ | ೨೨.೨೨ | ೫.೫೫ | ೧೬.೬೬ | | | |

ವೃತ್ತ ನಕ್ಷೆ ೭.ಉ




## ೧. ನೀಳಚಕ್ಕೆ ಉಪಕರಣಗಳ ವಿವರಣೆ (ಎರಡನೆಯ ಹಂತ)

ನೀಳಚಕ್ಕೆ ಮಾದರಿಯ ಒಟ್ಟು ೫ (ಶೇ. ೨೭.೭೭) ಉಪಕರಣಗಳು ದೊರೆತಿದ್ದು ಅವು ವಿವಿಧ ಉಪ ಗುಂಪುಗಳಿಗೆ ಸೇರಿವೆ. ಅವುಗಳೆಂದರೆ

೧. ಇಬ್ಬದಿ ನೀಳಚಕ್ಕೆ ಒಟ್ಟು ಉಪಕರಣ ೩ ಶೇ. ೬೦

೨. ಕಿರು ನೀಳಚಕ್ಕೆ ಒಟ್ಟು ಉಪಕರಣ ೧ ಶೇ. ೨೦

೩. ದ್ವಿತೀಯ ಶ್ರೇಣಿ ಮರುಚಕ್ಕೆ
ಎಬ್ಬಿಸಿದ ನೀಳಚಕ್ಕೆ ಒಟ್ಟು ಉಪಕರಣ ೧ ಶೇ. ೨೦

ಪ್ರತಿ ಉಪಗುಂಪಿನ ಉಪಕರಣಗಳು ದೊರಕಿರುವ ನೆಲೆ, ಉಪಕರಣಗಳ ಸಂಖ್ಯೆ ಮತ್ತು ನೀಳಚಕ್ಕೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೩೧ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೩೧**

| ಕ್ರಮ ಸಂಖ್ಯೆ | ನೆಲೆ | ಇಬ್ಬದಿ ನೀಳಚಕ್ಕೆ | ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ | ಕಿರು ನೀಳಚಕ್ಕೆ | ಒಟ್ಟು | ಶೇ |
|---|---|---|---|---|---|---|
| ೧ | ದಬ್ಬೆಗಟ್ಟ | | | ೧ | ೧ | ೨೦ |
| ೨ | ಬಿಜ್ಜಾವರ | ೧ | ೧ | | ೨ | ೪೦ |
| ೩ | ಹುಲಿಯೂರುದುರ್ಗ | ೨ | | | ೨ | ೪೦ |
| | ಒಟ್ಟು | ೩ | ೧ | ೧ | ೫ | |
| | ಶೇ | ೬೦ | ೨೦ | ೨೦ | | |

### ೧.೧ ಇಬ್ಬದಿ ನೀಳಚಕ್ಕೆ

ಇಂತಹ ೩ ಉಪಕರಣ (ಶೇ. ೬೦) ದೊರೆತಿದೆ. ಈ ಉಪಕರಣದಲ್ಲಿ ಮಧ್ಯ ಉಬ್ಬೇಣು ಇದ್ದು ಮೇಲ್ತುದಿ ಮೊನೆಯನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಾಗಿದ್ದು ಚಕ್ಕೆಕಲೆಯನ್ನು ಹೊಂದಿದೆ. ಇದರ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೨೦ ಅಗಲ ೧೦ ಮತ್ತು ದಪ್ಪ ೮ ಮಿ.ಮೀ. ಗಳು. ಇದು ತ್ರಿಭುಜಾಕಾರದಲ್ಲಿದ್ದು ಅಡ್ಡ ವಿನ್ಯಾಸದಲ್ಲಿಯೂ ತ್ರಿಭುಜಾಕಾರವನ್ನೇ ಹೋಲುತ್ತದೆ.

### ೧.೨ ಕಿರು ನೀಳಚಕ್ಕೆ

ಕಿರು ನೀಳಚಕ್ಕೆಯ ಒಂದೇ ಒಂದು ಉಪಕರಣ (ಶೇ. ೨೦) ದೊರೆತಿದ್ದು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಉಪಕರಣದ ಮುಂಬದಿಯಲ್ಲಿ ಮಧ್ಯ ಉಬ್ಬೇಣು ಇದ್ದು ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಉಬ್ಬು ತಗ್ಗು ಇದ್ದು ಗರಗಸದಂತೆ ರೂಪಿಸಲಾಗಿದೆ. ಮೇಲ್ತುದಿ ಮತ್ತು ಕೆಳತುದಿಗಳು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಈ ಉಪಕರಣದ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೧೫ ಅಗಲ ೧೦ ದಪ್ಪ ೩ ಮಿ.ಮೀ. ಗಳಾಗಿವೆ. ಈ ಉಪಕರಣದ ಅಡ್ಡ ವಿನ್ಯಾಸ ತ್ರಿಭುಜಾಕಾರವಾಗಿದೆ.

### ೧.೩ ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ

ಮರುಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿರುವ ಒಂದೇ ಒಂದು ಉಪಕರಣ (ಶೇ. ೨೦) ದೊರೆತಿದೆ. ಕ್ವಾರ್ಟ್ಸ್ ಶಿಲೆಯಲ್ಲಿ ಇದನ್ನು ರೂಪಿಸಲಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮತ್ತು ಕೆಳತುದಿಗಳು ದಪ್ಪವಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವದಲ್ಲಿ ಅಲಗನ್ನು ಗರಗಸದಂತೆ ರೂಪಿಸಲಾಗಿದೆ. ಹಿಂಬದಿ ಅಸಮತಲವಾಗಿದೆ. ಇದರ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೧೮ ಅಗಲ ೧೦ ದಪ್ಪ ೫ ಮಿ.ಮೀ. ಗಳಾಗಿವೆ.

### ೨ ಹೆರೆಚಕ್ಕೆ ಉಪಕರಣಗಳ ವಿವರಣೆ (ಎರಡನೆಯ ಹಂತ)

ಪ್ರಸ್ತುತ ಅಧ್ಯಯನ ಪ್ರದೇಶದ ಎರಡನೆಯ ಹಂತದ ಹೆರೆಚಕ್ಕೆಯ ಉಪಕರಣಗಳು ಒಟ್ಟು ೪ (ಶೇ. ೨೨.೨೨) ದೊರಕಿದ್ದು ಇವುಗಳೆಲ್ಲವನ್ನೂ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ತೆಳು ಚಕ್ಕೆಯ ಮೇಲೆ ಈ ಉಪಕರಣಗಳು ರೂಪಿತವಾಗಿದ್ದು ಅಗಲವಾದ ಆಯತ, ತ್ರಿಭುಜ ಮತ್ತು ಅಂಡಾಕಾರಗಳಲ್ಲಿವೆ. ಮೂಲಗಟ್ಟಿಯಿಂದಲೂ ಈ ಉಪಕರಣಗಳನ್ನು ರೂಪಿಸಲಾಗಿದ್ದು ಇವುಗಳ ಕಾರ್ಯನಿರ್ವಾಹಕ ಅಲಗು, ಅದು ಇರುವ ಭಾಗ, ಆಕಾರ ಇವುಗಳನ್ನನುಸರಿಸಿ ಒಟ್ಟು ಉಪಕರಣಗಳನ್ನು ೩ ಉಪ ಗುಂಪುಗಳಾಗಿ ಮಾಡಲಾಗಿದೆ. ಅವುಗಳೆಂದರೆ

| | | |
|---|---|---|
| ೧. ಇಬ್ಬದಿ ಹೆರೆಚಕ್ಕೆ | ಒಟ್ಟು ಉಪಕರಣಗಳು ೨ | ಶೇ. ೫೦ |
| ೨. ತುದಿ ಹೆರೆಚಕ್ಕೆ | ಒಟ್ಟು ಉಪಕರಣ ೧ | ಶೇ. ೨೫ |
| ೩. ಮೂಲಗಟ್ಟಿ ಹೆರೆಚಕ್ಕೆ | ಒಟ್ಟು ಉಪಕರಣ ೧ | ಶೇ. ೨೫ |

ಮೇಲೆ ಹೇಳಿದ ಹೆರೆಚಕ್ಕೆ ಮಾದರಿ ಉಪಗುಂಪಿನ ಉಪಕರಣಗಳು, ದೊರಕಿರುವ ನೆಲೆ, ಉಪಕರಣಗಳ ಸಂಖ್ಯೆ ಈ ಮಾದರಿಯಲ್ಲಿ ಅವುಗಳ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೩.೨ ರಲ್ಲಿ ನೀಡಿದೆ. ಪ್ರತಿ ಉಪ ಗುಂಪಿನ ಉಪಕರಣಗಳ ವಿವರಣೆಗಳಮ್ನ ಪ್ರತ್ಯೇಕವಾಗಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೩.೨**

| ಕ್ರಮ ಸಂಖ್ಯೆ | ನೆಲೆ | ಇಬ್ಬದಿ ಹೆರೆಚಕ್ಕೆ | ತುದಿ ಹೆರೆಚಕ್ಕೆ | ಮೂಲೆಗಟ್ಟೆ ಹೆರೆಚಕ್ಕೆ | ಒಟ್ಟು | ಶೇ |
|---|---|---|---|---|---|---|
| ೧ | ದಬ್ಬೆಗಟ್ಟ | | | ೧ | ೧ | ೨೫ |
| ೨ | ಬಿಟ್ಟ[illegible] | ೧ | ೧ | | ೨ | ೫೦ |
| ೩ | ಹುಲಿಯೂರುದುರ್ಗ | ೧ | | | ೧ | ೨೫ |
| | ಒಟ್ಟು | ೨ | ೧ | ೧ | ೪ | |
| | ಶೇ | ೫೦ | ೨೫ | ೨೫ | | |

## ೨.೧ ಇಬ್ಬದಿ ಹೆರೆಚಕ್ಕೆ

ಒಂದಕ್ಕಿಂತ ಹೆಚ್ಚು ಹರಿತ ಅಲಗನ್ನು ಹೊಂದಿರುವ ಹೆರೆಯುವಂತಹ ಇಂತಹ ಉಪಕರಣಗಳು ಒಟ್ಟು ೨ (ಶೇ. ೫೦) ದೊರಕಿದ್ದು ಇವುಗಳನ್ನು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಈ ಉಪಕರಣಗಳ ಮಧ್ಯ ಉಬ್ಬೇಣು ಪ್ರಧಾನ-ವಾಗಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿದ್ದು ಮೇಲ್ತುದಿ ನೇರ ಇಲ್ಲವೆ ವಕ್ರರೇಖೆಯಲ್ಲಿವೆ. ಕೆಳತುದಿ ದಪ್ಪ-ವಾಗಿಮ್ದು ವೊಂಡಾಗಿವೆ. ಹಿಂಬದಿಯಲ್ಲಿ ತಾಡನ ವೇದಿಕೆ ಕಂಡು ಬರುತ್ತದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೮ ಗರಿಷ್ಠ ೨೬ ಮಿ.ಮೀ. ಗಳಾಗಿದ್ದು. ಅದರಂತೆ ಅಗಲ ಕನಿಷ್ಠ ೧೫ ಗರಿಷ್ಠ ೨೨ ಮಿ.ಮೀ. ಗಳು. ಹಾಗೆಯೇ ದಪ್ಪ ಕನಿಷ್ಠ ೨ ಗರಿಷ್ಠ ೪ ಮಿ.ಮೀ. ಗಳಾಗಿವೆ.

## ೨.೨ ತುದಿ ಹೆರೆಚಕ್ಕೆ

ಮಧ್ಯಮ ಗಾತ್ರದ ಚಕ್ಕೆಯಿಂದ ಈ ಉಪಕರಣವಮ್ನ ರೂಪಿಸಿದ್ದು ಮುಂಬದಿಯಲ್ಲಿ ಮಧ್ಯ ಉಬ್ಬೇಣು ಪ್ರಮುಖವಾಗಿದೆ. ಮೇಲ್ತುದಿಯ ಹರಿತ ಅಲಗು ವಕ್ರರೇಖೆಯಲ್ಲಿ ಸಾಗಿದೆ. ಎರಡೂ ಪಾರ್ಶ್ವಗಳ ಮೇಲ್ಭಾಗದಲ್ಲಿ ಮೊನೆ ಇದೆ. ಹಿಂಬದಿ ತಾಡನ ವೇದಿಕೆಯನ್ನು ಹೊಂದಿದೆ. ಬೆರಳಡಿಕೆಗೆ ಅನುಕೂಲವಾಗುವಂತೆ ಚಕ್ಕೆ ತೆಗೆದ ಕಲೆಗಳಿವೆ. ಒಂದು (ಶೇ. ೨೫) ಉಪಕರಣ ದೊರೆತಿದ್ದು ಅದನ್ನು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಇದರ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೨೦ ಅಗಲ ೧೪ ದಪ್ಪ ೭ ಮಿಮೀ.ಗಳಾಗಿವೆ.

### ೨.೩ ಮೂಲಗಟ್ಟಿ ಹೆರೆಚಕ್ಕೆ

ಪ್ರಸ್ತುತ ಒಂದು (ಶೇ. ೨೫) ಉಪಕರಣ ದೊರಕಿದ್ದು ಕ್ವಾರ್ಟ್ಸ್ ಶಿಲೆಯಲ್ಲಿ ರಚಿಸಲಾಗಿದೆ. ಪರಿಧಿಯ ಸುತ್ತಲೂ ಮೆಲ್ಲುದಿ ಚಕ್ಕೆಗಳನ್ನು ತೆಗೆದ ಕಲೆಗಳಿವೆ. ವಕ್ರರೇಖೆಯಲ್ಲಿದ್ದು ನೀಳವಾಗಿವೆ. ಕೆಳತುದಿ ದಪ್ಪವಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳನ್ನು ಕಾಣಬಹುದು. ಈ ಉಪಕರಣದ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೧೭ ಅಗಲ ೨೦ ದಪ್ಪ ೧೦ ಮಿ.ಮೀ. ಗಳಾಗಿವೆ.

### ೩ ಮೊನೆ ಉಪಕರಣಗಳ ವಿವರಣೆ (ಎರಡನೆಯ ಹಂತ)

ಎರಡನೆಯ ಹಂತದ ಉಪಕರಣ ವೈವಿಧ್ಯದಲ್ಲಿ ಮೊನೆಯ ಮಾದರಿಯ ಉಪಕರಣಗಳು ದೊರೆತಿವೆ. ಇವುಗಳ ಕಾರ್ಯ ನಿರ್ವಹಣೆ ಮತ್ತು ತಾಂತ್ರಿಕತೆಯನ್ನನುಸರಿಸಿ ಇವುಗಳನ್ನು ವಿವಿಧ ಉಪಗುಂಪುಗಳಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ

೧. ತ್ರಿಭುಜಾಕಾರದ ಮೊನೆ ಒಟ್ಟು ಉಪಕರಣ ೩ ಶೇ. ೭೫

೨. ಅರ್ಧ ಚಂದ್ರಾಕೃತಿಯ ಮೊನೆ ಒಟ್ಟು ಉಪಕರಣ ೧ ಶೇ. ೨೫

ಈ ಉಪಗುಂಪಿನ ಉಪಕರಣಗಳು, ದೊರೆತಿರುವ ನೆಲೆ, ಅವುಗಳ ಸಂಖ್ಯೆ ಮತ್ತು ಮೊನೆ ಗುಂಪಿನಲ್ಲಿ ಪ್ರತಿ-ಯೊಂದರ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೩.೩ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೩.೩

| ಕ್ರಮ ಸಂಖ್ಯೆ | ನೆಲೆ | ತ್ರಿಭುಜಾಕಾರದ ಮೊನೆ | ಅರ್ಧಚಂದ್ರಾಕೃತಿ ಮೊನೆ | ಒಟ್ಟು | ಶೇ |
|---|---|---|---|---|---|
| ೧ | ದಬ್ಬೆಗಟ್ಟ | ೧ | ೧ | ೨ | ೫೦ |
| ೨ | ಬಿಜ್ಜಾವರ | ೧ | | ೧ | ೨೫ |
| ೩ | ಹುಲಿಯೂರುದುರ್ಗ | ೧ | | ೧ | ೨೫ |
| | ಒಟ್ಟು | ೩ | ೧ | ೪ | |
| | ಶೇ | ೭೫ | ೨೫ | | |

ಕೋಷ್ಟಕದನ್ವಯದಂತೆ ತ್ರಿಭುಜಾಕಾರದ ಮೊನೆ ಉಪಕರಣಗಳು ಹೆಚ್ಚಿದ್ದು (೩ ಉಪಕರಣ ಶೇ. ೭೫) ಅರ್ಧ ಚಂದ್ರಾಕೃತಿಯ ಮೊನೆ ಉಪಕರಣಗಳು ಅತಿ ಕಡಿಮೆ (೧ ಉಪಕರಣ ಶೇ. ೨೫) ಇದೆ. ಪ್ರತಿ ಗುಂಪಿನ ಉಪಕರ-ಣಗಳ ವಿಶ್ಲೇಷಣೆಯನ್ನು ಪ್ರತ್ಯೇಕವಾಗಿ ವಿವರಿಸಿದೆ.

### ೩.೧ ತ್ರಿಭುಜಾಕಾರದ ಮೊನೆ

ತ್ರಿಭುಜಾಕಾರದ ಮೊನೆ ಉಪಕರಣಗಳು ಒಟ್ಟು ೩ (ಶೇ. ೭೫) ಇದ್ದು ಇವುಗಳನ್ನು ಮಧ್ಯಮ ಗಾತ್ರದ ಚಕ್ಕೆಗಳನ್ನು ಉಪಯೋಗಿಸಿ ರೂಪಿಸಲಾಗಿದೆ. ಕೆಲವು ಉಪಕರಣಗಳ ಎರಡೂ ಪಾರ್ಶ್ವಗಳೂ ಹರಿತವಿದ್ದು, ಆಕಾರದಲ್ಲಿ ತ್ರಿಭುಜ ಅಥವಾ ವಜ್ರಾಕಾರದಲ್ಲಿವೆ. ಮೇಲ್ತುದಿಯ ಮೊನೆ ಹರಿತವಿದ್ದು. ಮುಂಬದಿಯ ಉಬ್ಬೇಣನ್ನು ಹೊಂದಿದೆ. ಮೇಲ್ತುದಿ ಹೆಚ್ಚು ಕಡಿಮೆ ಸಮತಲವಾಗಿದೆ. ಕೆಲವು ಉಪಕರಣಗಳಲ್ಲಿ ಎರಡೂ ಮೊನೆಗಳು ಹರಿತವಾಗಿದೆ.

ಎಲ್ಲಾ ಉಪಕರಣಗಳು ಕ್ವಾರ್ಟ್ಸ್ ಶಿಲೆಯಲ್ಲಿದ್ದು ಇವುಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಗರಿಷ್ಠ ೨೦ ಕನಿಷ್ಠ ೧೫, ಅಗಲ ಗರಿಷ್ಠ ೧೫ ಕನಿಷ್ಠ ೧೦ ಹಾಗೂ ದಪ್ಪ ಗರಿಷ್ಠ ೧೦ ಕನಿಷ್ಠ ೫ ಮಿ.ಮೀ. ಗಳಾಗಿವೆ.

### ೩.೨ ಅರ್ಧ ಚಂದ್ರಾಕೃತಿ ಮೊನೆ

ಮೊನೆ ಗುಂಪಿನ ಉಪಕರಣಗಳಲ್ಲಿ ವಿಶೇಷ ಉಪಕರಣ ಅರ್ಧ ಚಂದ್ರಾಕೃತಿ ಮೊನೆ. ಅರ್ಧ ಚಂದ್ರಾಕೃತಿಯಂತೆ ರೂಪಿಸಿರುವ ಈ ಉಪಕರಣದ ಒಂದು ತುದಿ ಮೊನಚಾಗಿದ್ದು, ಅರ್ಧ ಚಂದ್ರಾಕೃತಿಯ ಹೊರ ಅಲಗು ನೇರವಾಗಿದೆ. ಪ್ರಸ್ತುತ ಒಂದು ಉಪಕರಣ ದೊರೆತಿದ್ದು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಮೇಲ್ತುದಿ ಮೊನೆಯನ್ನು ಹೊಂದಿದೆ. ಕೆಳತುದಿ ಮೊಂಡಾಗಿದೆ. ಎಡಪಾರ್ಶ್ವದ ಅಲಗು ಗರಗಸದಂತಿದ್ದು ಬಲಪಾರ್ಶ್ವದಲ್ಲಿಯೂ ಅಲಗು ಇದೆ. ಈ ಉಪಕರಣದ ಉದ್ದ ೨೦ ಅಗಲ ೧೨ ದಪ್ಪ ೫ ಮಿ.ಮೀ. ಗಳಾಗಿವೆ.

### ೪ ಬಾಣದ ಮೊನೆ

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಹಂತದ ಬಾಣದಮೊನೆ ಉಪಕರಣ ೧ (ಶೇ. ೫.೫೫) ಮಾತ್ರ ದೊರಕಿದ್ದು ಇದನ್ನು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಅಸಮ ತ್ರಿಭುಜಾಕಾರದಲ್ಲಿದ್ದು ಮುಂಬದಿ ಮಧ್ಯ ಉಬ್ಬನ್ನು ಕತ್ತರಿಸಿ ತೆಗೆಯಲಾಗಿದೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದ್ದು ಚಕ್ಕೆ ಕಲೆಗಳಿವೆ. ಎರಡೂ ಪಾರ್ಶ್ವಗಳೂ ಹರಿತವಾಗಿವೆ. ಕೆಳತುದಿ ತೆಳುವಾಗಿದ್ದು ಹಿಡಿಕೆಗೆ ಸಿಕ್ಕಿಸಲು ಅನುಕೂಲವಾಗಿದೆ. ಹಿಂಬದಿಯಲ್ಲಿ ತಾಡನ ವೇದಿಕೆ ಕಂಡು ಬರುತ್ತದೆ. ಉಪಕರಣದ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೨೦ ಅಗಲ ೧೨ ದಪ್ಪ ೪ ಮಿ.ಮೀ.ಗಳಾಗಿವೆ.

೫ ದಬ್ಬಳ

ಪ್ರಸ್ತುತ ಅಧ್ಯಯನ ಪ್ರದೇಶದಿಂದ ಈ ಹಂತದ ೧ (ಶೇ. ೫.೫೫) ಉಪಕರಣ ದೊರೆತಿದ್ದು ಇದನ್ನು ಕ್ವಾರ್ಟ್ಜ್ ಶಿಲೆಯಲ್ಲಿ ರೂಪಿಸಲಾಗಿದೆ. ಹೆಚ್ಚು ಕಡಿಮೆ ತ್ರಿಭುಜಾಕಾರದಲ್ಲಿರುವ ಈ ಉಪಕರಣದ ಮುಂಬದಿ ಮಧ್ಯ ಉಬ್ಬೇಣನ್ನು ಹೊಂದಿದೆ. ಕೆಳಭಾಗ ದಪ್ಪವಿದ್ದು ಮೇಲೆ ಹೋದಂತೆ ತೆಳುವಾಗಿದೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಉಪಕರಣದ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೨೫ ಅಗಲ ೬ ದಪ್ಪ ೫ ಮಿ.ಮೀ. ಗಳಾಗಿವೆ

೬ ಮೂಲ ಶಿಲಾಗಟ್ಟಿ

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಹಂತದ ೩ (ಶೇ. ೧೬.೬೬) ಮೂಲ ಶಿಲಾಗಟ್ಟಿಗಳು ದೊರಕಿವೆ. ಪರಿಧಿಯ ಸುತ್ತಲೂ ಹಲವು ಚಕ್ಕೆಗಳನ್ನು ತೆಗೆದ ಕಲೆಗಳಿವೆ. ಕೆಲವು ಕಿರು ಚಕ್ಕೆಗಳಾದರೆ ಮತ್ತೆ ಕೆಲವು ನೀಳಚಕ್ಕೆಗಳಾಗಿವೆ. ೩ ರಿಂದ ೮ ಇಂತಹ ಚಕ್ಕೆಗಳನ್ನು ತೆಗೆದ ಕಲೆಗಳನ್ನು ಗುರುತಿಸಬಹುದು. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೨೦ ಗರಿಷ್ಠ ೩೮ ಅಗಲ ಕನಿಷ್ಠ ೧೭ ಗರಿಷ್ಠ ೩೨ ದಪ್ಪ ಕನಿಷ್ಠ ೧೫ ಗರಿಷ್ಠ ೧೭ ಮಿ.ಮೀ. ಗಳಾಗಿವೆ.

**ಮೂರನೆಯ ಹಂತದ ನೆಲೆಗಳಲ್ಲಿ ದೊರೆತಿರುವ ಉಪಕರಣಗಳು**

ಅಧ್ಯಯನ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಒಟ್ಟು ೬೬ ಸೂಕ್ಷ್ಮ ಶಿಲಾಯುಗ ನೆಲೆಗಳಲ್ಲಿ ೨೫ ನೆಲೆಗಳು ಮೂರನೆಯ ಹಂತಕ್ಕೆ ಸೇರುತ್ತವೆ. ಈ ನೆಲೆಗಳಲ್ಲಿ ಸೂಕ್ಷ್ಮ ಶಿಲೋಪಕರಣಗಳು ನೂತನ ಶಿಲಾಯುಗ ಮತ್ತು ಅಥವಾ ಬೃಹತ್ ಶಿಲಾಯುಗದ ಅವಶೇಷಗಳ ಜೊತೆಯಲ್ಲಿ ದೊರೆತಿವೆ. ಮೊದಲೆರಡು ಹಂತದ ನೆಲಗಳಿಗೆ ಹೋಲಿಸಿದರೆ ಈ ನೆಲೆ-ಗಳಲ್ಲಿಯೂ ಅದೇ ಮೂಲ ಶಿಲೆಗಳನ್ನು ಉಪಯೋಗಿಸಲಾಗಿದ್ದು ತಾಂತ್ರಿಕತೆ ಹಾಗೂ ವೈವಿಧ್ಯಗಳಲ್ಲಿ ಸ್ವಲ್ಪ ಮಟ್ಟಿನ ಬದ-ಲಾವಣೆಯನ್ನು ಗುರುತಿಸಬಹುದು.

ಈ ಹಂತದ ಒಟ್ಟು ೨೫ ನೆಲೆಗಳ ಪರಿಶೋಧನೆಯಿಂದ ಒಟ್ಟು ೫೦೮ (ಶೇ. ೨೭.೨೬) ಉಪಕರಣಗಳನ್ನು ಸಂಗ್ರಹಿಸಿದೆ. ಉಪಕರಣಗಳ ವೈವಿಧ್ಯತೆಯಂತೆ ಅವುಗಳನ್ನು ವಿವಿಧ ವಿಭಾಗಗಳನ್ನಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ

| | | |
|---|---|---|
| ೧. ನೀಳಚಕ್ಕೆ ಮಾದರಿ | ಒಟ್ಟು ಉಪಕರಣ ೨೨೭ | ಶೇ. ೪೪.೬೮ |
| ೨. ಹೆರೆಚಕ್ಕೆ ಮಾದರಿ | ಒಟ್ಟು ಉಪಕರಣ ೧೨೬ | ಶೇ. ೨೪.೮೦ |
| ೩. ಮೊನೆ ಮಾದರಿ | ಒಟ್ಟು ಉಪಕರಣ ೭೬ | ಶೇ. ೧೪.೯೬ |
| ೪. ಬಾಣದ ಮೊನೆ | ಒಟ್ಟು ಉಪಕರಣ ೧೯ | ಶೇ. ೩.೭೪ |
| ೫. ಕೊರೆಗ | ಒಟ್ಟು ಉಪಕರಣ ೧೫ | ಶೇ. ೨.೯೫ |
| ೬. ಕೊರೆಯುಳಿ | ಒಟ್ಟು ಉಪಕರಣ ೧೧ | ಶೇ. ೨.೧೬ |
| ೭. ಅರ್ಧ ಚಂದ್ರಾಕೃತಿ | ಒಟ್ಟು ಉಪಕರಣ ೧೧ | ಶೇ. ೨.೧೬ |
| ೮. ದಬ್ಬಳ | ಒಟ್ಟು ಉಪಕರಣ ೧೬ | ಶೇ. ೩.೧೪ |
| ೯. ಮೂಲ ಶಿಲಾಗಟ್ಟಿ | ಒಟ್ಟು ಉಪಕರಣ ೭ | ಶೇ. ೧.೩೭ |

ವಿವಿಧ ಮಾದರಿ ಉಪಕರಣಗಳು ಅದರಲ್ಲೂ ಮುಖ್ಯವಾಗಿ ನೀಳಚಕ್ಕೆ, ಹೆರೆಚಕ್ಕೆ ಹಾಗೂ ಮೊನೆ ಮಾದರಿ ಉಪಕರಣಗಳನ್ನು ಅವುಗಳ ಆಕಾರ, ಗಾತ್ರ ಹಾಗೂ ಕಾರ್ಯ ನಿರ್ವಹಿಸುವ ಮೊನೆ, ಅಂಚು ಮುಂತಾದವುಗಳನ್ನಾಧರಿಸಿ ಇನ್ನಷ್ಟು ಉಪಗುಂಪುಗಳಾಗಿ ವಿಭಾಗಿಸಲಾಗಿದೆ. ಪ್ರತಿಯೊಂದು ಮಾದರಿಯ ಉಪಕರಣಗಳ ವೈವಿಧ್ಯ, ಉಪಯೋಗಗಳು ಹಾಗೂ ಅವುಗಳ ಶೇಕಡಾವಾರು ಪ್ರಮಾಣ ಮುಂತಾದವುಗಳನ್ನು ಕೋಷ್ಟಕ ಸಂಖ್ಯೆ ೭.೩೪ ಹಾಗೂ ವೃತ್ತ ನಕ್ಷೆ ೭.೮ ರಲ್ಲಿ ನೀಡಿದೆ.

## ಸೂಕ್ಷ್ಮ ಶಿಲಾಯುಗದ ಉಪಕರಣ ವೈವಿಧ್ಯ (ಮೂರನೆ ಹಂತ)
## (ನೂತನ ಹಾಗೂ ಬೃಹತ್ ಶಿಲಾಯುಗದ ನೆಲೆಗಳೊಂದಿಗಿರುವ ಸೂಕ್ಷ್ಮ ಶಿಲಾಯುಗದ ನೆಲೆಗಳು)

ಕೋಷ್ಟಕ ಸಂಖ್ಯೆ ೭.೩೪

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆ ಮಾದರಿ | ಹೆರಚ್ಚೆ ಮಾದರಿ | ಮೊನೆ ಮಾದರಿ | ಬಾಣದ ಮೊನೆ | ಕೊರೆಗ | ಕೊರೆಯುಳಿ | ಅರ್ಧ ಚಂದ್ರಾಕೃತಿ | ದಬ್ಬಳ | ಮೂಲ ಶಿಲಾಗಟ್ಟಿ | ಒಟ್ಟು | ಶೇ |
|---|---|---|---|---|---|---|---|---|---|---|---|---|
| ೧ | ಆವರ್ಗಲ್ಲು | ೧೦ | ೩ | ೩ | | | | | | | ೧೬ | ೩.೧೪ |
| ೨ | ಅಂಕನಬಾವಿ | ೪೦ | ೧೨ | ೧೦ | | ೨ | ೩ | | ೧ | ೨ | ೭೦ | ೧೩.೭೭ |
| ೩ | ಕತ್ತಿರಾಜನಹಳ್ಳಿ | ೪ | ೧ | | | ೧ | | | | | ೬ | ೧.೧೮ |
| ೪ | ಕೈಮರ | | | ೪ | | | | | | | ೪ | ೦.೭೮ |
| ೫ | ಗುರಮ್ಮನಕಟ್ಟೆ | ೫ | ೧ | ೩ | | ೩ | ೧ | | ೩ | | ೧೬ | ೩.೧೪ |
| ೬ | ಗೊಲ್ಲರಹಟ್ಟಿ | ೩ | ೫ | ೧ | | | | | | | ೯ | ೧.೭೭ |
| ೭ | ಚಿನಗ | ೧೦ | ೨ | ೫ | ೧ | ೧ | ೧ | ೧ | ೨ | | ೨೩ | ೪.೫೨ |
| ೮ | ಚಿನವಾರ | ೪ | ೩ | ೩ | ೨ | ೨ | | | | | ೧೪ | ೨.೭೫ |
| ೯ | ಥರಟಿ | ೩೫ | ೧೭ | ೮ | ೩ | ೨ | | ೩ | | ೧ | ೬೯ | ೧೩.೫೮ |
| ೧೦ | ನಾಗಲಾಪುರ | ೪ | ೪ | | | | | | | | ೮ | ೧.೫೭ |
| ೧೧ | ನಿಡುಗಲ್ಲು | ೩ | ೨ | ೨ | | | | | | ೧ | ೮ | ೧.೫೭ |
| ೧೨ | ಬೆಟ್ಟದಹಳ್ಳಿ | ೮ | ೪ | ೬ | | | | | | | ೧೮ | ೩.೫೪ |
| ೧೩ | ಬೆಳ್ಳಿಬಟ್ಟಲಹಳ್ಳಿ | ೨ | ೩ | ೨ | ೨ | ೧ | | | | | ೧೦ | ೧.೯೬ |
| ೧೪ | ಮಧುಗಿರಿ | ೩ | ೩ | ೩ | | ೧ | | | | | ೧೦ | ೧.೯೬ |
| ೧೫ | ಮಾರನಾಯಕನಪಾಳ್ಯ | ೩ | ೩ | ೨ | | | | | | ೧ | ೯ | ೧.೭೭ |
| ೧೬ | ಮಿಡಿಗೇಶಿ | ೧ | ೫ | ೧ | | | | | | ೧ | ೮ | ೧.೫೭ |
| ೧೭ | ರಜತಾದ್ರಿಪುರ | ೩ | | | | | | | | | ೩ | ೦.೫೯ |
| ೧೮ | ಸಿದ್ಧರಬೆಟ್ಟ | ೩ | ೩ | ೨ | | ೧ | | | | | ೯ | ೧.೭೭ |
| ೧೯ | ಸಿದ್ಧಗಂಗಾಬೆಟ್ಟ | ೪ | ೩ | ೪ | ೧ | | ೨ | | ೨ | | ೧೨ | ೨.೩೬ |
| ೨೦ | ಸಿದ್ಧಾಪುರ | ೧೭ | ೯ | ೪ | ೩ | ೧ | | ೧ | ೪ | | ೩೯ | ೭.೬೭ |
| ೨೧ | ಸೀಗೆಪಾಳ್ಯ | ೩೧ | ೩ | ೨ | ೩ | | | ೪ | | ೧ | ೪೮ | ೯.೪೪ |
| ೨೨ | ಸಂಪಿಗೆ | ೪ | ೨ | ೨ | ೧ | | ೧ | | | | ೯ | ೧.೭೭ |
| ೨೩ | ಹಿರೇಗುಂಡುಗಲ್ಲು | ೧ | ೨ | ೪ | ೨ | | ೩ | | | | ೧೦ | ೧.೯೬ |
| ೨೪ | ಹೂವಿನಕಟ್ಟೆ | ೨೮ | ೩೫ | ೩ | | | | ೨ | ೪ | | ೭೫ | ೧೪.೭೬ |
| ೨೫ | ಹೊಸಹಳ್ಳಿ | ೧ | ೧ | ೨ | ೧ | | | | | | ೫ | ೦.೯೮ |
| | ಒಟ್ಟು | ೨೨೭ | ೧೨೬ | ೭೬ | ೧೯ | ೧೫ | ೧೧ | ೧೧ | ೧೬ | ೭ | ೫೦೮ | |
| | ಶೇ | ೪೪.೬೮ | ೨೪.೮೦ | ೧೪.೯೬ | ೩.೭೪ | ೨.೯೫ | ೨.೧೬ | ೨.೧೬ | ೩.೧೪ | ೧.೩೭ | | |

ವೃತ್ತ ನಕ್ಷೆ ೭.ಉ



**ನೀಳಚಕ್ಕೆ ಉಪಕರಣಗಳ ವಿವರಣೆ (ಮೂರನೆಯ ಹಂತ)**

ಅಂತ್ಯ ಹಳೆಶಿಲಾಯುಗದ ಉಪಕರಣಗಳ ಸಮೂಹದಲ್ಲಿ ಪ್ರಮುಖ ಉಪಕರಣವಾದ ನೀಳಚಕ್ಕೆ ಮಾದರಿ ಉಪಕರಣಗಳು, ನಂತರದ ಸಂಸ್ಕೃತಿಯಲ್ಲಿಯೂ ಮುಖ್ಯ ಉಪಕರಣವಾಗಿ ಮುಂದುವರಿದಿರುವುದು ಕಂಡು ಬರುತ್ತದೆ. ಈ ಅಧ್ಯಯನ ಪ್ರದೇಶದ ಸೂಕ್ಷ್ಮ ಶಿಲಾಯುಗದ ಮೂರನೆಯ ಹಂತದ ನೆಲೆಗಳಲ್ಲಿಯೂ ನೀಳಚಕ್ಕೆ ಸಮೂಹದ ಉಪಕರಣ ಗಳು ಹೆಚ್ಚಾಗಿರುವುದು ಕಾಣುತ್ತದೆ. ಒಟ್ಟು ೨೫ ನೆಲೆಗಳ ಪೈಕಿ ೨೪ ನೆಲೆಗಳಲ್ಲಿ ದೊರೆತಿರುವ ಒಟ್ಟು ೨೨೭ (ಶೇ. ೪೪.೭೮) ನೀಳಚಕ್ಕೆ ಉಪಕರಣಗಳಾಗಿವೆ. ಕಾರ್ಯ ನಿರ್ವಹಿಸುವ ಅಲಗು, ರೂಪಿಸಿರುವ ವಿಧಾನ, ಬಳಸಿರುವ ತಂತ್ರ, ಅಲಗಿರುವ ಪಾರ್ಶ್ವಗಳು ಮತ್ತು ಉಪಯೋಗ ಇವುಗಳನ್ನನುಸರಿಸಿ ಈ ಉಪಕರಣವನ್ನು ೭ಉಪಗುಂಪುಗಳಾಗಿ ವಿಭಾಗಿಸಿದೆ. ಅವುಗ-ಳೆಂದರೆ

೧. ನೀಳಚಕ್ಕೆಯಂತಹ ಚಕ್ಕೆ ಒಟ್ಟು ಉಪಕರಣ ೪೫ ಶೇ. ೧೯.೮೨

೨. ಒಬ್ಬದಿ ನೀಳಚಕ್ಕೆ ಒಟ್ಟು ಉಪಕರಣ ೫೯ ಶೇ. ೨೫.೯೯

೩. ಇಬ್ಬದಿ ನೀಳಚಕ್ಕೆ ಒಟ್ಟು ಉಪಕರಣ ೫೯ ಶೇ. ೨೫.೯೯

೪. ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ ಒಟ್ಟು ಉಪಕರಣ ೫ ಶೇ. ೨.೨೦

೫. ಕಿರು ನೀಳಚಕ್ಕೆ ಒಟ್ಟು ಉಪಕರಣ ೫೨ ಶೇ.೨೨.೯೦

೬. ಕೈ ಚಾಕು ನೀಳಚಕ್ಕೆ ಒಟ್ಟು ಉಪಕರಣ ೨ ಶೇ. ೦.೮೮

೭. ಗರಗಸದಂತಹ ನೀಳಚಕ್ಕೆ ಒಟ್ಟು ಉಪಕರಣ ೫ ಶೇ. ೨.೨೦

ಒಟ್ಟು ಉಪಕರಣಗಳಿಗೆ ಉಪಯೋಗಿಸಿರುವ ಶಿಲಾ ಮಾದರಿಯಂತೆ ಕ್ವಾರ್ಟ್ಸ್ ಶಿಲೆಯ ಉಪಕರಣಗಳು ಅತಿ ಹೆಚ್ಚು ಇದ್ದು (ಒಟ್ಟು ೧೭೧ ಶೇ. ೭೫.೩೩), ನಂತರದ ಸ್ಥಾನದಲ್ಲಿ ಅದಿರುಯುಕ್ತ ಕ್ವಾರ್ಟ್ಸ್ ಶಿಲೆಯದಾಗಿದೆ. (ಒಟ್ಟು ೨೦ ಶೇ. ೮.೮೧) ಉಳಿದೆರಡು ಸ್ಥಾನಗಳನ್ನು ಕ್ರಮವಾಗಿ ಜಾಸ್ಪರ್ (ಒಟ್ಟು ೧೯ ಶೇ. ೮.೩೭) ಅದಿರುಯುಕ್ತ ಜಾಸ್ಪರ್ (ಒಟ್ಟು ೧೭ ಶೇ. ೭.೪೮)ಗಳು ಹೊಂದಿವೆ.

ಪ್ರತಿಯೊಂದು ನೆಲೆಯಲ್ಲಿ ಈ ಉಪಗಂಪಿನ ಉಪಕರಣಗಳ ಸಂಖ್ಯೆ, ನೀಳಚಕ್ಕೆ ಗುಂಪಿನಲ್ಲಿ ಅವುಗಳ ಶೇಕ-ಡಾವಾರು ಪ್ರಮಾಣ ಇವುಗಳನ್ನು ಕೋಷ್ಟಕ ಸಂಖ್ಯೆ ೭.೩೫ ಹಾಗು ವೃತ್ತ ನಕ್ಷೆ ಸಂಖ್ಯೆ ೭.೮೦ ರಲ್ಲಿ ನೀಡಿದೆ.

## ಸೂಕ್ಷ್ಮ ಶಿಲಾಯುಗದ ನೀಳಚಕ್ಕೆ ಉಪಕರಣ ಮಾದರಿ

### ಕೋಷ್ಟಕ ಸಂಖ್ಯೆ ೭.೩೫

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆ ಯಂತಹ ಚಕ್ಕೆ | ಒಬ್ಬದಿ ನೀಳಚಕ್ಕೆ | ಇಬ್ಬದಿ ನೀಳಚಕ್ಕೆ | ದ್ವಿತೀಯಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ | ಕಿರು ನೀಳಚಕ್ಕೆ | ಕ್ಯೆಬಾಕು ನೀಳಚಕ್ಕೆ | ಗರಗಸದಂತಹ ನೀಳಚಕ್ಕೆ | ಒಟ್ಟು | ಶೇ |
|---|---|---|---|---|---|---|---|---|---|---|
| ೧ | ಅವರ್ಗಲ್ಲು | ೩ | ೫ | ೨ | | | | | ೧೦ | ೪.೪೦ |
| ೨ | ಅಂಕನಬಾವಿ | ೯ | ೫ | ೮ | ೨ | ೧೬ | | | ೪೦ | ೧೭.೬೨ |
| ೩ | ಕತ್ತಿರಾಜನಹಳ್ಳಿ | ೧ | | ೩ | | | | | ೪ | ೧.೭೬ |
| ೪ | ಕ್ಯೆಮರ | | | | | | | | | |
| ೫ | ಗುರಮ್ಮನಕಟ್ಟೆ | ೨ | ೧ | ೧ | | | ೧ | | ೫ | ೨.೨೦ |
| ೬ | ಗೊಲ್ಲರಹಟ್ಟಿ | | ೨ | ೧ | | | | | ೩ | ೧.೩೨ |
| ೭ | ಚಿನಗ | | ೪ | ೩ | | ೩ | | | ೧೦ | ೪.೪೦ |
| ೮ | ಚಿನವಾರ | | | ೧ | | ೩ | | | ೪ | ೧.೭೬ |
| ೯ | ಥರಟಿ | ೫ | ೧೧ | ೬ | ೨ | ೭ | | ೪ | ೩೫ | ೧೫.೪೧ |
| ೧೦ | ನಾಗಲಾಪುರ | ೨ | ೧ | ೧ | | | | | ೪ | ೧.೭೬ |
| ೧೧ | ನಿಡುಗಲ್ಲು | ೨ | | ೧ | | | | | ೩ | ೧.೩೨ |
| ೧೨ | ಬೆಟ್ಟದಹಳ್ಳಿ | ೧ | ೧ | ೪ | | ೨ | | | ೮ | ೩.೫೨ |
| ೧೩ | ಬೆಳ್ಳಿಬಟ್ಟಲಹಳ್ಳಿ | | ೧ | ೧ | | | | | ೨ | ೦.೮೮ |
| ೧೪ | ಮಧುಗಿರಿ | ೧ | ೧ | ೧ | | | | | ೩ | ೧.೩೨ |
| ೧೫ | ಮಾರನಾಯಕನಪಾಳ್ಯ | ೧ | | ೨ | | | | | ೩ | ೧.೩೨ |
| ೧೬ | ಮಿಡಿಗೇಶಿ | | | | | ೧ | | | ೧ | ೦.೪೪ |
| ೧೭ | ರಜತಾದ್ರಿಪುರ | | ೧ | ೧ | | ೧ | | | ೩ | ೧.೩೨ |
| ೧೮ | ಸಿದ್ಧರಬೆಟ್ಟ | ೩ | | | | | | | ೩ | ೧.೩೨ |
| ೧೯ | ಸಿದ್ಧಗಂಗಾಬೆಟ್ಟ | | ೧ | ೨ | | ೧ | | | ೪ | ೧.೭೬ |
| ೨೦ | ಸಿದ್ದಾಪುರ | ೨ | ೨ | ೬ | | ೬ | ೧ | | ೧೭ | ೭.೪೮ |
| ೨೧ | ಸೀಗೆಪಾಳ್ಯ | ೩ | ೭ | ೯ | | ೧೨ | | | ೩೧ | ೧೩.೬೫ |
| ೨೨ | ಸಂಪಿಗೆ | ೩ | | ೧ | | | | | ೪ | ೧.೭೬ |
| ೨೩ | ಹಿರೇಗುಂಡುಗಲ್ಲು | ೧ | | | | | | | ೧ | ೦.೪೪ |
| ೨೪ | ಹೂವಿನಕಟ್ಟೆ | ೬ | ೧೫ | ೫ | ೧ | | | ೧ | ೨೮ | ೧೨.೩೩ |
| ೨೫ | ಹೊಸಹಳ್ಳಿ | | ೧ | | | | | | ೧ | ೦.೪೪ |
| | ಒಟ್ಟು | ೪೫ | ೫೯ | ೫೯ | ೫ | ೫೨ | ೨ | ೫ | ೨೨೭ | |
| | ಶೇ | ೧೯.೮೨ | ೨೫.೯೯ | ೨೫.೯೯ | ೨.೨೦ | ೨೨.೯೦ | ೦.೮೮ | ೨.೨೦ | | |

### ವೃತ್ತ ನಕ್ಷೆ ಸಂಖ್ಯೆ ೭.ಊ



### ೧. ನೀಳಚಕ್ಕೆ ಮಾದರಿ

### ೧.೧ ನೀಳಚಕ್ಕೆಯಂತಹ ಚಕ್ಕೆ

ನೀಳಚಕ್ಕೆಯ ಉಪಕರಣಗಳ ಮೊದಲ ಹಂತದ ಉಪಕರಣ ನೀಳಚಕ್ಕೆಯಂತಹ ಚಕ್ಕೆಯಾಗಿದ್ದು, ಇಂತಹ ಉಪಕರಣಗಳು ಈ ಹಂತದ ೨೫ ನೆಲೆಗಳ ಪೈಕಿ ೧೬ ನೆಲೆಗಳಲ್ಲಿ ಒಟ್ಟು ೪೫ (ಶೇ. ೧೯.೮೨) ಇವೆ. ಪ್ರಾಥಮಿಕ ಚಕ್ಕೆಗಳಾದ್ದರಿಂದ ಒರಟಾಗಿದ್ದು ನಾಜೂಕಾದ ಪುಡಿಗೆಲಸ ಕಂಡು ಬರುವುದಿಲ್ಲ. ಅಲ್ಲಲ್ಲಿ ಮೂಲ ಶಿಲಾ ತೊಗಟೆ ಅಂಶವಿದ್ದು ಹೆಚ್ಚಿನ ಉಪಕರಣಗಳು ತ್ರಿಭುಜಾಕಾರದಲ್ಲಿದ್ದರೂ ಕೆಲವು ಆಯತ, ಅರ್ಧ ಚಂದ್ರಾಕೃತಿ ಹಾಗೂ ಬಹುಭುಜಾಕೃತಿಗಳಲ್ಲಿಯೂ ಇವೆ. ಹೆಚ್ಚಿನ ಉಪಕರಣಗಳು ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರವಿದ್ದರೂ ಹಲವು ತ್ರಾಪಿಜ್ಯ, ಆಯತ, ಹಾಗೂ ಅಜ್ಯಾಮಿತೀಯ ಆಕೃತಿಗಳಲ್ಲಿವೆ. ಮುಂಬದಿಯ ಮಧ್ಯ ಉಬ್ಬೇಣು ಹೆಚ್ಚಿನ ಉಪಕರಣಗಳಲ್ಲಿ ಮುಖ್ಯವಾಗಿ ಕಾಣುತ್ತದೆ. ಕೆಲವು ಉಪಕರಣಗಳಲ್ಲಿ ಮೇಲ್ತುದಿ ಮೊನಚಾಗಿದ್ದು ಉಳಿದಂತೆ ಸರಳರೇಖೆ, ವಕ್ರರೇಖೆ ಮತ್ತು ದುಂಡಾಗಿರುವುದನ್ನು ಗುರುತಿಸಬಹುದು. ಹೆಚ್ಚಿನ ಉಪಕರಣಗಳಲ್ಲಿ ಪುಡಿಗೆಲಸವಿಲ್ಲದಿದ್ದರೂ ಒಬ್ಬದಿ ಹರಿತವಿರುವುದನ್ನು ಕಾಣಬಹುದು.

ಈ ಉಪಗುಂಪಿನ ಉಪಕರಣಗಳ ಪೈಕಿ ೪೦ (ಶೇ. ೮೮.೮೮) ಕಾರ್ಟ್ಜ್, ೪ (ಶೇ. ೮.೮೮) ಅದಿರುಯುಕ್ತ ಕ್ವಾರ್ಟ್ಜ್ ಹಾಗೂ ಜಾಸ್ಪರ್‌ನಲ್ಲಿ ೧ (ಶೇ. ೨.೨೨) ಇವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೬.೩೬ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೬.೩೬**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೧೪ | ೩೧.೧೧ | ೫-೧೦ | ೧೩ | ೨೮.೮೮ | ೧-೫ | ೧೩ | ೨೮.೮೮ |
| ೨೦-೩೦ | ೨೭ | ೬೦.೦೦ | ೧೦-೧೫ | ೨೪ | ೫೩.೩೩ | ೫-೧೦ | ೩೦ | ೬೬.೬೬ |
| ೩೦-೪೦ | ೪ | ೮.೮೮ | ೧೫-೨೫ | ೮ | ೧೭.೭೭ | ೧೦-೧೫ | ೨ | ೪.೪೪ |
| ಒಟ್ಟು | ೪೫ | | | ೪೫ | | | ೪೫ | |

ಈ ಉಪಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೨ ಗರಿಷ್ಠ ೪೦ ಮಿ.ಮೀ. ಇದ್ದು ಇವುಗಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೮ ಗರಿಷ್ಠ ೨೨ ಮಿ.ಮೀ. ಇದ್ದು ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದರಂತೆ ದಪ್ಪ ಕನಿಷ್ಠ ೨ ಗರಿಷ್ಠ ೧೨ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವುದು ಕಂಡು ಬರುತ್ತದೆ.

### ೧.೨ ಒಬ್ಬದಿ ನೀಳಚಕ್ಕೆ

ಒಂದೇ ಬದಿ ಅಥವಾ ಪಾರ್ಶ್ವ ಹರಿತ ಅಲಗನ್ನು ಹೊಂದಿರುವ ಈ ಉಪಗುಂಪಿನ ಉಪಕರಣಗಳು ಒಟ್ಟು ೫೯ (ಶೇ. ೧೯.೮೨) ಇವೆ. ಅಧ್ಯಯನ ಪ್ರದೇಶದ ಈ ಹಂತದ ಒಟ್ಟು ೨೫ ನೆಲೆಗಳ ಪೈಕಿ ೧೬ ನೆಲೆಗಳಲ್ಲಿ ಇಂತಹ ಉಪಕರಣಗಳು ದೊರೆತಿವೆ. ಹೆಚ್ಚಿನ ಉಪಕರಣಗಳ ಬುಡ ಭಾಗ ದಪ್ಪವಿದ್ದು ಅಲ್ಲಲ್ಲಿ ಮೂಲ ಶಿಲಾ ತೊಗಟೆ ಅಂಶ ಕಂಡು ಬರುತ್ತದೆ. ಹೆಚ್ಚಿನ ಉಪಕರಣಗಳಲ್ಲಿ ಒಂದು ಬದಿ ಹರಿತ ಅಲಗನ್ನು ಹೊಂದಿದ್ದು ಮತ್ತೊಂದು ಬದಿ ದಪ್ಪಾಗಿದೆ. ಹಿಂಬದಿ-ಯಲ್ಲಿ ಪ್ರಾಥಮಿಕ ಚಕ್ಕೆಯನ್ನೆಬ್ಬಿಸಲು ಬಳಸಿರುವ ತಂತ್ರವನ್ನನುಸರಿಸಿ ಸಮತಲ ಮತ್ತು ನಿಮ್ನತೆ ಕಂಡು ಬರುತ್ತದೆ. ಉತ್ತಮ ಶಿಲಾ ಮಾದರಿಗಳನ್ನು ಹಿಂಬದಿಯಲ್ಲಿ ಅಲೆಅಲೆಯಾಗಿರುವುದನ್ನು ಕಾಣಬಹುದು. ಮೇಲ್ತುದಿ ಹೆಚ್ಚಿನ ಉಪಕರಣಗಳಲ್ಲಿ ಸರಳರೇಖೆಯಲ್ಲೂ ಉಳಿದಂತೆ ವಕ್ರರೇಖೆ., ಮೊನೆ ಹಾಗೂ ಅರ್ಧ ಚಂದ್ರಾಕಾರದಲ್ಲಿರುವುದನ್ನು ಕಾಣಬಹುದು. ಮುಂಬ-ದಿಯಲ್ಲಿ ಸರಳರೇಖೆಯ ಉಬ್ಬೇಣು ಹೆಚ್ಚಿನ ಉಪಕರಣಗಳಲ್ಲಿದ್ದು ಕೆಲವು ಉಪಕರಣಗಳಲ್ಲಿ ಅದನ್ನು ತೆಗೆಯಲಾಗಿದೆ. ಒಟ್ಟು ಉಪಕರಣಗಳು ವಿನ್ಯಾಸದಲ್ಲಿ ತ್ರಿಭುಜಾಕಾರವಿದ್ದರೂ ಕೆಲವು ಆಯತ ಹಾಗೂ ಅಂಡಾಕೃತಿಗಳನ್ನು ಹೊಂದಿವೆ. ಅಡ್ಡ ವಿನ್ಯಾ-ಸದಲ್ಲಿ ತ್ರಿಭುಜ, ತ್ರಾಪಿಜ್ಯ, ಆಯತ ಹಾಗೂ ಚತುರ್ಭುಜಗಳಲ್ಲಿರುವುದನ್ನು ಕಾಣಬಹುದು.

ಒಟ್ಟು ಉಪಕರಣಗಳಲ್ಲಿ ೪೪ (ಶೇ. ೭೪.೫೭) ಕ್ವಾರ್ಟ್ಸ್, ೮ (ಶೇ. ೧೩.೫೫) ಅದಿರುಯುಕ್ತ ಜಾಸ್ಪರ್. ೬ (ಶೇ. ೧೦.೧೭), ಅದಿರುಯುಕ್ತ ಕ್ವಾರ್ಟ್ಸ್ ಹಾಗೂ ೧ (ಶೇ. ೧.೬೯) ಜಾಸ್ಪರ್ ಶಿಲೆಗಳಲ್ಲಿ ರೂಪಿತವಾಗಿವೆ. ಒಟ್ಟು ಉಪಕರ-ಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೩೭ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೩೭**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೨೨ | ೩೭.೨೮ | ೫-೧೦ | ೨೦ | ೩೩.೮೯ | ೩-೫ | ೧೬ | ೨೭.೧೧ |
| ೨೦-೩೦ | ೩೦ | ೫೦.೮೪ | ೧೦-೧೫ | ೩೦ | ೫೦.೮೪ | ೫-೧೦ | ೩೮ | ೬೪.೪೦ |
| ೩೦-೪೦ | ೭ | ೧೩.೫೫ | ೧೫-೨೫ | ೯ | ೧೫.೨೫ | ೧೦-೧೫ | ೫ | ೮.೪೭ |
| ಒಟ್ಟು | ೫೯ | | | ೫೯ | | | ೫೯ | |

ಈ ಉಪಗುಂಪಿನ ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೫ ಗರಿಷ್ಠ ೩೭ ಮಿ.ಮೀ. ಇದ್ದು ಇವುಗಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೭ ಗರಿಷ್ಠ ೨೨ ಮಿ.ಮೀ. ಇದ್ದು ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದರಂತೆ ದಪ್ಪ ಕನಿಷ್ಠ ೨ ಗರಿಷ್ಠ ೧೫ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವು-ದನ್ನು ಕಾಣಬಹುದು.

## ೧.೩ ಇಬ್ಬದಿ ನೀಳಚಕ್ಕೆ

ಅಧ್ಯಯನ ಪ್ರದೇಶದ ಈ ಹಂತದ ೨೫ ನೆಲೆಗಳ ಪೈಕಿ ೨೦ ನೆಲೆಗಳಲ್ಲಿ, ಈ ಉಪಗಂಪಿನ ಉಪಕರಣಗಳು ಒಟ್ಟು ೫೯ (ಶೇ. ೧೯.೮೨) ದೊರಕಿವೆ. ಈ ಉಪಕರಣಗಳು ಪ್ರಾಥಮಿಕ ಚಕ್ಕೆಗಳಾಗಿದ್ದು, ಬುಡವು ದಪ್ಪವಾಗಿಯೂ, ಮೇಲೆ ಹೋದಂತೆ ತೆಳುವಾಗಿಯೂ ಇವೆ. ಕೆಳತುದಿಯಲ್ಲಿ ಸಮತಲವಿದ್ದು ತಾಡನ ವೇದಿಕೆಯನ್ನು ಹೊಂದಿವೆ. ಹೆಚ್ಚಿನ ಉಪಕರಣಗಳ ಕೆಳತುದಿ ಸರಳ ರೇಖೆಯಲ್ಲಿದ್ದರೆ ಮೇಲ್ತುದಿಯು ಸರಳರೇಖೆ, ವಕ್ರರೇಖೆ, ಮೊನೆ ಹಾಗೂ ದುಂಡು ಆಕಾರ-ಗಳಲ್ಲಿವೆ. ಹಚ್ಚಿನ ಉಪಕರಣಗಳ ಹಿಂಬದಿ ಸಮತಲ ಇಲ್ಲವೆ ನಿಮ್ನವಾಗಿದೆ. ತಾಡನಶಂಖು ಎದ್ದು ಕಾಣುತ್ತದೆ. ಮುಂಬದಿಯ ಮಧ್ಯ ಉಬ್ಬೇಣು ಕೆಲವು ಉಪಕರಣಗಳಲ್ಲಿ ಪ್ರಮುಖವಾಗಿದ್ದು ಸಾಧಾರಣವಾಗಿ ಕೆಲವು ಉಪಕರಣಗಳಲ್ಲಿ ಆದನ್ನು ಕತ್ತರಿಸ-ಲಾಗಿದೆ. ಕೆಲವು ಉಪಕರಣಗಳಿಗೆ ಪುಡಿಗೆಲಸ ಮಾಡಿರುವುದನ್ನು ಕಾಣಬಹುದು.

ಒಟ್ಟು ಉಪಕರಣಗಳಲ್ಲಿ ೪೩ (ಶೇ. ೭೨.೮೮) ಕ್ವಾರ್ಟ್ಸ್, ೭ (ಶೇ. ೧೧.೮೬) ಜಾಸ್ಪರ್, ೬ (ಶೇ. ೧೦.೧೭), ಆದಿರುಯುಕ್ತ ಕ್ವಾರ್ಟ್ಸ್ ಹಾಗೂ ೩ (ಶೇ. ೫.೦೮) ಅದಿರುಯುಕ್ತ ಜಾಸ್ಪರ್ ಶಿಲೆಗಳಲ್ಲಿ ರೂಪಿತವಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ೭.೩೮ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೩೮**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೫ | ೮.೪೭ | ೫-೧೦ | ೨೫ | ೪೨.೩೭ | ೧-೫ | ೩೦ | ೫೦.೮೪ |
| ೨೦-೩೦ | ೨೯ | ೪೯.೧೫ | ೧೦-೧೫ | ೩೩ | ೫೫.೯೩ | ೫-೧೦ | ೨೮ | ೪೭.೪೫ |
| ೩೦-೪೦ | ೨೫ | ೪೨.೩೭ | ೨೦-೩೦ | ೧ | ೧.೬೯ | ೧೦-೧೫ | ೧ | ೧.೬೯ |
| ಒಟ್ಟು | ೫೯ | | | ೫೯ | | | ೫೯ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೩ ಗರಿಷ್ಠ ೩೫ ಮಿ.ಮೀ. ಇದ್ದು ಇವುಗ-ಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೭ ಗರಿಷ್ಠ ೨೮ ಮಿ.ಮೀ. ಇದ್ದು ಇವುಗಳಲ್ಲಿ ೧೦ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದರಂತೆ ದಪ್ಪ ಕನಿಷ್ಠ ೨ ಗರಿಷ್ಠ ೧೫ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೧ ರಿಂದ ೫ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವುದನ್ನು ಕಾಣಬಹುದು. .

### ೧.೪ ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿರುವ ನೀಳಚಕ್ಕೆ

ನೀಳಚಕ್ಕೆಯಾಗಿ ಉಪಯೋಗಿಸಲಾದ ಉಪಕರಣದ ಅಲಗು ಹರಿತವನ್ನು ಕಳೆದುಕೊಂಡ ಮೇಲೆ ಕಿರು ಚಕ್ಕೆಗಳನ್ನು ತೆಗೆದು ಮತ್ತೊಮ್ಮೆ ಅದೇ ಉಪಕರಣವನ್ನು ಬಳಕೆ ಮಾಡಿಕೊಳ್ಳಲಾಗುತ್ತದೆ. ಸಾಮಾನ್ಯವಾಗಿ ಎರಡೂ ಬದಿಗಳಿಂದಲೂ ಇಂತಹ ಪುಡಿಗೆಲಸ ಮಾಡಲಾಗಿದೆ.ಹರಿತ ಅಲಗು ಎರಡೂ ಪಾರ್ಶ್ವಗಳಿಗೂ ಇರಬಹುದು. ಉಳಿದಂತೆ ಈ ಉಪಕರಣ ಸಮಾನಾಂತರ ನೀಳಚಕ್ಕೆಗಳನ್ನೇ ಹೋಲುತ್ತವೆ.

ಪ್ರಸ್ತುತ ಇಂತಹ ೫ (ಶೇ. ೨.೨೦) ಉಪಕರಣಗಳು ೩ ನೆಲೆಗಳಿಂದ ಮಾತ್ರ ದೊರಕಿವೆ. ಮಧ್ಯ ಉಬ್ಬೇಣನ್ನು ಕತ್ತರಿಸಿ ತೆಗೆದಿದ್ದು ಪಾರ್ಶ್ವಗಳಲ್ಲಿ ಪುಡಿಗೆಲಸ ಮಾಡಿರುವ ಕಲೆಗಳಿವೆ. ಎಲ್ಲಾ ಉಪಕರಣಗಳ ಮೇಲ್ತುದಿ ಮೊನೆಯನ್ನು ಹೊಂದಿವೆ.

ಒಟ್ಟು ಉಪಕರಣಗಳಲ್ಲಿ ೩ (ಶೇ. ೬೦)ಕ್ವಾರ್ಟ್ಸ್ ಹಾಗೂ ತಲಾ ಒಂದೊಂದು ಜಾಸ್ಪರ್ (ಶೇ. ೨೦) ಮತ್ತು ಆದಿರುಯುಕ್ತ ಕ್ವಾರ್ಟ್ಸ್ (ಶೇ. ೨೦) ಶಿಲೆಗಳಲ್ಲಿ ರೂಪಿತವಾಗಿವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೧೫ ರಿಂದ ೨೦ ಮಿ.ಮೀ., ಅಗಲ ೧೦ ರಿಂದ ೧೫ ಮಿ.ಮೀ. ಹಾಗೂ ದಪ್ಪ ೧ ರಿಂದ ೫ ಮಿ.ಮೀ. ಗಳಾಗಿವೆ.

### ೧.೫ ಕಿರು ನೀಳಚಕ್ಕೆ

ನೀಳಚಕ್ಕೆ ಉಪಕರಣಗಳನ್ನು ರೂಪಿಸುವಾಗ ಉದ್ದೇಶಿತ ಉಪಕರಣ ರೂಪುಗೊಳ್ಳದೆ ಮುರಿದ ಭಾಗಗಳು ಉಳಿದ ಜ್ಯಾಮಿತೀಯ ಆಕಾರದ ತಯಾರಿಕೆಯ ಸಂದರ್ಭದಲ್ಲಿ ತ್ಯಾಜ್ಯವಾದ ಕಿರು ನೀಳಚಕ್ಕೆಗಳು ಈ ಗುಂಪಿನ ಉಪಕರಣಗಳಾಗಿವೆ. ಪ್ರಸ್ತುತ ೧೦ ನೆಲೆಗಳಿಂದ ಒಟ್ಟು ೫೨ (ಶೇ. ೨೨.೯೦) ಉಪಕರಣ ದೊರೆತಿವೆ. ಹೆಚ್ಚಿನ ಉಪಕರಣಗಳ ಹಿಂಬದಿ ಸಮತಲವಿದ್ದು ಮುಂಬದಿಯಲ್ಲಿ ನೇರವಾದ ಉಬ್ಬೇಣು ಕಂಡು ಬರುತ್ತದೆ. ಕೆಲವು ಉಪಕರಣಗಳಲ್ಲಿ ಉಬ್ಬೇಣನ್ನು ಕತ್ತರಿಸಲಾಗಿದೆ. ಈ ಉಪಕರಣಗಳು ನೀಳಚಕ್ಕೆಯ ಎಲ್ಲಾ ಲಕ್ಷಣಗಳನ್ನು ಹೊಂದಿವೆ. ಹೆಚ್ಚಿನ ಉಪಕರಣಗಳಲ್ಲಿ ಬುಡ ದಪ್ಪವಿದ್ದು ಮೇಲ್ತುದಿ ತೆಳುವಾಗಿದೆ. ಮೇಲ್ತುದಿಯಲ್ಲಿ ಮೊಂಡಾದ ಮೊನೆಯೂ ಕಂಡು ಬರುತ್ತದೆ. ಅಡ್ಡ ವಿನ್ಯಾಸದಲ್ಲಿ ಈ ಉಪಕರಣಗಳು ತ್ರಿಭುಜ, ಆಯತ ಮತ್ತು ತ್ರಾಪಿಜ್ಯದಲ್ಲಿವೆ. ಕೆಲವು ಉಪಕರಣಗಳಲ್ಲಿ ಪುಡಿಗೆಲಸ ಮಾಡಿರುವ ಚಕ್ಕೆಕಲೆಗಳಿವೆ.

ಈ ಉಪಕರಣಗಳು ಜಾಸ್ಪರ್‌ನಲ್ಲಿ ೯ (ಶೇ. ೧೭.೩೦), ಕ್ವಾರ್ಟ್ಸ್‌ನಲ್ಲಿ ೩೪ (ಶೇ. ೬೫.೩೮) ಆದಿರುಯುಕ್ತ ಜಾಸ್ಪರ್, ೬ (ಶೇ. ೧೧.೫೪), ಆದಿರುಯುಕ್ತ ಕ್ವಾರ್ಟ್ಸ್ ೩ (ಶೇ. ೫.೭೭) ಇದ್ದು, ಇವುಗಳ ಪ್ರಮಾಣ ವಿಶ್ಲೇಷಣೆಯನ್ನು

ಕೋಷ್ಟಕ ಸಂಖ್ಯೆ ೭.೩೯ ರಲ್ಲಿ ನೀಡಲಾಗಿದೆ.

ಕೋಷ್ಟಕ ಸಂಖ್ಯೆ ೭.೩೯

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೧೫ | ೨೮.೮೪ | ೩-೧೦ | ೧೮ | ೩೪.೬೧ | ೧-೫ | ೧೫ | ೨೮.೮೪ |
| ೧೫-೨೦ | ೩೭ | ೭೧.೧೫ | ೧೦-೧೫ | ೩೪ | ೬೫.೩೮ | ೫-೧೦ | ೩೭ | ೭೧.೧೫ |
| ಒಟ್ಟು | ೫೯ | | | ೫೯ | | | ೫೯ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೫ ಗರಿಷ್ಠ ೨೦ ಮಿಮೀ.ಆಗಿದ್ದು ಇವುಗಳಲ್ಲಿ ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೩ ಗರಿಷ್ಠ ೧೪ ಮಿಮೀ.ಗಳಾ-ಗಿದ್ದು ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ದಪ್ಪ ಕನಿಷ್ಠ ೧ ಗರಿಷ್ಠ ೭ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚಿವೆ.

### ೧.೬ ಕೈ ಚಾಕು ನೀಳಚಕ್ಕೆ

ನೀಳಚಕ್ಕೆ ಗುಂಪಿನ ವಿಶಿಷ್ಟ ಉಪಕರಣವಾದ ಕೈಚಾಕು ನೀಳಚಕ್ಕೆ ಉಪಕರಣವು ಒಟ್ಟು ೨ ( ಶೇ. ೦.೮೮ ) ಇದ್ದು, ತಲಾ ಒಂದೊಂದು ನೆಲೆಯಿಂದ ಬಂದಿದೆ. ಸ್ವಲ್ಪ ನೀಳವಾದ ನೀಳಚಕ್ಕೆಗಳಲ್ಲಿ ದಪ್ಪಗಿನ ಬುಡದ ಭಾಗವನ್ನು ಹಿಡಿ-ಯಲನುಕೂಲವಾಗುವಂತೆ ಚಕ್ಕೆ ತೆಗೆದು ಮೇಲ್ಭಾಗದಲ್ಲಿ ಅಲಗು ಮೂಡಿಸಲಾಗಿದೆ. ಸಾಮಾನ್ಯವಾಗಿ ಎಲ್ಲಾ ಉಪಕರಣಗ-ಳಲ್ಲೂ ಮೇಲರ್ಧ ಭಾಗವನ್ನು ಅರ್ಧ ಚಂದ್ರಾಕೃತಿಯಂತೆ ರೂಪಿಸಿದ್ದು ಉಬ್ಬೇಣಿನ ನೇರಕ್ಕೆ ಹರಿತ ಅಲಗು ಇರುತ್ತದೆ. ಇನ್ನೊಂದು ಪಾರ್ಶ್ವವನ್ನು ದಪ್ಪನೆಯ ಅರ್ಧ ಚಂದ್ರಾಕೃತಿಯ ಹಿಂಬಾಗುವಂತೆ ಮೂಡಿಸಿ ಬೆರಳಡಿಕೆಗೆ ಅನುಕೂಲವಾಗು-ವಂತೆ ಮಾಡಿದೆ. ಅಲಗನ್ನು ರೂಪಿಸಲು ಎರಡೂ ಪಾರ್ಶ್ವಗಳಿಂದ ಚಕ್ಕೆ ತೆಗೆಯಲಾಗಿದೆ. ಕೆಲವೊಮ್ಮೆ ಪುಡಿಗೆಲಸವನ್ನೂ ಮಾಡಲಾಗಿರುತ್ತದೆ.

ದೊರೆತ ೨ ಉಪಕರಣಗಳನ್ನೂ ಕ್ವಾರ್ಟ್ಜ಼ ಶಿಲೆಯಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ೨೬ ಮತ್ತು ೩ ಅಗಲ ೧೨ ಮತ್ತು ೧೮ ಹಾಗೂ ದಪ್ಪ ೭ ಮತ್ತು ೧೧ ಮಿ.ಮೀ. ಗಳಾಗಿವೆ.

## ೨. ಹೆರೆಚಕ್ಕೆ ಉಪಕರಣಗಳ ವಿವರಣೆ (ಮೂರನೆಯ ಹಂತ)

ಸೂಕ್ಷ್ಮ ಶಿಲಾಯುಗದ ಈ ಹಂತದ ಉಪಕರಣಗಳ ಸಂಖ್ಯೆಯಲ್ಲಿ ಹೆರೆಚಕ್ಕೆ ಮಾದರಿ ಉಪಕರಣಗಳು ಎರಡನೇ ಸ್ಥಾನದಲ್ಲಿವೆ. ಪ್ರಸ್ತುತ ೨೩ ನೆಲೆಗಳಲ್ಲಿ ಮಾತ್ರ ಈ ಉಪಕರಣಗಳು ದೊರೆತಿವೆ. ಒಟ್ಟು ೧೨೬ (ಶೇ. ೨೪.೮೦) ಉಪಕರಣಗಳಿದ್ದು ಇವುಗಳನ್ನು ತುದಿ ಮತ್ತು ಪಾರ್ಶ್ವಗಳೆರಡರ ಮೇಲೂ ರೂಪಿಸಲಾಗಿದೆ. ಈ ಉಪಕರಣಗಳು ನೀಳವಾ-ಗಿದ್ದು ಆಯತ, ತ್ರಿಭುಜ, ಹಾಗೂ ಅಂಡಾಕಾರಗಳಲ್ಲಿವೆ. ಚಿಕ್ಕ ಚಿಕ್ಕ ಚಕ್ಕೆಗಳನ್ನು ತೆಗೆದು ಮೂಲಗಟ್ಟಿಯನ್ನು ಬಳಸಿ ಹೆರೆಚಕ್ಕೆ ಉಪಕರಣಗಳನ್ನು ರೂಪಸಿದೆ. ಕ್ವಾರ್ಟ್ಸ್ ಶಿಲೆಯಲ್ಲಿ ಅತಿ ಹೆಚ್ಚು ಇದ್ದು (೧೦೩ ಶೇ. ೮೧.೭೫)ನಂತರದ ಸ್ಥಾನಗಳಲ್ಲಿ ಜಾಸ್ಪರ್ (೬ ಶೇ. ೪.೭೬) ಆದಿರುಯುಕ್ತ ಕ್ವಾರ್ಟ್ಸ್ (೧೩ ಶೇ. ೧೦.೩೧) ಆದಿರುಯುಕ್ತ ಜಾಸ್ಪರ್ (೩ ಶೇ. ೨.೩೮) ನಲ್ಲಿದ್ದರೆ ಒಂದೇ ಒಂದು (ಶೇ. ೦.೭೯) ಪೆಲ್ಸಪಾರ್‌ನಲ್ಲಿ ರೂಪಿತವಾಗಿದೆ. ಕಾರ್ಯನಿರ್ವಾಹಕ ಅಲಗು ಅದು ಇರುವ ಭಾಗ, ಉಪಕರಣದ ಆಕಾರ ಹಾಗೂ ಮೂಲಶಿಲಾ ಸಾಮಗ್ರಿ ಇವುಗಳನ್ನನುಸರಿಸಿ ಒಟ್ಟು ಉಪಕರಣಗಳನ್ನು ೬ ಉಪಗುಂಪುಗಳಾಗಿ ವಿಭಾಗಿಸಿದೆ. ಅವುಗಳೆಂದರೆ

| | | |
|---|---|---|
| ೧. ಒಬ್ಬದಿ ಹೆರೆಚಕ್ಕೆ | ಒಟ್ಟು ಉಪಕರಣ ೩೩ | ಶೇ. ೨೬.೧೯ |
| ೨. ಇಬ್ಬದಿ ಹೆರೆಚಕ್ಕೆ | ಒಟ್ಟು ಉಪಕರಣ ೩೪ | ಶೇ. ೨೬.೯೮ |
| ೩. ತುದಿ ಹೆರೆಚಕ್ಕೆ | ಒಟ್ಟು ಉಪಕರಣ ೩೩ | ಶೇ. ೨೬.೧೯ |
| ೪. ದುಂಡು ಹೆರೆಚಕ್ಕೆ | ಒಟ್ಟು ಉಪಕರಣ ೭ | ಶೇ. ೫.೫೫ |
| ೫. ಒಳಬಾಗಿದ ಅಂಚಿನ ಹೆರೆಚಕ್ಕೆ | ಒಟ್ಟು ಉಪಕರಣ ೯ | ಶೇ. ೭.೧೪ |
| ೬. ಮೂಲಗಟ್ಟಿ ಹೆರೆಚಕ್ಕೆ | ಒಟ್ಟು ಉಪಕರಣ ೧೦ | ಶೇ. ೭.೯೩ |

ಹೆರೆಚಕ್ಕೆ ಮಾದರಿಯಲ್ಲಿ ವಿವಿಧ ಉಪಗಂಪಿನ ಉಪಕರಣಗಳು, ಅವು ದೊರೆತಿರುವ ನೆಲೆ, ಉಪಕರಣಗಳ ಸಂಖ್ಯೆ, ಹೆರೆಚಕ್ಕೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೪೦ ರಲ್ಲಿ ಮತ್ತು ವೃತ್ತ ನಕ್ಷೆ ಸಂಖ್ಯೆ ೭.ಋ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೦

| ಕ್ರಮ ಸಂಖ್ಯೆ | ನೆಲೆ | ಒಬ್ಬದಿ ಹೆರೆಚಕ್ಕೆ | ಇಬ್ಬದಿ ಹೆರೆಚಕ್ಕೆ | ತುದಿ ಹೆರೆಚಕ್ಕೆ | ದುಂಡು ಹೆರೆಚಕ್ಕೆ | ಒಳಬಾಗಿದ ಅಂಚಿನ ಹೆರೆಚಕ್ಕೆ | ಮೂಲ ಗಟ್ಟಿ ಹೆರೆಚಕ್ಕೆ | ಒಟ್ಟು | ಶೇ |
|---|---|---|---|---|---|---|---|---|---|
| ೧ | ಅವರ್ಗಲ್ಲು | | | | | ೧ | ೨ | ೩ | ೨.೩೮ |
| ೨ | ಅಂಕನಬಾವಿ | ೪ | ೪ | ೩ | ೧ | | | ೧೨ | ೯.೫೨ |
| ೩ | ಕತ್ತಿರಾಜನಹಳ್ಳಿ | | | ೧ | | | | ೧ | ೦.೭೯ |
| ೪ | ಕೈಮರ | | | | | | | | |
| ೫ | ಗುರಮ್ಮನಕಟ್ಟೆ | | | ೧ | | | | ೧ | ೦.೭೯ |
| ೬ | ಗೊಲ್ಲರಹಟ್ಟಿ | ೨ | ೨ | | | ೧ | | ೫ | ೩.೯೬ |
| ೭ | ಚಿನಗ | | | ೨ | | | | ೨ | ೧.೫೮ |
| ೮ | ಚಿನವಾರ | | ೨ | | ೧ | | | ೩ | ೨.೩೮ |
| ೯ | ಥರಟಿ | ೬ | ೧ | ೬ | | ೧ | ೩ | ೧೭ | ೧೩.೪೯ |
| ೧೦ | ನಾಗಲಾಪುರ | | ೩ | ೧ | | | | ೪ | ೩.೧೭ |
| ೧೧ | ನಿಡುಗಲ್ಲು | | ೨ | | | | | ೨ | ೧.೫೮ |
| ೧೨ | ಬೆಟ್ಟದಹಳ್ಳಿ | | ೨ | ೨ | | | | ೪ | ೩.೧೭ |
| ೧೩ | ಬೆಳ್ಳಿಬಟ್ಟಲಹಳ್ಳಿ | | | ೩ | | | | ೩ | ೨.೩೮ |
| ೧೪ | ಮಧುಗಿರಿ | ೧ | ೧ | | | ೧ | | ೩ | ೨.೩೮ |
| ೧೫ | ಮಾರನಾಯಕನಪಾಳ್ಯ | | ೧ | ೧ | | | ೧ | ೩ | ೨.೩೮ |
| ೧೬ | ಮಿಡಿಗೇಶಿ | | ೨ | ೧ | ೧ | ೧ | | ೫ | ೩.೯೬ |
| ೧೭ | ರಜತಾದ್ರಿಪುರ | | | | | | | | |
| ೧೮ | ಸಿದ್ಧರಬೆಟ್ಟ | | ೧ | ೧ | | | ೧ | ೩ | ೨.೩೮ |
| ೧೯ | ಸಿದ್ಧಗಂಗಾಬೆಟ್ಟ | | ೨ | ೧ | | | | ೩ | ೨.೩೮ |
| ೨೦ | ಸಿದ್ದಾಪುರ | ೨ | ೧ | ೪ | | ೨ | | ೯ | ೭.೧೪ |
| ೨೧ | ಸೀಗೆಪಾಳ್ಯ | | | ೨ | | ೧ | | ೩ | ೨.೩೮ |
| ೨೨ | ಸಂಪಿಗೆ | | ೧ | ೧ | | | | ೨ | ೧.೫೮ |
| ೨೩ | ಹಿರೇಗುಂಡುಗಲ್ಲು | | ೨ | | | | | ೨ | ೧.೫೮ |
| ೨೪ | ಹೂವಿನಕಟ್ಟೆ | ೧೮ | ೭ | ೩ | ೪ | | ೩ | ೩೫ | ೨೭.೭೭ |
| ೨೫ | ಹೊಸಹಳ್ಳಿ | | | | | ೧ | | ೧ | ೦.೭೯ |
| | ಒಟ್ಟು | ೩೩ | ೩೪ | ೩೩ | ೭ | ೯ | ೧೦ | ೧೨೬ | |
| | ಶೇ | ೨೬.೧೯ | ೨೬.೯೮ | ೨೬.೧೯ | ೫.೫೫ | ೭.೧೪ | ೭.೯೩ | | |

ವೃತ್ತ ನಕ್ಷೆ ಸಂಖ್ಯೆ ೭.ಋ




ಪ್ರತಿ ಉಪಗುಂಪಿನ ಉಪಕರಣಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಲಾಗಿದೆ.

## ೨. ಹೆರೆಚಕ್ಕಿ ಮಾದರಿ

### ೨.೧ ಒಬ್ಬದಿ ಹೆರೆಚಕ್ಕಿ

ಒಬ್ಬದಿ ಹೆರೆಚಕ್ಕೆಯ ಒಂದು ಭಾಗವನ್ನು ಹರಿತಗೊಳಿಸಿ ಕಾರ್ಯ ನಿರ್ವಾಹಕ ಅಲಗನ್ನು ರೂಪಿಸಲಾಗಿದೆ. ನೀಳಚಕ್ಕೆಯಂತೆ ಪ್ರಾಥಮಿಕ ಚಕ್ಕೆ ತೆಗೆದು, ಒಂದು ಪಾರ್ಶ್ವದ ಮರುಚಕ್ಕೆಗಳನ್ನು ಎಬ್ಬಿಸಿ ಹರಿತ ಅಲಗನ್ನು ರೂಪಿಸಲಾಗಿದೆ.ಈ ಉಪಕರಣಗಳು ತ್ರಿಭುಜ, ಆಯತ, ಅಂಡಾಕಾರ, ಪಂಚಭುಜ ಮುಂತಾದ ಆಕೃತಿಗಳಲ್ಲಿವೆ. ಅಧ್ಯಯನ ಪ್ರದೇಶದ ಈ ಹಂತದ ೨೫ ನೆಲೆಗಳ ಪೈಕಿ ೬ ನೆಲೆಗಳಲ್ಲಿ ಮಾತ್ರ. ಒಟ್ಟು ೩೩ (ಶೇ. ೨೬.೧೯) ಉಪಕರಣಗಳು ದೊರಕಿವೆ. ಮೂಲ ಚಕ್ಕೆಗಳನ್ನನುಸರಿಸಿ ಇವುಗಳ ಹಿಂಬದಿ ಹೆಚ್ಚು ಕಡಿಮೆ ಸಮತಲಪಿದೆ. ಕೆಲವು ಉಪಕರಣಗಳಲ್ಲಿ ತಾಡನಶಂಖು ಎದ್ದು ಕಾಣುತ್ತದೆ. ಮುಂಬದಿಯಲ್ಲಿ ಮಧ್ಯ ಉಬ್ಬೇಣು ನೇರವಾಗಿ ಹಲವು ಉಪಕರಣಗಳಿದ್ದರೆ ಕೆಲವೇ ಉಪಕರಣಗಳಲ್ಲಿ ಉಬ್ಬೇಣನ್ನು ಕತ್ತರಿಸಿ ತೆಗೆದು ತೆಳು ಮಾಡಲಾಗಿದೆ. ಕೆಲವು ಉಪಕರಣಗಳಲ್ಲಿ ಒಂದೇ ಚಕ್ಕೆ ತೆಗೆದು ಹರಿತ ಅಲಗನ್ನು ರೂಪಿಸಿದ್ದರೆ ಮತ್ತೆ ಕೆಲವು ಉಪಕರಣಗಳಲ್ಲಿ ಮರುಚಕ್ಕೆಗಳನ್ನು ತೆಗೆದು ಅಲಗನ್ನು ಹರಿತಗೊಳಿಸಲಾಗಿದೆ. ಕೆಲವು ಉಪಕರಣಗಳ ಬುಡ ದಪ್ಪವಿದ್ದರೆ ಮತ್ತೆ ಕೆಲವು ಮಧ್ಯದಲ್ಲಿ ದಪ್ಪವಾಗಿವೆ. ಹಲವು ಉಪಕರಣಗಳನ್ನು ಹಿಡಿಕೆಗೆ ಅನುಕೂಲವಾಗುವಂತೆ ಚಕ್ಕೆಗಳನ್ನು ತೆಗೆದಿರುವುದು ಕಂಡು ಬರುತ್ತದೆ.

ಈ ಉಪಕರಣಗಳಲ್ಲಿ ೨೭ (ಶೇ. ೮೧.೮೨) ನ್ನು ಕ್ವಾರ್ಟ್ಸ್ ಶಿಲೆಯಲ್ಲೂ ೪ (ಶೇ. ೧೨.೧೨) ನ್ನು ಆದಿರುಯುಕ್ತ ಕ್ವಾರ್ಟ್ಸ್ ಶಿಲೆಯಲ್ಲೂ, ೨ (ಶೇ. ೬.೦೬) ನ್ನು ಜಾಸ್ಪರ್ ಶಿಲೆಯಲ್ಲೂ ರೂಪಿಸಲಾಗಿದೆ. ಈ ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೧ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೧

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೭ | ೨೧.೨೪ | ೧೦-೧೫ | ೬ | ೧೮.೧೮ | ೧-೫ | ೬ | ೧೮.೧೮ |
| ೨೦-೩೦ | ೨೨ | ೬೬.೬೭ | ೧೫-೨೦ | ೧೫ | ೪೫.೪೫ | ೫-೧೦ | ೨೨ | ೬೬.೬೭ |
| ೩೦-೪೦ | ೪ | ೧೨.೧೨ | ೨೦-೨೫ | ೧೨ | ೩೬.೩೬ | ೧೦-೧೫ | ೫ | ೧೫.೧೨ |
| ಒಟ್ಟು | ೩೩ | | | ೩.೩ | | | ೩೩ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೬ ಗರಿಷ್ಠ ೩೨ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೨೦-೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೧೧ ಗರಿಷ್ಠ ೨೫ ಮಿ.ಮೀ. ಗಳಿದ್ದು ಇವುಗಳಲ್ಲಿ ೧೫-೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ದಪ್ಪ ಕನಿಷ್ಠ ೩ ಗರಿಷ್ಠ ೧೨

ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚು ಸಂಖ್ಯೆಯಲ್ಲಿರುವುದು ಕಂಡು ಬರುತ್ತದೆ.

## ೨.೨ ಇಬ್ಬದಿ ಹೆರೆಚಕ್ಕೆ

ಸಮಾನಾಂತರ ಪಾರ್ಶ್ವಗಳೂ ಹೆರೆಯುವ ಹರಿತ ಅಲಗನ್ನು ಹೊಂದಿರುವ ಇಂತಹ ಉಪಕರಣಗಳು ಒಟ್ಟು ೩೪ (ಶೇ. ೨೬.೯೮) ಇದ್ದು ಈ ಗುಂಪಿನ ಅತಿ ಹೆಚ್ಚು ಉಪಕರಣ ಮಾದರಿಯಾಗಿದೆ. ಈ ಉಪಕರಣಗಳು ಈ ಹಂತದ ೧೬ ನೆಲೆಗಳಿಂದ ಬಂದಿವೆ. ನಿಯಂತ್ರಿತ ಬಲಪ್ರಯೋಗದಿಂದ ಎರಡೂ ಬದಿಗಳಲ್ಲೂ ಹರಿತ ಅಲಗನ್ನು ಮೂಡಿಸಲಾಗಿದೆ. ಇಂತಹ ಉಪಕರಣಗಳಲ್ಲಿ ಅದನ್ನು ಕತ್ತರಿಸಿ ತೆಗೆಯಲಾಗಿದ್ದು ತೆಳು ಉಪಕರಣವನ್ನಾಗಿ ಮಾಡಿದೆ. ಹಲವು ಉಪಕರಣಗಳಲ್ಲಿ ಮೂಲಶಿಲಾ ತೊಗಟೆ ಅಂಶ ಅಲ್ಲಲ್ಲಿ ಇರುವುದು ಕಂಡು ಬರುತ್ತದೆ. ಇವುಗಳು ತ್ರಿಭುಜ ಪಂಚಭುಜ, ಆಯತ, ಅಂಡಾಕಾರ ಹಾಗೂ ಅರ್ಧ ವೃತ್ತದಲ್ಲಿ ಕಂಡು ಬರುತ್ತವೆ. ಕೆಲವು ಉಪಕರಣಗಳ ಹಿಂಬದಿಯಲ್ಲಿ ತಾಡನ ವೇದಿಕೆ ಕಂಡು ಬರುತ್ತಿದ್ದು ಕೆಲವು ಉಪಕರಣಗಳು ನಿಮ್ನವಾಗಿವೆ. ಹಲವು ಉಪಕರಣಗಳ ಎರಡೂ ಪಾರ್ಶ್ವಗಳ ಅಲಗನ್ನು ಉಪಯೋಗಿಸುವಾಗ ಹಿಡಿಕೆಗೆ ಅನುಕೂಲವಾಗವಂತೆ ಸಣ್ಣಸಣ್ಣ ಚಕ್ಕೆಗಳನ್ನು ತೆಗೆದಿರುವುದು ಕಂಡು ಬರುತ್ತದೆ. ಹರಿತ ಅಲಗನ್ನು ಮರು ಉಪ-ಯೋಗಿಸುವಂತೆ ಮಾಡಲು ಕಚ್ಚುಗಳನ್ನು ಹಾಗೂ ಮರುಚಕ್ಕೆ ತೆಗೆದಿರುವುದು ಕಂಡು ಬರುತ್ತದೆ.

ಒಟ್ಟು ಉಪಕರಣಗಳಲ್ಲಿ ೨೬ (ಶೇ. ೭೬.೪೭) ಕ್ವಾರ್ಟ್ಸ್, ೩ (ಶೇ. ೮.೮೨) ಅದಿರುಯುಕ್ತ ಕ್ವಾರ್ಟ್ಸ್ , ೨ (ಶೇ. ೫.೮೮), ಅದಿರುಯುಕ್ತ ಜಾಸ್ಪರ್ ಹಾಗೂ ೧ (ಶೇ. ೨.೯೪) ಫಲ್ಸಪಾರ್ ಶಿಲೆಗಳಲ್ಲಿ ರೂಪಿತವಾಗಿವೆ. ಒಟ್ಟು ಉಪ-ಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೨ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೨

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೮ | ೨೪.೨೪ | ೧೦-೧೫ | ೧೨ | ೩೫.೨೯ | ೧-೫ | ೧೩ | ೩೮.೨೩ |
| ೨೦-೩೦ | ೨೩ | ೬೭.೬೪ | ೧೫-೨೦ | ೧೩ | ೩೮.೨೩ | ೫-೧೦ | ೧೭ | ೫೦ |
| ೩೦-೪೦ | ೩ | ೮.೮೨ | ೨೦-೩೫ | ೯ | ೨೬.೪೭ | ೧೦-೧೫ | ೪ | ೧೧.೭೬ |
| ಒಟ್ಟು | ೩೪ | | | ೩೪ | | | ೩೪ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೧ ಗರಿಷ್ಠ ೩೯ ಮಿ.ಮೀ. ಇದ್ದು ಇವುಗಳಲ್ಲಿ ೨೦ ರಿಂದ ೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೧೪ ಗರಿಷ್ಠ ೩೨ ಮಿ.ಮೀ. ಇದ್ದು ಇವುಗಳಲ್ಲಿ ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದರಂತೆ ದಪ್ಪ ಕನಿಷ್ಠ ೩ ಗರಿಷ್ಠ ೧೨ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವುದನ್ನು ಕಾಣಬಹುದು.

### ೨.೩ ತುದಿ ಹೆರೆಚಕ್ಕೆ

ಪ್ರಾಥಮಿಕ ಚಕ್ಕೆಗಳು ಅಥವಾ ದ್ವಿತೀಯ ಶ್ರೇಣಿ ಚಕ್ಕೆಗಳ ಒಂದು ತುದಿಯನ್ನು ಹರಿತವಾಗಿ ರೂಪಸಿರುವ ಇಂತಹ ತುದಿ ಹೆರೆಚಕ್ಕೆ ಉಪಕರಣಗಳು ಒಟ್ಟು ೩೩ (ಶೇ. ೨೬.೧೯) ಇವೆ. ಸಾಮಾನ್ಯವಾಗಿ ಆಯತ, ಅಂಡಾಕಾರ, ಅರೆ ವೃತ್ತಾಕಾರ ಹಾಗೂ ತ್ರಿಭುಜಾಕಾರಗಳನ್ನು ಹೊಂದಿರುವ ಉಪಕರಣದ ಮೇಲ್ತುದಿ ತೆಳ್ಳನೆಯ ಅಗಲವಾದ ಹರಿತ ತುದಿಯನ್ನು ಹೊಂದಿರುತ್ತವೆ. ಶಿಲಾ ಮಾದರಿಯನ್ನನುಸರಿಸಿ ಹಲವು ಉಪಕರಣಗಳ ಹಿಂಬದಿ ಸಮತಲವಿದ್ದು ಕೆಲವು ಉಪಕರಣಗಳಲ್ಲಿ ಮೂಲಶಿಲಾ ತೊಗಟೆ ಅಂಶ ಅಲ್ಲಲ್ಲಿ ಕಂಡು ಬರುತ್ತದೆ. ಹಲವು ಉಪಕರಣಗಳನ್ನು ಮರುಚಕ್ಕೆ ತೆಗೆದು ಹರಿತ ಅಲಗನ್ನು ಸಾಧಿಸಲಾಗಿದೆ. ಕೆಳತುದಿ ಅಥವಾ ಹಿಂಬದಿಯಿಂದ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗುವಂತೆ ಕೆಲವು ಉಪಕರಣಗಳನ್ನು ರೂಪಿಸಲಾಗಿದೆ.

ಒಟ್ಟು ಉಪಕರಣಗಳಲ್ಲಿ ೨೬ (ಶೇ. ೭೮.೭೮) ಕ್ವಾರ್ಟ್ಸ್, ೬ (ಶೇ. ೧೮.೧೮) ಆದಿರುಯುಕ್ತ ಕ್ವಾರ್ಟ್ಸ್, ಹಾಗೂ ೧ (ಶೇ. ೩.೩) ಜಾಸ್ಪರ್ ಶಿಲೆಗಳಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೩ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೪೩**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೯ | ೨೭.೨೭ | ೧೦-೧೫ | ೧೦ | ೩೦.೩೦ | ೧-೫ | ೯ | ೨೭.೨೭ |
| ೨೦-೨೫ | ೧೪ | ೪೨.೪೨ | ೧೫-೨೦ | ೧೬ | ೪೮.೪೮ | ೫-೧೦ | ೨೪ | ೭೨.೭೨ |
| ೨೫-೩೫ | ೧೦ | ೩೦.೩೦ | ೨೦-೨೫ | ೭ | ೨೧.೨೧ | | | |
| ಒಟ್ಟು | ೩೩ | | | ೩೩ | | | ೩೩ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೫ ಗರಿಷ್ಠ ೩೩ ಮಿ.ಮೀ. ಇದ್ದು ಇವುಗಳಲ್ಲಿ ೨೦ ರಿಂದ ೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೧೦ ಗರಿಷ್ಠ ೩೨ ಮಿ.ಮೀ. ಇದ್ದು ಇವುಗಳಲ್ಲಿ ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದರಂತೆ ದಪ್ಪ ಕನಿಷ್ಠ ೩ ಗರಿಷ್ಠ ೧೦

ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವುದನ್ನು ಕಂಡುಬರುತ್ತದೆ.

**೨.೪ ದುಂಡು ಹೆರೆಚಕ್ಕೆ**

ಹಳೆ ಶಿಲಾಯುಗದ ಉಪಕರಣದ ಪರಂಪರೆಯಂತೆ ಸೂಕ್ಷ್ಮ ಶಿಲಾಯುಗದಲ್ಲಿಯೂ ಈ ಗುಂಪಿನ ಉಪಕರಣಗಳ ಮುಂದುವರಿಕೆಯನ್ನು ಕಾಣಬಹುದು. ವಿವಿಧ ಮಾದರಿಯ ಸೂಕ್ಷ್ಮ ಶಿಲಾ ಉಪಕರಣಗಳನ್ನು ರೂಪಿಸಿದ ನಂತರ ಉಳಿದ ಮೂಲಗಟ್ಟಿ ಅಥವಾ ಚಕ್ಕೆಯ ಅಂಚು, ತುದಿ, ಪಾರ್ಶ್ವ ಹಾಗೂ ಪರಿಧಿಯ ಸುತ್ತಲೂ ಸಣ್ಣಸಣ್ಣ ಚಕ್ಕೆಗಳನ್ನೆಬ್ಬಿಸಿ ಹೆರೆಯುವ ಅಲಗನ್ನು ಮೂಡಿಸಿ ಈ ಉಪಕರಣವನ್ನು ಉಪಯೋಗಿಸಲಾಗುತ್ತದೆ. ಎರಡೂ ಬದಿಗಳಿಂದಲೂ ಚಕ್ಕೆಗಳನ್ನು ತೆಗೆದಿರುವುದರಿಂದ ಉಪಕರಣ ತೆಳುವಾಗಿರುತ್ತದೆ. ಸಾಮಾನ್ಯವಾಗಿ ವೃತ್ತಾಕಾರ ಇಲ್ಲವೆ ಅಂಡಾಕಾರವಾಗಿ ಕಂಡು ಬಂದರೂ ಕೆಲವು ಉದಾಹರಣೆಗಳಲ್ಲಿ ಆಯತ ಮತ್ತು ಬಹು ಭುಜಾಕೃತಿಗಳೂ ಕಂಡು ಬಂದಿವೆ. ಬೆರಳಿಡಿಕೆಗೆ ಅನುಕೂಲವಾಗುವಂತೆ ಕೆಲವು ಚಕ್ಕೆಗಳನ್ನು ತೆಗೆಯಲಾಗಿದೆ.

ಈ ಉಪಗುಂಪಿನ ಒಟ್ಟು ಉಪಕರಣಗಳು ೭ (ಶೇ. ೫.೫೫) ದೊರೆತಿವೆ. ಇವುಗಳಲ್ಲಿ ೬ (ಶೇ. ೮೫.೭೧) ಕ್ವಾರ್ಟ್ಜನಲ್ಲಿ ಮತ್ತು ೧ (ಶೇ. ೧೪.೨೮) ಅದಿರುಯುಕ್ತ ಜಾಸ್ಪರ್‌ನಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೨೦ ಗರಿಷ್ಠ ೩೧ ಮಿ.ಮೀ. ಗಳಾಗಿದ್ದು ಅಗಲ ಕನಿಷ್ಠ ೧೮ ಗರಿಷ್ಠ ೩೨ ಮಿ.ಮೀ. ಗಳಿದ್ದು ದಪ್ಪ ಕನಿಷ್ಠ ೫ ಗರಿಷ್ಠ ೧೦ ಮಿ.ಮೀ. ಗಳಲ್ಲಿವೆ.

**೨.೫ ಒಳಬಾಗಿದ ಅಂಚಿನ ಹೆರೆಚಕ್ಕೆ**

ತ್ಯಾಜ್ಯ ಪ್ರಾಥಮಿಕ ಚಕ್ಕೆ ಅಥವಾ ನೀಳಚಕ್ಕೆಯಂತಹ ಚಕ್ಕೆಯ ಒಂದು ಪಾರ್ಶ್ವವನ್ನು ಕಚ್ಚು ಉಂಟು ಮಾಡಿ ಆಳವಾದ ಚಕ್ಕೆ ತೆಗೆದು ಇಂತಹ ಉಪಕರಣವನ್ನು ರೂಪಿಸಲಾಗಿದೆ. ಸಣ್ಣ ಹಾಗೂ ಮಧ್ಯಮ ಗಾತ್ರದಲ್ಲಿರುವ ಈ ಉಪಕರಣಗಳ ಒಂದು ಅಂಚು ಸರಳ ರೇಖೆಯಲ್ಲಿರದೆ ಒಳಬಾಗಿರುತ್ತದೆ. ಸಾಮಾನ್ಯವಾಗಿ ಹಿಂಬದಿ ಹಾಗೂ ಮುಂಬದಿ ಚಕ್ಕೆಗಳನ್ನು ತೆಗೆದು ಒಳಬಾಗಿದ ಅಂಚನ್ನು ಹರಿತಗೊಳಿಸಲಾಗಿರುತ್ತದೆ. ಅರ್ಧವೃತ್ತ, ಆಯತ, ತ್ರಿಭುಜ, ಅಥವಾ ಅನಿರ್ದಿಷ್ಟ ಆಕಾರಗಳಲ್ಲಿರುವ ಈ ಉಪಕರಣವನ್ನು ಮೂಳೆ ಮತ್ತು ಮರವನ್ನು ಹೆರೆಯಲು ಉಪಯೋಗಿಸಲಾಗುತ್ತದೆ. ಕೆಲವು ಉಪಕರಣಗಳಲ್ಲಿ ಒಳಬಾಗಿದ ಅಂಚಿನ ಸಮಾನಾಂತರವಾಗಿ ಹೊರ ಬಾಗಿರುವುದು ಕಂಡು ಬರುತ್ತದೆ.

ಈ ಉಪಗುಂಪಿನ ಇಂತಹ ಉಪಕರಣಗಳು ಒಟ್ಟು ೯ (ಶೇ. ೭.೧೪) ಇದ್ದು ಇವುಗಳೆಲ್ಲವನ್ನೂ ಕ್ವಾರ್ಟ್ಜ್ ಶಿಲೆಯಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೮ ಗರಿಷ್ಠ ೩೦ ಮಿ.ಮೀ. ಅಗಲ ಕನಿಷ್ಠ ೧೫ ಗರಿಷ್ಠ ೨೨ಮಿ.ಮೀ, ದಪ್ಪ ಕನಿಷ್ಠ ೫ ಗರಿಷ್ಠ ೧೨ ಮಿ.ಮೀ. ಗಳಾಗಿವೆ.

**೨.೬ ಮೂಲಗಟ್ಟಿ ಹೆರೆಚಕ್ಕೆ**

ಪ್ರಾಥಮಿಕ ಚಕ್ಕೆ ತೆಗೆದು ಉಳಿದ ಮೂಲ ಶಿಲಾಗಟ್ಟಿಯ ಅಂಚು ಅಥವಾ ಇವುಗಳ ಪಾರ್ಶ್ವ ಹಾಗೂ ತುದಿ-ಗಳಲ್ಲಿ ಮರುಚಕ್ಕೆ ತೆಗೆದು ಈ ಉಪಕರಣವನ್ನು ರೂಪಿಸಲಾಗಿದೆ. ಇವುಗಳ ಹೆರೆಯುವ ಅಲಗು, ಪಾರ್ಶ್ವ, ತುದಿ ಅಥವಾ ಪರಿಧಿಯ ಸುತ್ತಲೂ ಇರುತ್ತವೆ. ಇವುಗಳು ತ್ರಿಭುಜ, ಆಯತ, ಪಂಚಭುಜ, ವೃತ್ತ ಮತ್ತು ಅನಿರ್ದಿಷ್ಟ ಆಕಾರದಲ್ಲಿದ್ದು ಕೆಲವು ಉಪಕರಣಗಳು ಗಾತ್ರದಲ್ಲಿಯೂ ದೊಡ್ಡವಾಗಿವೆ. ಈ ಗುಂಪಿನ ಒಟ್ಟು ಉಪಕರಣಗಳು ೧೦ (ಶೇ. ೭.೯೩) ದೊರಕಿದ್ದು, ಇವುಗಳಲ್ಲಿ ೯ (ಶೇ. ೯೦) ಕ್ವಾರ್ಟ್ಜ್ ಹಾಗೂ ೧ (ಶೇ. ೧೦) ಜಾಸ್ಪರ್ ಶಿಲೆಯಲ್ಲಿ ರೂಪಿತವಾಗಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೪ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೪

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೩ | ೩೦ | ೧೦-೧೫ | ೨ | ೨೦ | ೫-೧೦ | ೬ | ೬೦ |
| ೨೦-೨೫ | ೫ | ೫೦ | ೧೫-೨೦ | ೫ | ೫೦ | ೧೦-೧೫ | ೪ | ೪೦ |
| ೨೫-೩೦ | ೨ | ೨೦ | ೨೦-೨೫ | ೩ | ೩೦ | | | |
| ಒಟ್ಟು | ೧೦ | | | ೧೦ | | | ೧೦ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೨೦ ಗರಿಷ್ಠ ೩೦ ಮಿಮೀ.ಗಳಾಗಿದ್ದು ಇವು-ಗಳಲ್ಲಿ ೨೦-೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೧೫ ಗರಿಷ್ಠ ೨೫ ಮಿ.ಮೀ. ಗಳಿದ್ದು ಇವುಗಲಲ್ಲಿ ೧೫-೨೦ ಮಿ.ಮೀ. ವ್ಯಾಪ್ತಿಯ ಉಪಕರಣ ಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೬ ಗರಿಷ್ಠ ೧೩ ಮಿಮೀ.ಗಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

**ಮೊನೆ ಉಪಕರಣಗಳ ವಿವರಣೆ (ಮೂರನೆಯ ಹಂತ)**

ಮೊನೆ ಮಾದರಿ ಉಪಕರಣಗಳು ಸೂಕ್ಷ್ಮ ಶಿಲಾಯುಗದ ಉಪಕರಣಗಳ ಸಮೂಹದಲ್ಲಿ ಮೂರನೇ ಸ್ಥಾನ-ದಲ್ಲಿವೆ. ಮೊನೆ ಉಪಕರಣಗಳನ್ನು ಸಾಮಾನ್ಯವಾಗಿ ನೀಳಚಕ್ಕೆ, ಹೆರೆಚಕ್ಕೆ ಹಾಗೂ ತ್ಯಾಜ್ಯವೆನ್ನಬಹುದಾದ ನಿರುಪಯುಕ್ತ ಚಕ್ಕೆ-

ಗಳ ಮೇಲೆ ಮೊನೆ ಉಪಕರಣಗಳನ್ನು ರೂಪಿಸಲಾಗಿದೆ. ನಿಯಮಿತ ಬಲ ಪ್ರಯೋಗದಿಂದ ನೀಳಚಕ್ಕೆಯನ್ನು ರೂಪಿಸುವಾಗ ಮಧ್ಯ ಉಬ್ಬೇಣಿನ ಎರಡೂ ಪಾರ್ಶ್ವಕ್ಕೂ ಹರಿತ ಅಲಗು ಹಾಗೂ ಮೇಲ್ತುದಿಯಲ್ಲಿ ಮೊನೆ ಮೂಡುವಂತೆ ರೂಪಿಸಲಾಗುತ್ತ-ದೆ. ತ್ರಿಭುಜಾಕಾರದ ಹೆರೆಚಕ್ಕೆಗಳಲ್ಲಿಯೂ ಹೆಚ್ಚು ಕಡಿಮೆ ಒಂದು ತುದಿಯನ್ನು ಮೊನೆಯನ್ನಾಗಿ ರೂಪಿಸಲಾಗಿರುತ್ತದೆ. ವಿಶೇಷ ಉಪಯೋಗಗಳಿಗಾಗಿ ಇಂತಹ ಮೊನೆ ಉಪಕರಣಗಳನ್ನು ಕೊಕ್ಕು ಹಾಗೂ ಕೆಲವು ಬಾರಿ ಕೆಳತುದಿಯಲ್ಲಿ ಗೂಟ-ವನ್ನು ರೂಪಿಸಲಾಗುತ್ತದೆ. ಹೆಚ್ಚಿನ ಉಪಕರಣಗಳು, ಜ್ಯಾಮಿತೀಯ ಇಲ್ಲವೇ ಅಜ್ಯಾಮಿತೀಯ ಆಕಾರದಲ್ಲಿದೆ.

ಪ್ರಸ್ತುತ ಪರಿಶೋಧನೆಯಲ್ಲಿ ಮೊನೆ ಮಾದರಿಯ ಉಪಕರಣಗಳು ೨೨ ನೆಲೆಗಳಲ್ಲಿ ಕಂಡು ಬಂದಿದ್ದು ಒಟ್ಟು ೭೬(ಶೇ. ೧೪.೯೬) ಇವೆ. ಈ ಮಾದರಿಯ ಒಟ್ಟು ಉಪಕರಣಗಳಲ್ಲಿ ೭೫(ಶೇ. ೮೫.೫೨) ಕ್ವಾರ್ಟ್ಜ್ ನಲ್ಲಿ ೮ (ಶೇ. ೧೦.೫೨) ಜಾಸ್ಪರ್ ನಲ್ಲಿ ಹಾಗೂ ೩ (ಶೇ. ೩.೯೪) ಅದಿರುಯುಕ್ತ ಕ್ವಾರ್ಟ್ಜ್ ಶಿಲೆಯಲ್ಲಿ ರೂಪಿಸಲಾಗಿದೆ.

ಒಟ್ಟು ಉಪಕರಣಗಳಲ್ಲಿ ಅವು ನಿರ್ವಹಿಸುವ ಕಾರ್ಯ ಅಲಗು, ಅದು ಇರುವ ಭಾಗ ಆಕಾರದನ್ವಯದಂತೆ ಇವುಗಳನ್ನು ೪ ಉಪಗುಂಪುಗಳನ್ನಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ

| | | |
|---|---|---|
| ೧. ಸಾಮಾನ್ಯ ಮೊನೆ | ಒಟ್ಟು ಉಪಕರಣ ೩೪ | ಶೇ. ೪೪.೭೩ |
| ೨. ತ್ರಿಭುಜಾಕಾರದ ಮೊನೆ | ಒಟ್ಟು ಉಪಕರಣ ೨೪ | ಶೇ. ೩೧.೫೭ |
| ೩. ಕೊಕ್ಕುಳ್ಳ ಮೊನೆ | ಒಟ್ಟು ಉಪಕರಣ ೪ | ಶೇ. ೫.೨೬ |
| ೪. ಅರ್ಧ ಚಂದ್ರಾಕೃತಿ ಮೊನೆ | ಒಟ್ಟು ಉಪಕರಣ ೧೪ | ಶೇ. ೧೮.೪೨ |

ಈ ಮೇಲೆ ಹೇಳಿದ ಉಪ ಗುಂಪಿನ ಉಪಕರಣಗಳು ದೊರಕಿರುವ ನೆಲೆ, ಅವುಗಳ ಸಂಖ್ಯೆ ಮತ್ತು ಮೊನೆ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣ ಇವುಗಳನ್ನು ವೃತ್ತ ನಕ್ಷೆ ಸಂಖ್ಯೆ ೭.ಎ ಮತ್ತು ಕೋಷ್ಟಕ ಸಂಖ್ಯೆ ೭.೪೫ ರಲ್ಲಿ ನೀಡಿದೆ.

ವೃತ್ತ ನಕ್ಷೆ ಸಂಖ್ಯೆ ೭.ಎ



**ಕೋಷ್ಟಕ ಸಂಖ್ಯೆ ೭.೪೫**

| ಕ್ರಮ ಸಂಖ್ಯೆ | ನೆಲೆ | ಸಾಮಾನ್ಯ ಮೊನೆ | ತ್ರಿಭುಜಾಕಾರದ ಮೊನೆ | ಕೊಕ್ಕುಳ್ಳ ಮೊನೆ | ಅರ್ಧ ಚಂದ್ರಾಕೃತಿ ಮೊನೆ | ಒಟ್ಟು | ಶೇ |
|---|---|---|---|---|---|---|---|
| ೧ | ಅವರ್ಗಲ್ಲು | | ೧ | | ೨ | ೩ | ೩.೯೪ |
| ೨ | ಅಂಕನಬಾವಿ | | ೭ | | ೩ | ೧೦ | ೧೩.೧೫ |
| ೩ | ಕತ್ತಿರಾಜನಹಳ್ಳಿ | | | | | | |
| ೪ | ಕೈಮರ | ೪ | | | | ೪ | ೫.೨೬ |
| ೫ | ಗುರಮ್ಮನಕಟ್ಟೆ | ೩ | | | | ೩ | ೩.೯೪ |
| ೬ | ಗೊಲ್ಲರಹಟ್ಟಿ | ೧ | | | | ೧ | ೧.೩೧ |
| ೭ | ಚಿನಗ | ೧ | ೨ | | ೨ | ೫ | ೬.೫೭ |
| ೮ | ಚಿನವಾರ | ೧ | ೨ | | | ೩ | ೩.೯೪ |
| ೯ | ಥರಟಿ | ೮ | | | | ೮ | ೧೦.೫೨ |
| ೧೦ | ನಾಗಲಾಪುರ | | | | | | |
| ೧೧ | ನಿಡುಗಲ್ಲು | | ೧ | | ೧ | ೨ | ೨.೬೩ |
| ೧೨ | ಬೆಟ್ಟದಹಳ್ಳಿ | ೨ | ೩ | ೧ | | ೬ | ೭.೮೯ |
| ೧೩ | ಬೆಳ್ಳಿಬಟ್ಟಲಹಳ್ಳಿ | ೨ | | | | ೨ | ೨.೬೩ |
| ೧೪ | ಮಧುಗಿರಿ | ೧ | | ೧ | ೧ | ೩ | ೩.೯೪ |
| ೧೫ | ಮಾರನಾಯಕನಪಾಳ್ಯ | ೧ | | ೧ | | ೨ | ೨.೬೩ |
| ೧೬ | ಮಿಡಿಗೇಶಿ | ೧ | | | | ೧ | ೧.೩೧ |
| ೧೭ | ರಜತಾದ್ರಿಪುರ | | | | | | |
| ೧೮ | ಸಿದ್ಧರಬೆಟ್ಟ | ೧ | | ೧ | | ೨ | ೨.೬೩ |
| ೧೯ | ಸಿದ್ಧಗಂಗಾಬೆಟ್ಟ | ೧ | ೩ | | | ೪ | ೫.೨೬ |
| ೨೦ | ಸಿದ್ದಾಪುರ | | ೨ | | ೨ | ೪ | ೫.೨೬ |
| ೨೧ | ಸೀಗೆಪಾಳ್ಯ | ೧ | ೧ | | | ೨ | ೨.೬೩ |
| ೨೨ | ಸಂಪಿಗೆ | ೧ | | | ೧ | ೨ | ೨.೬೩ |
| ೨೩ | ಹಿರೇಗುಂಡಗಲ್ಲು | ೩ | ೧ | | | ೪ | ೫.೨೬ |
| ೨೪ | ಹೂವಿನಕಟ್ಟೆ | ೨ | | | ೧ | ೩ | ೩.೯೪ |
| ೨೫ | ಹೊಸಹಳ್ಳಿ | | | | ೧ | ೨ | ೨.೬೩ |
| | ಒಟ್ಟು | ೩೪ | ೨೪ | ೪ | ೧೪ | ೭೬ | |
| | ಶೇ | ೪೪.೭೩ | ೩೧.೫೭ | ೫.೨೬ | ೧೮.೪೨ | | |

ಕೋಷ್ಟಕದಲ್ಲಿ ತಿಳಿದುಬರುವಂತೆ ಮೊನೆ ಉಪಕರಣಗಳ ಸಮೂಹದಲ್ಲಿ ಸಾಮಾನ್ಯ ಮೊನೆ ಉಪಕರಣಗಳು ಹೆಚ್ಚು ಸಂಖ್ಯೆ ಯಲ್ಲಿಯೂ ಅದೇ ರೀತಿ ಕೊಕ್ಕುಳ್ಳ ಮೊನೆ ಉಪಕರಣವು ಅತಿ ಕಡಿಮೆ ಸಂಖ್ಯೆಯಲ್ಲಿಯೂ ಇರುವುದು ಕಂಡು ಬರುತ್ತದೆ.

ಪ್ರತಿ ಉಪಗುಂಪಿನ ಉಪಕರಣಗಳ ವಿಶ್ಲೇಷಣೆಯನ್ನು ಪ್ರತ್ಯೇಕವಾಗಿ ವಿವರಿಸಿದೆ.

## ೩. ಮೊನೆ ಮಾದರಿ

### ೩.೧ ಸಾಮಾನ್ಯ ಮೊನೆ

ಮೊನೆ ಉಪಕರಣಗಳನ್ನು ನೀಳಚಕ್ಕೆ, ಹೆರೆಚಕ್ಕೆ ಮತ್ತು ತ್ಯಾಜ್ಯ ಚಕ್ಕೆಗಳ ಮೇಲೆ ರೂಪಿಸಲಾಗಿದೆ. ಇವುಗಳು ತ್ರಿಭುಜ, ಪಂಚಭುಜ, ಹಾಗೂ ಅಂಡಾಕೃತಿಗಳಲ್ಲಿವೆ. ಹೆಚ್ಚಿನ ಉಪಕರಣಗಳು ನೀಳಚಕ್ಕೆಯನ್ನು ಹೋಲುತ್ತವೆ. ನೀಳಚಕ್ಕೆಯ ಪಾರ್ಶ್ವ ಮತ್ತು ಬದಿಗಳಲ್ಲಿ ಚಕ್ಕೆಗಳನ್ನು ತೆಗೆದು ಮೊನೆ ಮೂಡಿಸಿದೆ. ಮುಂಬದಿಯಲ್ಲಿ ಮಧ್ಯ ಉಬ್ಬೇಣು ಇದ್ದು ಕೆಲವು ಉಪಕರಣ ಗಳ ಉಬ್ಬೇಣನ್ನು ಕತ್ತರಿಸಿ ತೆಗೆದು ತೆಳುವಾಗಿಸಿದೆ. ತ್ರಿಭುಜಾಕಾರದ ಉಪಕರಣಗಳ ಒಂದು ಅಥವಾ ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಸಾಮಾನ್ಯವಾಗಿ ಉಬ್ಬೇಣಿನ ನೇರಕ್ಕೆ ಮೇಲ್ತುದಿಯಲ್ಲಿ ಮೊನೆ ಮೂಡಿಸಲಾಗಿದೆ. ಕೆಲವು ಉಪಕರಣಗಳಲ್ಲಿ ಮೊನೆಯು ಎಡ ಅಥವಾ ಬಲ ಪಾರ್ಶ್ವಕ್ಕೆ ಹೊಂದಿಕೊಂಡಂತೆ ಇದೆ.

ಪ್ರಸ್ತುತ ದೊರೆತಿರುವ ಒಟ್ಟು ಉಪಕರಣ ೩೪(ಶೇ. ೪೪.೭೩)ಇದ್ದು, ಕ್ವಾರ್ಟ್ಸ್ ಶಿಲೆ ಯಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೬ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೬

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೧೦ | ೨೯.೪೧ | ೫-೧೦ | ೮ | ೨೩.೫೩ | ೧-೫ | ೮ | ೨೩.೫೩ |
| ೧೫-೨೦ | ೧೫ | ೪೪.೧೧ | ೧೦-೧೫ | ೧೬ | ೪೭.೦೫ | ೫-೧೦ | ೨೧ | ೬೧.೭೬ |
| ೨೦-೩೦ | ೯ | ೨೬.೪೭ | ೧೫-೨೫ | ೧೦ | ೨೯.೪೧ | ೧೦-೧೫ | ೫ | ೧೪.೭೦ |
| ಒಟ್ಟು | ೩೪ | | | ೩೪ | | | ೩೪ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೧ ಗರಿಷ್ಠ ೨೮ ಮಿ.ಮೀ. ಇದ್ದು ಇವುಗಳಲ್ಲಿ ೧೫ ರಿಂದ ೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೯ ಗರಿಷ್ಠ ೨೩ ಮಿ.ಮೀ. ಇದ್ದು ಇವುಗಳಲ್ಲಿ ೧೦ ರಿಂದ ೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದರಂತೆ ದಪ್ಪ ಕನಿಷ್ಠ ೨ ಗರಿಷ್ಠ ೧೧ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೫ ರಿಂದ ೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳ ಹೆಚ್ಚಳವಿರುವುದನ್ನು ಕಾಣಬಹುದು.

### ೩.೨ ತ್ರಿಭುಜಾಕಾರದ ಮೊನೆ

ತ್ರಿಭುಜಾಕಾರದ ಮೊನೆ ಉಪಕರಣಗಳನ್ನು ಕಿರು ಹಾಗೂ ಮಧ್ಯಮ ಗಾತ್ರದ ಚಕ್ಕೆಗಳ ಮೇಲೆ ರೂಪಿಸಲಾಗಿದೆ. ನೀಳಚಕ್ಕೆಯ ಎರಡೂ ಪಾರ್ಶ್ವಗಳಿಂದ ಲಘು ಕೋನದಲ್ಲಿ ಕತ್ತರಿಸಿ ಈ ಉಪಕರಣವನ್ನು ರೂಪಿಸಲಾಗಿದೆ. ಒಟ್ಟಾರೆ

ಉಪಕರಣಗಳು ತ್ರಿಭುಜಾಕಾರದಲ್ಲಿದ್ದರೂ ಇವು ವಜ್ರಾಕೃತಿ ಮತ್ತು ಪಂಚ ಭುಜಾಕೃತಿಗಳಲ್ಲಿಯೂ ಇವೆ. ಕೆಲವು ಉಪಕರಣಗಳಲ್ಲಿ ಮುಂಬದಿಯಿಂದ ಚಕ್ಕೆ ತೆಗೆದು ಮೊನೆ ಮೂಡಿಸಲಾಗಿದೆ. ಹಿಂಬದಿಯು ಹೆಚ್ಚಿನ ಉಪಕರಣಗಳಲ್ಲಿ ಸಮವಿದ್ದು ಮುಂಬದಿಯ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಕೆಲವು ಉಪಕರಣಗಳಲ್ಲಿ ತ್ರಿಭುಜದ ಒಂದು ಅಥವಾ ಎರಡು ಭುಜಗಳೂ ಹರಿತ ಅಲಗನ್ನು ಹೊಂದಿವೆ.

ತ್ರಿಭುಜಾಕಾರದ ಒಟ್ಟು ಉಪಕರಣಗಳು ೨೪ (ಶೇ. ೩೧.೫೭) ಇದ್ದ ಅವುಗಳಲ್ಲಿ ೧೩ (ಶೇ. ೫೪.೧೬) ಕ್ವಾರ್ಟ್ಸನಲ್ಲಿ, ೮ (ಶೇ. ೩೩.೩೩) ಜಾಸ್ಪರ್‌ನಲ್ಲಿ ೩ (ಶೇ. ೧೨.೫) ಅದಿರುಯುಕ್ತ ಕ್ವಾರ್ಟ್ಸ ಶಿಲೆಯಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೭ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೪೭**

| ಉದ್ದ ಮಿ.ಮೀ. | ಉಪಕರಣಗಳು | ಶೇ | ಅಗಲ ಮಿ.ಮೀ | ಉಪಕರಣಗಳು | ಶೇ | ದಪ್ಪ ಮಿ.ಮೀ | ಉಪಕರಣಗಳು | ಶೇ |
|---|---|---|---|---|---|---|---|---|
| ೧೦-೧೫ | ೧೦ | ೪೧.೬೬ | ೫-೧೦ | ೭ | ೨೯.೧೬ | ೧-೫ | ೧ | ೪.೧೬ |
| ೧೫-೨೦ | ೧೧ | ೪೫.೮೩ | ೧೦-೧೫ | ೧೧ | ೪೫.೮೩ | ೫-೧೦ | ೯ | ೩೭.೫ |
| ೨೦-೨೫ | ೩ | ೧೨.೫೦ | ೧೫-೨೫ | ೬ | ೨೫.೦೦ | ೧೦-೧೫ | ೧೪ | ೫೮.೩೩ |
| ಒಟ್ಟು | ೨೪ | | | ೨೪ | | | ೨೪ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೫ ಗರಿಷ್ಠ ೨೮ ಮಿಮೀ.ಗಳಾಗಿದ್ದು ಇವುಗಳಲ್ಲಿ ೧೦-೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ಅಗಲ ಕನಿಷ್ಠ ೭ ಗರಿಷ್ಠ ೨೧ ಮಿ.ಮೀ. ಗಳಿದ್ದು ಇವುಗಳಲ್ಲಿ ೧೦-೧೫ ಮಿ.ಮೀ. ವ್ಯಾಪ್ತಿಯ ಉಪಕರಣ ಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೨ ಗರಿಷ್ಠ ೧೨ ಮಿಮೀ.ಗಳಿದ್ದು ಇವುಗಳಲ್ಲಿ ೧೦-೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

### ೩.೩ ಕೊಕ್ಕುಳ್ಳ ಮೊನೆ

ಕೊಕ್ಕಿನ ಮೊನೆ ಉಪಕರಣಗಳನ್ನು ನೀಳಚಕ್ಕೆ ಗುಂಪಿನ ಉಪಕರಣಗಳ ಮೇಲೆ ಹಾಗೂ ಹೆರೆಚಕ್ಕೆಗಳ ಮೇಲೆ ಈ ಉಪಕರಣವನ್ನು ರೂಪಿಸಲಾಗಿದೆ. ಉದ್ದೇಶಿತ ಮೊನೆಯನ್ನು ವಿವಿಧ ರೀತಿಯ ತಂತ್ರದಿಂದ ಮಾಡಲಾಗಿದೆ. ಕೊಕ್ಕುಳ್ಳ ಉಪಕರಣದ ಮೇಲ್ತುದಿಯ ಮಧ್ಯದಲ್ಲಿರದೆ ಒಂದು ಪಾರ್ಶ್ವಕ್ಕೆ ಹೊಂದಿಕೊಂಡಂತೆ ಮುಂಚಾಚಿದೆ. ಕೆಲವೊಮ್ಮೆ ಮಧ್ಯದಲ್ಲಿಯೂ ರೂಪಿಸಲಾಗಿದೆ. ಕೊಕ್ಕಿನ ಮೊನೆ ಹರಿತಗೊಳಿಸಲು ಎರಡೂ ಪಾರ್ಶ್ವಗಳಿಂದಲೂ ಮರುಚಕ್ಕೆ ತೆಗೆದಿರುವುದು ಕಂಡು ಬರುತ್ತದೆ. ಸಾಮಾನ್ಯವಾಗಿ ಹೆಚ್ಚಿನ ಉಪಕರಣಗಳ ಹಿಂಬದಿ ಸಮತಲವಿದ್ದು ತಾಡನ ವೇದಿಕೆಯನ್ನು ಹೊಂದಿದೆ. ಮುಂಬದಿಯಲ್ಲಿ ಉಬ್ಬೇಣು ಪ್ರಧಾನವಾಗಿ ಕಂಡು ಬರುತ್ತದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಹಂತದಲ್ಲಿ ಇಂತಹ ೪ (ಶೇ. ೫.೨೬) ಉಪಕರಣಗಳು ದೊರಕಿದ್ದು ಅವುಗಳೆಲ್ಲವನ್ನೂ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೭ ಗರಿಷ್ಠ ೨೮ ಹಾಗೂ ಅಗಲ ಕನಿಷ್ಠ ೯ ಗರಿಷ್ಠ ೨೦ ಮತ್ತು ದಪ್ಪ ಕನಿಷ್ಠ ೪ ಗರಿಷ್ಠ ೧೨ ಮಿ.ಮೀ. ಗಳಾಗಿವೆ.

## ೩.೪ ಅರ್ಧ ಚಂದ್ರಾಕೃತಿ ಮೊನೆ

ಅರ್ಧ ಚಂದ್ರಾಕೃತಿ ಹಾಗೂ ದಬ್ಬಳ ಇವುಗಳ ನಡುವಣ ವಿವಿಧ ಹಂತವನ್ನು ಪ್ರದರ್ಶಿಸುವ ಒಟ್ಟು ೧೪ (ಶೇ. ೧೮.೪೨)ಉಪಕರಣಗಳು ದೊರೆತಿವೆ. ಹೆಚ್ಚು ಕಡಿಮೆ ಅರ್ಧ ಚಂದ್ರಾಕೃತಿಯಂತೆ ರೂಪಿಸಿರುವ ಈ ಉಪಕರಣದ ಒಂದು ತುದಿಯಲ್ಲಿ ಅಥವಾ ಎರಡೂ ಬದಿಯಲ್ಲಿ ಕಚ್ಚನ್ನುಂಟು ಮಾಡಿ ಮರುಚಕ್ಕೆ ತೆಗೆದು ಮೊನಚು ತುದಿಯನ್ನು ಮೂಡಿ-ಸಲಾಗಿದೆ. ಅಲಗು ಎರಡೂ ಪಾರ್ಶ್ವಗಳಲ್ಲೂ ಇದ್ದು ಹೆಚ್ಚು ಕಡಿಮೆ ನೇರವಾಗಿ ಸಾಗಿದೆ. ಮೇಲ್ತುದಿಯ ಮೊನೆ ಹೆಚ್ಚು ಉಪ-ಯುಕ್ತವಾದಂತೆ ಕಂಡು ಬರುತ್ತದೆ.

ಒಟ್ಟು ಉಪಕರಣವನ್ನು ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಇವುಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೮ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೮

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೫-೧೦ | ೪ | ೨೮.೫೭ | ೫-೧೦ | ೩ | ೨೧.೪೨ | ೧-೫ | ೬ | ೪೨.೮೫ |
| ೧೦-೨೦ | ೮ | ೫೭.೧೪ | ೧೦-೧೫ | ೮ | ೫೭.೧೪ | ೫-೧೦ | ೮ | ೫೭.೧೪ |
| ೨೦-೩೦ | ೨ | ೧೪.೨೮ | ೧೫-೨೦ | ೩ | ೨೧.೪೨ | | | |
| ಒಟ್ಟು | ೧೪ | | | ೧೪ | | | ೧೪ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೭ ಗರಿಷ್ಠ ೨೭ ಮಿಮೀ.ಗಳಾಗಿದ್ದು ಇವುಗ-ಳಲ್ಲಿ ೧೦-೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೭ ಗರಿಷ್ಠ ೧೭ ಮಿ.ಮೀ. ಗಳಿದ್ದು ಇವುಗಳಲ್ಲಿ ೧೦-೧೫ ಮಿ.ಮೀ. ವ್ಯಾಪ್ತಿಯ ಉಪಕರಣ ಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೨ ಗರಿಷ್ಠ ೧೦ ಮಿಮೀ.ಗ-ಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

## ೪. ಬಾಣದ ಮೊನೆ

ಬಾಣದ ತುದಿಗೆ ಅಥವಾ ಈಟಿಗೆ ಜೋಡಿಸುವಂತಹ ಬಾಣದ ಮೊನೆ ಉಪಕರಣವನ್ನು ಸಾಮಾನ್ಯವಾಗಿ ತ್ರಿಭುಜಾಕಾರ ಮತ್ತು ಎಲೆಯಾಕಾರದ ಮೊನೆಗಳ ಲಕ್ಷಣವನ್ನು ಹೊಂದಿದೆ.

ಈ ಉಪಕರಣಗಳಲ್ಲಿ ಕೆಳತುದಿಯಲ್ಲಿ ಒಂದು ಪಾರ್ಶ್ವದಲ್ಲಿ ಕಚ್ಚನ್ನುಂಟು ಮಾಡಿ ಹಿಡಿಕೆಗೆ ಕೂಡಿಸಲು ಏರ್ಪಾಟು ಮಾಡಲಾಗಿದೆ. ಎರಡನೆಯ ವಿಧದ ಉಪಕರಣಗಳ ಮುಂಬದಿ ಮಧ್ಯ ಉಬ್ಬೇಣಿನ ನೇರಕ್ಕೆ ಕೆಳತುದಿಯಲ್ಲಿ ಕಚ್ಚನ್ನುಂಟು ಮಾಡಿ ಗೂಟದಂತಹ ಮಂಚಾಚನ್ನು ಮೂಡಿಸಿದೆ. ಕೆಲವು ಬಾರಿ ಎರಡೂ ಪಾರ್ಶ್ವಗಳಲ್ಲೂ ಚಕ್ಕೆ ತೆಗೆದು ಅಥವಾ ಒಂದು ಪಾರ್ಶ್ವ ಮಾತ್ರ ಚಕ್ಕೆ ತೆಗೆದು ಗೂಟವನ್ನು ರೂಪಿಸಲಾಗಿದೆ. ಮೂರನೇ ವಿಧದ ಉಪಕರಣಗಳು ತ್ರಾಪಿಜ್ಯ-ದಲ್ಲಿದ್ದು ಇವುಗಳ ನೀಳಚಕ್ಕೆ ಕತ್ತರಿಸಿ ರೂಪಸಲಾಗಿದೆ. ಮೇಲ್ತುದಿ ಹರಿತ ಅಲಗನ್ನು ಹೊಂದಿದ್ದರೆ ಕೆಳ ತುದಿಯ ಮಧ್ಯದಲ್ಲಿ ಕಚ್ಚನ್ನುಂಟು ಮಾಡಿ ಹಿಡಿಕೆಗೆ ಸಿಕ್ಕಿಸುವಂತೆ ಮಾಡಲಾಗಿರುತ್ತದೆ. ನಾಲ್ಕನೇ ವಿಧದ ಉಪಕರಣಗಳು ಮುಖ್ಯವಾಗಿ ತ್ರಿಭುಜಾ-ಕಾರದಲ್ಲಿದ್ದು ಕೆಳತುದಿಯ ಭುಜದಲ್ಲಿ ಒಳಬಾಗಿದ ಕಚ್ಚು ಉಂಟಾಗುವಂತೆ ನಿಯಂತ್ರಿತ ಬಲ ಪ್ರಯೋಗದಿಂದ ಚಕ್ಕೆ ತೆಗೆದು ರೂಪಿಸಿದಂತೆ ಇದೆ.

ಪ್ರಸ್ತುತ ಅಧ್ಯಯನದಲ್ಲಿ ಈ ಗುಂಪಿನ ೧೯ (ಶೇ. ೩.೭೪) ಇದ್ದು ಇವುಗಳೆಲ್ಲವನ್ನೂ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೪೯ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೪೯

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೨೦ | ೭ | ೩೬.೮೪ | ೧೦-೧೫ | ೭ | ೩೬.೮೪ | ೧-೫ | ೪ | ೨೧.೦೫ |
| ೨೦-೨೫ | ೮ | ೪೨.೧೦ | ೧೫-೨೦ | ೯ | ೪೭.೩೬ | ೫-೧೦ | ೧೫ | ೭೮.೯೪ |
| ೨೫-೩೦ | ೪ | ೨೧.೦೫ | ೨೦-೨೫ | ೩ | ೧೫.೭೮ | | | |
| ಒಟ್ಟು | ೧೯ | | | ೧೯ | | | ೧೯ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೨ ಗರಿಷ್ಠ ೨೭ ಮಿಮೀ.ಗಳಾಗಿದ್ದು ಇವು-ಗಳಲ್ಲಿ ೨೦-೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೧೦ ಗರಿಷ್ಠ ೨೫ ಮಿ.ಮೀ. ಗಳಿದ್ದು ಇವುಗಲಲ್ಲಿ ೧೫-೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೯ ಮಿಮೀ.ಗಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರು-ತ್ತದೆ.

೫. ಕೊರೆಗ

ನೀಳಚಕ್ಕೆ, ಹೆರೆಚಕ್ಕೆ ಹಾಗೂ ಅನುಪಯುಕ್ತವೆನಿಸವ ಸಣ್ಣ ಹಾಗೂ ಮಧ್ಯಮ ಗಾತ್ರದ ಚಕ್ಕೆಗಳ ಮೇಲೆ ಈ ಉಪಕರಣಗಳನ್ನು ರೂಪಿಸಿದೆ. ಈ ಉಪಕರಣಗಳು ಯಾವುದೇ ನಿರ್ದಿಷ್ಟ ಆಕಾರವನ್ನು ಹೊಂದಿಲ್ಲ. ಉಪಕರಣದ ಬಾಹ್ಯ-ರೂಪ ಹಾಗೂ ಬಳಸಿರುವ ತಂತ್ರಗಳ ಆಧಾರದ ಮೇಲೆ ಇವಗಳನ್ನು ವಿವಿಧ ಗುಂಪುಗಳಾಗಿ ವಿಭಾಗಿಸಬಹುದು. ಉದಾಹ-ರಣೆಗೆ ಹೆರೆಚಕ್ಕೆ ಮತ್ತು ನಿರುಪಯುಕ್ತ ಚಕ್ಕೆಗಳ ಮೇಲೆ ರೂಪಿಸಲಾಗಿರುವ ಕೊರೆಗಗಳು. ಈ ಬಗೆಯ ಕೊರೆಗಗಳನ್ನು ನಿರ್ದಿ-ಷ್ಟವಾದ ವಿಶೇಷ ಕಾರ್ಯಗಳಿಗಾಗಿ ಬಳಸಬಹುದಾಗಿದೆ.

ದೊರೆತಿರುವ ಒಟ್ಟು ೧೫ (ಶೇ. ೨.೯೫) ಉಪಕರಣಗಳಲ್ಲಿ ದಪ್ಪನೆಯ ನಿರುಪಯುಕ್ತ ಚಕ್ಕೆ ಮತ್ತು ಹೆರೆಚ-ಕ್ಕೆಯಂತಹ ಉಪಕರಣಗಳ ಮೇಲೆ ರೂಪಿತವಾದ ೮ ಉಪಕರಣಗಳಿವೆ. ಹೆಚ್ಚಿನ ಉಪಕರಣಗಳು ಸಮತಲ ಹಿಂಬದಿಯನ್ನು ಹೊಂದಿವೆ. ಕೆಳತುದಿ ಅಥವಾ ಉಪಕರಣದ ಮಧ್ಯದಲ್ಲಿ ದಪ್ಪಗಿದ್ದು ಕ್ರಮೇಣ ತೆಳ್ಳಗಾಗುವ ಮೇಲ್ತುದಿಯಲ್ಲಿ ಕೊರೆಯುವ ಮೊನೆಯನ್ನು ರೂಪಿಸಿದೆ. ಹೆಚ್ಚಿನ ಉಪಕರಣಗಳಲ್ಲಿ ಮೇಲ್ತುದಿಯ ಮಧ್ಯ ಭಾಗದಲ್ಲಿ ಮೊನೆಯನ್ನು ಸಾಧಿಸಿದ್ದರೆ ಇನ್ನೂ ಕೆಲವುದರಲ್ಲಿ ಒಂದು ಪಾರ್ಶ್ವಕ್ಕೆ ವಾಲಿದೆ. ಕೆಲವದರಲ್ಲಿ ನೀಳವಾಗಿದ್ದು ಮೊನೆಯಲ್ಲಿ ಸ್ವಲ್ಪ ಅಗಲವಾದ ಹರಿತ ಅಲಗಿದೆ. ಹೆರೆಚಕ್ಕೆಯ ಮೇಲೆ ರೂಪಿತವಾಗಿರುವ ಕೊರೆಗಗಳು ಪಾರ್ಶ್ವ, ತುದಿ ಮತ್ತು ಒಳಬಾಗುಳ್ಳ ಹೆರೆಚಕ್ಕೆಗಳಾಗಿಯೂ ಉಪ-ಯೋಗಿಸಬಹುದಾಗಿದೆ.

ನೀಳಚಕ್ಕೆಯಲ್ಲಿ ರೂಪಿತವಾಗಿರುವ ಕೊರೆಗಗಳು ಒಟ್ಟು ೭ ಇದ್ದು ಎಲ್ಲವೂ ಕ್ವಾರ್ಟ್ಸ್ ಶಿಲೆಯಲ್ಲಿವೆ. ನೀಳಚ-ಕ್ಕೆಯ ವಿವಿಧ ಗುಂಪಿನ ಉಪಕರಣಗಳ ಮೇಲೆ ಕಚ್ಚು ತೆಗೆದು ಅಥವಾ ಆಳವಾದ ಚಕ್ಕೆಗಳನ್ನೆಬ್ಬಿಸಿ ಇಲ್ಲವೇ ಒಂದು ಪಾರ್ಶ್ವ-ದಿಂದ ವಿಷಮ ಕೋನದಲ್ಲಿ ಕತ್ತರಿಸಿ ಕಾರ್ಯ ನಿರ್ವಹಿಸುವ ಮೊನೆಯನ್ನು ಸಾಧಿಸಿದೆ. ಮುಂಬದಿಯಲ್ಲಿ ಉಬ್ಬೇಣು ಎದ್ದು ಕಾಣುತ್ತದೆ. ಉಪಯೋಗಿಸಿರುವ ತಂತ್ರವನ್ನನುಸರಿಸಿ ಕೊರೆಯುವ ಮೊನೆ ಹೊಂದಿಕೊಂಡಂತೆ ಮೂಡಿಸಿದೆ. ಚೂಪಾದ ಕೊರೆಯುವ ಮೊನೆಯು ಒಂದು ಅಥವಾ ಎರಡೂ ಪಾರ್ಶ್ವಗಳಲ್ಲಿ ಕಚ್ಚನ್ನುಂಟು ಮಾಡಿ ಉಪಕರಣದ ಉಪಯುಕ್ತತೆಯನ್ನು ಹೆಚ್ಚಿಸಿದೆ.

ಒಟ್ಟು ಉಪಕರಣಗಳಲ್ಲಿ ೩ (ಶೇ. ೨೦) ಜಾಸ್ಪರ್, ೧ (ಶೇ. ೬.೬೬) ಅದಿರುಯುಕ್ತ ಜಾಸ್ಪರ್ ಹಾಗೂ ೧೧ (ಶೇ. ೭೩.೩೩) ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೫೦ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೫೦**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೧ | ೬.೬ | ೧೦ ೧೫ | ೭ | ೪೬.೬೬ | ೧-೫ | ೬ | ೪೦.೦೦ |
| ೧೫-೨೦ | ೪ | ೨೬.೬೬ | ೧೫-೨೦ | ೨ | ೧೩.೩೩ | ೫-೧೦ | ೫ | ೩೩.೩೩ |
| ೨೦-೩೦ | ೧೦ | ೬೬.೬೬ | ೨೦-೩೦ | ೬ | ೪೦.೦೦ | ೧೦-೧೫ | ೪ | ೨೬.೬೬ |
| ಒಟ್ಟು | ೧೫ | | | ೧೫ | | | ೧೫ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೪ ಗರಿಷ್ಠ ೩೦ ಮಿಮೀ.ಗಳಾಗಿದ್ದು ಇವು-ಗಳಲ್ಲಿ ೨೦-೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೧೨ ಗರಿಷ್ಠ ೩೦ ಮಿ.ಮೀ. ಗಳಿದ್ದು ಇವುಗಳಲ್ಲಿ ೧೦-೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೧೫ ಮಿಮೀ. ಗಳಿದ್ದು ಇವುಗಳಲ್ಲಿ ೧-೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

**೬. ಕೊರೆಯುಳಿ**

ಅಂತ್ಯ ಹಳೆ ಶಿಲಾಯುಗದ ಉಪಕರಣಗಳ ಗುಂಪಿನಲ್ಲಿ ಪ್ರಾಮುಖ್ಯವಿರುವಂತೆಯೇ ಸೂಕ್ಷ್ಮ ಶಿಲಾಯುಗದ ಉಪಕರಣ ವೈವಿಧ್ಯದಲ್ಲಿ ಒಂದು ವಿಶಿಷ್ಟ ಉಪಕರಣ ಕೊರೆಯುಳಿ. ನೀಳಚಕ್ಕೆ ಗುಂಪಿನ ಒಂದು ಮಾದರಿಯಾಗಿದೆ. ಸಾಧಾ-ರಣವಾಗಿ ಉಪಕರಣವನ್ನು ನೀಳಚಕ್ಕೆಯ ಮೇಲೆ ರೂಪಿಸಲಾಗುವುದಾದರೂ ಕೆಲವೊಮ್ಮೆ ಹೆರೆಚಕ್ಕೆ, ಮೊನೆ ಮುಂತಾದ ಉಪಕರಣ ಮಾದರಿಗಳ ಮೇಲೂ ರೂಪಿಸಲಾಗಿದೆ.

ಪ್ರಸ್ತುತ ಪರಿಶೋಧನೆಯಲ್ಲಿ ಈ ಹಂತದ ೬ ನೆಲೆಗಳಲ್ಲಿ ಮಾತ್ರ ೧೧ (ಶೇ. ೨.೧೬) ಕೊರೆಯುಳಿ ಉಪಕ-ರಣಗಳು ದೊರೆತಿವೆ. ಈ ಉಪಕರಣಗಳನ್ನು ೨ ಜಾಸ್ಪರ್, ೨ ಅದಿರುಯುಕ್ತ ಜಾಸ್ಪರ್ ೧ ಅದಿರುಯುಕ್ತ ಕ್ವಾರ್ಟ್ಸ್ ಮತ್ತು ೬ ಕ್ವಾರ್ಟ್ಸ್ ಶಿಲೆಯಲ್ಲಿ ರೂಪಿಸಲಾಗಿದೆ. ಒಟ್ಟು ಉಪಕರಣಗಳಲ್ಲಿ ೨ ಮೂಲ ಶಿಲಾ ಗಟ್ಟಿ ಉಳಿದ ೯ ನ್ನು ಚಕ್ಕೆಗಳ ಮೇಲೆ ರೂಪಸಲಾಗಿದೆ. ಇವುಗಳ ಹಿಂಬದಿ ಅಸಮತಲವನ್ನು ಹೊಂದಿವೆ. ಮೂರು ಉಪಕರಣಗಳಲ್ಲಿ ಒಂದೇ ತುದಿಯಲ್ಲಿ ಕೊರೆ-ಯುಳಿಯ ಅಲಗನ್ನು ರೂಪಿಸಿದ್ದರೆ ಉಳಿದವುಗಳಿಗೆ ಎರಡು, ತುದಿ ಹಾಗೂ ಪಾರ್ಶ್ವಗಳಲ್ಲಿ ಅಲಗನ್ನು ಮೂಡಿಸಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೫೧ನಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೫೧**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೫-೨೦ | ೨ | ೧೮.೧೮ | ೧೦-೧೫ | ೫ | ೪೫.೪೫ | ೫-೧೦ | ೩ | ೨೭.೨೭ |
| ೨೦-೨೫ | ೪ | ೩೬.೩೬ | ೧೫-೨೦ | ೪ | ೩೬.೩೬ | ೧೦-೧೫ | ೮ | ೭೨.೭೨ |
| ೨೫-೩೦ | ೫ | ೪೫.೪೫ | ೨೦-೨೫ | ೨ | ೧೮.೧೮ | | | |
| ಒಟ್ಟು | ೧೧ | | | ೧೧ | | | ೧೧ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೫ ಗರಿಷ್ಠ ೩೦ ಮಿಮೀ.ಗಳಾಗಿದ್ದು ಇವುಗಳಲ್ಲಿ ೨೫-೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೬ ಗರಿಷ್ಠ ೨೪ ಮಿ.ಮೀ. ಗಳಿದ್ದು ಇವುಗಳಲ್ಲಿ ೧೦-೧೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೫ ಗರಿಷ್ಠ ೧೫ ಮಿ.ಮೀ.ಗಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚಳವಿರುವುದು ತಿಳಿಯುತ್ತದೆ.

**೭. ಅರ್ಧ ಚಂದ್ರಾಕೃತಿ**

ಅರ್ಧ ಚಂದ್ರಾಕೃತಿ ಉಪಕರಣವು ಸೂಕ್ಷ್ಮ ಶಿಲಾಯುಗದ ವಿಶೇಷ ಉಪಕರಣವಾಗಿದೆ. ಇವುಗಳ ಸಂಖ್ಯೆಯೂ ಹೆಚ್ಚಿದ್ದು ಇವುಗಳನ್ನು ಹೆರೆಚಕ್ಕೆ ಮತ್ತು ನೀಳಚಕ್ಕೆ ರೂಪದಲ್ಲಿಯೂ ಉಪಯೋಗವಾದಂತೆ ತಿಳಿಯುತ್ತದೆ.

ಪ್ರಸ್ತುತ ಒಟ್ಟು ೧೧ (ಶೇ. ೨.೧೬)ಉಪಕರಣ ದೊರಕಿದ್ದು ಇವುಗಳು ಉಪಕರಣದ ತಯಾರಿಕೆಯ ಬೆಳವಣಿಗೆಯನ್ನು ತಿಳಿಸುತ್ತದೆ. ರೋಮನ್ D ಅಕ್ಷರ ದಿಂದ ಬಿದಿಗೆ ಚಂದ್ರಾಕೃತಿವರೆಗೆ ವಿವಿಧ ಆಕಾರದಲ್ಲಿವೆ. ವಿವಿಧ ಆಕಾರದಲ್ಲಿ ರೂಪುಗೊಳ್ಳಲು ಮೂಲ ಶಿಲಾ ಸಾಮಗ್ರಿಯೂ ಕಾರಣವಾಗಿರಬಹುದು. ಸಾಧಾರಣವಾಗಿ ನೇರ ಸರಳ ರೇಖೆಯಲ್ಲಿರುವ ಒಳಗಣ ಅಲಗು ಅಥವಾ ಬಾಗಿರುವ ಹೊರ ಅಲಗು ಹರಿತವಾಗಿದೆ. ಇವುಗಳ ತುದಿಯನ್ನು ಕೊರಗದಂತೆಯೂ ಬಳಸಿರುವಂತಿದೆ. ಹೊರ ಅಲಗುಳ್ಳ ಉಪಕರಣಗಳಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದಿದೆ. ತ್ರಿಭುಜಾಕಾರದ ಉಪಕರಣಗಳಲ್ಲಿ ಒಳ ಅಲಗು ಸ್ವಲ್ಪ ಒಳಕ್ಕೆ ಬಾಗಿದ್ದು ಅಲಗಿನ ಮೇಲ್ತುದಿ ಬಾಣದ ಮೊನೆಯಂತೆಯೂ ಇದೆ. ಹೆಚ್ಚಿನ ಉಪಕರಣಗಳು ಹಿಂಬದಿ ಸಮತಲವಾಗಿದ್ದು ಮುಂಬದಿ ಉಬ್ಬನ್ನು ಹೊಂದಿವೆ. ಈ ಉಪಕರಣಗಳ ನಿರೂಪಣೆಯಲ್ಲಿ ತಾಂತ್ರಿಕ ಕೊರತೆಯನ್ನು ಗುರುತಿಸಬಹುದು. ಈ ಎಲ್ಲಾ ಉಪಕರಣಗಳು ಕ್ವಾರ್ಟ್ಜ಼್ ಶಿಲೆಯಲ್ಲಿ ರೂಪಿತವಾಗಿರುವುದರಿಂದ ನಾಜೂಕಾಗಿಲ್ಲ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೫.೨ ರಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೭.೫.೨**

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೩ | ೨೭.೨೭ | ೫-೧೦ | ೬ | ೫೪.೫೪ | ೧-೫ | ೪ | ೩೬.೩೬ |
| ೧೫-೨೦ | ೭ | ೬೩.೬೩ | ೧೦-೧೫ | ೫ | ೪೫.೪೫ | ೫-೧೦ | ೭ | ೬೩.೬೩ |
| ೨೦-೨೫ | ೧ | ೯ | | | | | | |
| ಒಟ್ಟು | ೧೧ | | | ೧೧ | | | ೧೧ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೫ ಗರಿಷ್ಠ ೨೫ ಮಿಮೀ.ಗಳಾಗಿದ್ದು ಇವು-ಗಳಲ್ಲಿ ೧೫-೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೭ ಗರಿಷ್ಠ ೧೩ ಮಿ.ಮೀ. ಗಳಿದ್ದು ಇವುಗಲಲ್ಲಿ ೫ ೧೧ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೨ ಗರಿಷ್ಠ ೧೧ ಮಿ.ಮೀ. ಗಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

**೮. ದಬ್ಬಳ**

ಸೂಕ್ಷ್ಮ ಶಿಲಾಯುಗದ ಉಪಕರಣಗಳ ಸಮೂಹದಲ್ಲಿ ಮಾತ್ರ ದೊರೆತಿರುವ ದಬ್ಬಳ ಒಂದು ವಿಶೇಷ ಉಪ-ಕರಣವಾಗಿದೆ. ಅರ್ಧ ಚಂದ್ರಾಕೃತಿ ಮೊನೆ, ಕೊರೆಗ ಮುಂತಾದ ಉಪಕರಣವನ್ನು ಹೋಲುವ ಈ ಉಪಕರಣ ಪ್ರಸ್ತುತ ಒಟ್ಟು ೧೬ (ಶೇ. ೩.೧೪) ದೊರೆತಿದೆ. ನೀಳವಾದ ಮತ್ತು ಚೂಪಾದ ಮೊನೆಯನ್ನು ಹೊಂದಿರುವ ಈ ಉಪಕರಣವನ್ನು ರೂಪಿಸಲು ಅರ್ಧ ಚಂದ್ರಾಕೃತಿ ಮತ್ತು ಕೊರೆಗಗಳ ರೂಪಣಾ ತಂತ್ರವನ್ನೇ ಬಳಸಲಾಗಿದೆ. ಒಟ್ಟು ಉಪಕರಣಗಳಲ್ಲಿ ಕೆಲವು ಪರಿಷ್ಕೃತವಾದ ದಬ್ಬಳವಾಗಿದ್ದು ಅಗಲದ ನಾಲ್ಕು ಪಟ್ಟು ಉದ್ದವಾಗಿವೆ. ಇವುಗಳ ತ್ರಿಭುಜ, ತುದಿಗಳು ಚೂಪಾಗಿರುವ ಅಂಡಾಕಾರ ಮತ್ತು ಆಯತಾಕಾರಗಳಲ್ಲಿವೆ. ಮೊನೆಯನ್ನು ಒರಟಾದ ಚಕ್ಕೆ ತೆಗೆದು ರೂಪಿಸಲಾಗಿದೆ. ಒಂದೆರಡು ಉದಾಹ-ರಣೆಯಲ್ಲಿ ಮೊನೆಯನ್ನು ರೂಪಿಸಲು ಎರಡು ಅಥವಾ ಮೂರು ಕಡೆಗಳಿಂದ ತೆಳು ಚಕ್ಕೆ ತೆಗೆದು ಚೂಪಾದ ಮೊನೆಯನ್ನು ಸಾಧಿಸಲಾಗಿದೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳೂ ಸಮತಲ ಹಿಂಬದಿಯನ್ನು ಹೊಂದಿದ್ದು ಮುಂಬದಿಯಲ್ಲಿ ಉಬ್ಬೇ-ಣುಗಳಿವೆ. ಚೂಪಾದ ಮೇಲ್ತುದಿಯು ಮಧ್ಯದಲ್ಲಿಯೂ ಮತ್ತು ಕೆಲವು ಉದಾಹರಣೆಗಳಲ್ಲಿ ಒಂದು ಬದಿಗೆ ಹೊಂದಿಕೊಂ-ಡಂತೆ ರೂಪಿಸಲಾಗಿದೆ. ಈ ಉಪಕರಣವು ೧ ಜಾಸ್ಪರ್, ೧ ಅದಿರುಯುಕ್ತ ಜಾಸ್ಪರ್ ಹಾಗೂ ಉಳಿದ ೧೪ನ್ನು ಕ್ವಾರ್ಟ್ಸ್ ಶಿಲೆ-ಯಲ್ಲಿ ರೂಪಿಸಲಾಗಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೫.೩ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೫೩

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೧೦-೧೫ | ೨ | ೧೨.೫ | ೫-೧೦ | ೧೪ | ೮೭.೫ | ೩-೫ | ೧೪ | ೮೭.೫ |
| ೧೫-೨೦ | ೧೦ | ೬೨.೫ | ೧೦-೧೫ | ೧ | ೧೨.೫ | ೧೦-೧೫ | ೧ | ೬.೨೫ |
| ೨೫-೩೫ | ೪ | ೨೫ | | | | ೧೦-೧೫ | ೧ | ೬.೨೫ |
| ಒಟ್ಟು | ೧೬ | | | ೧೬ | | | ೧೬ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೨ ಗರಿಷ್ಠ ೩೫ ಮಿಮೀ.ಗಳಾಗಿದ್ದು ಇವುಗಳಲ್ಲಿ ೧೫-೨೫ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೫ ಗರಿಷ್ಠ ೧೫ ಮಿ.ಮೀ. ಗಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೩ ಗರಿಷ್ಠ ೧೨ ಮಿ.ಮೀ. ಗಳಿದ್ದು ಇವುಗಳಲ್ಲಿ ೫-೧೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡುಬರುತ್ತದೆ.

**೯. ಮೂಲ ಶಿಲಾಗಟ್ಟಿ**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಒಟ್ಟು ೭ (ಶೇ. ೧.೩೭) ಮೂಲ ಶಿಲಾಗಟ್ಟಿಗಳು ದೊರಕಿದ್ದು ಇವುಗಳಲ್ಲಿ ೧ ಜಾಸ್ಪರ್ ಹಾಗೂ ಉಳಿದ ೬ ಕ್ವಾರ್ಟ್ಸ ಶಿಲೆಯಲ್ಲಿ ರೂಪಿತವಾಗಿವೆ. ಬಹುತೇಕ ಮೂಲ ಶಿಲಾಗಟ್ಟಿಗಳು ಉಂಡೆಕಲ್ಲುಗಳಾಗಿದ್ದು ಇವುಗಳಲ್ಲಿ ವಿಷಮ ಕೋನದಲ್ಲಿ ಕತ್ತರಿಸಿದ ಚಕ್ಕೆ ಕಲೆಗಳು ಕಂಡು ಬರುತ್ತವೆ. ಕೆಲವು ಗಟ್ಟಿಗಳಲ್ಲಿ ಮೂರರಿಂದ ಹತ್ತು ಚಕ್ಕೆಗಳನ್ನು ತೆಗೆದಿರುವ ಕಲೆಗಳನ್ನು ಕಾಣಬಹುದು. ಈ ಕಲೆಗಳು ತೆಳ್ಳನೆಯ ನೀಳಚಕ್ಕೆ, ಹೆರೆಚಕ್ಕೆ. ಮೊನೆ ಮೊದಲಾದ ಉಪಕರಣಗಳನ್ನು ರೂಪಿಸಿರುವಂತೆ ಕಂಡು ಬರುತ್ತದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೭.೫೪ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೫೪

| ಉದ್ದ ಮಿ.ಮೀ. | ಉಪಕರಣ | ಶೇ | ಅಗಲ ಮಿ.ಮೀ | ಉಪಕರಣ | ಶೇ | ದಪ್ಪ ಮಿ.ಮೀ | ಉಪಕರಣ | ಶೇ |
|---|---|---|---|---|---|---|---|---|
| ೨೦-೨೫ | ೨ | ೨೮.೫೭ | ೧೫-೨೦ | ೪ | ೫೭.೧೪ | ೫-೧೦ | ೨ | ೨೮.೫೭ |
| ೨೫-೩೦ | ೪ | ೫೭.೧೪ | ೨೦-೨೫ | ೧ | ೧೪.೨೮ | ೧೦-೧೫ | ೧ | ೧೪.೨೮ |
| ೩೦-೩೫ | ೧ | ೧೪.೨೮ | ೨೫-೩೦ | ೨ | ೨೮.೫೭ | ೧೫-೨೦ | ೪ | ೫೭.೧೪ |
| ಒಟ್ಟು | ೭ | | | ೭ | | | ೭ | |

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯಂತೆ ಉದ್ದ ಕನಿಷ್ಠ ೧೮ ಗರಿಷ್ಠ ೩೩ ಮಿ.ಮೀ. ಗಳಾಗಿದ್ದು ಇವುಗಳಲ್ಲಿ ೨೫-೩೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಹೆಚ್ಚಿವೆ. ಹಾಗೆಯೇ ಅಗಲ ಕನಿಷ್ಠ ೧೨ ಗರಿಷ್ಠ ೨೮ ಮಿ.ಮೀ.

ಗಳಿದ್ದು ಇವುಗಳಲ್ಲಿ ೧೫-೨೦ ಮಿ.ಮೀ. ವ್ಯಾಪ್ತಿಯ ಉಪಕರಣ ಗಳು ಹೆಚ್ಚಿವೆ. ಅದೇ ರೀತಿ ದಪ್ಪ ಕನಿಷ್ಠ ೫ ಗರಿಷ್ಠ ೧೮ ಮಿ.ಮೀ. ಗಳಿದ್ದು ಇವುಗಳಲ್ಲಿ ೧೫-೨೦ ಮಿ.ಮೀ. ವ್ಯಾಪ್ತಿಯ ಉಪಕರಣಗಳು ಅತಿ ಹೆಚ್ಚು ಸಂಖ್ಯೆಯಲ್ಲಿರುವುದು ಕಂಡು ಬರುತ್ತದೆ.

**ತಾಂತ್ರಿಕತೆ**

ಮೂಲಶಿಲಾ ಸಾಮಗ್ರಗಳ ಆಯ್ಕೆ ಮತ್ತು ಬಳಕೆ, ರೂಪಿಸಿರುವ ಉಪಕರಣ ವೈವಿಧ್ಯ ಮತ್ತು ಬಳಸಿರುವ ತಾಂತ್ರಿಕ ವಿಧಾನಗಳ ದೃಷ್ಟಿಯಿಂದ ಸೂಕ್ಷ್ಮ ಶಿಲಾಯುಗವು ಅಂತ್ಯ ಹಳೆಶಿಲಾಯುಗದ ಒಂದು ಮುಂದುವರಿದ ಪರಿಷ್ಕೃತ ಹಂತ. ಈ ಹಿಂದೆ ಬಳಸಿದ್ದ ನಯವಾದ ಸಾಂದ್ರ ಕಣಗಳುಳ್ಳ ಕ್ವಾರ್ಟ್ಸ ಮತ್ತು ಜಾಸ್ಪರ್ ಗುಂಪಿನ ಶಿಲಾ ಮಾದರಿಗಳೇ ಈ ಯುಗದಲ್ಲಿಯೂ ಮುಂದುವರಿದಿದೆ. ತಾಂತ್ರಿಕವಾಗಿ ಮೊದಲೇ ಉಪಯೋಗದಲ್ಲಿದ್ದ ಸಾಮಾನ್ಯ ಚಕ್ಕೆ ತೆಗೆಯುವ ವಿಧಾನ-ಗಳು ಮತ್ತು ನೀಳಚಕ್ಕೆ ತೆಗೆಯುವ ವಿಧಾನಗಳಾದ ವಕ್ಷಸ್ಥಳ, ಪರೋಕ್ಷ ಮತ್ತು ನೇರ ಒತ್ತಡ ತಂತ್ರಗಳು ಮುಂದುವರಿಯುವು-ದರ ಜೊತೆಗೆ ವಿಶೇಷ ರೀತಿಯ ಜ್ಯಾಮಿತೀಯ ಆಕೃತಿಗಳನ್ನು ರೂಪಿಸಲು ಕಚ್ಚುಗಳನ್ನುಂಟು ಮಾಡಿ ಶಿಲೋಪಕರಣಗಳನ್ನು ಕತ್ತರಿಸುವ ತಂತ್ರವು ಹೆಚ್ಚಾಗಿ ಬಳಸಿರುವುದನ್ನು ಕಾಣಬಹುದು. ತಾಂತ್ರಿಕ ದೃಷ್ಟಿಯಿಂದ ಲೆವಲಾಯಸ್ ತಂತ್ರವನ್ನು ಸಂಪೂ-ರ್ಣವಾಗಿ ಕೈ ಬಿಟ್ಟಿರುವುದು ಸೂಕ್ಷ್ಮ ಶಿಲಾಯುಗದ ಅತ್ಯಂತ ಗಮನಾರ್ಹ ಅಂಶ.

ಉಪಕರಣ ವೈವಿಧ್ಯದ ದೃಷ್ಟಿಯಿಂದ ಅಲಗು, ಅಲಗಿಲ್ಲದ ಮತ್ತು ಸಂಯುಕ್ತ ಉಪಕಣರಗಳೇ ಹೆಚ್ಚಿನ ಶೇಕ-ಡಾವಾರು ಪ್ರಮಾಣದಲ್ಲಿ ದೊರೆಯುತ್ತವೆ.

ನೀಳಚಕ್ಕೆ ಗುಂಪಿನ ಉಪಕರಣಗಳಲ್ಲಿ ಅಂತ್ಯ ಹಳೆಶಿಲಾಯುಗದ ಮುಂದುವರಿದ ಹರಿತವಾಗಿ ವಿವಿಧ ರೀತಿಯ ಚಾಕುಚಕ್ಕತೆಗಳು ಗಾತ್ರದಲ್ಲಿ ಸೂಕ್ಷ್ಮವಾಗಿ ಅಲಗು ರೂಪಣೆಯಲ್ಲಿ ಹೆಚ್ಚು ಸಾಮರ್ಥ್ಯವಾಗಿವೆ. ಹೆರೆಚಕ್ಕೆ ಗುಂಪಿನ ಉಪಕರಣಗಳಲ್ಲಿ ಹೆಚ್ಚು ಸೂಕ್ಷ್ಮ ಸ್ವರೂಪ ಪಡೆಯುವುದರ ಜೊತೆಗೆ ತೆಳುವಾಗಿವೆ. ನೀಳಚಕ್ಕೆಯ ಅಲಗಿನಂತೆಯೇ ನಿಯ-ಮಿತ ಬಲಪ್ರಯೋಗದಿಂದ ನೇರ ಇಲ್ಲವೇ ಉಳಿಯ ಸಹಾಯದಿಂದ ಆಳವಾದ ಚಕ್ಕೆ ತೆಗೆದು ಹರಿತವಾದ ಅಲಗು ಮೂಡಿಸಿರುವುದನ್ನು ನೋಡಬಹುದು. ಮೊನೆ ಗುಂಪಿನ ಉಪಕರಣಗಳಲ್ಲಿ ಎರಡು ಮುಖ್ಯ ಅಂಶಗಳನ್ನು ಗಮನಿಸಬಹುದು. .ಮೊದಲನೆಯದಾಗಿ ಜ್ಯಾಮಿತೀಯ ಆಕೃತಿಗಳು ಹೆಚ್ಚಳ ಮತ್ತು ನೀಳವಾದ ದಬ್ಬಳದಂತಹ ಉಪಕರಣಗಳು ಮೊಟ್ಟ ಮೊದಲ ಬಾರಿಗೆ ಕಂಡು ಬರುವುದು. ಈ ಹಂತದಲ್ಲಿಯೇ ಕಚ್ಚಗಳನ್ನುಂಟು ಮಾಡಿ ನೀಳಚಕ್ಕೆ ಮತ್ತು ಹೆರೆಚಕ್ಕೆ ಗುಂಪಿನ

ಉಪಕರಣಗಳನ್ನು ಕತ್ತರಿಸುವ ತಂತ್ರ ಹೆಚ್ಚಾಗಿ ಬಳಕೆಯಾಗಿರುವುದು. ವಿವಿಧ ರೀತಿಯ ತ್ರಿಭುಜಾಕಾರದ ಮೊನೆಗಳು, ಕೊರೆ-ಗ, ಕೊರೆಯುಳಿ, ದಬ್ಬಳ, ಅರ್ಧ ಚಂದ್ರಾಕೃತಿ ಅಥವಾ ಬಾಲಚಂದ್ರಾಕೃತಿ, ತ್ರಾಪಿಜ್ಯ ಅಥವಾ ಹರಿತವಾದ ಅಗಲ ಅಲಗಿನ ಬಾಣದ ಮೊನೆ, ಕೊಕ್ಕಿನ ಮೊನೆ, ಕೊಕ್ಕಿನ ಕೊರೆಯುಳಿ ಈ ಉಪಕರಣಗಳಲ್ಲಿ ಕಚ್ಚುಂಟು ಮಾಡುವ ತಂತ್ರವನ್ನು ಪರಿಣಾ-ಮಕಾರಿಯಾಗಿ ಬಳಸಿದೆ.

ಸೂಕ್ಷ್ಮ ಶಿಲಾಯುಗದಲ್ಲಿ ಬಳಕೆಯಾದ ತಂತ್ರಗಳ ಹಿನ್ನೆಲೆಯಲ್ಲಿ ಮತ್ತೊಂದು ಮುಖ್ಯ ಅಂಶವೆಂದರೆ ಸಂಯುಕ್ತ ಉಪಕರಣಗಳ ಹೆಚ್ಚಳ. ವಿವಿಧ ರೀತಿಯ ತಂತ್ರಗಳ ಪರಿಚಯ ಮತ್ತು ಪರಿಣತಿ ಹೆಚ್ಚಾದಂತೆ ಒಂದೇ ಪ್ರಾಥಮಿಕ ನೀಳಚಕ್ಕೆಯನ್ನು ಉಪಯೋಗಿಸಿ ಒಂದಕ್ಕಿಂತ ಹೆಚ್ಚು ರೀತಿಯ ಕಾರ್ಯ ಸಾಧಕ ಅಲಗುಗಳನ್ನು ಮೂಡಿಸಿ ಸಂಯುಕ್ತ ಉಪಕರಣಗಳನ್ನು ರೂಪಿಸುವ ಪದ್ಧತಿ ಬೆಳೆದು ಬಂದಂತೆ ಕಾಣುತ್ತದೆ. ಉದಾಪರಣೆಗೆ ಹೆರೆಚಕ್ಕೆಗಳಲ್ಲಿಯೇ ಮೊನೆ, ಕೊಕ್ಕಿನ ಮೊನೆ, ಕೊರೆಯುಳಿ, ಮುಂತಾದ ಅಲಗುಗಳನ್ನು ಮೂಡಿಸಿರುವುದು ನೀಳಚಕ್ಕೆಯಲ್ಲಿಯೇ ತುದಿ ಹೆರೆಚಕ್ಕೆ, ವಿವಿಧ ರೂಪದ ಮೊನೆಗಳು, ಕೊರೆಯುಳಿ ಮುಂತಾದ ಅಲಗುಗಳನ್ನು ರೂಪಿಸಿರುವುದನ್ನು ಕಾಣಬಹುದು. ಅರ್ಧ ಇಲ್ಲವೆ ಬಾಲ ಚಂದ್ರಾಕೃ-ತಿ, ಅರ್ಧ ಚಂದ್ರಾಕೃತಿ ಮೊನೆ, ಕೊರೆಗಗಳ ಮುಂದುವರಿದ ಹಂತವಾಗಿ ದಬ್ಬಳದಂತಹ ನೀಳ ಮೊಳೆಗಳನ್ನು ರೂಪಸಿರು-ವುದು ಇನ್ನೊಂದು ಉದಾಹರಣೆ. ಕೃಷಿಯ ಬಳಕೆ ಹೆಚ್ಚಾಗುತ್ತಿರುವ ಕುರುಹಾಗಿ ಅನೇಕ ಸೂಕ್ಷ್ಮ ಉಪಕರಣಗಳನ್ನು ಮೂಳೆ ಅಥವಾ ಮರದ ಹಿಡಿಕೆಗೆ ಜೋಡಿಸಿ ಕುಡುಗೋಲು, ಗರಗಸ ಮುಂತಾದ ಸಂಯುಕ್ತ ಉಪಕರಣಗಳನ್ನು ತಯಾರಿಕೆಯೂ ಬೆಳದಂತೆ ಕಾಣುತ್ತದೆ.

ಈ ಹಿನ್ನೆಲೆಯಲ್ಲಿ ದೊರೆತಿರುವ ಒಟ್ಟು ೬೬ ನೆಲೆಗಳನ್ನು ಮೂರು ಮುಖ್ಯ ಹಂತಗಳಾಗಿ ವಿಂಗಡಿಸಿದೆ.

(೧) ಮೊದಲನೆಯ ಹಂತ, (೨) ಎರಡನೆಯ ಹಂತ ಮತ್ತು (೩) ಮೂರನೆಯ ಹಂತ.

ಮೊದಲನೆಯ ಹಂತದ ಒಟ್ಟು ೩೮ ನೆಲೆಗಳು ಹಳೆಶಿಲಾಯುಗ ಸಂಸ್ಕೃತಿಗಳ ಜೊತೆಯಲ್ಲಿ ಇರುವಂತಹ ಸೂಕ್ಷ್ಮ ಶಿಲಾಯುಗದ ನೆಲೆಗಳು. ಎರಡನೆಯ ಹಂತದ ಒಟ್ಟು ೩ ನೆಲೆಗಳು ಯಾವುದೇ ಸಾಂಸ್ಕೃತಿಕ ಹಂತಗಳ ಜೊತೆಗಿರದ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಮಾತ್ರ ದೊರೆತಿರುವಂತಹ ನೆಲೆಗಳು. ಮೂರನೆಯ ಹಂತದ ಒಟ್ಟು ೨೫ ನೆಲೆಗಳು ನೂತನ ಹಾಗೂ ಬೃಹತ್ ಶಿಲಾ ಸಂಸ್ಕೃತಿಗಳ ಜೊತೆಯಲ್ಲಿರುವಂತಹ ಸೂಕ್ಷ್ಮ ಶಿಲಾಯುಗದ ನೆಲೆಗಳು ಎಂದು ಮೂರು ಹಂತಗಳನ್ನಾಗಿ ವಿಭಾಗಿಸಿದೆ.

ಈ ನೆಲೆಗಳಲ್ಲಿ ದೊರಕಿರುವ ವಿವಿಧ ಉಪಕರಣಗಳ ಸಂಖ್ಯೆ ಮತ್ತು ಶೇಕಡಾವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೭.೫೫, ೭.೫೫.೧, ೭.೫೫.೨ ಮತ್ತು ೭.೫೫.೩ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೭.೫೫

| ಕ್ರಮ ಸಂಖ್ಯೆ | ಉಪಕರಣ ಮಾದರಿ | ಮೊದಲನೆಯ ಹಂತ | | ಎರಡನೆಯ ಹಂತ | | ಮೂರನೆಯ ಹಂತ | | ಮೂರು ಹಂತಗಳನ್ವಯದಂತೆ | |
|---|---|---|---|---|---|---|---|---|---|
| | | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. |
| ೧. | ನೀಳಚಕ್ಕೆ ಮಾದರಿ | ೫೭೪ | ೪೨.೯೩ | ೫ | ೨೭.೭೭ | ೨೨೭ | ೪೪.೬೮ | ೮೦೬ | ೪೩.೨೬ |
| ೨. | ಹೆರಚಕ್ಕೆ ಮಾದರಿ | ೩೩೬ | ೨೫.೧೩ | ೪ | ೨೨.೨೨ | ೧೨೬ | ೨೪.೮೦ | ೪೬೬ | ೨೫.೦೧ |
| ೩. | ಮೊನೆ ಮಾದರಿ | ೨೧೦ | ೧೫.೭೦ | ೪ | ೨೨.೨೨ | ೭೬ | ೧೪.೯೬ | ೨೯೦ | ೧೫.೫೬ |
| ೪. | ಬಾಣದ ಮೊನೆ | ೬೭ | ೫.೦೧ | ೧ | ೫.೫೫ | ೧೯ | ೩.೭೪ | ೮೭ | ೪.೮೩ |
| ೫. | ಕೊರೆಗ | ೩೫ | ೨.೬೧ | | | ೧೫ | ೨.೯೫ | ೫೦ | ೨.೬೫ |
| ೬. | ಕೊರೆಯುಳಿ | ೧೩ | ೦.೯೭ | | | ೧೧ | ೨.೧೬ | ೨೪ | ೧.೨೮ |
| ೭. | ಅರ್ಧಚಂದ್ರಾಕೃತಿ | ೫೦ | ೩.೭೩ | | | ೧೧ | ೨.೧೬ | ೬೧ | ೩.೨೭ |
| ೮. | ದಬ್ಬಳ | ೧೬ | ೧.೧೯ | ೧ | ೫.೫೫ | ೧೬ | ೩.೧೪ | ೩೩ | ೧.೭೭ |
| ೯. | ಮೂಲಗಟ್ಟಿ | ೩೬ | ೨.೬೯ | ೩ | ೧೬.೬೬ | ೭ | ೧.೩೭ | ೪೬೬ | ೩.೫೪ |
| | ಒಟ್ಟು | ೧೩೩೭ | | ೧೮ | | ೫೦೮ | | ೧೮೬೩ | |

ಕೋಷ್ಟಕ ಸಂಖ್ಯೆ ೭.೫೫.೧

| ಕ್ರಮ ಸಂಖ್ಯೆ | ನೀಳಚಕ್ಕೆ ಮಾದರಿ | ಮೊದಲನೆಯ ಹಂತ | | ಎರಡನೆಯ ಹಂತ | | ಮೂರನೆಯ ಹಂತ | | ಮೂರು ಹಂತಗಳನ್ವಯದಂತೆ | |
|---|---|---|---|---|---|---|---|---|---|
| | | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. |
| ೧. | ನೀಳಚಕ್ಕೆಯಂತಹ ಚಕ್ಕೆ | ೧೦೬ | ೧೮.೪೬ | | | ೪೫ | ೧೯.೮೨ | ೧೫೧ | ೧೮.೭೩ |
| ೨. | ಒಬ್ಬದಿ ನೀಳಚಕ್ಕೆ | ೧೦೯ | ೧೮.೯೮ | | | ೫೯ | ೨೫.೯೯ | ೧೬೮ | ೨೦.೮೪ |
| ೩. | ಇಬ್ಬದಿ ನೀಳಚಕ್ಕೆ | ೧೫೭ | ೨೬.೮೨ | ೩ | ೬೦.೦೦ | ೫೯ | ೨೫.೯೯ | ೨೧೯ | ೨೭.೧೭ |
| ೪. | ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿರುವ ಚಕ್ಕೆ | ೨೬ | ೪.೫೨ | | | ೫ | ೨.೨೦ | ೩೧ | ೩.೮೪ |
| ೫. | ಕಿರು ನೀಳಚಕ್ಕೆ | ೧೫೯ | ೨೭.೭೦ | ೧ | ೨೦ | ೫೨ | ೨೨.೯೦ | ೨೧೨ | ೨೬.೩೦ |
| ೬. | ಕೈಚಾಕು ನೀಳಚಕ್ಕೆ | ೧೧ | ೧.೯೧ | | | ೨ | ೦.೮೮ | ೧೩ | ೧.೬೧ |
| ೭. | ಗರಗಸದಂತಹ ನೀಳಚಕ್ಕೆ | ೬ | ೧.೦೪ | ೧ | ೨೦ | ೫ | ೨.೨೦ | ೧೨ | ೧.೪೮ |
| | ಒಟ್ಟು | ೫೭೪ | | ೫ | | ೨೨೭ | | ೮೦೬ | |

ಕೋಷ್ಟಕ ಸಂಖ್ಯೆ ೭.೫೫.೨

| ಕ್ರಮ ಸಂಖ್ಯೆ | ಹೆರೆಚಕ್ಕೆ ಮಾದರಿ | ಮೊದಲನೆಯ ಹಂತ | | ಎರಡನೆಯ ಹಂತ | | ಮೂರನೆಯ ಹಂತ | | ಮೂರು ಹಂತಗಳನ್ವಯದಂತೆ | |
|---|---|---|---|---|---|---|---|---|---|
| | | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. |
| ೧. | ಒಬ್ಬದಿ ಹೆರೆಚಕ್ಕೆ | ೫೯ | ೧೭.೫೫ | | | ೩೩ | ೨೬.೧೯ | ೯೨ | ೧೪.೭೪ |
| ೨. | ಇಬ್ಬದಿ ಹೆರೆಚಕ್ಕೆ | ೭೦ | ೨೦.೮೩ | ೨ | ೫೦ | ೩೪ | ೨೬.೯೮ | ೧೦೬ | ೨೨.೭೪ |
| ೩. | ತುದಿ ಹೆರೆಚಕ್ಕೆ | ೧೦೧ | ೩೦.೦೫ | ೧ | ೨೫ | ೩೩ | ೨೬.೧೯ | ೧೩೫ | ೨೮.೯೬ |
| ೪. | ದುಂಡು ಹೆರೆಚಕ್ಕೆ | ೨೮ | ೮.೩೩ | | | ೭ | ೫.೫೫ | ೩೫ | ೭.೫೧ |
| ೫. | ಒಳಬಾಗಿದ ಅಂಚಿನ ಹೆರೆಚಕ್ಕೆ | ೩೪ | ೧೦.೧೧ | | | ೯ | ೭.೧೪ | ೪೩ | ೯.೨೨ |
| ೬. | ಮೂಲಗಟ್ಟಿ ಹೆರೆಚಕ್ಕೆ | ೪೪ | ೧೩.೦೯ | ೧ | ೨೫ | ೧೦ | ೭.೯೩ | ೫೫ | ೧೧.೮೦ |
| ಒಟ್ಟು | | ೩೩೬ | | ೪ | | ೧೨೬ | | ೪೪೬ | |

ಕೋಷ್ಟಕ ಸಂಖ್ಯೆ ೭.೫೫.೩

| ಕ್ರಮ ಸಂಖ್ಯೆ | ಮೊನೆ ಮಾದರಿ | ಮೊದಲನೆಯ ಹಂತ | | ಎರಡನೆಯ ಹಂತ | | ಮೂರನೆಯ ಹಂತ | | ಮೂರು ಹಂತಗಳನ್ವಯದಂತೆ | |
|---|---|---|---|---|---|---|---|---|---|
| | | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. | ಉಪಕರಣ ಸಂಖ್ಯೆ | ಶೇ. |
| ೧. | ಸಾಮಾನ್ಯ ಮೊನೆ | ೯೫ | ೪೫.೨೩ | ೩ | ೭೫ | ೩೪ | ೪೪.೭೩ | ೧೩೨ | ೪೫.೫೧ |
| ೨. | ತ್ರಿಭುಜಾಕಾರದ ಮೊನೆ | ೩೧ | ೧೪.೭೬ | | | ೨೪ | ೩೧.೫೭ | ೫೫ | ೧೮.೯೬ |
| ೩. | ಕೊಕ್ಕು ಮೊನೆ | ೬೨ | ೨೯.೫೨ | | | ೪ | ೫.೨೬ | ೬೬ | ೨೨.೭೫ |
| ೪. | ಅರ್ಧಚಂದ್ರಾಕೃತಿ ಮೊನೆ | ೬೯ | ೩೨.೮೫ | ೧ | ೨೫ | ೧೪ | ೧೮.೪೨ | ೨೪ | ೮.೨೭ |
| ೫. | ಗೂಟವಿರುವ ಮೊನೆ | ೧೩ | ೬.೧೯ | | | | | ೧೩ | ೪.೪೮ |
| ಒಟ್ಟು | | ೨೧೦ | | ೪ | | ೭೬ | | ೨೯೦ | |

ಮೇಲಿನ ಕೋಷ್ಟಕದ ಪರಿಶೀಲನೆಯಿಂದ ಕೆಲವು ಸಂಗತಿಗಳನ್ನು ಗಮನಿಸಬಹುದು. ಸಾಂಸ್ಕೃತಿಕ ಆನುಪೂರ್ವಿಯಿರುವ ಮೊದಲನೆಯ ಮತ್ತು ಮೂರನೆಯ ಹಂತಗಳಿಗೆ ಹೋಲಿಸಿದರೆ ಎರಡನೆಯ ಹಂತದ ನೆಲೆಗಳು ಮತ್ತು ಅವುಗಳಲ್ಲಿ ದೊರೆತಿರುವ ಉಪಕರಣಗಳು ಅತ್ಯಲ್ಪ ಪ್ರಮಾಣದ. ಈ ಉಪಕರಣಗಳಲ್ಲಿಯೂ ಪ್ರತಿ ಹಂತದ ವಿಶಿಷ್ಟ ಉಪಕರಣವೆನ್ನಬಹುದಾದ ಉಪಗುಂಪುಗಳು ಸಂಪೂರ್ಣವಾಗಿ ಇಲ್ಲ. ಉದಾಹರಣೆಗೆ ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ, ಕೈಚಾಕು ನೀಳಚಕ್ಕೆ, ತ್ರಿಭುಜಾಕಾರ, ಕೊಕ್ಕು ಮತ್ತು ಗೂಟವಿರುವ ಮೊನೆಗಳು, ದುಂಡು ಹಾಗೂ ಒಳಬಾಗಿದಂಚಿನ ಹೆರೆಚಕ್ಕೆಗಳು, ಕೊರೆಗ, ಕೊರೆಯುಳಿ, ಅರ್ಧ ಚಂದ್ರಾಕೃತಿಗಳ ಒಂದಾದರೂ ಮಾದರಿ ಇಲ್ಲ.

ಮೊದಲನೆಯ ಮತ್ತು ಎರಡನೆಯ ಹಂತ ಉಪಕರಣಗಳಲ್ಲಿಯೂ ಹೆಚ್ಚಿನ ವ್ಯತ್ಯಾಸಗಳನ್ನು ಗುರುತಿಸಬಹುದು. ಗೂಟವಿರುವ ಮೊನೆಯೊಂದನ್ನು ಹೊರತು ಪಡಿಸಿದರೆ ಉಳಿದೆಲ್ಲ ಉಪಕರಣ ಮಾದರಿಗಳೂ ಎರಡೂ ಹಂತಗಳಲ್ಲಿಯೂ ಶೇಕಡಾವಾರು ಪ್ರಮಾಣವು ಮೊದಲನೆಯ ಹಂತದ ಉಪಕರಣಕ್ಕಿಂತ ಅರ್ಧಕ್ಕಿಂತಲೂ ಕಡಿಮೆಯಾಗಿವೆ. ಗರಗಸದಂತಹ ನೀಳಚಕ್ಕೆ, ದಬ್ಬಳ, ಕೊರೆಯುಳಿ ಇಂತಹ ಪರಿಷ್ಕೃತ ಉಪಕರಣಗಳ ಶೇಕಡಾವಾರು ಪ್ರಮಾಣ ಹೆಚ್ಚು ಬದಲಾಗದಿರುವುದು ಗಮನಾರ್ಹ ಅಂಶ. ಅರ್ಧ ಚಂದ್ರಾಕೃತಿ ಮೊನೆ ಉಪಕರಣವು ಮಾತ್ರ ಶೇಕಡಾವಾರು ಪ್ರಮಾಣದಲ್ಲಿ ಮೂರನೇ ಹಂತದಲ್ಲಿ ಹೆಚ್ಚಾಗಿರುವುದು ಕಂಡು ಬರುತ್ತದೆ. ತಂತ್ರಗಳ ದೃಷ್ಟಿಯಿಂದ ಮೂರನೆಯ ಹಂತದ ಉಪಕರಣಗಳು ಸಾಧಾರಣವಾಗಿ ಒರಟಾಗಿದ್ದು ಹೆಚ್ಚಿನ ಪುಡಿಗೆಲಸ ಹೊಂದಿಲ್ಲ.

**ಪರಿಶೀಲನೆ**

ಈ ಹಂತದಲ್ಲಿ ಭೂ ನಕ್ಷೆ ಪುಟ ೨೦೬ ಹಾಗು ಉಪಕರಣಗಳ ವೈವಿಧ್ಯ ಕೋಷ್ಟಕ ಸಂಖ್ಯೆ ೬.೩, ೬.೩೦, ೬.೩೪, ೬.೫೫, ೬.೫೫.೧, ೬.೫೫.೨ ಮತ್ತು ೬.೫೫.೩ ತುಮಕೂರು ಜಿಲ್ಲಾ ಪ್ರದೇಶದಲ್ಲಿ ಅಂತ್ಯ ಹಳೆ ಶಿಲಾಯುಗ ಸಂಸ್ಕೃತಿಯ ಕನಿಷ್ಠ ಎರಡು ಪಟ್ಟು ನೆಲೆಗಳಲ್ಲಿ ಸೂಕ್ಷ್ಮ ಶಿಲಾಯುಗದ ನೆಲೆಗಳಿರುವುದು ಗಮನಾರ್ಹ. ಇವುಗಳಲ್ಲಿ ಒಂದರ ಪಕ್ಕದಲ್ಲೊಂದು ಇರುವ ನಾಲ್ಕು ತಾಲ್ಲೂಕುಗಳಾದ ತಿಪಟೂರು, ಗುಬ್ಬಿ, ತುಮಕೂರು ಮತ್ತು ಕೊರಟಗೆರೆಗಳಲ್ಲಿ ಈ ನೆಲೆಗಳಿವೆ. ಅಂತ್ಯ ಹಳೆಶಿಲಾಯುಗದ ನೆಲೆಗಳು ಆದಿ, ಮಧ್ಯ ಹಳೆಶಿಲಾಯುಗ ಪ್ರದೇಶದ ನೆಲೆಗಳ ಪಶ್ಚಿಮದ ಕಡೆಗೆ ವಿಸ್ತರಿಸಿದ್ದರೆ ಸೂಕ್ಷ್ಮ ಶಿಲಾ ನೆಲೆಗಳು ಈ ಪ್ರದೇಶದ ಪೂರ್ವ ಮತ್ತು ಈಶಾನ್ಯ ದಿಕ್ಕಿಗೆ ಹರಡಿರುವುದು ಕುತೂಹಲಕಾರಿಯಾಗಿದೆ. ಇದಕ್ಕೆ ಬಹುಶಃ ಪರಿಸರವೇ ಬಹುಮಟ್ಟಿಗೆ ಕಾರಣವೆಂದು ತೋರುತ್ತದೆ. ಈ ಹಂತದ ಕಲ್ಲಿನ ಉಪಕರಣನ್ನು ಬಹಳಷ್ಟು ಬಿಳಿ ವರ್ಣದ ಕ್ವಾರ್ಟ್ಸ ಶಿಲೆಯಲ್ಲಿಯೇ ಮಾಡಿದುದಾಗಿದೆ. (೧೪೨೯ ಶೇ. ೬೬.೭೦) ಈ ಕಲ್ಲು ಗ್ರಾನೈಟ್ ಗುಡ್ಡ ಶ್ರೇಣಿಗಳಲ್ಲಿ ಹೆಚ್ಚಾಗಿ ದೊರೆಯುತ್ತದೆ. ಇತರ ಪ್ರದೇಶಗಳಲ್ಲಿನ ವೈಜ್ಞಾನಿಕ ಅಧ್ಯಯನದ ಆಧಾರದ ಮೇಲೆ ಈ ಹಂತದಲ್ಲಿ ವಾಯುಗುಣವು ತೀರಾ ಬದಲಾಗಿ ಹುಲ್ಲುಗಾವಲಿನ ಸಸ್ಯವರ್ಗಕ್ಕೆ ಅನುಕೂಲದ ವಾಯುಗುಣವಿದ್ದಂತೆ ಕಂಡು ಬಂದಿದೆ. ಮಧ್ಯಮ ಪ್ರಮಾಣದ ಪ್ರಾಣಿಗಳ ಅಂದರೆ ಜಿಂಕೆ, ಮೊಲ, ಮೊದಲಾದ ಪ್ರಾಣಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು ಗುಡ್ಡಗಾಡಿನ ಹುಲ್ಲುಗಾವಲು ಪ್ರದೇಶದಲ್ಲಿರುತ್ತವೆ. ಈ ಕಾರಣದಿಂದಲೇ ಪ್ರಾಯಶಃ ಜನಸಂಖ್ಯೆ ಹೆಚ್ಚಾದಂತೆಲ್ಲಾ ಈ ಜಿಲ್ಲೆಯ ಪೂರ್ವ ಭಾಗದಲ್ಲಿಯ ಗುಡ್ಡಗಾಡಿನ ಪ್ರದೇಶದ ಕಡೆಗೆ ಜನರು ಆಕರ್ಷಿತರಾದಂತೆ ಕಾಣುತ್ತದೆ.

ಯಥಾಪ್ರಕಾರ ಗುಬ್ಬಿ ತಾಲ್ಲೂಕು ಪ್ರದೇಶದ ಮೂಗನಾಯಕನಕೋಟೆ-ಮಾರಶೆಟ್ಟಿಹಳ್ಳಿ- ಮಂಚಲ್ದೊರೆ ಪ್ರದೇಶದಲ್ಲಿಯೇ ಹೆಚ್ಚಿನ ಸಂಖ್ಯೆಯ ಸೂಕ್ಷ್ಮ ಶಿಲಾಯುಗದ ನೆಲೆಗಳಿವೆ (೨೬). ಆದರಲ್ಲೂ ಮೂಗನಾಯಕನಕೋಟೆ ಮತ್ತು ಇದರ ಸುತ್ತಮುತ್ತಲ ಭಾಗದಲ್ಲಿ ಈ ನೆಲೆಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಗಮನಾರ್ಹ. ಈ ಪ್ರದೇಶದ ೨೬ ನೆಲೆ-ಗಳಲ್ಲಿ ಮೂಗನಾಯಕನಕೋಟೆ ಹಾಗೂ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ ಭಾಗದಲ್ಲಿ ಒಂದಕ್ಕೊಂದು ಸಮೀಪವಾಗಿ ೨ ನೆಲೆಗಳಿವೆ. ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯ ಭೌಗೋಳಿಕ ವ್ಯಾಪ್ತಿಯಲ್ಲಿ ಈ ಸಂಸ್ಕೃತಿಯು ಒಡೆದೆದೆದ್ದು ಕಾಣುವ ಕೇಂದ್ರ-ವೆಂದು ಹೇಳಬಹುದು.

ಇಲ್ಲಿ ದೊರೆತಿರುವ ಉಪಕರಣ ವೈವಿಧ್ಯದಂತೆ ನೀಳಚಕ್ಕೆ (೮೦೬, ಶೇ. ೪೩.೨೬) ಹೆರೆಚಕ್ಕೆ (೪೬೬, ಶೇ. ೨೫.೦೧), ಮೊನೆ (೨೯೬, ಶೇ. ೧೫.೫೬) ಹಾಗೂ ವಿಶೇಷ ಉಪಕರಣಗಳಾದ ಬಾಣದ ಮೊನೆ (೯೦ ಶೇ. ೪.೮೩) ಅರ್ಧ ಚಂದ್ರಾಕೃತಿ ಮೊನೆ (೬೧ ಶೇ. ೩.೨೭), ಕೊರೆಗ (೫೦, ಶೇ. ೨.೬೮) ದಬ್ಬಳ (೩೩, ೧.೭೭) ಕೊರೆಯುಳಿ (೨೪ ಶೇ. ೧.೨೯) ಇದ್ದು ಇವುಗಳನ್ನು ಕ್ವಾರ್ಟ್ಜ್ (೧೪೨೯, ಶೇ. ೭೬.೭೦), ಅದಿರುಯುಕ್ತ ಕ್ವಾರ್ಟ್ಜ್ (೧೭೦, ಶೇ. ೯.೧೨), ಅದಿ-ರುಯುಕ್ತ ಜಾಸ್ಪರ್ (೧೫೬, ಶೇ. ೮.೩೭) , ಜಾಸ್ಪರ್ (೧೦೬, ಶೇ. ೫.೬೯) ಹಾಗೂ ಪೆಲ್ಸಪರ್ (೨ ಶೇ. ೧೦.೧೧) ಗಳಲ್ಲಿ ರೂಪಿಸಲಾಗಿದೆ.

ಆಕೃತಿ ಉಪಕರಣಗಳಲ್ಲಿ ಸಣ್ಣ ಪ್ರಮಾಣದ ಚಕ್ಕೆಯ ಉಪಕರಣಗಳು ಹೆಚ್ಚಿನ ಪ್ರಮಾಣದಲ್ಲಿರುವುದು ಬಹು ಮಟ್ಟಿಗೆ ಮಧ್ಯ ಹಳೆಶಿಲಾಯುಗದಿಂದ ಬಂದ ಪರಂಪರೆಯ ಮುಂದುವರಿಕೆಯನ್ನು ಸೂಚಿಸುತ್ತದೆ ಎಂದು ಹೇಳಬಹುದು. ಆದರೆ ಬದಲಾದ ಪರಿಸರಕ್ಕನುಗುಣವಾಗಿ ಹೊಸ ಪ್ರಕಾರದ ಉಪಕರಣಗಳಾದ ನೀಳಚಕ್ಕೆ, ಬಾಣದ ಮೊನೆ, ಕೊರೆಗ ಕೊರೆ-ಯುಳಿ, ಅರ್ಧ ಚಂದ್ರಾಕೃತಿ, ದಬ್ಬಳ ಮೊದಲಾದ ಉಪಕರಣಗಳು ಗಣನೀಯವಾಗಿದ್ದು ಈ ಜನರ ತಾಂತ್ರಿಕ ಕುಶಲತೆ-ಯನ್ನು ಮತ್ತು ಸಂದರ್ಭೋಚಿತವಾಗಿ ಕಲ್ಪಿಸಿಕೊಳ್ಳುವ ಸಾಮರ್ಥ್ಯವನ್ನು ಸೂಚಿಸುತ್ತವೆ. ಉಪಕರಣಗಳು ತೀರಾ ಸಣ್ಣದಾಗಿ ರೂಪಿಸಿರುವುದರಿಂದ ಬಹುಮಟ್ಟಿಗೆ ಹಲವಾರು ಪ್ರಕಾರದ ಆಕೃತಿಗಳನ್ನು ಜೋಡಿಸಿ ರಚನಾತ್ಮಕ ಸಂಯುಕ್ತ ಉಪಕರಣಗ-ಳನ್ನು ಮಾಡಿದಂತೆ ತೋರುತ್ತದೆ. ಅದೇ ರೀತಿ ಹುಲ್ಲುಗಾವಲಿನ ಪಶುಸಂಗೋಪನೆ, ನಿಸರ್ಗದಲ್ಲಿ ದೊರೆಯುವ ಧಾನ್ಯ ಸಂಗ್ರಹ ಮುಂತಾದ ಕಸುಬುಗಳಿಗೆ ಅನುಕೂಲವಾಗುವ ಉಪಕರಣಗಳನ್ನು ಇಲ್ಲಿ ಕಾಣಬಹುದಾಗಿದೆ. ತರುವಾಯ ಕಾಲದ ಕೃಷಿಗಾರಿಕೆಗೆ ಇದು ಪೀಠಿಕೆಯಾದಂತೆ ಕಾಣುತ್ತದೆ.

## ಆಯ್ದ ಉಪಕರಣಗಳ ವಿವರಣೆ

**ಮೊದಲನೆಯ ಹಂತ**

**ನೀಳಚಕ್ಕೆ ಮಾದರಿ**

**ನೀಳಚಕ್ಕೆಯಂತಹ ಚಕ್ಕೆ**

೧. ಥಣಾಪುರ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೧೩. ದಪ್ಪ ೭. ಮಿ.ಮೀ. ಅಸಮ ತ್ರಿಭುಜಾಕಾರ ಮಧ್ಯ ಉಬ್ಬೇಣು ಬಲ-ಬದಿಗಿದ್ದು ನೇರವಾಗಿದೆ. ಅಲ್ಲಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಮೊನೆ ಇದ್ದು ಬಲಕ್ಕೆ ಬಾಗಿದೆ. ಎರಡೂ ಪಾರ್ಶ್ವಗಳಲ್ಲೂ ಮರುಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೬, ನಕ್ಷೆ- ೩ ಬಾಂಬೆ (ಎ.ಇಂ - ೬: ೧೯೫೦)

೨. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್‌ಶಿಲೆ. ಉದ್ದ ೧೨. ಅಗಲ ೧೦. ದಪ್ಪ ೪. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣಿದ್ದು ಮರುಚಕ್ಕೆ ತೆಗೆದಿದೆ. ಎರಡೂ ಬದಿಗೂ ಆಳಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದೆ. ಕೆಳತುದಿ ತೆಳುವಾಗಿದ್ದು ಅರ್ಧ ವೃತ್ತಾಕಾರದಲ್ಲಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೧, ನಕ್ಷೆ- ೫೯೦ ಸಂಗನಕಲ್ಲು ( ಸಾಂಕಳಿಯಾ.ಎಚ್.ಡಿ:೧೯೫೧;೨೪೫)

೩. ಚಿನಗ:- ಕ್ವಾರ್ಟ್ಸ್ ಶಿಲೆ. ಉದ್ದ ೨೩. ಅಗಲ ೧೮. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬೇಣಿದ್ದು ಕತ್ತ-ರಿಸಿ ತೆಗೆದಿದೆ. ಮೇಲ್ತುದಿ ತೆಳುವಾಗಿದ್ದು ಮೊನೆಯನ್ನು ಹೊಂದಿದೆ. ಎಡಪಾರ್ಶ್ವದಲ್ಲಿ ನೇರ ಹರಿತ ಅಲಗಿದ್ದು ಬಲಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ತಾಡನ ವೇದಿಕೆಯನ್ನು ಹೊಂದಿದೆ. ಅಡ್ಡ ವಿನ್ಯಾಸದಲ್ಲಿ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೦೨, ನಕ್ಷೆ- ೮ ಸಿಂಗರೋಲಿ ಬೇಸಿನ್ (ಎ.ಇಂ-೭;೧೯೫೧)

೪. ಇರಕಸಂದ್ರಕಾಲೋನಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೧೩. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ತೆಳುವಾಗಿದ್ದು ಅರ್ಧ ವೃತ್ತಾಕಾರವಾಗಿದೆ. ಎರಡೂ ಪಾರ್ಶ್ವಗಳೂ ಹರಿತವಾಗಿದ್ದು ಎಡಪಾರ್ಶ್ವ ನಿಮ್ನವಾಗಿದೆ. ಬಲಪಾರ್ಶ್ವ ಪೀನವಾಗಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೦೧, ನಕ್ಷೆ - ೮ ಸಿಂಗರೋಲಿ ಬೇಸಿನ್ (ಎ.ಇಂ.-೭;೧೯೫೧)




ಗಾತ್ರ ೧:೧




ಒಬ್ಬದಿ ನೀಳಚಕ್ಕೆ

೫. ಮೂಗನಾಯಕನಕೋಟೆ ಉತ್ತರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೦. ದಪ್ಪ ೩. ಮಿ.ಮೀ. ಆಯತಾಕಾರ. ಮುಂಬದಿಯ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಎರಡೂ ಬದಿಗೂ ಆಳಚಕ್ಕೆ ತೆಗೆದಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡ-ಪಾರ್ಶ್ವದ ಹರಿತ ಅಲಗು ನೇರವಾಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೯೨ ಪ್ಲೇಟ್- XXVI-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೬. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೧. ದಪ್ಪ ೪. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮೇಲ್ಭಾಗದಲ್ಲಿ ಚಕ್ಕೆ ತೆಗೆದಿದೆ. ಉಳಿದ ಭಾಗ ಮೂಲ ಶಿಲಾ ತೊಗಟೆಯನ್ನು ಹೊಂದಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗನ್ನು ಪುಡಿಗೆಲಸ ಮಾಡಿ ಗರಗಸದಂತೆ ಮೂಡಿಸಿದೆ. ಪೀನವಾಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಹರಿತವಾಗಿದೆ. ಹಿಂಬದಿ ಅಸಮತಲವಿದ್ದು ತಾಡನ ವೇದಿಕೆಯನ್ನು ಹೊಂದಿದೆ. ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೪೫ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೭. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೬. ದಪ್ಪ ೪.. ಮಿ.ಮೀ. ಆಯತಾಕಾರ. ಮುಂಬದಿಯ ಬಲಬದಿ ದಪ್ಪವಿದ್ದು ಎಡಬದಿಗೆ ತೆಳುವಾಗುತ್ತಾ ಸಾಗಿದೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದಿದ್ದುದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗು ಸರಳರೇಖೆಯಲ್ಲಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)

೮. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೧೮. ದಪ್ಪ ೫. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ನೇರವಾಗಿದೆ. ಮೇಲ್ತುದಿಯ ಮಧ್ಯದಲ್ಲಿ ಸಣ್ಣ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗುವಂತೆ ಮಾಡಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವದ ಮೇಲ್ಭಾಗ ದಪ್ಪವಿದ್ದು, ಕೆಳಭಾಗದಲ್ಲಿ ಚಕ್ಕೆ ತೆಗೆದು ತೆಳುವಾಗಿಸಿದೆ. ಕೆಳತುದಿ ಹಿಂಬದಿ ಚಕ್ಕೆ ತೆಗೆದು ತೆಳುವಾಗಿಸಿದೆ. ಹಿಂಬದಿ ಅಸಮತಲವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೯. ಕರಡಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೬. ಅಗಲ ೧೪. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ, ಮೇಲ್ತುದಿಯಲ್ಲಿ ಮೊಂಡು ಮೊನೆ ಇದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದ್ದು ಪುಡಿಗೆಲಸದಿಂದಾಗಿ ವಕ್ರರೇಖೆಯಲ್ಲಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಮೂಲಶಿಲಾ ತೊಗಟೆ ಅಂಶವಿದೆ. ಕೆಳತುದಿ ತೆಳುವಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೩ ನಕ್ಷೆ- ೮ ಸಿಂಗರೋಲಿ ಬೇಸಿನ್ (ಎ.ಇಂ. - ೭:೧೯೫೧;೬೧)

೧೦. ಬೊಮ್ಮೇನಹಳ್ಳಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೪. ಅಗಲ ೧೦. ದಪ್ಪ ೨. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿಯ ಎಡಬದಿಗೆ ಆಳಚಕ್ಕೆ ತೆಗೆದಿದ್ದು ಉಳಿದ ಭಾಗ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡು ಮೊನೆಯನ್ನು ಹೊಂದಿದೆ. ಎಡ-ಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ಮೊಂಡಾಗಿದ್ದು ದೀರ್ಘ ವೃತ್ತಾಕಾರದಲ್ಲಿದೆ. ಕೆಳತುದಿ ತೆಳುವಾಗಿದೆ. ಹಿಂಬದಿ ಅಸಮತ-ಲವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- XV ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೦)

೧೧. ಶಿವಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೮. ದಪ್ಪ ೪. ಮಿ.ಮೀ. ಆಯತಾಕಾರ. ಮುಂಬದಿ ಉಬ್ಬುಗಳಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಪುಡಿಗೆಲಸದಿಂದಾಗಿ ಅಲಗು ಗರಗಸದಂತಿದೆ. ಬಲಪಾರ್ಶ್ವದಲ್ಲಿ ಆಳ-ಚಕ್ಕೆ ತೆಗೆದು ಮೊಂಡಾಗಿದೆ. ಕೆಳತುದಿ ತೆಳುವಾಗಿದೆ. ಹಿಂಬದಿ ಅಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೩೯ ಪ್ಲೇಟ್- XXV-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೨. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೨೪. ಅಗಲ ೧೦. ದಪ್ಪ ೪. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಸಮತಲವಿದ್ದು ಎಡಬದಿಗೆ ತೆಳುವಾಗಿದೆ. ಮೇಲ್ತುದಿ ನೇರವಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗಿದ್ದು ಪುಡಿಗೆಲಸ ಮಾಡಿದಂತಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಮೂಲಶಿಲಾ ತೊಗಟೆ ಇದೆ. ಕೆಳತುದಿಯ ಎರಡೂ ಬದಿಯಿಂದ ಚಕ್ಕೆ ತೆಗೆದಿದ್ದು ಮೊಂಡು ಮೊನೆ ಹೊಂದಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೧೬ ಪ್ಲೇಟ್- XXIV-C ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)




ಇಬ್ಬದಿ ನೀಳಚಕ್ಕೆ

೧೩. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೩೦. ಅಗಲ ೧೬. ದಪ್ಪ ೬. ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ವಕ್ರರೇಖೆಯಲ್ಲಿದ್ದು ಪುಡಿ-ಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೯೮ ಪ್ಲೇಟ್- XXVI-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೪. ಗಳಿಗೆಕೆರೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೧. ಅಗಲ ೧೮. ದಪ್ಪ ೭. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು, ಅಲ್ಲಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿಯ ಬಲಕ್ಕೆ ಚಕ್ಕೆ ತೆಗೆದು ಮೊನೆ ಮೂಡಿಸಿದ್ದು ಬಲಪಾರ್ಶ್ವಕ್ಕೆ ಹೊಂದಿಕೊಂಡಂತೆ ಇದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದ್ದು ವಕ್ರರೇಖೆಯಲ್ಲಿದೆ. ಪುಡಿಗೆಲಸದಿಂದಾಗಿ ಗರಗಸದಂತೆ ಇದೆ. ಕೆಳತುದಿಯ ಎರಡೂ ಬದಿಗಳಲ್ಲೂ ಚಕ್ಕೆ ತೆಗೆದು ಮಧ್ಯ-ದಲ್ಲಿ ಮೊಂಡು ಮೊನೆಯನ್ನು ಮೂಡಿಸಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೧೦೧ ಪ್ಲೇಟ್- XXVI-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೫. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಕ್ವಾರ್ಟ್ಸ ಶಿಲೆ. ಉದ್ದ ೩೨. ಅಗಲ ೧೫. ದಪ್ಪ ೭. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮೇಲ್ಭಾಗದಲ್ಲಿ ಮಧ್ಯ ಉಬ್ಬೇಣು ಇದ್ದು ಕೆಳಬದಿಯಲ್ಲಿ ಒಂದು ಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ವಕ್ರರೇಖೆಯಲ್ಲಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕುಗಳಲ್ಲಿ ಚಕ್ಕೆ ತೆಗೆದಿದ್ದು ಹರಿತ ಅಲಗು ಗರಗಸದಂತಿದೆ. ಹಿಂಬದಿ ನಿಮ್ನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೪ ಪ್ಲೇಟ್- XXIV-C ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೬. ಗಳಿಗೆಕೆರೆ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೨೮. ಅಗಲ ೧೭. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ನೇರ ಹರಿತ ಅಲಗು ಗರಗಸದಂತಿದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದ್ದು ಮಧ್ಯ ಭಾಗ ನಿಮ್ನವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೧ ಪ್ಲೇಟ್- XXIV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೭. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೯. ಅಗಲ ೧೫. ದಪ್ಪ ೩. ಮಿ.ಮೀ. ತ್ರಿಭುಜಾಕಾರ. ಮುಂಬದಿ ಸಮತಲವಿದ್ದು ಎಡಬದಿಯಲ್ಲಿ ಉಬ್ಬೇಣು ಇದೆ. ಮೇಲ್ತುದಿ ಬಲಬದಿಯಲ್ಲಿ ಚಕ್ಕೆ ತೆಗೆದು ಮೊನೆಯನ್ನು ಎಡಪಾರ್ಶ್ವಕ್ಕೆ ಸೇರಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಗರಗಸದಂತಿದೆ. ಬಲಪಾರ್ಶ್ವದ ನೇರ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ತೆಳುವಾಗಿದ್ದು ಗರಗಸದಂತಹ ಅಲಗನ್ನು ಹೊಂದಿದೆ. ಹಿಂಬದಿ ಸಮತಲವಾಗಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೩ ಪ್ಲೇಟ್- XXIV-C ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)









ಗಾತ್ರ ೧:೧

೧೬ ೧೭




**ದ್ವಿತೀಯ ಶ್ರೇಣಿಯ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ**

೧೮. ಮಂಚಲ್ದೊರೆ:- ಕ್ವಾರ್ಟ್ಸ ಶಿಲೆ. ಉದ್ದ ೨೫. ಅಗಲ ೧೫. ದಪ್ಪ ೫. ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳ-ಭಾಗದ ಉಬ್ಬೇಣನ್ನು ತೆಗೆದು ಉಪಕರಣವನ್ನು ತೆಳುವಾಗಿಸಿದೆ. ಮೇಲ್ತುದಿ ಚಕ್ಕೆ ತೆಗೆದು ತೆಳುವಾಗಿಸಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗ-ಳಲ್ಲೂ ಹರಿತ ಅಲಗು ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವಿದೆ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೧೯. ಮೂಗನಾಯಕನಕೋಟೆ ಪೂರ್ವ:- ಜಾಸ್ಪರ್ ಶಿಲೆ. ಉದ್ದ ೨೬. ಅಗಲ ೯. ದಪ್ಪ ೯. ಮಿ.ಮೀ. ಆಯತಾಕಾರ. ಮುಂಬದಿಯಲ್ಲಿ ಚಕ್ಕೆ ಕಲೆಗಳಿವೆ. ಹಲವಾರು ಉಬ್ಬೇಣುಗಳಿವೆ. ಮೇಲ್ತುದಿ ತೆಳುವಾಗಿದ್ದು ಅಲಗನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಗರಗಸ-ದಂತಿದೆ. ಪುಡಿಗೆಲಸದಿಂದ ಚಕ್ಕೆ ಕಲೆಗಳಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೧೭ ಪ್ಲೇಟ್- XXIV-C ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೦. ದೊಡ್ಡಗುಣಿ:- ಕ್ವಾರ್ಟ್ಸ ಶಿಲೆ. ಉದ್ದ ೨೪. ಅಗಲ ೧೨. ದಪ್ಪ ೪. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣಿನ ಸ್ವಲ್ಪ ಭಾಗ ಕತ್ತರಿಸಿದ್ದು ಉಪಕರಣ ತೆಳುವಾಗಿದೆ. ಮೇಲ್ತುದಿ ಮೊನೆ ಇದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಮೂಲಶಿಲಾ ತೊಗಟೆ ಇದ್ದು ಬಲಪಾರ್ಶ್ವ-ದಲ್ಲಿ ಪುಡಿಗೆಲಸದಿಂದಾಗಿ ಹರಿತ ಅಲಗು ಗರಗಸದಂತಿದೆ. ಕೆಳತುದಿಯ ಎರಡೂ ಬದಿಯಿಂದ ಚಕ್ಕೆ ತೆಗೆದಿದ್ದು ಮೊಂಡು ಮೊನೆ ಮೂಡಿಸಿ-ದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೦ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)


೧೮


೧೯


೨೦

ಗಾತ್ರ ೧:೧



**ಕಿರು ನೀಳಚಕ್ಕೆ**

೨೧. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೭. ದಪ್ಪ ೩. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಮೇಲ್ತುದಿ ತೆಳುವಾಗಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೯ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೫೬; ೧೦೨)

೨೨. ಗಳಿಗೆಕೆರೆ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೨೦. ಅಗಲ ೭. ದಪ್ಪ ೨. ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಕೆಳಭಾಗದಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವದಲ್ಲಿ ಹರಿತ ಅಲಗಿದ್ದು ನಿಮ್ನವಾಗಿದೆ. ಬಲಪಾರ್ಶ್ವದ ಮೇಲ್ಭಾಗದಲ್ಲಿ ಹರಿತ ಅಲಗಿದ್ದು ಕೆಳಭಾಗ ಮೂಲಶಿಲಾ ತೊಗಟೆ ಅಂಶ ಹೊಂದಿ ಮೊಂಡಾಗಿದೆ. ಕೆಳತುದಿ ವಿರುದ್ಧ ದಿಕ್ಕಿನಲ್ಲಿ ಆಳಚಕ್ಕೆ ತೆಗೆದಿದೆ. ಹಿಂಬದಿ ನಿಮ್ನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೪೪ ಪ್ಲೇಟ್- XXV-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೯೫)

೨೩. ಮೂಗನಾಯಕನಕೋಟೆ ಪಶ್ಚಿಮ:- ಜಾಸ್ಪರ್ ಶಿಲೆ. ಉದ್ದ ೧೬. ಅಗಲ ೭. ದಪ್ಪ ೨. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ನೇರವಾಗಿದೆ. ಮೇಲ್ತುದಿ ಬಲಬದಿಯಲ್ಲಿ ಚಕ್ಕೆ ತೆಗೆದಿದ್ದು ಎಡಬದಿಯಲ್ಲಿ ಕೊಕ್ಕು ಮೂಡಿಸಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೫ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)

೨೪. ಮೂಗನಾಯಕನಕೋಟೆ ಪೂರ್ವ:- ಜಾಸ್ಪರ್ ಶಿಲೆ. ಉದ್ದ ೧೬. ಅಗಲ ೧೧. ದಪ್ಪ ೨. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಎಡಬದಿಯಲ್ಲಿ ಮತ್ತೊಂದು ಉಬ್ಬೇಣು ಇದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೩ ನಕ್ಷೆ- ೫೯೮ ಸಂಗನಕಲ್ಲು (ಸಾಂಕಳಿಯಾ.ಎಚ್.ಡಿ:೧೯೭೪;೨೪೫)

೨೫. ಹೊನ್ನೇಮಾರನಹಳ್ಳಿ:- ಜಾಸ್ಪರ್ ಶಿಲೆ. ಉದ್ದ ೧೨. ಅಗಲ ೧೧. ದಪ್ಪ ೨. ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬೇಣನ್ನು ಕತ್ತರಿಸಿ ತೆಗೆದು ಉಪಕರಣವನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಆಳಚಕ್ಕೆ ತೆಗೆದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗನ್ನು ಮೂಡಿಸಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೨೧ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೨೭. ಧಣಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೧೧. ಅಗಲ ೮. ದಪ್ಪ ೧. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ಅಗಲವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗು ನೇರವಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ಆಳಚಕ್ಕೆ ತೆಗೆದು ಅಲಗು ಮೂಡಿಸಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩ ಪ್ಲೇಟ್- XXVII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ:೧೯೭೫)
(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

೨೭. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೧೧. ಅಗಲ ೭. ದಪ್ಪ ೨. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳಭಾಗದಲ್ಲಿ ಕತ್ತರಿಸಿ ತೆಗೆದಿದೆ. ಮೇಲ್ತುದಿ ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ನಿಮ್ನವಾಗಿದೆ. ಬಲ-ಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿಯು ತೆಳುವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:-ಸಂಖ್ಯೆ-೫೪೭ ನಕ್ಷೆ-೫೯೦ ಸಂಗನಕಲ್ಲು(ಸಾಂಕಳಿಯಾ.ಎಚ್.ಡಿ:೧೯೭೪;೨೪೫)(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)




ಗಾತ್ರ ೧:೧




ಕೈಚಾಕು ನೀಳಚಕ್ಕೆ

೨೪. ಬೊಮ್ಮೇನಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ४೦. ಅಗಲ ೧೭. ದಪ್ಪ ೫. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲರ್ಧ ಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಕೆಳಅರ್ಧ ಭಾಗದಲ್ಲಿ ಒಂದು ಚಕ್ಕೆ ತೆಗೆದಿದೆ. ಬಲಬದಿಯಲ್ಲಿ ಆಳಚಕ್ಕೆ ತೆಗೆ-ಬಿದೆ. ಮೇಲ್ತುದಿ ತ್ರಿಭುಜಾಕಾರದಲ್ಲಿದ್ದು ಹರಿತ ಮೊನೆ ಇದೆ. ಎಡಪಾರ್ಶ್ವದ ಅರ್ಧ ಭಾಗವು ದೀರ್ಘವೃತ್ತಾಕಾರದ ಹರಿತ ಅಲಗನ್ನು ಹೊಂದಿದೆ. ಕೆಳಭಾಗದಲ್ಲಿ ಚಕ್ಕೆ ತೆಗೆದು ಹಿಡಿಕೆಗೆ ಅನುಕೂಲವಾಗುವಂತೆ ಮಾಡಿದೆ. ಬಲಪಾರ್ಶ್ವ ದಪ್ಪವಿದ್ದು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೪ ಪ್ಲೇಟ್- XV ಬೆಂಗಳೂರು (ಶೇಷಾದ್ರಿ.ಎಂ:೧೯೫೭;೧೦೦)

೨೯. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೩೭. ಅಗಲ ೧೨. ದಪ್ಪ ೭. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಹಲವು ಚಕ್ಕೆ ಕಲೆಗಳಿದ್ದು ಕೆಳಭಾಗದಲ್ಲಿ ಉಬ್ಬೇಣನ್ನು ತೆಗೆದಿದ್ದು ಉಪಕರಣವನ್ನು ತೆಳುವಾಗಿಸಿದೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದ್ದು ಎರಡೂ ಪಾರ್ಶ್ವಗಳಲ್ಲೂ ಆಳಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಕೆಳತುದಿ ತೆಳುವಾಗಿಸಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೯ ಪ್ಲೇಟ್- XXV-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೦. ಹಿರೇಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೭. ಅಗಲ ೧೫. ದಪ್ಪ ೫. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಉಬ್ಬು ತಗ್ಗುಗಳಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡಾಗಿದೆ. ಬಲಬದಿಗೆ ಕೊಕ್ಕನ್ನು ಹೊಂದಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ವಕ್ರರೇಖೆಯಲ್ಲಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಮೇಲರ್ಧ ಭಾಗ ನಿಮ್ನವಾಗಿದ್ದರೆ ಉಳಿದ ಅರ್ಧ ಭಾಗ ಪೀನವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೧೩ ನಕ್ಷೆ- ೭೭D ಪಾಚಡ್ ಕೇವ್ಸ್ (ಮಹಾರಾಷ್ಟ್ರ) (ಸಾಂಕಳಿಯಾ.ಎಚ್.ಡಿ:೧೯೭೪:೨೭೮)




ಗಾತ್ರ ೧:೧




**ಗರಗಸದಂತಹ ನೀಳಚಕ್ಕೆ**

೩೧. ಮೂಗನಾಯಕನಕೋಟೆ ಪೂರ್ವ:- ಜಾಸ್ಪರ್ ಶಿಲೆ ಉದ್ದ ೨೬. ಅಗಲ ೧೩. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಚಕ್ಕೆ ಕಲೆಗಳಿದ್ದು ಉಬ್ಬನ್ನು ತೆಗೆದು ಉಪಕರಣವನ್ನು ತೆಳುವಾಗಸಿದೆ. ಮೇಲ್ತುದಿ ತೆಳುವಾಗಿಸಿದ್ದು ಮೊನೆ ಮೂಡಿಸಿದೆ. ಎರಡೂ ಪಾರ್ಶ್ವಗಳಲ್ಲೂ ಪುಡಿಗೆಲಸ ಮಾಡಿ ಗರಗಸದಂತಹ ಅಲಗನ್ನು ಮೂಡಿಸಿದೆ. ಕೆಳತುದಿಯ ಬಲಬದಿ ತೆಳುವಾಗಿದ್ದು ಬೆರಳಿಡಿಕೆಗೆ ಅನುಕೂಲವಾಗುವಂತಿದೆ. ಎಡ ಬದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಇದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೩ ನಕ್ಷೆ- ೭೩ ಲಾಂಗ್ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೭೪:೨೫೩)

೩೨. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೨೧. ಅಗಲ ೧೧. ದಪ್ಪ ೫. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಅಲಗನ್ನು ದೊಡ್ಡ ಪ್ರಮಾಣದ ಗರಗಸದಂತೆ ಮೂಡಿಸಿದೆ. ಬಲಪಾರ್ಶ್ವದ ಅಲಗು ಹರಿತವಾಗಿದ್ದು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨೯ ನಕ್ಷೆ- ೬೩ ಲಾಂಗ್‌ನಾಜ್(ಮಹಾರಾಷ್ಟ್ರ) (ಸಾಂಕಳಿಯಾ.ಎಚ್.ಡಿ:೧೯೬೪;೨೫೩)

೩೩. ಶೆಟ್ಟಿಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೫. ಅಗಲ ೮. ದಪ್ಪ ೩ ಮಿ.ಮೀ. ಆಯತಾಕಾರ. ಮುಂಬದಿ ಉಬ್ಬೇಣು ಇದ್ದು ತೆಳುವಾಗಿದೆ. ಮೇಲ್ತುದಿ ತೆಳುವಾಗಿದ್ದು ಮೊಂಡಾಗಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವದ ಅಲಗು ದೊಡ್ಡ ಪ್ರಮಾಣದ ಗರಗಸದಂತಿದೆ. ಕೆಳತುದಿ ಮೊನೆಯನ್ನು ಹೊಂದಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ -೨೯ ನಕ್ಷೆ- ೬೩ ಲಾಂಗ್‌ನಾಜ್ (ಮಹಾರಾಷ್ಟ್ರ) (ಸಾಂಕಾಳಿಯಾ:೧೯೬೪;೨೫೩)



೩೧



೩೨



೩೩

ಗಾತ್ರ ೧:೧




**ಹೆರೆಚಕ್ಕೆ ಮಾದರಿ**

**ಒಬ್ಬದಿ ಹೆರೆಚಕ್ಕೆ**

೩೪. ಶೆಟ್ಟಿಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೨೦. ದಪ್ಪ ೯. ಮಿ.ಮೀ. ಅಂಡಾಕಾರ. ಮುಂಬದಿ ಚಕ್ಕೆ ಕಲೆಗಳಿದ್ದು ಎಡಬದಿ ತೆಳುವಾಗಿದ್ದರೆ ಬಲಬದಿ ದಪ್ಪವಾಗಿದೆ. ಮೇಲ್ತುದಿ ಕೊಕ್ಕಿನ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದ್ದು ಅರ್ಧವೃತ್ತಾಕಾರವಾಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಮೂಲಶಿಲಾ ತೊಗಟೆ ಅಂಶವಿದೆ. ಕೆಳತುದಿ ಮೊಂಡು ಮೊನೆ ಹೊಂದಿದೆ. ಹಿಂಬದಿ ಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)

೩೫. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೩೦. ಅಗಲ ೨೦. ದಪ್ಪ ೮. ಮಿ.ಮೀ. ಅರ್ಧ ವೃತ್ತಾಕಾರ ಮುಂಬದಿಯಲ್ಲಿ ಚಕ್ಕೆ ಕಲೆಗಳಿದ್ದು ಹಲವು ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿ ಮೊನೆ ಇದ್ದು ಎಡಪಾರ್ಶ್ವದಲ್ಲಿ ಗರಗಸದಂತಹ ಹರಿತ ಅಲಗು ಅರ್ಧ ವೃತ್ತಾಕಾರದಲ್ಲಿದೆ. ಪುಡಿಗೆಲಸ ಮಾಡಿದೆ. ಬಲಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ದಪ್ಪದಿಂದಾಗಿ ಮೊಂಡಾಗಿದೆ. ಕೆಳತುದಿ ಭಾಗ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ತಾಡನ ಶಂಖುವಿದೆ.

ಸಾಮ್ಯ:- ಸಂಖ್ಯೆ- ೧೦ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೩೬. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೨೦. ದಪ್ಪ ೮. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಹಲವು ಚಕ್ಕೆ ಕಲೆಗಳಿದ್ದು ಉಬ್ಬೇಣುಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಮೇಲರ್ಧ ಭಾಗವನ್ನು ವಿರುದ್ಧ ದಿಕ್ಕಿನಲ್ಲಿ ಚಕ್ಕೆಗಳನ್ನು ತೆಗೆದಿದ್ದು ನಿಮ್ನ ಹರಿತ ಅಲಗಿದೆ. ಕೆಳಅರ್ಧ ಭಾಗದಲ್ಲಿ ಪುಡಿಗೆಲಸ ಮಾಡಿ ಗರಗಸದಂತಹ ಅಲಗು ಮೂಡಿಸಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನುಹೊಂದಿದೆ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- XVI ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೧)

೩೭. ಮೂಗನಾಯಕನಕೋಟೆ ದಕ್ಷಿಣ:- ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಬಲಬದಿಗೆ ಒರಟು ಚಕ್ಕೆ ಕಲೆಗಳಿವೆ. ಎಡಬದಿಯ ಅಂಚನ್ನು ತೆಳುವಾಗಿಸಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವ ಅಲಗು ವಕ್ರರೇಖೆಯಲ್ಲಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೧೧ ಪ್ಲೇಟ್- XVI ಬೆಂಗಳೂರು (ಶೇಷಾದ್ರಿ.ಎಂ:೧೯೫೬; ೧೦೧)

೩೮. ಥಣಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೧೭. ದಪ್ಪ ೫. ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಅಂಚಿನ ಕಡೆಗೆ ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ತೆಳುವಾಗಿದ್ದು ಮೊಂಡು ಮೊನೆ ಹೊಂದಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ನಿಮ್ನ ಅಲಗು ಮೂಡಿದೆ. ಬಲಪಾರ್ಶ್ವದಲ್ಲಿ ವಿರುದ್ಧ ದಿಕ್ಕುಗಳಿಂದ ಚಕ್ಕೆ ತೆಗೆದು ವಕ್ರ ಹರಿತ ಅಲಗನ್ನು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ಅಲ್ಲಲ್ಲಿ ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೨ ಪ್ಲೇಟ್- XVI ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೧)







ಗಾತ್ರ ೧:೧




ಇಬ್ಬದಿ ಹೆರೆಚಕ್ಕೆ

೩೯. ದೊಡ್ಡಗುಣಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೨೦. ದಪ್ಪ ೬. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಎಡಪಾರ್ಶ್ವಕ್ಕೆ ಸೇರಿಕೊಂಡ ಮೊಂಡು ಮೊನೆ ಇದೆ. ಎಡಪಾರ್ಶ್ವದಲ್ಲಿ ಪುಡಿಗೆಲಸದಿಂದಾಗಿ ಅಲಗು ನಿಮ್ನವಾಗಿದೆ. ಬಲಪಾರ್ಶ್ವದಲ್ಲಿ ಅರ್ಧ ವೃತ್ತಾಕಾರದ ಅಲಗು ಇದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧ ಪ್ಲೇಟ್- XV ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೦)

೪೦. ಗಳಿಗೆಕೆರೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೬. ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವದಲ್ಲೂ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಹರಿತ ಅಲಗು ವಕ್ರರೇಖೆಯಲ್ಲಿ ಸಾಗಿವೆ. ಕೆಳತುದಿಯಲ್ಲಿ ತೆಳುವಾದ ಮೊಂಡು ಮೊನೆ ಇದೆ. ಹಿಂಬದಿ ಅಸಮತಲವಾಗಿದ್ದು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೧೫ ನಕ್ಷೆ- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೪೧. ದೊಡ್ಡಗುಣಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೮. ಅಗಲ ೨೨. ದಪ್ಪ ೬. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮಧ್ಯದಲ್ಲಿ ಮೊಂಡು ಮೊನೆ ಇದ್ದು ಬಲಬದಿ ದಪ್ಪವಿದೆ. ಎಡಬದಿ ತೆಳುವಾಗಿದ್ದು ಹರಿತವಾಗಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದ್ದು ವಕ್ರವಾಗಿದೆ. ಬಲಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಲ್ಲಿ ಪುಡಿಗೆಲ-

ಸದಿಂದಾಗಿ ಗರಗಸದಂತಹ ನೇರ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೬ ನಕ್ಷೆ ೧೧ ಗಿಡ್ಡಲೂರು (ಎ.ಇಂ.-೮:೧೯೫೨;೯೧)

೪೨. ಮೂಗನಾಯಕನಕೋಟೆ ಪೂರ್ವ:- ಜಾಸ್ಪರ್ ಶಿಲೆ. ಉದ್ದ ೨೬. ಅಗಲ ೨೦. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಮರುಚಕ್ಕೆ ತೆಗೆದು ಉಪಕರಣವನ್ನು ತೆಳುವಾಗಿಸಿದೆ. ಪರಿಧಿಯ ಕಡೆಗೆ ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡು ಮೊನೆಯನ್ನು ಹೊಂದಿದೆ. ಎಡಪಾರ್ಶ್ವದ ಅಲಗು ವಕ್ರರೇಖೆಯಲ್ಲಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೦ ನಕ್ಷೆ- ೧೧ ಗಿಡ್ಡಲೂರು (ಎ.ಇಂ.-೮:೧೯೫೨;೯೧)

೪೩. ಗಳಿಗೆಕೆರೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೧೮. ದಪ್ಪ ೧೦. ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ತೆಳುವಾಗಿದ್ದು ಅಲಗನ್ನು ಹೊಂದಿದೆ. ಎಡಪಾರ್ಶ್ವದಲ್ಲಿ ಪುಡಿಗೆಲಸ ಮಾಡಿ ಹರಿತ ಅಲಗನ್ನು ಮೂಡಿಸಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗಿದ್ದು ಮೇಲ್ಭಾಗದಲ್ಲಿ ಕೊಕ್ಕು ಇದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)




ಗಾತ್ರ ೧:೧



**ತುದಿಹೆರೆಚಕ್ಕೆ**

೪೪. ಮಂಚಲ್ದೊರೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೦. ಅಗಲ ೨೨. ದಪ್ಪ ೧೦. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿಯ ಮೇಲರ್ಧ ಭಾಗ-ವನ್ನು ಚಕ್ಕೆ ತೆಗೆದು ತೆಳುವಾಗಿಸಿದೆ. ಕೆಳ ಅರ್ಧ ಭಾಗ ದಪ್ಪವಿದ್ದು ಶಿಲಾ ತೊಗಟೆ ಅಂಶವಿದೆ. ಮೇಲ್ತುದಿ ಪುಡಿಗೆಲಸದಿಂದಾಗಿ ಗರಗಸದಂತಹ ಹರಿತ ಅಲಗು ಅರ್ಧ ವೃತ್ತಾಕಾರದಲ್ಲಿದೆ. ಎರಡೂ ಪಾರ್ಶ್ವಗಳ ಕೆಳ ಅರ್ಧ ಭಾಗ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದ್ದು ಚಕ್ಕೆ ಕಲೆಗಳಿವೆ ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೧೪ ನಕ್ಷೆ- XVI ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೧)

೪೫. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೨೯. ಅಗಲ ೧೬. ದಪ್ಪ ೮. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಪರಿಧಿಯ ಕಡೆಗೆ ಚಕ್ಕೆ ಕಲೆಗಳಿದ್ದು ತೆಳುವಾಗಿದೆ. ಕೆಳಬದಿ ಚಕ್ಕೆ ತೆಗೆದು ಹಿಡಿಕೆಗೆ ಅನುಕೂಲವಾಗಿಸಿದೆ. ಮೇಲ್ತುದಿ ಪುಡಿಗೆಲಸ ದಿಂದಾಗಿ ಹರಿತ ಅಲಗು ವಕ್ರರೇಖೆಯಲ್ಲಿದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಬಲಬದಿಗೆ ಮೊಂಡು ಮೊನೆಯಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೭ ನಕ್ಷೆ- XVI ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೧)

೪೬. ಹಿರೇಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೫. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣಿದ್ದು ಚಕ್ಕೆ ಕಲೆಗಳಿ-ವೆ. ಕೆಳಭಾಗದಲ್ಲಿ ಚಕ್ಕೆ ತೆಗೆದಿದ್ದು ಬೆರಳಡಿಕೆಗೆ ಅನುಕೂಲವಾಗುವಂತಿದೆ. ಮೇಲ್ತುದಿ ಅರ್ಧ ವೃತ್ತಾಕಾರವಾಗಿದ್ದು ಹರಿತ ಅಲಗನ್ನು ಗರಗಸ-ದಂತೆ ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ೬ ಪ್ಲೇಟ್- XXVIII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೭. ಮೂಗನಾಯಕನಕೋಟೆ ಪಶ್ಚಿಮ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೧೮. ದಪ್ಪ ೫. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿಯಲ್ಲಿ ಹಲವು ಚಕ್ಕೆ ಕಲೆಗಳಿದ್ದು ಕೆಳಭಾಗದಲ್ಲಿ ಉಬ್ಬು ಇದೆ. ಮೇಲ್ತುದಿ ಹರಿತ ಅಲಗು ಗರಗಸದಂತಿದ್ದು ಎಡಬದಿ ಮೊಂಡಾಗಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೂಲಶಿಲಾ ತೊಗಟೆ ಅಂಶವಿದೆ. ಹಿಂಬದಿ ಪೀನವಾಗಿದ್ದು ಚಕ್ಕೆ ಕಲೆಗಳಿವೆ. ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೪೮. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೧೭. ಅಗಲ ೧೯. ದಪ್ಪ ೭. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಎಡಬದಿಗೆ ಅಗಲ ಚಕ್ಕೆ ತೆಗೆದಿದ್ದು ಬಲಬದಿಗೆ ಕಿರುಚಕ್ಕೆ ತೆಗೆದ ಕಲೆಗಳಿವೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆಗಳನ್ನು ತೆಗೆದಿದ್ದು ಹರಿತ ಅಲಗು ವಕ್ರರೇಖೆಯಲ್ಲಿದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಬಲಪಾರ್ಶ್ವದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೧೩೪ ನಕ್ಷೆ ೮ ಸಿಂಗರೋಲಿ ಬೇಸಿನ್ (ಎ.ಇಂ.-೭:೧೯೫೧;೬೧)




ಗಾತ್ರ ೧:೧




**ದುಂಡು ಹೆರೆಚಕ್ಕೆ**

೪೯. ಸಿದ್ಲೇಹಳ್ಳಿ.:- ಕ್ವಾರ್ಟ್ಸ್ ಶಿಲೆ. ಉದ್ದ ೨೯. ಅಗಲ ೨೨. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿಯಲ್ಲಿ ಹಲವು ಚಕ್ಕೆ ಕಲೆಗಳಿದ್ದು ಉಬ್ಬೇಣನ್ನು ಹೊಂದಿದೆ. ಮೇಲ್ತುದಿ ಮಧ್ಯದಲ್ಲಿ ಮೊಂಡು ಮೊನೆ ಇದ್ದು, ಎರಡೂ ಬದಿಗೂ ಚಕ್ಕೆ ತೆಗೆದಿದ್ದು ಅಲಗು ಇದೆ. ಎರಡೂ ಪಾರ್ಶ್ವಗಳಲ್ಲಿಯೂ ಅಲಗು ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖು-ವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೬ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೫೦. ಗಳಿಗೆಕೆರೆ:- ಆದಿರುಯುಕ್ತ ಕ್ವಾರ್ಟ್ಸ ಶಿಲೆ. ಉದ್ದ ೩೦. ಅಗಲ ೨೫. ದಪ್ಪ ೫. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಪುಡಿಗೆಲಸದಿಂದಾಗಿ ಹರಿತ ಅಲಗು ವಕ್ರರೇಖೆಯಲ್ಲಿದೆ. ಎಡಪಾರ್ಶ್ವ ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೮ ನಕ್ಷೆ- ೫೯ ತಿನ್ನವೇಲಿ (ಸಾಂಕಳಿಯಾ.ಎಚ್.ಡಿ:೧೯೭೪;೨೪೩)

೫೧. ಇರಕಸಂದ್ರಕಾಲೋನಿ:- ಕ್ವಾರ್ಟ್ಸ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೫. ಮಿ.ಮೀ. ಪಂಚಭುಜಾಕೃತಿ. ಮುಂಬದಿ ಮಧ್ಯ ಉಬ್ಬಿದ್ದು ಹಲವು ಚಕ್ಕೆ ಕಲೆಯು ಪರಿಧಿಯ ಕಡೆಗೆ ಸಾಗಿದೆ. ಮೇಲ್ತುದಿ ಮಧ್ಯದಲ್ಲಿ ಮೊನೆ ಇದ್ದು ಎರಡೂ ಬದಿಗೆ ಹರಿತ ಅಲಗು ಇದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ಮಧ್ಯದಲ್ಲಿ ಮೊಂಡು ಮೊನೆ ಇದ್ದು ಉಳಿದ ಭಾಗ ದಪ್ಪ-ವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದ್ದು ತಾಡನ ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧೩೪ ನಕ್ಷೆ- ೮ ಸಿಂಗರೋಲಿ ಬೇಸಿನ್ (ಎ.ಇಂ.-೭;೧೯೫೧;೭೧)

೫೨. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ ಶಿಲೆ. ಉದ್ದ ೨೨. ಅಗಲ ೨೦. ದಪ್ಪ ೩. ಮಿ.ಮೀ. ವೃತ್ತಾಕಾರ. ಮುಂಬದಿ ಹೆಚ್ಚು ಕಡಿಮೆ ಸಮವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ತೆಳುವಾಗಿದ್ದು ಅಲಗು ಮತ್ತು ಕೊಕ್ಕನ್ನು ಹೊಂದಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿಯಲ್ಲಿ ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೨೮ ನಕ್ಷೆ- ೭೦ ಬಾಂಬೆ (ಸಾಂಕಳಿಯಾ.ಎಚ್.ಡಿ:೧೯೭೪;೨೪೮)

೫೩. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ ಶಿಲೆ. ಉದ್ದ ೧೭. ಅಗಲ ೧೭. ದಪ್ಪ ೨. ಮಿ.ಮೀ. ವೃತ್ತಾಕಾರ. ಮುಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಹಲವಾರು ಚಕ್ಕೆ ಕಲೆಗಳಿವೆ. ಮೇಲ್ತುದಿ ಕಿರು ಆಳಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದ್ದು ಗರಗಸದಂತಿದೆ. ಎರಡೂ ಪಾರ್ಶ್ವಗಳಲ್ಲೂ ಅಲಗು ಇದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ

ಸಾಮ್ಯ:- ಸಂಖ್ಯೆ- ೧೪ ನಕ್ಷೆ- ೫೯ ಬೀರ್‌ಭಾನ್‌ಪುರ (ಸಾಂಕಳಿಯಾ.ಎಚ್.ಡಿ:೧೯೭೪;೨೪೩)


೪೯


೫೦




**ಒಳಬಾಗಿದ ಅಂಚಿನ ಹೆರೆಚಕ್ಕೆ**

೫೪. ಕರಡಿ:- ಕ್ವಾರ್ಟ್ಸ್ ಶಿಲೆ. ಉದ್ದ ೩೧. ಅಗಲ ೩೧. ದಪ್ಪ ೧೦. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಅಂಚು ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಕೆಳಭಾಗ ಒಳಭಾಗಿದ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೦ ನಕ್ಷೆ- ೬೦ ಬಾಂಬೆ (ಸಾಂಕಳಿಯಾ.ಎಚ್.ಡಿ:೧೯೬೪;೨೪೮)

೫೫. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೩೦. ಅಗಲ ೨೦. ದಪ್ಪ ೧೧. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವಾರು ಚಕ್ಕೆ ಕಲೆಗಳಿವೆ. ಮೇಲ್ಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಮೇಲ್ತುದಿ ಮಧ್ಯದಲ್ಲಿ ಮೊನೆ ಇದ್ದು ಮೊಂಡಾಗಿದೆ. ಎಡಪಾರ್ಶ್ವ ಒಳಬಾಗಿದ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿಯಲ್ಲಿ ಉಬ್ಬೇಣು ಇದ್ದು ಅಸಮತಲವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೯ ನಕ್ಷೆ- ೬೦ ಬಾಂಬೆ (ಸಾಂಕಳಿಯಾ.ಎಚ್.ಡಿ:೧೯೬೪;೨೪೮)

೫೬. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೧. ದಪ್ಪ ೮. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಬೆರಳಿಡಿಕೆಗೆ ಅನುಕೂಲವಾಗುವಂತಿದೆ. ಎಡಪಾರ್ಶ್ವದ ಮಧ್ಯದಲ್ಲಿ ಒಳಬಾಗಿದ ಹರಿತ ಅಲಗು ಇದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ವೃತ್ತಾಕಾರದಲ್ಲಿದೆ. ಕೆಳತುದಿ ದೀರ್ಘ ವೃತ್ತಾಕಾರವನ್ನು ಹೊಂದಿದ್ದು ಹರಿತ ಅಲಗು ಇದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೩ ಪ್ಲೇಟ್- XXIV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೬೫)

೫೭. ಮಂಚಲ್ದೊರೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೬. ಅಗಲ ೨೦. ದಪ್ಪ ೧೦. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಪರಿಧಿಯ ಕಡೆಗೆ ಆಳಚಕ್ಕೆಗಳನ್ನು ತೆಗೆದ ಕಳೆಗಳಿವೆ. ಮೇಲ್ತುದಿಯ ಎಡಬದಿಯಲ್ಲಿ ಮೊನೆಯಂತಿದ್ದು ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಒಳಬಾಗಿದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವ ಅಲಗನ್ನು ಹೊಂದಿದೆ. ದೀರ್ಘವೃತ್ತಾಕಾರದ ಹರಿತ ಅಲಗಿದೆ. ಕೆಳತುದಿಯ ಎಡಬದಿಗೆ ಮೊನೆ ಇದ್ದು ಉಳಿದ ಭಾಗ ಹರಿತ ಅಲಗನ್ನು ಹೊಂದಿದೆ. ಹಿಂಬದಿ ಸಮ-ತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ

೫೮. ಶೆಟ್ಟಿಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೧೩. ದಪ್ಪ ೫. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆ-ಯಲ್ಲಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಎರಡೂ ಬದಿಗಳಲ್ಲೂ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಎಡಪಾರ್ಶ್ವದ ಮೇಲ್ಭಾಗದಲ್ಲಿ ಒಳಬಾಗಿದ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವದ ಹರಿತ ಅಲಗು ದೀರ್ಘ ವೃತ್ತಾಕಾರವಾಗಿದೆ. ಪುಡಿಗೆಲಸ ಮಾಡಿ-ದೆ. ಕೆಳತುದಿ ವೃತ್ತಾಕಾರದಲ್ಲಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XVIII ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬;೧೦೩)




ಗಾತ್ರ ೧:೧



**ಮೂಲಗಟ್ಟ ಹೆರೆಚಕ್ಕೆ**

೫೯. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೩೧. ಅಗಲ ೩೦. ದಪ್ಪ ೧೦. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣುನ್ನು ಕತ್ತರಿಸಿ ತೆಗೆಯಲಾಗಿದೆ. ಹಲವು ಚಕ್ಕೆ ಕಲೆಗಳಿವೆ. ಬಲಬದಿಗೆ ಆಳಚಕ್ಕೆ ತೆಗೆದಿದೆ. ಮೇಲ್ತುದಿ ದಪ್ಪವಿದ್ದು ಮಧ್ಯ ಭಾಗ-ದಲ್ಲಿ ಬೆರಳಿಡಿಕೆಗೆ ಅನುಕೂಲವಾಗುವಂತೆ ನಿಮ್ನವಾಗಿಸಿದೆ. ಎಡಪಾರ್ಶ್ವದ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವ ವೃತ್ತಾಕಾರವಾಗಿದ್ದು ವಿರುದ್ಧ ದಿಕ್ಕಿನಲ್ಲಿ ಚಕ್ಕೆ ಕಲೆಗಳನ್ನು ತೆಗೆದಿದೆ. ಕೆಳತುದಿ ಮೊನೆಯಂತಿದೆ. ಹಿಂಬದಿ ಅಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)

೬೦. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೩೨. ಅಗಲ ೨೮. ದಪ್ಪ ೧೦. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಪುಡಿಗೆಲಸ-ದಿಂದಾಗಿ ಹರಿತ ಅಲಗಿನಂತಿದೆ. ಬಲಪಾರ್ಶ್ವದ ಅಲಗು ಮಧ್ಯದಲ್ಲಿ ಪೀನವಾಗಿದ್ದು ವಕ್ರರೇಖೆಯಲ್ಲಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದಿದ್ದು ಹರಿತ ಅಲಗನ್ನು ಹೊಂದಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ತೆಗೆದ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೧೩೨ ನಕ್ಷೆ- ೮ ಸಿಂಗರೋಲಿ ಬೇಸಿನ್ (ಎ.ಇಂ.-೭;೧೯೫೧;೧೩೨)

೬೧. ಮೂಗನಾಯಕನಕೋಟೆ ಪಶ್ಚಿಮ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೩೦. ಅಗಲ ೨೫. ದಪ್ಪ ೧೦. ಮಿ.ಮೀ. ಅಂಡಾಕಾರ. ಮುಂಬದಿಯಲ್ಲಿ ಪರಿಧಿಯ ಕಡೆಗೆ ಚಕ್ಕೆ ಕಲೆಗಳನ್ನು ತೆಗೆದಿದ್ದು ಮಧ್ಯದಲ್ಲಿ ಸಮತಲ ಉಬ್ಬನ್ನು ಹೊಂದಿದೆ. ಪರಿಧಿಯ ಸುತ್ತಲೂ ಪುಡಿಗೆಲಸ-ದಿಂದಾಗಿ ಹರಿತ ಅಲಗು ವಕ್ರರೇಖೆಯಲ್ಲಿದೆ. ಮೇಲ್ತುದಿಯ ಎಡಬದಿಗೆ ಮೊಂಡು ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ವಕ್ರರೇಖೆಯ ಹರಿತ ಅಲಗು ಇದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಹಿಂಬದಿ ಮಧ್ಯ ಉಬ್ಬು ಇದ್ದು ಮೂಲಶಿಲಾ ತೊಗಟೆ ಅಂಶವಿದೆ. ಪರಿಧಿಯ ಕಡೆಗೆ ಚಕ್ಕೆ ಕಲೆಗಳಿವೆ. ಪುಡಿಗೆಲಸ ಮಾಡಿದೆ.

ಸಾಮ್ಯ:- ಸಂಖ್ಯೆ- ೮೫ ನಕ್ಷೆ- ೬೭ ಬಾಗೂರ್ ( ರಾಜಾಸ್ಥಾನ) (ಸಾಂಕಳಿಯಾ.ಎಚ್.ಡಿ:೧೯೭೪;೨೬೨)

೬೨. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೨೬. ಅಗಲ ೨೮. ದಪ್ಪ ೫. ಮಿ.ಮೀ. ಅಸಮ ವೃತ್ತಾಕಾರ. ಮುಂಬದಿ ಮಧ್ಯ ಉಬ್ಬು ತೆಗೆದು ಉಪಕರಣವನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಪರಿಧಿಯ ಸುತ್ತಲೂ ಪುಡಿಗೆಲಸ ಮಾಡಿದೆ. ಮೇಲ್ತುದಿಯ ಎಡ-ಬದಿ ದಪ್ಪವಿದ್ದು ಬಲಬದಿಗೆ ಮೊನೆ ಮೂಡಿಸಿದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆಗಳನ್ನು ತೆಗೆದು ತೆಳುವಾದ ಹರಿತ ಅಲಗನ್ನು ಮೂಡಿಸಿದೆ. ಬಲಪಾರ್ಶ್ವದ ಹರಿತ ಅಲಗು ವೃತ್ತಾಕಾರವಾಗಿದ್ದು ಪುಡಿಗೆಲಸದಿಂದಾಗಿ ವಕ್ರವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೧೬ ನಕ್ಷೆ- ೬೦ ಜಬ್ಬಲ್‌ಪುರ (ಸಾಂಕಳಿಯಾ.ಎಚ್.ಡಿ:೧೯೭೪;೨೪೮)





೫೯





೬೦





೬೧





೬೨

ಗಾತ್ರ ೧:೧




**ಮೊನೆ ಮಾದರಿ**

**ಸಾಮಾನ್ಯ ಮೊನೆ**

೬೩. ಮೂಗನಾಯಕನಕೋಟೆ ಪೂರ್ವ:- ಜಾಸ್ಪರ್ ಶಿಲೆ ಉದ್ದ ೨೮. ಅಗಲ ೨೦. ದಪ್ಪ ೮. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮಧ್ಯದಲ್ಲಿ ಮೊನೆ ಇದೆ. ಎಡಬದಿಯಲ್ಲಿ ಚಕ್ಕೆ ತೆಗೆದಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗು ಇದೆ. ಬಲಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಕೆಳತುದಿಯಲ್ಲಿ ಎರಡೂ ಬದಿಗೆ ಚಕ್ಕೆ ತೆಗೆದಿದ್ದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದೆ. ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೬೬ ನಕ್ಷೆ- ೧೧ ಗಿಡ್ಡಲೂರು (ಎ.ಇಂ.-೮:೧೯೫೨;೯೧)

೬೪. ಗಳಿಗೆಕೆರೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೧೨. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಕೆಳತುದಿಯಿಂದ ಮೇಲ್ತುದಿವರೆಗೆ ಇದೆ. ಎಡಬದಿ ಮೂಲಶಿಲಾ ತೊಗಟೆಯನ್ನು ಹೊಂದಿದ್ದು ಬಲಬದಿ ಚಕ್ಕೆ ಕಲೆಗಳನ್ನು ಹೊಂದಿದೆ. ಮೇಲ್ತುದಿ ಮೊಂಡು ಮೊನೆ ಹೊಂದಿದ್ದು ಎಡಪಾರ್ಶ್ವಕ್ಕೆ ಹೊಂದಿಕೊಂಡಿದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಬಲಪಾರ್ಶ್ವ ದೀರ್ಘವೃತ್ತಾಕಾರದ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಹಿಂಬದಿ ಅಸ-ಮತಲವಿದ್ದು ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ - ೬೨ ಪ್ಲೇಟ್ - XIII ಜಾಲಹಳ್ಳಿ ( ಸಾಂಕಳಿಯಾ.ಎಚ್.ಡಿ:೧೯೬೪;೯೮)

೬೫. ಮೂಗನಾಯಕನಕೋಟೆ ಪೂರ್ವ:- ಜಾಸ್ಪರ್ ಶಿಲೆ. ಉದ್ದ ೨೨. ಅಗಲ ೧೮. ದಪ್ಪ ೮. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಕೆಳತುದಿಯಿಂದ ಮೇಲ್ತುದಿಯವರೆಗೂ ಇದೆ. ಮೇಲ್ತುದಿ ಮೊನೆ ಇದೆ. ಎಡಪಾರ್ಶ್ವದ ಮೇಲ್ಭಾಗದಲ್ಲಿ ಹರಿತ ಅಲಗಿದ್ದು, ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಕೆಳತುದಿಯಿಂದ ಮತ್ತು ಹಿಂಬದಿಯಿಂದ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತ ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದ್ದು ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೦ ನಕ್ಷೆ- ೫೯ ತಿನ್ನವೇಲಿ (ಸಾಂಕಳಿಯಾ.ಎಚ್.ಡಿ:೧೯೬೪;೨೪೩)

೬೬. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೧೮. ಅಗಲ ೧೦. ದಪ್ಪ ೩. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬನ್ನು ಕತ್ತರಿಸಿ ಅಲಗನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಮೂಡಿಸಿದೆ. ಎಡಪಾರ್ಶ್ವದ ಹರಿತ ಅಲಗನ್ನು ಆಳಚಕ್ಕೆ ತೆಗೆದು ಮೂಡಿಸಿದೆ. ಬಲಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ತೆಳುವಾಗಿದ್ದು ಅರ್ಧ ವೃತ್ತಾಕಾರದ ಅಲಗನ್ನು ಹೊಂದಿದೆ. ಹಿಂಬದಿ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೬೧ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೬೫)

೬೭. ಮೂಗನಾಯಕನಕೋಟೆ ದಕ್ಷಿಣ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೧೬. ಅಗಲ ೧೩. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ಸಮತಲವಾಗಿಸಿದೆ. ಉಪಕರಣದ ಪರಿಧಿಯಲ್ಲಿ ಆಳಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡು ಮೊನೆಯನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗನ್ನು ಮೂಡಿಸಿದೆ. ಕೆಳತುದಿಯಲ್ಲಿ ಎರಡೂ ಬದಿಗೆ ಚಕ್ಕೆ ತೆಗೆದು ಮಧ್ಯದಲ್ಲಿ ದಪ್ಪ ಮೊಂಡು ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ಅಸಮ ಚತುರ್ಭುಜಾಕಾರ.

ಸಾಮ್ಯ:- ಸಂಖ್ಯೆ- ೪೨ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)










ಗಾತ್ರ ೧:೧

**ತ್ರಿಭುಜಾಕಾರದ ಮೊನೆ**

೬೮. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೩೨. ಅಗಲ ೨೫. ದಪ್ಪ ೭. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯದಲ್ಲಿ ಹೆಚ್ಚು ಕಡಿಮೆ ಸಮ ಮೇಲ್ಮೈ ಇದೆ. ಮೇಲ್ತುದಿಯ ಎರಡೂ ಬದಿಗೆ ಚಕ್ಕೆ ತೆಗೆದು ಮಧ್ಯದಲ್ಲಿ ಮೊಂಡು ಮೊನೆ ಮೂಡಿಸಿದೆ. ಎಡಪಾರ್ಶ್ವ ದಪ್ಪವಿದ್ದು ಹಿಂಬದಿ ಪೀನವಾಗಿದೆ. ಅಲ್ಲಲ್ಲಿ ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XXVII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೬೯. ಇರಕಸಂದ್ರಕಾಲೋನಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೧. ಅಗಲ ೨೦. ದಪ್ಪ ೭. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಹರಿತ ಮೊನೆ ಎಡಬದಿಗೆ ಹೊಂದಿಕೊಂಡಂತೆ ಇದೆ. ಎರಡೂ ಪಾರ್ಶ್ವಗಳ ಹರಿತ ಅಲಗು ಪುಡಿ-ಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗುವಂತೆ ಮಾಡಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೦ ಪ್ಲೇಟ್- XXIV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೭೦. ಉನಗನಾಲ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೨. ದಪ್ಪ ೫. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮೇಲ್ಭಾಗ ಸಮತಲ-ವಿದ್ದು ಕೆಳಭಾಗದ ಕಡೆಗೆ ತೆಳುವಾಗಿದೆ. ಮಧ್ಯದಲ್ಲಿ ಉಬ್ಬೇಣು ಇದೆ. ಮೇಲ್ತುದಿಯ ಮಧ್ಯದಲ್ಲಿ ಮೊನೆ ಇದೆ. ಎರಡೂ ಪಾರ್ಶ್ವಗಳೂ ದಪ್ಪ-ವಿದ್ದು ಮೊಂಡಾಗಿದೆ. ಕೆಳತುದಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅಲುಕೂಲವಾಗಿದೆ. ಮಧ್ಯದಲ್ಲಿ ಮೊನೆ ಇದೆ. ಹಿಂಬದಿ ನಿಮ್ನವಾಗಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XXVII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೭೧. ಉನಗನಾಲ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೧೭. ಅಗಲ ೧೫. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಬಲಬದಿಗಿದ್ದು, ಎಡಬದಿ ತೆಳುವಾಗಿದೆ. ಮೇಲ್ತುದಿಯಲ್ಲಿ ಮೊಂಡು ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಪುಡಿಗೆಲಸ ಮಾಡಿ ಗರಗಸದಂ-ತಹ ಅಲಗನ್ನು ಮೂಡಿಸಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಬೆರಳಿಡಿಕೆಗೆ ಅನುಕೂಲವಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಾಗಿದೆ.

ಸಾಮ್ಯ:- ಸಂಖ್ಯೆ- ೬೧ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)





ಗಾತ್ರ ೧:೧ ೭೧




**ಕೊಕ್ಕುಳ್ಳ ಮೊನೆ**

೭೨. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೩೨. ಅಗಲ ೧೫. ದಪ್ಪ ೧೫. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಕೆಳಗಿನಿಂದ ಮೇಲ್ತುದಿಯ ಕೊಕ್ಕಿನವರೆಗೂ ಸಾಗಿದೆ. ಮೇಲ್ತುದಿಯಲ್ಲಿ ಎಡಕ್ಕೆ ಮುಂಚಾಚಿದ ಕೊಕ್ಕು ಹರಿತ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದೆ. ಬಲಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ತಾಡನ ಶಂಖುವಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ

೭೩. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೩೧. ಅಗಲ ೨೦. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಸಮತಲವಿದ್ದು ಉಬ್ಬೇಣು ಇದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಪುಡಿಗೆಲಸದಿಂದಾಗಿ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವದ ಕೆಳಭಾಗ ಗರಗಸದಂತಿದ್ದು ಮೇಲ್ಭಾಗದಲ್ಲಿ ಚಕ್ಕೆ ತೆಗೆದು ಮುಂಚಾಚಿದ ಕೊಕ್ಕು ಮೂಡಿಸಿದೆ. ಕೆಳತುದಿ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨೪ ಪ್ಲೇಟ್- XXVII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೭೪. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೧೫. ದಪ್ಪ ೩. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದ್ದು ಮಧ್ಯದಲ್ಲಿ ಮೊನೆಯಂತಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗಿದ್ದು ಮೇಲ್ಭಾಗದಲ್ಲಿ ಆಳಚಕ್ಕೆ ತೆಗೆದು ಮುಂಚಾಚಿದ ಕೊಕ್ಕನ್ನು ಮೂಡಿಸಿದೆ. ಮುಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧೮ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬; ೯೮)

೭೫. ಯಲ್ಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೧. ಅಗಲ ೧೪. ದಪ್ಪ ೫. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಮಧ್ಯದಲ್ಲಿ ನಿಮ್ನವಾಗಿದೆ. ಮೇಲ್ತುದಿಯಲ್ಲಿ ಮುಂಚಾಚಿದ ಕೊಕ್ಕನ್ನು ಹೊಂದಿದೆ. ಎಡಪಾರ್ಶ್ವ ಅರ್ಧ ವೃತ್ತಾಕಾರದಲ್ಲಿದ್ದು ಮೊಂಡಾಗಿದೆ. ಬಲಪಾರ್ಶ್ವದ ಮೇಲ್ಭಾಗದಲ್ಲಿ ಆಳಚಕ್ಕೆ ತೆಗೆದು ಮೊನೆಯನ್ನು ಹರಿತಗೊಳಿಸಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ತೆಳುವಾಗಿಸಿದ್ದು ಹರಿತವಾಗಿದೆ. ಬೆರಳಿಡಿಕೆಗೆ ಅನುಕೂಲವಾಗುವಂತಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖುವಿದೆ.

ಸಾಮ್ಯ:- ಸಂಖ್ಯೆ- ೧ ಪ್ಲೇಟ್- XXVII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೭೬. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೩. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣವನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಎಡಬದಿ ಮೂಲಶಿಲಾ ತೊಗಟೆ ಅಂಶವಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಭಾಗಕ್ಕೆ ಮುಂಚಾಚಿದ ಕೊಕ್ಕು ಇದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದ್ದು ಮೇಲ್ಭಾಗದಲ್ಲಿ ಚಕ್ಕೆ ತೆಗೆದು ಕೊಕ್ಕನ್ನು ಹರಿತಗೊಳಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಮೂಲಶಿಲಾ ತೊಗಟೆ ಅಂಶವಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ




ಗಾತ್ರ ೧:೧

**ಅರ್ಧ ಚಂದ್ರಾಕೃತಿ ಮೊನೆ**

೭೭. ಶಿವಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೧೧. ದಪ್ಪ ೬. ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಎಡಭಾಗ ತೆಳುವಿದ್ದು ಎಡಭಾಗ ದಪ್ಪವಿದೆ. ಮೇಲ್ತುದಿ ಮೊನೆ ಎಡಬದಿಗೆ ಹೊಂದಿಕೊಂಡಿದೆ. ಎಡಪಾರ್ಶ್ವ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದೀರ್ಘ ವೃತ್ತಾಕಾರದಲ್ಲಿ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೪ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೭೮. ಹೊನ್ನೇಮಾರನಹಳ್ಳಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೧೧. ದಪ್ಪ ೬. ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಮಧ್ಯ ಉಬ್ಬು ಚಕ್ಕೆ ಕಲೆಗಳಿವೆ. ಮೇಲ್ತುದಿ ಹರಿತವಾದ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಮೇಲ್ಭಾಗ ಚಕ್ಕೆ ತೆಗೆದು ಮೊನೆಯನ್ನು ಹರಿತವಾಗಿಸಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಅರ್ಧ ಚಂದ್ರಾಕೃತಿಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡು ಮೊನೆ ಇದೆ. ಹಿಂಬದಿ ಸಮತಲವಿದ್ದು ಚಕ್ಕೆ ಕಲೆಗಳನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧೨ ಪ್ಲೇಟ್- XVIII ಕಿಬ್ಬನಹಳ್ಳಿ (ಶೇಷಾದ್ರಿ.ಎಂ:೧೯೫೬;೧೦೩)






ಗಾತ್ರ ೧:೧ ೭೭ ೭೮

**ಗೂಟವಿರುವ ಮೊನೆ**

೭೯. ಧಣಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೯. ಅಗಲ ೧೬. ದಪ್ಪ ೫. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಬಲಬದಿಗೆ ತೆಳುಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಚಕ್ಕೆ ತೆಗೆದು ಬಲಪಾರ್ಶ್ವಕ್ಕೆ ಹೊಂದಿಕೊಂಡಂತಹ ಹರಿತ ಮೊನೆ ಇದೆ. ಎಡಪಾರ್ಶ್ವ ವೃತ್ತಾಕಾರದಲ್ಲಿ ದಪ್ಪವಿದ್ದು ಮೊಂಡಾಗಿದೆ. ಬಲಪಾಶ್ವದ ದೀರ್ಘವೃತ್ತಾಕಾರದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ತೆಳುವಾಗಿದ್ದು ಗೂಟವನ್ನು ಹೊಂದಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವನ್ನು ಹೊಂದಿದೆ.

ಸಾಮ್ಯ ಸಂಖ್ಯೆ:- ೧೦ ನಕ್ಷೆ- ೫೯ ಬೀರಬಾನ್‌ಪುರ (ಸಾಂಕಳಿಯಾ.ಎಚ್.ಡಿ:೧೯೭೪;೨೪೩)

೮೦. ಓಬಳಾಪುರ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೬. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿಯಲ್ಲಿ ಹಲವು ಚಕ್ಕೆಗಳನ್ನು ತೆಗೆದಿದ್ದು ಸಮತಲವಾಗಿದೆ. ಮೇಲ್ತುದಿಯಲ್ಲಿ ಎರಡೂ ಕಡೆಯಿಂದ ಆಳಚಕ್ಕೆ ತೆಗೆದು ಮೊಂಡು ಮೊನೆಯನ್ನು ಮೂಡಿಸಿ-ದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಬಲಬದಿಯಲ್ಲಿ ಚಕ್ಕೆ ತೆಗೆದು ಗೂಟವನ್ನು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವನ್ನು ಹೊಂದಿದೆ. ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೬೦ ಜಬ್ಬಲಪುರ (ಸಾಂಕಳಿಯಾ.ಎಚ್.ಡಿ:೧೯೭೪;೨೪೮)

೮೧. ಓಬಳಾಪುರ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೧೩. ಅಗಲ ೧೦. ದಪ್ಪ ೪. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದಲ್ಲಿ ನಿಮ್ನ ಹರಿತವಿದ್ದು ಅಲಗು ಇದೆ. ಬಲಪಾಶ್ವ ದೀರ್ಘ ವೃತ್ತಾಕಾರದ ಅಲಗು ಮೇಲ್ಭಾಗದಲ್ಲಿ ಹರಿತವಿದ್ದು ಕೆಳಭಾಗ ದಪ್ಪವಿದೆ. ಮೂಲಶಿಲಾ ತೊಗಟೆಯ ಅಂಶವಿದೆ. ಕೆಳತುದಿ ದಪ್ಪವಿದ್ದು ಬಲಬದಿಯಿಂದ ಚಕ್ಕೆ ತೆಗೆದು ಗೂಟದಂತೆ ಮಾಡಿದೆ. ಹಲವು ಚಿಕ್ಕ ಚಿಕ್ಕ ಚಕ್ಕೆ ಕಲೆಗಳಿವೆ. ಹಿಂಬದಿ ನಿಮ್ನವಾಗಿದ್ದು ತಾಡನ ವೇದಿಕೆ ಇದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೯ ನಕ್ಷೆ- ೬೩ ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೭೪;೨೫೩)








ಗಾತ್ರ ೧:೧ ೭೯ ೮೦ ೮೧




**ಬಾಣದ ಮೊನೆ**

೮೨. ಮೂಗನಾಯಕನಕೋಟೆ ದಕ್ಷಿಣ:- ಕ್ವಾರ್ಟ್ಸ್ ಶಿಲೆ. ಉದ್ದ ೩೧. ಅಗಲ ೨೨. ದಪ್ಪ ೮. ಮಿ.ಮೀ. ತ್ರಿಭುಜಾಕಾರ. ಮುಂಬದಿಯ ಮೇಲರ್ಧ ಭಾಗ ದಪ್ಪವಿದ್ದು ಚಕ್ಕೆ ಕಲೆ ಮತ್ತು ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಕೆಳ ಅರ್ಧ ಭಾಗ ತೆಳುವಾಗಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಮೊನೆ ಮೂಡಿಸಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಕೆಳತುದಿಯನ್ನು ಚಕ್ಕೆ ತೆಗೆದು ತೆಳುವಾಗಿಸಿದ್ದು ಹಿಡಿಕೆಗೆ ಅನುಕೂಲವಾಗುವಂತೆ ಮಾಡಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೯ ಪ್ಲೇಟ್- XV ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೬)

೮೩. ಹೊನ್ನೇಮಾರನಹಳ್ಳಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೮. ಅಗಲ ೧೫. ದಪ್ಪ ೫. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ತೆಗೆದಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮಧ್ಯದಲ್ಲಿ ಹರಿತ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲಿ ಹರಿತ ಅಲಗು ಗರಗಸದಂತಿದೆ. ಕೆಳತುದಿಯಲ್ಲಿ ಚಕ್ಕೆ ತೆಗೆದು ಮಧ್ಯ ಭಾಗವನ್ನು ತೆಳುವಾಗಿಸಿದ್ದು ಬಾಣದ ತುದಿಗೆ ಸಿಕ್ಕಿಸುವಂತೆ ಮಾಡಿದೆ. ಹಿಂಬದಿ ಪೀನವಾಗಿದ್ದು ಮಧ್ಯದಲ್ಲಿ ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೨೩ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೮೪. ಮೂಗನಾಯಕನಕೋಟೆ ಪೂರ್ವ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೩೦. ಅಗಲ ೧೬. ದಪ್ಪ ೬. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳಭಾಗದಲ್ಲಿ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಎಡ ಮತ್ತು ಬಲ ಪಾರ್ಶ್ವಗಳಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಅಲಗನ್ನು ಗರಗಸದಂತೆ ಮೂಡಿಸಿದೆ. ಬಲಪಾರ್ಶ್ವದ ಅಲಗಿಗೆ ಪುಡಿಗೆಲಸ ಮಾಡಿದೆ. ಕೆಳತುದಿಯಲ್ಲಿ ಎರಡೂ ಕಡೆಯಿಂದ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಮಧ್ಯದಲ್ಲಿ ದಪ್ಪವಾದ ಗೂಟವನ್ನು ಮೂಡಿಸಿದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೯ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೮೫. ಮೂಗನಾಯಕನಕೋಟೆ ಪೂರ್ವ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೬. ಅಗಲ ೧೬. ದಪ್ಪ ೬. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳಭಾಗದಲ್ಲಿ ಚಕ್ಕೆ ತೆಗೆದು ಗೂಟವನ್ನು ತೆಳುವಾಗಿಸಿದೆ. ಮೇಲ್ತುದಿಯ ಮೊನೆ ಹರಿತವಾಗಿದೆ. ಎರಡೂ ಪಾರ್ಶ್ವಗಳಲ್ಲೂ ಗರಗಸದಂತಹ ಹರಿತ ಅಲಗನ್ನು ಮೂಡಿಸಿದೆ. ಕೆಳತುದಿಯ ಎರಡೂ ಬದಿಗಳಲ್ಲೂ ಆಳಚಕ್ಕೆ ತೆಗೆದು ಮೊಂಡು ಗೂಟವನ್ನು ಮೂಡಿಸಿದೆ. ಮೇಲಿನಿಂದಲೂ ಚಕ್ಕೆ ತೆಗೆದಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೪ ನಕ್ಷೆ ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೮೬. ಮೂಗನಾಯಕನಕೋಟೆ ಪೂರ್ವ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೧೬. ಅಗಲ ೧೮. ದಪ್ಪ ೫. ಮಿ.ಮೀ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಪರಿಧಿಯ ಕಡೆಗೆ ಹಲವು ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿಯಲ್ಲಿ ಹರಿತ ಮೊನೆಯನ್ನು ಮೂಡಿಸಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಕೆಳತುದಿಯ ಮಧ್ಯ ನಿಮ್ನವಾಗಿದ್ದು ಬಾಣಕ್ಕೆ ಸಿಕ್ಕಿಸಲು ಅನುಕೂಲವಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ

ಸಾಮ್ಯ:- ಸಂಖ್ಯೆ- ೩೫ ನಕ್ಷೆ- ೪೧ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೮೭. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೧೫ ಅಗಲ ೧೩ ದಪ್ಪ ೨ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ಹಲವಾರು ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿಯಲ್ಲಿ ಹರಿತ ಮೊನೆ ಇದೆ. ಬಲಪಾರ್ಶ್ವದ ಅಲಗು ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ಮಧ್ಯ ಒಳಬಾಗಿದ್ದು ತೆಳುವಾಗಿದೆ. ಬಾಣಕ್ಕೆ ಸಿಕ್ಕಿಸಲು ಅನುಕೂಲವಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ.

ಸಾಮ್ಯ:- ಅಪರೂಪದ ಉಪಕರಣ

೮೮. ಇರಕಸಂದ್ರಕಾಲೋನಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೧೬. ದಪ್ಪ ೭. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ನೀಳಚಕ್ಕೆಯನ್ನು ಕತ್ತರಿಸಿ ಬಾಣದ ಮೊನೆಯಾಗಿ ರೂಪಿಸಿದೆ. ಎರಡೂ ಬದಿಗೂ ಚಕ್ಕೆ ತೆಗೆದಿದೆ. ಮೇಲ್ತುದಿ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದ ಮೇಲರ್ಧಭಾಗ ಹರಿತವಿದ್ದು ಕೆಳಅರ್ಧ ಭಾಗದಲ್ಲಿ ಆಳಚಕ್ಕೆ ತೆಗೆದು ಮೊಂಡಾಗಿದೆ. ಬಲಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ದಪ್ಪವಾಗಿ ಮೊಂಡಾಗಿದೆ. ಕೆಳತುದಿ ಮೊನೆ ಇದೆ. ಹಿಂಬದಿ ಸಮತಲವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬; ೯೮)



ಗಾತ್ರ ೧:೧




**ಕೊರೆಗ**

೮೯. ಶಿವಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೬. ಅಗಲ ೨೦. ದಪ್ಪ ೯. ಮಿ.ಮೀ. ಅಸಮ ತ್ರಿಭುಜಾಕಾರ. ಉಪಕರಣವನ್ನು ನಿರುಪಯುಕ್ತ ಚಕ್ಕೆಯಿಂದ ರೂಪಿಸಿದೆ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಬಲಬದಿಯಲ್ಲಿ ಅಲಗು ಮೂಡಿಸಿದ್ದು ಎಡಬದಿಗೆ ಹೊಂದಿ ಕೊಂಡಂತೆ ಕೊರೆಯುವ ಹರಿತ ಮೊನೆ ಇದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ದಪ್ಪವಿದೆ. ಬಲಪಾರ್ಶ್ವ ಮೂಲಶಿಲಾ ತೊಗಟೆ ಅಂಶವನ್ನು ಹೊಂದಿ ದಪ್ಪವಿದೆ. ಕೆಳತುದಿ ಮೊಂಡು ಮೊನೆ ಹೊಂದಿದೆ. ಹಿಂಬದಿ ಅಸಮತಲವಿದ್ದು ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧೮ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೯೦. ಗುರಮ್ಮನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೪. ಅಗಲ ೧೪. ದಪ್ಪ ೬. ಮಿ.ಮೀ. ಉಪಕರಣವನ್ನು ಹೆರೆಚಕ್ಕೆಯಲ್ಲಿ ರೂಪಿಸಿದೆ. ಮುಂಬದಿ ಮಧ್ಯ ಉಬ್ಬು ಇದ್ದು ಎರಡೂ ತುದಿಗಳ ಕಡೆಗೆ ಏಣು ಸಾಗಿದೆ. ಮೇಲ್ತುದಿಯಲ್ಲಿ ಎಡ ಮಗ್ಗುಲಿಗೆ ಆಳಚಕ್ಕೆ ತೆಗೆದು ಕೊರೆಯುವ ಮೊನೆಯನ್ನು ರೂಪಿಸಿದೆ. ಬಲಪಾರ್ಶ್ವದ ಹರಿತ ಅಲಗು ಉಬ್ಬು ತಗ್ಗುಗಳನ್ನು ಹೊಂದಿದೆ. ಎಡಪಾರ್ಶ್ವದ ಹರಿತ ಅಲಗು ಪೀನವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೦ ನಕ್ಷೆ- ೪೩ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೯೧. ಹೊನ್ನೇಮಾರನಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೨. ಅಗಲ ೧೪. ದಪ್ಪ ೬. ಮಿ.ಮೀ. ಉಪಕರಣವನ್ನು ನೀಳಚಕ್ಕೆಯಲ್ಲಿ ರೂಪಿಸಿದೆ. ಅಸಮ ತ್ರಿಭುಜಾಕಾರ. ಮುಂಬದಿ ಉಬ್ಬು ಬಲಕ್ಕಿದ್ದು ಚಕ್ಕೆ ತೆಗೆದು ಉಬ್ಬೇಣನ್ನು ಕತ್ತರಿಸಿದೆ. ಮೇಲ್ತುದಿಯ ಬಲಕ್ಕೆ ಆಳಚಕ್ಕೆ ತೆಗೆದಿದ್ದು ಎಡಕ್ಕೆ ಹೊಂದಿಕೊಂಡ ಕೊರೆಯುವ ಮೊನೆ ಇದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೪೧ ನಕ್ಷೆ- ೪೧ ನಾಗಾಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)




ಗಾತ್ರ ೧:೧




**ಕೊರೆಯುಳಿ**

೯೨. ಶೆಟ್ಟಿಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೩. ಅಗಲ ೧೮. ದಪ್ಪ ೬. ಮಿ.ಮೀ. ಅಸಮ ಆಯತಾಕಾರ. ಕೊಕ್ಕುಳ್ಳ ಕೊರೆಯುಳಿ. ಮುಂಬದಿ ಮಧ್ಯ ಉಬ್ಬೇಣು ಮುಂಚಾಚಿದ ಕೊಕ್ಕಿನವರೆಗೂ ಸಾಗಿದೆ. ಅಲ್ಲಲ್ಲಿ ಚಕ್ಕೆ ಕಲೆಗಳಿವೆ. ಹಿಂಬದಿಯಿಂದ ವಿರುದ್ಧ ದಿಕ್ಕಿನಲ್ಲಿ ಆಳಚಕ್ಕೆ ತೆಗೆದಿದ್ದು ಮಧ್ಯದ ಕೊಕ್ಕಿನಂತಹ ಕೊರೆಯುಳಿಯನ್ನು ಉಳಿಸಿಕೊಳ್ಳಲಾಗಿದೆ. ಕೊಕ್ಕಿನ ತುದಿ ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗಿದ್ದು ಗರಗಸದಂ-ತಿದೆ. ಬಲಪಾರ್ಶ್ವದಲ್ಲಿ ಚಕ್ಕೆ ತೆಗೆದಿದ್ದು ಅಂಚು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೪೩ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೯೩. ಮೂಗನಾಯಕನಕೋಟೆ ಪಶ್ಚಿಮ:- ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೪. ಮಿ.ಮೀ. ಅನಿರ್ದಿಷ್ಟ ಆಕಾರ. ಏಕಘಟ್ಟಿತ ಕೊರೆಯುಳಿಯ ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ಹಲವು ಚಕ್ಕೆ ತೆಗೆದ ಕಲೆಗಳಿವೆ. ಆಳ ಚಕ್ಕೆಯನ್ನು ಬಲಭಾಗದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಮಧ್ಯದಲ್ಲಿ ಮೇಲ್ತುದಿಯ ಎಡಭಾಗದಲ್ಲಿ ಕೊರೆಯುವ ಮೊನೆ ಮೂಡಿಸಿದ್ದು ಹರಿತವಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ತೆಳುವಾಗಿದ್ದು ಹರಿತ ಅಲಗು ಅಸಮ ಆಕಾರದಲ್ಲಿದೆ. ಕೆಳತುದಿ ತೆಳುವಾಗಿದ್ದು ಹರಿತವಾದ ಮೊನೆಯನ್ನು ಹೊಂದಿದೆ. ಹಿಂಬದಿ ಸಮತಲವನ್ನು ಹೊಂದಿದೆ. ತಾಡನ ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೬೫ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೯೪. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೩೦. ಅಗಲ ೨೦. ದಪ್ಪ ೭. ಮಿ.ಮೀ. ಅಸಮ ಆಯತಾಕಾರ. ಬೆಕ್ ಡಿ ಫ್ಲೂಟ್ ಕೊರೆಯುಳಿ. ಮುಂಬದಿ ಮಧ್ಯದಲ್ಲಿ ಉಬ್ಬು ಇದ್ದು ಪರಿಧಿಯ ಕಡೆಗೆ ಚಕ್ಕೆಗಳನ್ನು ತೆಗೆದ ಕಲೆಗಳಿವೆ. ಮೇಲ್ತುದಿಯು ತೆಳುವಾಗಿದ್ದು ಮಧ್ಯದಲ್ಲಿ ಚಕ್ಕೆ ತೆಗೆದು ಎರಡು ಕಿರು ಮೊನೆಗಳನ್ನು ಮೂಡಿಸಿದೆ. ಎಡಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವದ ಹರಿತ ಅಲಗು ನೇರವಾಗಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೪ ನಕ್ಷೆ- ೪೧ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)




ಗಾತ್ರ ೧:೧




**ಅರ್ಧಚಂದ್ರಾಕೃತಿ**

೯೫. ಮೂಗನಾಯಕನಕೋಟೆ ಪಶ್ಚಿಮ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೧೫. ದಪ್ಪ ೫. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯದಲ್ಲಿ ಸಮವಿದ್ದು ಎಡಕ್ಕೆ ಮತ್ತು ಬಲಕ್ಕೆ ಆಳಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಎಡಪಾರ್ಶ್ವಕ್ಕೆ ಹೊಂದಿಕೊಂಡ ಮೊನೆ ಇದೆ. ಬಲಭಾಗದಲ್ಲಿ ಆಳಚಕ್ಕೆ ತೆಗೆದಿದೆ. ಎಡಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವದಲ್ಲಿ ದೀರ್ಘ ವೃತ್ತಾಕಾರದ ಅಲಗು ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ಮೊನೆಯನ್ನು ಹೊಂದಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧೯ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬)

೯೬. ಸಾಲುಕಟ್ಟೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೩. ಅಗಲ ೧೦. ದಪ್ಪ ೫. ಮಿ.ಮೀ. ಮುಂಬದಿ ಸಮವಿದ್ದು ಬಲದಿಂದ ಎಡಕ್ಕೆ ತೆಳುವಾಗಿದೆ. ಚಕ್ಕೆ ಕಲೆಗಳಿವೆ. ಮೇಲ್ತುದಿ ಹರಿತ ಮೊನೆ ಇದೆ. ಎಡಪಾರ್ಶ್ವದಲ್ಲಿ ಪುಡಿಗೆಲಸದಿಂದಾಗಿ ಹರಿತ ಅಲಗು ಇದೆ. ಬಲಪಾರ್ಶ್ವ ವೃತ್ತಾಕಾರವಾಗಿದ್ದು ಮೊಂಡಾಗಿದೆ. ಕೆಳತುದಿ ಮೊನೆಯನ್ನು ಹೊಂದಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೭ ಪ್ಲೇಟ್- XIV ಜಾಲಹಳ್ಳಿ. (ಶೇಷಾದ್ರಿ.ಎಂ:೧೯೫೬)

೯೭. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೧೫. ಅಗಲ ೮. ದಪ್ಪ ೩. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬೇಣು ಇದ್ದು ಎಡಕ್ಕೆ ಮತ್ತು ಬಲಕ್ಕೆ ಚಕ್ಕೆ ತೆಗೆದು ಅಂಚುಗಳನ್ನು ತೆಳುವಾಗಿಸಿದೆ. ಮೇಲ್ತುದಿ ಬಲಕ್ಕೆ ಆಳಚಕ್ಕೆ ತೆಗೆದಿದ್ದು ಎಡಕ್ಕೆ ಹೊಂದಿಕೊಂಡ ಮೊನೆ ಇದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ನಿಮ್ನವಾಗಿದೆ. ಎಡಪಾರ್ಶ್ವದ ಮಧ್ಯದಲ್ಲಿ ಹರಿತ ಅಲಗು ಇದೆ. ಕೆಳತುದಿಯಲ್ಲಿ ಬಲಕ್ಕೆ ಆಳಚಕ್ಕೆ ತೆಗೆದಿದ್ದು ಎಡಕ್ಕೆ ಹರಿತ ಮೊನೆ ಇದೆ. ಹಿಂಬದಿ ಸಮತಲವಿದೆ.

ಸಾಮ್ಯ:- ಸಂಖ್ಯೆ- ೮೫ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೯೮. ಮೂಗನಾಯಕನಕೋಟೆ ಪೂರ್ವ:- ಕ್ವಾರ್ಟ್ಸ್ ಶಿಲೆ. ಉದ್ದ ೧೧. ಅಗಲ ೮. ದಪ್ಪ ೨. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲವಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಎಡಕ್ಕೆ ಹೊಂದಿಕೊಂಡ ಮೊನೆ ಇದೆ. ಎಡಪಾರ್ಶ್ವ ಅಲಗನ್ನು ಹೊಂದಿ ನಿಮ್ನವಾಗಿದೆ.

ಬಲಪಾರ್ಶ್ವ ಅರ್ಧ ವೃತ್ತಾಕಾರವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಎಡಕ್ಕೆ ಹೊಂದಿ ಕೊಂಡ ಮೊನೆ ಇದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದೆ.

ಸಾಮ್ಯ:- ಸಂಖ್ಯೆ- ೫೪ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೯೯. ಧಣಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೬. ಅಗಲ ೧೦. ದಪ್ಪ ೭. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಹೆಚ್ಚು ಕಡಿಮೆ ಸಮವಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಬಲಕ್ಕೆ ಆಳಚಕ್ಕೆ ತೆಗೆದಿದ್ದು ಎಡಕ್ಕೆ ಹೊಂದಿಕೊಂಡ ಹರಿತ ಮೊನೆ ಇದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದ್ದು ನಿಮ್ನವಾಗಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆಗಳನ್ನು ತೆಗೆದು ತೆಳುವಾಗಿಸಿದ್ದು ಬೆರಳಿಡಿಕೆಗೆ ಅಲುಕೂಲವಾಗಿದೆ. ಹಿಂಬದಿ ಅಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭ ನಕ್ಷೆ- ೬೦ ಜಬ್ಬಲ್‌ಪುರ (ಸಾಂಕಳಿಯಾ.ಎಚ್.ಡಿ:೧೯೭೪;೨೪೮)




ಗಾತ್ರ ೧:೧




ದಬ್ಬಳ

೧೦೦. ಯಲ್ಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೧೮. ಅಗಲ ೭. ದಪ್ಪ ೪. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲವಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಎಡಕ್ಕೆ ಹೊಂದಿಕೊಂಡಂತೆ ಮೊನೆ ಇದೆ. ಎಡಪಾರ್ಶ್ವದಲ್ಲಿ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವದ ಮಧ್ಯದಲ್ಲಿ ಮೂಲಶಿಲಾ ತೊಗಟೆ ಅಂಶವಿದ್ದು ಕೆಳ ಮತ್ತು ಮೇಲ್ಭಾಗದಲ್ಲಿ ಆಳಚಕ್ಕೆ ತೆಗೆದಿದ್ದು ದಪ್ಪವಿದೆ. ಕೆಳತುದಿ ಮೊನೆ ಇದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೫೮ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೦೧. ಮೂಗನಾಯಕನಕೋಟೆ ಪೂರ್ವ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೧೩. ದಪ್ಪ ೧೦. ಮಿ.ಮೀ. ಮುಂಬದಿ ಮಧ್ಯದಲ್ಲಿ ಉಬ್ಬು ಇದ್ದು ಪರಿಧಿಯ ಕಡೆಗೆ ಹಲವು ಚಕ್ಕೆ ತೆಗೆದ ಕಲೆಗಳಿವೆ. ಮೇಲ್ತುದಿಯಲ್ಲಿ ಎರಡೂ ಪಾರ್ಶ್ವಗಳಿಂದಲೂ ಆಳಚಕ್ಕೆ ತೆಗೆದು ಮೊನೆಯನ್ನು ಮೂಡಿಸಿದೆ. ಎಡಪಾರ್ಶ್ವದ ಹರಿತ ಅಲಗು ನಿಮ್ನವಾಗಿದೆ. ಬಲಪಾರ್ಶ್ವದ ಮೇಲರ್ಧ ಭಾಗ ನೇರ ಹರಿತ ಅಲಗನ್ನು ಹೊಂದಿದ್ದರೆ ಉಳಿದರ್ಧ ಭಾಗ ಪೀನವಾಗಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಬೆರಳಿಡಿಕೆಗೆ ಅನುಕೂಲವಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೮ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೦೨. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೮. ದಪ್ಪ ೩. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಹೊಂದಿದೆ. ಮೇಲ್ತುದಿ ಮೊನೆ ಮುರಿದು ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗು ಗರಗಸದಂತಿದೆ. ಕೆಳಭಾಗದಲ್ಲಿ ಮುಂಚಾಚಿರುವ ಹರಿತ ಅಲಗು ಇದೆ. ಬಲಪಾರ್ಶ್ವದ ಹರಿತ ಅಲಗು ದೀರ್ಘ ವೃತ್ತಾಕಾರದಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೪ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೦೩. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೧೩. ಅಗಲ ೪. ದಪ್ಪ ೨. ಮಿ.ಮೀ. ಮುಂಬದಿ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಎರಡೂ ಬದಿಯಲ್ಲಿ ಚಕ್ಕೆ ತೆಗೆದು ಮಧ್ಯದಲ್ಲಿ ಹರಿತ ಮೊನೆ ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಬಲಭಾಗಕ್ಕೆ ಹೊಂದಿಕೊಂಡಂತೆ ಹರಿತ ಮೊನೆ ಇದೆ. ಹಿಂಬದಿ ನಿಮ್ನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೫೭ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೦೪. ಮಂಚಕಲ್‌ಕುಪ್ಪೆ:- ಕ್ವಾರ್ಟ್ಸ್ ಶಿಲೆ. ಉದ್ದ ೧೫. ಅಗಲ ೧೫. ದಪ್ಪ ೩. ಮಿ.ಮೀ. ತ್ರಿಭುಜಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಮೇಲ್ತುದಿ ಮೊನೆ ಹರಿತವಾಗಿದೆ. ಎಡಪಾರ್ಶ್ವದ ಹರಿತ ಅಲಗು ನೇರವಾಗಿದೆ. ಬಲಪಾರ್ಶ್ವ ಪೀನವಾಗಿದ್ದು ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೮೦ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)












ಗಾತ್ರ ೧:೧




**ಮೂಲ ಶಿಲಾಗಟ್ಟಿ.**

೧೦೫. ಯಕ್ಕಲಕಟ್ಟೆ:- ಕ್ವಾರ್ಟ್ಸ ಶಿಲೆ. ಉದ್ದ ೩೫. ಅಗಲ ೩೨. ದಪ್ಪ ೨೦. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿಯಲ್ಲಿ ಹಲವು ಚಕ್ಕೆ ಕಲೆಗಳಿದ್ದು ಕೆಳಭಾಗ ದಪ್ಪವಾಗಿಯೂ ಮೇಲ್ಭಾಗ ತೆಳುವಾಗಿಯೂ ಇದೆ. ಹಿಂಬದಿಯಲ್ಲಿಯೂ ಹಲವು ಚಕ್ಕೆ ಕಲೆಗಳಿದ್ದು ಪೀನವಾಗಿದೆ.

೧೦೬. ಗಳಿಗೆಕೆರೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೨. ಅಗಲ ೧೮. ದಪ್ಪ ೧೫. ಮಿ.ಮೀ. ಅಸಮ ತ್ರಿಭುಜಾಕಾರ. ಗಟ್ಟಿಯ ಸುತ್ತಲೂ ಹಲವಾರು ಚಕ್ಕೆಗಳನ್ನು ತೆಗೆದ ಕಲೆ ಇದೆ. ವಿವಿಧ ಅಳತೆಯ ಚಕ್ಕೆಗಳನ್ನು ತೆಗೆಯಲಾಗಿದೆ.

೧೦೭. ಮೂಗನಾಯಕನಕೋಟೆ ಉತ್ತರ:- ಕ್ವಾರ್ಟ್ಸ ಶಿಲೆ. ಉದ್ದ ೨೩. ಅಗಲ ೨೨. ದಪ್ಪ ೧೫. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿಯಲ್ಲಿ ಹಲವು ಚಕ್ಕೆ ತೆಗೆದ ಕಲೆಗಳಿವೆ. ಹಿಂಬದಿಯಲ್ಲಿಯೂ ವಿವಿಧ ಅಳತೆಯ ಚಕ್ಕೆಗಳನ್ನು ತೆಗೆದಿರುವ ಗುರುತುಗಳಿವೆ.



೧೦೫


೧೦೬


೧೦೭

ಗಾತ್ರ ೧:೧



**ಆಯ್ದ ಉಪಕರಣಗಳ ವಿವರಣೆ**

**ಎರಡನೇಯ ಮತ್ತು ಮೂರನೆಯ ಹಂತ**

(ಸಂಖ್ಯೆ ೭, ೮, ೧೨, ೧೪, ೧೯, ೨೫, ೨೯, ೩೮, ೪೫, ೫೪, ೫೫, ೫೭, ಮತ್ತು ೭೩ ಉಪಕರಣಗಳು ಎರಡನೆಯ ಹಂತದ್ದಾಗಿದ್ದು, ಉಳಿದವುಗಳು ಮೂರನೆಯ ಹಂತಕ್ಕೆ ಸೇರಿವೆ)

**ನೀಳಚಕ್ಕೆ ಮಾದರಿ**

**ನೀಳಚಕ್ಕೆಯಂತಹ ಚಕ್ಕೆ**

೧. ಅಂಕನಬಾವಿ:- ಕ್ವಾರ್ಟ್ಸ್ ಶಿಲೆ. ಉದ್ದ ೩೭. ಅಗಲ ೧೦. ದಪ್ಪ ೮. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು. ಉಬ್ಬು ತಗ್ಗು-ಗಳನ್ನು ಹೊಂದಿದ್ದು ಕೆಳ ಮತ್ತು ಮೇಲ್ಭಾಗದಲ್ಲಿ ಚಕ್ಕೆ ತೆಗೆದಿದೆ. ಮೇಲ್ತುದಿ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಎಡಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದ್ದು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳ ಭಾಗದ ಅಲಗನ್ನು ಕತ್ತರಿಸಿದೆ. ಬಲಪಾರ್ಶ್ವದ ಹರಿತ ಅಲಗು ನೇರ-ವಾಗಿದ್ದು ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೯ ಪ್ಲೇಟ್- XXV-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨. ಹೂವಿನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೨. ಅಗಲ ೧೫. ದಪ್ಪ ೭. ಮಿ.ಮೀ. ಮುಂಬದಿ ಉಬ್ಬೇಣು ಎಡಭಾಗಕ್ಕಿದ್ದು ಎಡಭಾಗದಲ್ಲಿ ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡು ಮೊನೆ ಎಡಕ್ಕಿದ್ದು ಬಲಭಾಗದಲ್ಲಿ ಆಳಚಕ್ಕೆ ತೆಗೆದಿದೆ. ಎಡಪಾರ್ಶ್ವದ ಹರಿತ ಅಲಗು ಉಬ್ಬು ತಗ್ಗುಗಳನ್ನು ಹೊಂದಿದ್ದು ಗರಗಸದಂತಿದೆ. ಬಲಪಾರ್ಶ್ವದ ಅಲಗನ್ನು ಕತ್ತರಿಸಿ ಮೊಂಡಾಗಿಸಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಆಳಚಕ್ಕೆ ತೆಗೆದಿದ್ದು ಮೊಂಡು ಮೊನೆ ಇದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨೮ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩. ಸೀಗೆಪಾಳ್ಯ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೧೦. ದಪ್ಪ ೪. ಮಿ.ಮೀ. ಆಯತಾಕಾರ. ಮುಂಬದಿ ಬಲಭಾಗದಲ್ಲಿ ಉಬ್ಬೇಣು ಇದ್ದು ಎಡಭಾಗಕ್ಕೆ ತೆಳುವಾಗಿಸಿದೆ. ಮೇಲ್ತುದಿ ತೆಳುವಾಗಿದ್ದು ಹರಿತವಾಗಿದೆ. ಎಡಕ್ಕೆ ಅಲ್ಪ ಪ್ರಮಾಣದ ಕೊಕ್ಕನ್ನು ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಗರಗಸದ ಅಲಗನ್ನು ಹೊಂದಿದೆ. ಹಿಂಬದಿ ನಿಮ್ನವಾ-ಗಿದ್ದು ತಾಡನಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೩೫ ಪ್ಲೇಟ್- XXV-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)







**ಒಬ್ಬದಿ ನೀಳಚಕ್ಕೆ**

೪. ರಜತಾದ್ರಿಪುರ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೧೫. ದಪ್ಪ ೪. ಮಿ.ಮೀ. ಅಸಮ ಆಯತಾಕಾರ. ಮುಂಬ-ದಿಯ ಮಧ್ಯದಲ್ಲಿ ಉಬ್ಬೇಣು ಇದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಅಲ್ಲಲ್ಲಿ ಪುಡಿಗೆಲಸ ಮಾಡಿದೆ. ಬಲಪಾರ್ಶ್ವ ಮೂಲಶಿಲಾ ತೊಗಟೆಯ ಅಂಶವನ್ನು ಹೊಂದಿ ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯನ್ನು ಕತ್ತರಿಸಿದ್ದು ಮೊಂಡಾಗಿ-ದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೫ ಪ್ಲೇಟ್- XXVI-A ನಾಗಾರ್ಜನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫. ಚಿನಗ:- ಕ್ವಾರ್ಟ್ಜ್ ಶಿಲೆ. ಉದ್ದ ೨೨. ಅಗಲ ೧೦. ದಪ್ಪ ೪. ಮಿ.ಮೀ. ಅಸಮ ಆಯತಾಕಾರ ಮುಂಬದಿ ಹಲವು ಚಕ್ಕೆ ಕಲೆಗಳಿದ್ದು ಮೂಲಶಿಲಾ ತೊಗಟೆ ಅಂಶ ಅಲ್ಲಲ್ಲಿ ಇದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಗರಗಸದಂತಿ-ದೆ. ಬಲಪಾರ್ಶ್ವದ ಕೆಳಭಾಗದಲ್ಲಿ ಆಳಚಕ್ಕೆ ತೆಗೆದಿದ್ದು ಹರಿತ ಅಲಗು ಮೂಡಿಸಿದೆ. ಹಿಂಬದಿ ನಿಮ್ನವಾಗಿದ್ದು ತಾಡನ ವೇದಿಕೆ ಮತ್ತು ಶಂಖು-ವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೪೩ ನಕ್ಷೆ- ೮ ಸಿಂಗರೋಲಿ (ಎ.ಇಂ-೭:೧೯೫೧;೬೧)

೬. ಥರಟಿ:- ಕ್ವಾರ್ಟ್ಜ್ ಶಿಲೆ. ಉದ್ದ ೨೫. ಅಗಲ ೧೫. ದಪ್ಪ ೩. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಎರಡೂ ಬದಿಗಳಿಗೂ ಚಕ್ಕೆ ತೆಗೆದಿದೆ. ಪರಿಧಿ ತೆಳುವಾಗಿದೆ. ಮೇಲ್ತುದಿ ಮೊಂಡಾಗಿದ್ದು ಎಡಕ್ಕೆ ಹೊಂದಿಕೊಂಡ ಕೊಕ್ಕು ಮೊನೆ ಇದೆ. ಎಡಪಾರ್ಶ್ವದ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವದ ಹರಿತ ಅಲಗು ಅರ್ಧ ವೃತ್ತಾಕಾರವಾಗಿದ್ದು ಗರಗಸದಂತಿದೆ. ಕೆಳತುದಿ ಮೊಂಡು ಮೊನೆ-ಯನ್ನು ಹೊಂದಿದೆ. ಹಿಂಬದಿ ಪೀನವಾಗಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೫ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)






೪ ೫ ೬

ಗಾತ್ರ ೧:೧

**ಇಬ್ಬದಿ ನೀಳಚಕ್ಕೆ**

೭. ಹುಲಿಯೂರುದುರ್ಗ:- ಕ್ವಾರ್ಟ್ಸ ಶಿಲೆ. ಉದ್ದ ೨೯. ಅಗಲ ೧೧. ದಪ್ಪ ೪. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣಿನ ಮೇಲ್ಭಾಗ ತೆಲುವಾಗಿದ್ದು ಕೆಳಭಾಗ ದಪ್ಪವಿದೆ. ಮೇಲ್ತುದಿ ತೆಳುವಾಗಿದ್ದು ಹರಿತವಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಮೇಲ್ಭಾಗದಲ್ಲಿ ಕೊಕ್ಕು ಮೂಡಿಸಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೫ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೮. ಹುಲಿಯೂರುದುರ್ಗ:- ಕ್ವಾರ್ಟ್ಸ ಶಿಲೆ. ಉದ್ದ ೨೬. ಅಗಲ ೧೪. ದಪ್ಪ ೧೭. ಮಿ.ಮೀ. ಅಸಮ ಆಯತಾಕಾರ ಮುಂಬದಿ ಸಮ. ಬಲಬಾಗ ದಪ್ಪ ಎಡಭಾಗ ತೆಳುವಾಗಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವಕ್ಕೆ ಹೊಂದಿಕೊಂಡ ಕೊಕ್ಕಿನಂತಹ ಮೊನೆ ಇದೆ. ಬಲಪಾರ್ಶ್ವದ ಹರಿತ ಅಲಗು ಗರಗಸಂದಂತಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೪ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೯. ಹೊವಿನಕಟ್ಟೆ:- ಕ್ವಾರ್ಟ್ಸ ಶಿಲೆ. ಉದ್ದ ೨೮. ಅಗಲ ೧೧. ದಪ್ಪ ೫ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಕೆಳಭಾಗ ದಪ್ಪವಿದ್ದು ಮೇಲ್ಭಾಗ ತೆಳುವಾಗಿದೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಗರಗಸದಂತಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)

೧೦. ಸೀಗೆಪಾಳ್ಯ:- ಕ್ವಾರ್ಟ್ಸ್ ಶಿಲೆ. ಉದ್ದ ೨೯. ಅಗಲ ೧೨. ದಪ್ಪ ೩. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಸಮವಿದ್ದು ಅಲ್ಲಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿ ಬಲಭಾಗದಲ್ಲಿ ಆಳಚಕ್ಕೆ ತೆಗೆದಿದ್ದು ಎಡಭಾಗದಲ್ಲಿ ಮೊನೆ ಇದೆ. ಎಡಪಾರ್ಶ್ವ ತೆಳುವಾಗಿದ್ದು ಗರಗಸದಂತಹ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದ್ದು ನಿಮ್ನವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೬೭ ಪಾಚಡ್ ಕೇಪ್ಸ್ (ಮಹಾರಾಷ್ಟ್ರ) (ಸಾಂಕಳಿಯಾ.ಎಚ್.ಡಿ:೧೯೭೪;೨೭೮)

೧೧. ಹೂವಿನಕಟ್ಟೆ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೭. ಅಗಲ ೧೫. ದಪ್ಪ ೩. ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಚಕ್ಕೆ ತೆಗೆದಿದ್ದು ಪುಡಿಗೆಲಸದಿಂದಾಗಿ ನಿಮ್ನ ಹರಿತ ಅಲಗು ಮೂಡಿಸಿದೆ. ಎಡಪಾರ್ಶ್ವದಲ್ಲಿ ಪುಡಿಗೆಲಸ ಮಾಡಿ ಗರಗಸದಂತಹ ಅಲಗು ಮೂಡಿಸಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವನ್ನು ಹೊಂದಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೭ ನಕ್ಷೆ- ೧೧ ಗಿಡ್ಡಲೂರು (ಎ.ಇಂ ೮:೧೯೫೨;೯೧)




ಗಾತ್ರ ೧:೧

**ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ**

೧೨. ಬಿಜ್ಜಾವರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೧. ದಪ್ಪ ೭. ಮಿ.ಮೀ. ತ್ರಿಭುಜಾಕಾರ. ಮುಂಬದಿ ಬಲಭಾಗಕ್ಕೆ ಆಳಚಕ್ಕೆ ತೆಗೆದು ದಪ್ಪವಿದ್ದು ಎಡಭಾಗ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ ಮೇಲ್ತುದಿ ಮೊಂಡು ಮೊನೆಯನ್ನು ಹೊಂದಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಪುಡಿಗೆಲಸದಿಂದಾಗಿ ಗರಗಸದಂತಹ ಅಲಗು ದೀರ್ಘ ವೃತ್ತಾಕಾರವಾಗಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದ್ದು ದಪ್ಪವಾಗಿ ನಿಮ್ನವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೬ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೧೩. ಅಂಕನಬಾವಿ:- ಅದಿರುಯುಕ್ತ ಕ್ವಾರ್ಟ್ಜ್ ಶಿಲೆ. ಉದ್ದ ೧೮. ಅಗಲ ೧೧. ದಪ್ಪ ೪. ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬೇಣು ಬಲ-ಭಾಗದಲ್ಲಿದ್ದು ಹಲವು ಚಕ್ಕೆ ಕಲೆಗಳನ್ನು ಹೊಂದಿದೆ. ಮೇಲ್ತುದಿ ತೆಳುವಾಗಿದ್ದು ಹರಿತವಾದ ಅಗಲ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವದ ಅಲಗು ಗರಗಸದಂತಿದ್ದು ನಿಮ್ನವಾಗಿದೆ. ಕೆಳತುದಿ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಎಡಪಾರ್ಶ್ವಕ್ಕೆ ಹೊಂದಿಕೊಂಡ ಮುಂಚಾಚಿದ ಮೊನೆ ಇದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೧೨ ನಕ್ಷೆ- ೫೯೮ ಸಂಗನಕಲ್ಲು (ಸಾಂಕಳಿಯಾ.ಎಚ್.ಡಿ:೧೯೭೪;೨೪೫)
(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)

ಗಾತ್ರ ೧:೧



೧೨




**ಕಿರು ನೀಳಚಕ್ಕೆ**

೧೪. ಬಿಜ್ಜಾವರ:- ಕ್ವಾರ್ಟ್ಜ್ ಶಿಲೆ. ಉದ್ದ ೧೫. ಅಗಲ ೧೦. ದಪ್ಪ ೩. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಎರಡೂ ಬದಿಗೆ ತೆಳುವಾಗಿದೆ. ಮೇಲ್ತುದಿ ದಪ್ಪವಿದ್ದು ಅರ್ಧ ವೃತ್ತಾಕಾರವಾಗಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವದ ಕೆಳಭಾಗ ಮೊಂಡಾಗಿದ್ದು ಮೇಲ್ಭಾಗ ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೨ ನಕ್ಷೆ- ೫೯ ಬೀರ್‌ಬಾನ್‌ಪುರ (ಸಾಂಕಳಿಯಾ.ಎಚ್.ಡಿ:೧೯೭೪;೨೪೩)

೧೫. ಅಂಕನಬಾವಿ. ಕ್ವಾರ್ಟ್ಜ್ ಶಿಲೆ. ಉದ್ದ ೧೫. ಅಗಲ ೮. ದಪ್ಪ ೩. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳಭಾಗ ತೆಳುವಾಗಿದ್ದರೆ ಮೇಲ್ಭಾಗ ದಪ್ಪವಿದೆ. ಮೇಲ್ತುದಿ ಮೊಂಡಾಗಿದ್ದು. ಎರಡೂ ಬದಿಗಳಿಗೂ ಕೊಕ್ಕುಮೂಡಿಸಿದೆ. ಎರಡೂ ಪಾರ್ಶ್ವಗಳಲ್ಲೂ ಗರಗ-ಸದಂತಹ ಹರಿತ ಅಲಗು ಇದೆ. ಕೆಳತುದಿ ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೫ ನಕ್ಷೆ- ೬೭ ಬಾಗೂರ್ (ರಾಜಾಸ್ಥಾನ) (ಸಾಂಕಳಿಯಾ.ಎಚ್.ಡಿ:೧೯೭೪;೨೬೨)

೧೬. ಸೀಗೆಪಾಳ್ಯ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೧೨. ಅಗಲ ೭. ದಪ್ಪ ೨. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೭ ನಕ್ಷೆ- ೬೭ ಬಾಗೂರ್ (ರಾಜಾಸ್ಥಾನ) (ಸಾಂಕಳಿಯಾ.ಎಚ್.ಡಿ:೧೯೭೪;೨೬೨)

೧೭. ಥರಟಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೭. ಅಗಲ ೧೧. ದಪ್ಪ ೩. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಹೊಂದಿದೆ. ಮೇಲ್ತುದಿ ಬಲಭಾಗಕ್ಕೆ ಚಕ್ಕೆ ತೆಗೆದಿದ್ದು ಎಡಭಾಗಕ್ಕೆ ಹೊಂದಿಕೊಂಡ ಮೊನೆ ಇದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ಗರಗಸದಂತಹ ಅಲಗನ್ನು ಹೊಂದಿದ್ದು ಉಬ್ಬು ತಗ್ಗುಗಳಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮ-ತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- XXVII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)







ಗಾತ್ರ ೧:೧ ೧೪ ೧೫ ೧೬ ೧೭

**ಕೈಚಾಕು ವೀಳಚಕ್ಕೆ**

೧೮. ಚಿನವಾರ:- ಕ್ವಾರ್ಟ್ಸ್ ಶಿಲೆ. ಉದ್ದ ೩೧. ಅಗಲ ೧೮. ದಪ್ಪ ೧೧. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಬಲಕ್ಕೆ ಆಳಚಕ್ಕೆ ತೆಗೆದಿದೆ. ಮೇಲ್ಭಾಗದಲ್ಲಿ ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದೀರ್ಘ ವೃತ್ತಾಕಾರವಾಗಿದ್ದು ಬಲಕ್ಕೆ ಮುಂಚಾಚಿದ ಕೊಕ್ಕು ಇದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವದ ಹರಿತ ಅಲಗು ನಿಮ್ನವಾಗಿದೆ. ಕೆಳತುದಿಯಲ್ಲಿ ದಪ್ಪ ಮೊಂಡು ಮೊನೆ ಇದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೨ ನಕ್ಷೆ- ೫೯ ತೆನ್ನವೇಲ್ಲಿ (ತಮಿಳುನಾಡು) (ಸಾಂಕಳಿಯಾ.ಎಚ್.ಡಿ:೧೯೭೪;೫೪೩)





ಗಾತ್ರ ೧:೧ ೧೮

**ಗರಗಸದಂತಹ ವೀಳಚಕ್ಕೆ**

೧೯. ಥಣಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೧೮. ಅಗಲ ೧೦. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಆಳಚಕ್ಕೆ ತೆಗೆದಿದ್ದು ಎಡಕ್ಕೆ ಹೊಂದಿಕೊಂಡ ಕೊಕ್ಕು ಮುರಿದಿದೆ. ಎಡಪಾರ್ಶ್ವಕ್ಕೆ ಹರಿತ ಅಲಗಿದ್ದು ಮಧ್ಯದಲ್ಲಿ ಮೊನೆ ಇದೆ. ಬಲಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ - ಸಂಖ್ಯೆ- ೩ ಪ್ಲೇಟ್- XXVII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೦. ಥರಟಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೩. ದಪ್ಪ ೫. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ನಿಮ್ನವಾಗಿದೆ. ಬಲಕ್ಕೆ ಹೊಂದಿಕೊಂಡ ಮೊನೆ ಇದೆ. ಎರಡೂ ಪಾರ್ಶ್ವಗಳೂ ಹರಿತ ಅಲಗುಗಳನ್ನು ಹೊಂದಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೯)

೨೧. ಬಿಜ್ಜಾವರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೧. ದಪ್ಪ ೫. ಮಿ.ಮೀ. ಮುಂಬದಿಯ ಬಲಕ್ಕೆ ದಪ್ಪವಿದ್ದು ಎಡಕ್ಕೆ ತೆಳುವಾಗಿದೆ. ತಾಡನ ಶಂಖುವಿದೆ. ಮೇಲ್ತುದಿಯಲ್ಲಿ ಪುಡಿಗೆಲಸ ಮಾಡಿದ್ದು ಹರಿತ ಅಲಗು ಇದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರ-ಗಸದಂತಿದೆ. ಬಲಪಾರ್ಶ್ವ ದಪ್ಪವಿದ್ದು ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೬ ನಕ್ಷೆ- ೬೭ ಬಾಗೋರ್ (ರಾಜಾಸ್ಥಾನ) (ಸಾಂಕಳಿಯಾ.ಎಚ್.ಡಿ:೧೯೭೪;೨೬೨)




ಗಾತ್ರ ೧:೧

**ಹೆರೆಚಕ್ಕೆ ಮಾದರಿ**

**ಒಬ್ಬದಿ ಹೆರೆಚಕ್ಕೆ**

೨೨. ಹೂವಿನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೫. ದಪ್ಪ ೧೦. ಮಿ.ಮೀ. ಅಂಡಾಕಾರ. ಮುಂಬದಿ ಉಬ್ಬೇಣುಗಳಿದ್ದು ಕೆಳಭಾಗದಲ್ಲಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅಲುಕೂಲವಾಗಿಸಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಅಲಗು ಪುಡಿಗೆಲಸದಿಂದಾಗಿ ಗರಗಸ-ದಂತಿದೆ. ಬಲಪಾರ್ಶ್ವದ ಹರಿತ ಅಲಗು ನಿಮ್ನವಾಗಿದೆ. ಕೆಳತುದಿ ವೃತ್ತಾಕಾರವಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- XVI ಬೆಂಗಳೂರು (ಶೇಷಾದ್ರಿ.ಎಂ:೧೯೫೬;೧೦೧)

೨೩. ನಾಗಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೫. ಮಿ.ಮೀ. ಅಂಡಾಕಾರ. ಮುಂಬದಿ ಉಬ್ಬೇಣುಗಳಿದ್ದು ಕೆಳಭಾಗದಲ್ಲಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಅಲಗು ಪುಡಿಗೆಲಸದಿಂದಾಗಿ ಗರಗಸ-ದಂತಿದೆ. ಬಲಪಾರ್ಶ್ವದ ಮೇಲ್ಭಾಗದಲ್ಲಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳು-ವಾಗಿದ್ದು ಅರ್ಧ ವೃತ್ತಾಕಾರದಲ್ಲಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೧ ಪ್ಲೇಟ್- XXVII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೪. ಅಂಕನಬಾವಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೮. ಅಗಲ ೧೮. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಎಡಭಾಗದಲ್ಲಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅಲುಕೂಲವಾಗಿಸಿದೆ. ಎಡಪಾರ್ಶ್ವದ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವ ಅರ್ಧ ವೃತ್ತಾಕಾರದಲ್ಲಿದ್ದು ದಪ್ಪವಾಗಿ ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೩ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)






೨೨ ೨೩ ೨೪

ಗಾತ್ರ ೧:೧

**ಇಬ್ಬದಿ ಹೆರೆಚಕ್ಕೆ**

೨೫. ಹುಲಿಯೂರುದುರ್ಗ:- ಕ್ವಾರ್ಟ್ಸ್ ಶಿಲೆ. ಉದ್ದ ೨೬. ಅಗಲ ೨೨. ದಪ್ಪ ೪. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬು ವಕ್ರವಾಗಿದ್ದು ಅಲ್ಲಲ್ಲಿ ಚಕ್ಕೆ ಕಲೆಗಳಿವೆ. ಬಲಭಾಗಕ್ಕೆ ಚಕ್ಕೆಯೊಂದನ್ನು ತೆಗೆದು ಬೆರಳಿಡಿಕೆಗೆ ಅಲುಕೂಲವಾಗಿಸಿದೆ. ಮೇಲ್ತುದಿ ಪುಡಿಗೆಲಸದಿಂದಾಗಿ ಗರಗಸದಂತಹ ಅಲಗನ್ನು ಹೊಂದಿದೆ. ಎಡಭಾಗದಲ್ಲಿ ಮೊನೆ ಇದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಗರಗಸದಂತಹ ಅಲಗು ಮೂಡಿಸಿದೆ. ಬಲಪಾರ್ಶ್ವವು ಅರ್ಧ ವೃತ್ತಾಕಾರದ ಹರಿತ ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ಎರಡೂ ಕಡೆಯಿಂದ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಅಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XXVII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೬. ಸಿದ್ದಾಪುರ:- ಫೆಲ್ಸಫರ್ ಶಿಲೆ. ಉದ್ದ ೨೩. ಅಗಲ ೨೨. ದಪ್ಪ ೫. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಪರಿಧಿಯ ಕಡೆಗೆ ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿಯಲ್ಲಿ ಆಳಚಕ್ಕೆ ತೆಗೆದಿದ್ದು ಎರಡೂ ಬದಿಗೆ ಕೊಕ್ಕಿನಂತಹ ಮೊನೆ ಮೂಡಿಸಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಗರಗಸದಂತಿದೆ. ಕೆಳತುದಿಯಲ್ಲಿ ಮೂಲಶಿಲಾ ತೊಗಟೆ ಇದ್ದು ಅಲಗನ್ನು ಹೊಂದಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ವಿಷಮ ಚತುರ್ಭುಜಾಕಾರ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- XXVIII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೭. ನಾಗಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೫. ಅಗಲ ೨೪. ದಪ್ಪ ೫. ಮಿ.ಮೀ. ಅಸಮ ಚತುರ್ಭುಜ. ಮುಂಬದಿ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಬಲಕ್ಕೆ ಆಳಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಎರಡೂ ಪಾರ್ಶ್ವಗಳೂ ಪುಡಿಗೆಲಸದಿಂದಾಗಿ ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಪುಡಿಗೆಲಸ ಮಾಡಿ ಗರಗಸದಂತಹ ಅಲಗನ್ನು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಚಕ್ಕೆ ಕಲೆಗಳನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XXVIII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೮. ಅಂಕನಬಾವಿ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೨. ಅಗಲ ೨೦. ದಪ್ಪ ೬. ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬು ಬಲಭಾಗಕ್ಕಿದ್ದು ಹಲವಾರು ಚಕ್ಕೆ ಕಲೆಗಳನ್ನು ಹೊಂದಿದೆ. ಮೇಲ್ತುದಿ ಬಲಬದಿಗೆ ಮೊಂಡು ಮೊನೆ ಇದೆ. ಎಡಪಾರ್ಶ್ವಕ್ಕೆ ಹೊಂದಿಕೊಂಡ ಮೇಲ್ತುದಿಯ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದ್ದು ವೃತ್ತಾಕಾರವಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಕೆಳಭಾಗದಲ್ಲಿ ಮೊನೆಯನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೧ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)


೨೫


೨೬


೨೭


೨೮

ಗಾತ್ರ ೧:೧



**ತುದಿ ಹೆರೆಚಕ್ಕೆ**

೨೯. ಬಿಜ್ಜಾವರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೪. ದಪ್ಪ ೭. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಮೇಲ್ಭಾಗದಲ್ಲಿ ಚಕ್ಕೆ ತೆಗೆದಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಹರಿತ ಅಲಗು ವಕ್ರರೇಖೆಯಲ್ಲಿದೆ. ಎರಡೂ ಪಾರ್ಶ್ವಗಳಲ್ಲೂ ಮೊನೆ ಮೂಡಿದೆ. ಬೆರಳಿಡಿಕೆಗೆ ಅನುಕೂಲವಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೨ ನಕ್ಷೆ- ೫೯ ತೆನ್ನಿವೆಲ್ಲಿ (ತಮಿಳುನಾಡು) (ಸಾಂಕಳಿಯಾ.ಎಚ್.ಡಿ:೧೯೭೪;೨೪೩)

೩೦. ಸಿದ್ಧಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೭. ದಪ್ಪ ೫. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿಯಲ್ಲಿ ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ದೀರ್ಘ ವೃತ್ತಾಕಾರದ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಎರಡೂ ಪಾರ್ಶ್ವಗಳಲ್ಲೂ ಆಳಚಕ್ಕೆ ತೆಗೆದು ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೬ ಪ್ಲೇಟ್- XXVIII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೧. ಗುರಮ್ಮನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೧. ಅಗಲ ೨೦. ದಪ್ಪ ೫. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಮೇಲ್ಭಾಗದಲ್ಲಿ ಚಕ್ಕೆ ತೆಗೆದಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಅಲಗು ದೀರ್ಘ ವೃತ್ತಾಕಾರವಾಗಿದ್ದು ಗರಗಸದಂತಿದೆ. ಎಡಬದಿ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗಿದ್ದು ಬಲಪಾರ್ಶ್ವದ ಅಲಗು ಗರಗಸದಂತಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಎರಡೂ ಬದಿಗಳಿಂದ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೯ ಪ್ಲೇಟ್- XIV ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬ ;೯೯)







ಗಾತ್ರ ೧:೧

**ದುಂಡು ಹೆರೆಚಕ್ಕೆ**

೩೨. ಹೂವಿನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೩೩. ಅಗಲ ೨೯. ದಪ್ಪ ೬. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿಯಲ್ಲಿ ಉಬ್ಬು ಇದ್ದು ಪರಿಧಿಯ ಸುತ್ತಲೂ ಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ವಕ್ರರೇಖೆಯ ಅಲಗಿದ್ದು ಎಡ ಬದಿಗೆ ಮುಂಚಾಚಿದ ಮೊನೆ ಇದೆ. ಎಡಪಾರ್ಶ್ವ ಗರಗಸದಂತಹ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ಮೊಂಡು ಮೊನೆಯನ್ನು ಹೊಂದಿದೆ. ಹಿಂಬದಿ ನಿಮ್ನವಾಗಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XVII ಬ್ರಹ್ಮಗಿರಿ (ಶೇಷಾದ್ರಿ.ಎಂ:೧೯೫೬;೧೦೨)

೩೩. ಮಿಡಿಗೇಶಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೭. ಅಗಲ ೩೦. ದಪ್ಪ ೭. ಮಿ.ಮೀ. ಅಸಮ ವೃತ್ತಾಕಾರ. ಮುಂಬದಿ ಉಬ್ಬು ಇದ್ದು ಪರಿಧಿಯ ಕಡೆಗೆ ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿ ಹರಿತ ಅಲಗನ್ನು ಹೊಂದಿದೆ. ಎಡಪಾರ್ಶ್ವಕ್ಕೆ ಹೊಂದಿಕೊಂಡ ಕೊಕ್ಕು ಇದೆ. ಪುಡಿಗೆಲಸ ಮಾಡಿರುವ ಹರಿತ ಅಲಗು ಗರಗಸದಂತಿದೆ. ಬಲಪಾರ್ಶ್ವದ ಅಲಗು ಗರಗಸದಂತಿದ್ದು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ.

ಸಾಮ್ಯ:- ಸಂಖ್ಯೆ- ೯೦ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೪. ಅಂಕನಬಾವಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೩೦. ಅಗಲ ೨೪. ದಪ್ಪ ೭. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ವಕ್ರರೇಖೆಯ ಅಲಗಿದ್ದು ಎಡ ಭಾಗದಲ್ಲಿ ಮೊನೆ ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ಅಲಗು ಇದ್ದು ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೮೭ ನಕ್ಷೆ-೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)







೩೨ ೩೩ ೩೪

ಗಾತ್ರ ೧:೧



**ಒಳಬಾಗಿದ ಅಂಚಿನ ಹೆರೆಚಕ್ಕೆ**

೩೫. ಗೊಲ್ಲರಹಟ್ಟಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೨೦. ದಪ್ಪ ೭. ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯ ಎಡಬದಿಗೆ ಮೊನೆ ಇದೆ. ಎಡಪಾರ್ಶ್ವ ನಿಮ್ನ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ಅರ್ಧ ವೃತ್ತಾಕಾರದ ಅಲಗನ್ನು ಹೊಂದಿದೆ. ಎಡಬದಿಗೆ ಹರಿತ ಮೊನೆ ಇದೆ. ಹಿಂಬದಿ ನಿಮ್ನವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೨ ನಕ್ಷೆ- ೬೭ m. ತಿಲ್ವಾರ (ರಾಜಾಸ್ಥಾನ) (ಸಾಂಕಳಿಯಾ.ಎಚ್.ಡಿ:೧೯೭೪;೨೭೪)

೩೬. ಸಿದ್ದಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೩. ಅಗಲ ೧೬. ದಪ್ಪ ೭. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮೇಲ್ಭಾಗ ಮತ್ತು ಕೆಳಭಾಗದಲ್ಲಿ ದಪ್ಪವಿದ್ದು ಎಡಬದಿಗೆ ತೆಳುವಾಗಿದೆ. ಮೇಲ್ತುದಿ ದಪ್ಪವಿದ್ದು ಬೆರಳಿಡಿಕೆಗೆ ಅನುಕೂಲವಾಗಿದೆ. ಎಡಪಾರ್ಶ್ವ ತೆಳುವಾಗಿದ್ದು ಹರಿತ ಅಲಗು ನಿಮ್ನವಾಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗುವಂತಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೦ ಪ್ಲೇಟ್- XVIII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೭. ಹೊಸಹಳ್ಳಿ:- ಕ್ವಾರ್ಟ್ಜ್ ಶಿಲೆ. ಉದ್ದ ೩೮. ಅಗಲ ೨೨. ದಪ್ಪ ೭. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆಗಳನ್ನು ತೆಗೆದು ಉಪಕರಣವನ್ನು ತೆಳುವಾಗಿಸಿದೆ. ಮೇಲ್ತುದಿ ಬಲಬದಿಗೆ ಆಳಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಎಡಬದಿಗೆ ಕೊಕ್ಕು ಮೂಡಿಸಿದೆ. ಎಡಪಾರ್ಶ್ವದಲ್ಲಿ ಒಳಬಾಗಿದ ಅಲಗು ಗರಗಸದಂತಿದೆ. ಬಲಪಾರ್ಶ್ವ ತೆಳುವಾಗಿದ್ದು ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ಬಲಕ್ಕೆ ಹೊಂದಿಕೊಂಡ ಮೊನೆ ಇದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೮೭ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)










ಗಾತ್ರ ೧:೧ ೩೫ ೩೬ ೩೭

**ಮೂಲಗಟ್ಟಿ ಹೆರೆಚಕ್ಕೆ**

೩೮. ದಬ್ಬೇಗಟ್ಟ:- ಕ್ವಾರ್ಟ್ಜ್‌ಶಿಲೆ. ಉದ್ದ ೧೭. ಅಗಲ ೨೦. ದಪ್ಪ ೧೦. ಮಿ.ಮೀ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ತೆಳುವಾಗಿದೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಹರಿತ ಅಲಗು ವಕ್ರರೇಖೆಯಲ್ಲಿದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ಕಂಸಾಕಾರ.

ಸಾಮ್ಯ:- ಸಂಖ್ಯೆ- ೮೨ ನಕ್ಷೆ- ೬೭ ಬಾಗೂರ್ (ರಾಜಾಸ್ಥಾನ) (ಸಾಂಕಳಿಯಾ.ಎಚ್.ಡಿ:೧೯೭೪;೨೬೨)

೩೯. ಥರಟಿ:- ಕ್ವಾರ್ಟ್ಜ್‌ಶಿಲೆ. ಉದ್ದ ೩೬. ಅಗಲ ೨೦. ದಪ್ಪ ೮. ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ತೆಳುವಾಗಿದೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೮ ನಕ್ಷೆ- ೬೩ ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೭೪;೨೫೩)

೪೦. ಅವರ್ಗಲ್ಲು:- ಕ್ವಾರ್ಟ್ಜ್‌ಶಿಲೆ ಉದ್ದ ೨೭. ಅಗಲ ೨೫. ದಪ್ಪ ೮. ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಸಮತಲವಿದ್ದು ಪರಿಧಿಯ ಸುತ್ತಲೂ ಚಕ್ಕೆ ತೆಗೆದಿರುವ ಕಲೆಗಳಿವೆ. ಮೇಲ್ತುದಿ ವಿರುದ್ಧ ದಿಕ್ಕಿವಿಂದ ಚಕ್ಕೆ ತೆಗೆದಿದ್ದು ಮೊಂಡು ಮೊನೆ ಇದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿವಿಂದ ಚಕ್ಕೆ ತೆಗೆದಿದ್ದು ಹರಿತ ಅಲಗು ವಕ್ರರೇಖೆಯಲ್ಲಿದೆ. ಬಲಪಾರ್ಶ್ವದ ಅಲಗು ವಕ್ರರೇಖೆಯಲ್ಲಿದ್ದು ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ಚಕ್ಕೆ ಕಲೆಗಳನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XXVIII-A ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೧. ಹೂವಿನಕಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೩೦. ಅಗಲ ೨೬. ದಪ್ಪ ೭. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ತೆಳುವಾಗಿದೆ. ಮೇಲ್ತುದಿ ಮೊಂಡು ಮೊನೆಯನ್ನು ಹೊಂದಿದೆ. ಎರಡೂ ಪಾರ್ಶ್ವಗಳಲ್ಲೂ ಆಳಚಕ್ಕೆ ತೆಗೆದಿದ್ದು ವೃತ್ತಾಕಾರದ ಅಲಗು ಇದೆ. ಕೆಳತುದಿ ತೆಳುವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ವಿಷಮ ಆಯತಾಕಾರ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XXVIII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೨. ಅವರಗಲ್ಲು:- ಕ್ವಾರ್ಟ್ಸ್‌ಶಿಲೆ. ಉದ್ದ ೩೦. ಅಗಲ ೨೮. ದಪ್ಪ ೧೦. ಮಿ.ಮೀ. ಅಸಮ ವೃತ್ತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊಂಡು ಮೊನೆಯನ್ನು ಹೊಂದಿದೆ. ಬಲಪಾರ್ಶ್ವ ತೆಳುವಾಗಿದ್ದು ಅಲಗನ್ನು ಹೊಂದಿದೆ. ಎಡಪಾರ್ಶ್ವವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಪುಡಿಗೆಲಸದಿಂದಾಗಿ ಅಲಗು ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿಯ ಮಧ್ಯದಲ್ಲಿ ಉಬ್ಬೇಣು ಇದ್ದು ಪೀನವಾಗಿದೆ.

ಸಾಮ್ಯ:- ಸಂಖ್ಯೆ- ೬೦ ನಕ್ಷೆ- ೬೭ m ತಿಲ್ವಾರ (ರಾಜಸ್ಥಾನ) (ಸಾಂಕಾಳಿಯಾ.ಎಚ್.ಡಿ:೧೯೭೪;೨೭೪)




ಗಾತ್ರ ೧:೧




**ಮೊನೆ ಮಾದರಿ**

**ಸಾಮಾನ್ಯ ಮೊನೆ**

೪೩. ಬೆಳ್ಳಿಬಟ್ಟಲಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೮. ಅಗಲ ೧೫. ದಪ್ಪ ೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಸ್ವಲ್ಪ ಭಾಗ ಕತ್ತರಿಸಿ ತೆಗೆದಿದೆ. ಮೇಲ್ತುದಿ ಎಡಭಾಗಕ್ಕೆ ಚಕ್ಕೆ ತೆಗೆದಿದ್ದು ಬಲಭಾಗಕ್ಕೆ ಹೊಂದಿಕೊಂಡ ಹರಿತ ಮೊನೆ ಇದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿ ನಿಮ್ನವಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨೮ ಪ್ಲೇಟ್- XIII ಜಾಲಹಳ್ಳಿ (ಶೇಷಾದ್ರಿ.ಎಂ:೧೯೫೬;೯೮)

೪೪. ಹಿರೇಗುಂಡಗಲ್ಲು:- ಕ್ವಾರ್ಟ್ಸ್‌ಶಿಲೆ. ಉದ್ದ ೨೦. ಅಗಲ ೧೦. ದಪ್ಪ ೪. ಮಿ.ಮೀ. ಅರ್ಧ ಚಂದ್ರಾಕೃತಿ. ಮುಂಬದಿ ಸಮತಲವಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಇದ್ದು ಎಡಭಾಗಕ್ಕೆ ಹೊಂದಿಕೊಂಡಿದೆ. ಎಡಪಾರ್ಶ್ವ ವಿರುದ್ಧ ದಿಕ್ಕಿನಿಂದ ಆಳಚಕ್ಕೆ ತೆಗೆದಿದ್ದು ಹರಿತವಾಗಿದೆ. ಬಲಪಾರ್ಶ್ವ ಪುಡಿಗೆಲಸದಿಂದಾಗಿ ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿ ಎರಡೂ ಬದಿಯಿಂದ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೯ ಪ್ಲೇಟ್- XXVIII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

(ರೇಖಾ ನಕ್ಷೆ ಮತ್ತು ಛಾಯ ಚಿತ್ರದ ವಿವರಣೆ ಇಲ್ಲ)






ಗಾತ್ರ ೧:೧

೪೩

**ತ್ರಿಭುಜಾಕರದ ಮೊನೆ**

೪೫. ಬಿಜ್ಜಾವರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦. ಅಗಲ ೧೫. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆಯನ್ನು ಹೊಂದಿದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ಗರಗಸದಂತಹ ಅಲಗು ಮೂಡಿಸಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೮೮ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೬. ಥರಟಿ:- ಕ್ವಾರ್ಟ್ಸ್‌ಶಿಲೆ. ಉದ್ದ ೧೬. ಅಗಲ ೧೫. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಹರಿತ ಮೊನೆ ಇದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದಿದ್ದು ಮೊಂಡಾಗಿದೆ. ಬಲಪಾರ್ಶ್ವ ಪುಡಿಗೆಲಸದಿಂದಾಗಿ ಗರಗಸದಂತಹ ಹರಿತ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಚಕ್ಕೆ ಕಲೆಗಳನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨೫ ನಕ್ಷೆ- ೫೯ ತೆನ್ನಿವೆಲ್ಲಿ (ತಮಿಳುನಾಡು) (ಸಾಂಕಳಿಯಾ.ಎಚ್.ಡಿ:೧೯೭೪;೨೪೩)

೪೭. ಅಂಕನಬಾವಿ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೧೭. ಅಗಲ ೭. ದಪ್ಪ ೨. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಪರಿಧಿಯ ಕಡೆಗೆ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಮೊಂಡಾಗಿದ್ದು ಎರಡೂ ಬದಿಗೆ ಚಕ್ಕೆ ತೆಗೆದಿದೆ. ಎಡಪಾರ್ಶ್ವದ ಮಧ್ಯದಲ್ಲಿ ಮೊನೆ ಇದ್ದು ಎರಡೂ ಬದಿಗೂ ಗರಗಸದಂತಹ ಅಲಗು ಇದೆ. ಬಲಪಾರ್ಶ್ವ ತೆಳುವಾಗಿದ್ದು ಮೊಂಡಾ-ಗಿದೆ. ಕೆಳತುದಿ ಎರಡೂ ಬದಿಯಿಂದ ಚಕ್ಕೆ ತೆಗೆದಿದ್ದು ಮೊಂಡು ಮೊನೆಯಿದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೩ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೮. ಚಿನಗ:- ಕ್ವಾರ್ಟ್ಸ್‌ಶಿಲೆ. ಉದ್ದ ೨೦. ಅಗಲ ೧೫. ದಪ್ಪ ೪. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಎರಡೂ ಬದಿಗಳಿಂದ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಎಡಪಾರ್ಶ್ವದ ಮೇಲ್ಭಾಗದಲ್ಲಿ ಅಲಗಿದ್ದು ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೫ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೯. ಕೈಮರ:- ಕ್ವಾರ್ಟ್ಸ್‌ಶಿಲೆ. ಉದ್ದ ೧೪. ಅಗಲ ೧೪. ದಪ್ಪ ೩. ಮಿ.ಮೀ. ತ್ರಿಭುಜಾಕಾರ. ಮುಂಬದಿ ಸಮತಲವಿದ್ದು ಪರಿಧಿಯ ಕಡೆಗೆ ಆಳ-ಚಕ್ಕೆ ತೆಗೆದಿದೆ. ಮೇಲ್ತುದಿ ಎರಡೂ ಬದಿಗೂ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಎಡಪಾರ್ಶ್ವ ಕೆಳಭಾಗದಲ್ಲಿ ಹರಿತ ಮೊನೆ ಮೂಡಿಸಿದೆ. ಬಲಪಾರ್ಶ್ವ ಮತ್ತು ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ಶಂಖುವನ್ನು ಹೊಂದಿದೆ. ಅಡ್ಡವಿ-ನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೪೯ ನಕ್ಷೆ- ೪೧ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)





ಗಾತ್ರ ೧:೧

**ಕೊಕ್ಕುಳ್ಳ ಮೊನೆ**

೫೦. ಅಂಕನಬಾವಿ:- ಕ್ವಾರ್ಟ್ಸ್‌ಶಿಲೆ. ಉದ್ದ ೩೦. ಅಗಲ ೨೭. ದಪ್ಪ ೧೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳ-ಭಾಗ ಕತ್ತರಿಸಿದೆ. ಮೇಲ್ತುದಿಯಲ್ಲಿ ಮುಂಚಾಚಿದ ಕೊಕ್ಕು ಬಲಕ್ಕೆ ಬಾಗಿದೆ. ಎಡಪಾರ್ಶ್ವದ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದ್ದು ಕೆಳಭಾಗದಲ್ಲಿ ಮೊನೆ ಇದೆ. ಬಲಪಾರ್ಶ್ವ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಅಲಗು ನಿಮ್ನವಾಗಿದೆ. ಕೆಳಭಾಗದಲ್ಲಿ ಮೊನೆ ಮೂಡಿಸಿದೆ. ಕೆಳತುದಿಯಲ್ಲಿ ಹಲವು ಚಕ್ಕೆ ತೆಗೆದಿದ್ದು ಪರಿಧಿ ವಕ್ರರೇಖೆಯಲ್ಲಿದೆ. ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಹಿಂಬದಿ ಮಧ್ಯದಲ್ಲಿ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳನ್ನು ಹೊಂದಿದೆ. ಅಡ್ಡವಿನ್ಯಾಸ ವಿಷಮ ಚತುರ್ಭುಜ.

ಸಾಮ್ಯ:- ಸಂಖ್ಯೆ- ೨೫ ನಕ್ಷೆ- ೪೧ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫೧. ಹೂವಿನಕಟ್ಟೆ:- ಕ್ವಾರ್ಟ್ಜ಼ಶಿಲೆ. ಉದ್ದ ೨೭. ಅಗಲ ೨೦. ದಪ್ಪ ೭. ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳನ್ನು ಹೊಂದಿದೆ. ಪರಿಧಿಯ ಕಡೆಗೆ ತೆಳುವಾಗಿದೆ. ಮೇಲ್ತುದಿ ಪುಡಿಗೆಲಸದಿಂದಾಗಿ ಗರಗಸದಂತಹ ಅಲಗನ್ನು ಹೊಂದಿದ್ದು ಎಡ-ಬದಿಗೆ ಹೊಂದಿಕೊಂಡ ಮುಂಚಾಚಿದ ಕೊಕ್ಕು ಇದೆ. ಎಡಪಾರ್ಶ್ವದ ಮೇಲ್ಭಾಗ ದಪ್ಪವಿದ್ದು ಮೊಂಡಾಗಿದೆ. ಕೆಳಭಾಗ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅರ್ಧ ಭಾಗ ಸಮತಲ ಉಳಿದರ್ಧ ಭಾಗ ಅಸಮತಲವನ್ನು ಹೊಂದಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೭೫ ರಂತೆಯೇ.

೫೨. ಮಧುಗಿರಿ. ಕ್ವಾರ್ಟ್ಜ಼ಶಿಲೆ. ಉದ್ದ ೨೬. ಅಗಲ ೧೭. ದಪ್ಪ ೫. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿ-ಧಿಯ ಕಡೆಗೆ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವಕ್ಕೆ ಮುಂಚಾಚಿದ ಕೊಕ್ಕು ಮೂಡಿಸಿದೆ. ಕೊಕ್ಕಿನ ಕೆಳಗೆ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಕೊಕ್ಕನ್ನು ಹರಿತಗೊಳಿಸಿದೆ. ಉಳಿದ ಭಾಗವೂ ಹರಿತವಾಗಿದೆ. ಬಲಪಾರ್ಶ್ವದ ಮೇಲ್ಭಾಗ ದಪ್ಪವಿದ್ದು ಮೊಂಡಾಗಿದೆ. ಕೆಳಭಾಗ ತೆಳುವಾಗಿದ್ದು ಹರಿತವಾಗಿದೆ. ಕೆಳತುದಿ ಎರಡೂ ಬದಿಯಲ್ಲೂ ಚಕ್ಕೆ ತೆಗೆದು ಮೊಂಡು ಮೊನೆ ಮೂಡಿಸಿ-ದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೭೩ ರಂತೆಯೇ.

೫೩. ಸಿದ್ಧಾಪುರ:- ಕ್ವಾರ್ಟ್ಜ಼ಶಿಲೆ. ಉದ್ದ ೨೨. ಅಗಲ ೧೨. ದಪ್ಪ ೮. ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಪರಿಧಿಯ ಕಡೆಗೆ ಚಕ್ಕೆ ತೆಗೆದಿದ್ದು ಕಲೆಗಳಿವೆ. ಮೇಲ್ತುದಿ ದೀರ್ಘವೃತ್ತಾಕಾರದ ಅಲಗನ್ನು ಹೊಂದಿದ್ದು, ಬಲಪಾರ್ಶ್ವಕ್ಕೆ ಮುಂಚಾಚಿದ ಕೊಕ್ಕಿನ ಮೊನೆ ಇದೆ. ಎಡಪಾರ್ಶ್ವ ಅಲಗನ್ನು ಹೊಂದಿದೆ. ಬಲಪಾರ್ಶ್ವದ ನಿಮ್ನ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೭೪ ರಂತೆಯೇ




ಗಾತ್ರ ೧:೧



**ಅರ್ಧ ಚಂದ್ರಾಕೃತಿ ಮೊನೆ**

೫೪. ಬಿಜ್ಜಾವರ:- ಕ್ವಾರ್ಟ್ಜ಼ಶಿಲೆ. ಉದ್ದ ೨೦. ಅಗಲ ೧೨. ದಪ್ಪ ೫. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆಯನ್ನು ಹೊಂದಿದೆ. ಎಡಪಾರ್ಶ್ವ ಪುಡಿಗೆಲಸದಿಂದಾಗಿ ಗರಗಸ-ದಂತಹ ಅಲಗನ್ನು ಹೊಂದಿದೆ. ಬಲಪಾರ್ಶ್ವದ ಅಲಗು ವೃತ್ತಾಕಾರದಲ್ಲಿದ್ದು ಗರಗಸದಂತಹ ಅಲಗನ್ನು ಹೊಂದಿದೆ. ಕೆಳಭಾಗದಲ್ಲಿ ಆಳಚಕ್ಕೆ ತೆಗೆದಿದ್ದು ದಪ್ಪವಾಗಿದೆ. ಕೆಳತುದಿ ಮೊಂಡು ಮೊನೆಯನ್ನು ಹೊಂದಿದೆ. ಹಿಂಬದಿ ಸಮತಲವನ್ನು ಹೊಂದಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೫ ನಕ್ಷೆ- ೬೩ ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೬೪;೨೫೩)

೫೫. ಚಿನಗ:- ಕ್ವಾರ್ಟ್ಜ಼ಶಿಲೆ. ಉದ್ದ ೨೫. ಅಗಲ ೧೦. ದಪ್ಪ ೫. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಕೆಳಭಾ-ಗದಲ್ಲಿ ಉಬ್ಬೇಣನ್ನು ಕತ್ತರಿಸಿ ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಮೇಲ್ತುದಿಯ ಹರಿತ ಮೊನೆ ಬಲಬದಿಗೆ ಹೊಂದಿಕೊಂಡಂತಿದೆ. ಬಲಪಾರ್ಶ್ವ ದೀರ್ಘವೃತ್ತಾಕಾರದಲ್ಲಿದ್ದು ಮೊಂಡಾಗಿದೆ. ಕೆಳತುದಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೮ ನಕ್ಷೆ- ೬೩ ಲಾಂಗ್‌ನಾಜ್(ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೬೪;೨೫೩)

೫೬. ಸೀಗೆಪಾಳ್ಯ:- ಕ್ವಾರ್ಟ್ಜ಼ಶಿಲೆ. ಉದ್ದ ೨೧. ಅಗಲ ೯. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ದೀರ್ಘ ವೃತ್ತಾಕಾರದಲ್ಲಿದ್ದು ಪುಡಿಗೆಲಸ ಮಾಡಿದೆ. ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೨ ನಕ್ಷೆ- ೬೩ ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೬೪;೨೫೩)









೫೪ ೫೫ ೫೬

ಗಾತ್ರ ೧:೧

**ಬಾಣದ ಮೊನೆ**

೫೭. ಹುಲಿಯೂರುದುರ್ಗ:- ಕ್ವಾರ್ಟ್ಸ್‌ಶಿಲೆ. ಉದ್ದ ೨೦. ಅಗಲ ೧೨. ದಪ್ಪ ೪. ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಮೇಲ್ಭಾಗದಲ್ಲಿದ್ದು ಕೆಳಭಾಗದ ಉಬ್ಬನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆಯನ್ನು ಹೊಂದಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಕೆಳತುದಿ ತೆಳುವಾಗಿದ್ದು ಹಿಡಿಕೆಗೆ ಸಿಕ್ಕಿಸಲು ಅನುಕೂಲವಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ವಿಷಮ ಆಯತಾಕಾರ.

ಸಾಮ್ಯ:- ಸಂಖ್ಯೆ- ೩೨ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫೮. ಥರಟಿ:- ಕ್ವಾರ್ಟ್ಸ್‌ಶಿಲೆ. ಉದ್ದ ೨೫. ಅಗಲ ೧೮. ದಪ್ಪ ೫. ಮಿ.ಮೀ. ಎಲೆಯಾಕಾರ. ಮುಂಬದಿ ಕೆಳಭಾಗ ಸಮತಲವಿದ್ದು ಬಲಬದಿಗೆ ಮೂಲಶಿಲಾ ತೊಗಟೆ ಅಂಶವಿದೆ. ಎಡಬದಿಗೆ ಚಕ್ಕೆ ತೆಗೆದಿರುವ ಕಲೆಗಳಿವೆ. ಮೇಲ್ತುದಿ ಮಧ್ಯದಲ್ಲಿ ಮೊನೆ ಇದೆ. ಎಡಪಾರ್ಶ್ವದ ಮೇಲ್ಭಾಗ-ದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಗರಗಸದಂತಹ ಹರಿತ ಅಲಗು ಇದೆ. ಕೆಳಭಾಗದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವದ ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಮೇಲ್ಭಾಗ ಹರಿತವಾಗಿದೆ. ಕೆಳತುದಿ ದಪ್ಪವಿದ್ದು ಹಿಡಿಕೆಗೆ ಸಿಕ್ಕಿಸಲು ಅನು-ಕೂಲವಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೭ ಪ್ಲೇಟ್- XXVII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫೯. ಹೊಸಹಳ್ಳಿ:- ಕ್ವಾರ್ಟ್ಸ್‌ಶಿಲೆ. ಉದ್ದ ೨೦. ಅಗಲ ೧೫. ದಪ್ಪ ೫. ಮಿ.ಮೀ. ತ್ರಿಭುಜಾಕಾರ ಮುಂಬದಿ ಉಬ್ಬೇಣು ಬಲಬದಿಗಿದ್ದು ಎಡಭಾಗ ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಮೇಲ್ತುದಿಯ ಮೊನೆ ಬಲಪಾರ್ಶ್ವಕ್ಕೆ ಹೊಂದಿಕೊಂಡಂತಿದೆ. ಎಡಪಾರ್ಶ್ವ ಗರಗಸದಂತಹ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವದ ಅಲಗು ಪುಡಿಗೆಲಸದಿಂದಾಗಿ ವಕ್ರರೇಖೆಯಲ್ಲಿದೆ. ಕೆಳಭಾಗದಲ್ಲಿ ಮೊನೆ ಮೂಡಿಸಿದೆ. ಕೆಳತುದಿ-ಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಹರಿತಗೊಳಿಸಿದೆ. ಹಿಂಬದಿ ಪೀನವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿ-ನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೯ ಪ್ಲೇಟ್- XXVII-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೬೦. ಹಿರೇಗುಂಡಗಲ್ಲು:- ಕ್ವಾರ್ಟ್ಸ್‌ಶಿಲೆ. ಉದ್ದ ೧೭. ಅಗಲ ೨೦. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿ-ಧಿಯ ಕಡೆಗೆ ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಆಳಚಕ್ಕೆ ತೆಗೆದಿದ್ದು ಹರಿತ ಅಲಗು ಹೊಂದಿದೆ. ಕೆಳ-ತುದಿಯ ಎರಡೂ ಬದಿಗಳಲ್ಲೂ ಚಕ್ಕೆ ತೆಗೆದಿದ್ದು ಮಧ್ಯದಲ್ಲಿ ಗೂಟವನ್ನು ಮೂಡಿಸಿ ಹಿಡಿಕೆಗೆ ಸಿಕ್ಕಿಸಲು ಅನುಕೂಲವಾಗಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ. ತಾಡನ ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ.

೬೧. ಸೀಗೆಪಾಳ್ಯ:- ಕ್ವಾರ್ಟ್ಸ್‌ಶಿಲೆ. ಉದ್ದ ೨೦. ಅಗಲ ೧೦. ದಪ್ಪ ೩. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಎಡಭಾಗಕ್ಕೆ ಚಕ್ಕೆ ತೆಗೆದಿದ್ದು ಬಲಭಾಗದಲ್ಲಿ ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಮೇಲ್ತುದಿ ಮೊನೆಯ ಎರಡೂ ಬದಿ ಮತ್ತು ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಹರಿತ ಮೊನೆ ಮೂಡಿಸಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗು ಇದ್ದು ಕೆಳಭಾಗದಲ್ಲಿ ಮೊನೆ ಇದೆ. ಬಲಪಾರ್ಶ್ವ ಮೊಂಡಾಗಿದೆ. ಕೆಳ ತುದಿ ಎರಡೂ ಬದಿಗಳಿಂದ ಚಕ್ಕೆ ತೆಗೆದು ಮಧ್ಯದಲ್ಲಿ ಗೂಟವನ್ನು ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭೮ ಪ್ಲೇಟ್- XXV-B ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)





ಗಾತ್ರ ೧:೧

**ಕೊರೆಗ**

೬೨. ಅಂಕನಬಾವಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೪. ಮಿ.ಮೀ. ಎಲೆಯಾಕಾರ. ಮುಂಬದಿ ಸಮವಿದ್ದು ಹಲವು ಚಕ್ಕೆ ಕಲೆಗಳನ್ನು ಹೊಂದಿದೆ. ಮೇಲ್ತುಯದಿ ಎಡಕ್ಕೆ ಚಕ್ಕೆ ತೆಗೆದಿದ್ದು ಬಲಪಾರ್ಶ್ವಕ್ಕೆ ಹೊಂದಿಕೊಂಡ ಮುಂಚಾಚಿದ ಕೊರೆಯುವ ಮೊನೆಯನ್ನು ಮೂಡಿಸಿದೆ. ಎಡಪಾರ್ಶ್ವದಲ್ಲಿ ಚಿಕ್ಕ ಚಿಕ್ಕ ಚಕ್ಕೆಗಳನ್ನು ತೆಗೆದು ಅಲಗು ಮೂಡಿಸಿದೆ. ಬಲಪಾರ್ಶ್ವದ ಮೇಲ್ಭಾಗದಲ್ಲಿ ಆಳಚಕ್ಕೆ ತೆಗೆದು ಮೊಂಡಾಗಿದೆ. ಕೆಳಭಾಗ ಹರಿತ ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ಮೊನೆ ಇದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ವಿಷಮ ಆಯತಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೯೪ ರಂತೆಯೇ.

೬೩. ಅಂಕನಬಾವಿ:- ಕ್ವಾರ್ಟ್ಸ್‌ಶಿಲೆ. ಉದ್ದ ೨೩. ಅಗಲ ೧೪. ದಪ್ಪ ೪. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಮೇಲ್ತುದಿಯವರೆಗೂ ಇದೆ. ಹಲವು ಚಕ್ಕೆ ಕಲೆಗಳಿದ್ದು ಎಡಬದಿಯಲ್ಲಿ ಮೂಲಶಿಲಾ ತೊಗಟೆ ಅಂಶವಿದೆ. ಮೇಲ್ತುದಿಯ ಮುಂಚಾಚಿದ ಉದ್ದ ಮೊನೆಯನ್ನು ಎರಡೂ ಬದಿಯಿಂದ ಚಕ್ಕೆ ತೆಗೆದು ಹರಿತಗೊಳಿಸಿದೆ. ಎಡಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಅಲಗು ಹರಿತವಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿ ವೃತ್ತಾಕಾರದಲ್ಲಿದ್ದು ಹರಿತ ಅಲಗನ್ನು ಹೊಂದಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೧೦೧ ರಂತೆಯೇ.

೬೪. ಯಕ್ಕಲಕಟ್ಟೆ:- ಆದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೧೬. ಅಗಲ ೧೨. ದಪ್ಪ ೪. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿ ಸಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಮುಂಚಾಚಿದ ಮೊನೆಯನ್ನು ಎರಡೂ ಬದಿಯಿಂದ ಚಕ್ಕೆ ತೆಗೆದು ಮೂಡಿಸಿದ್ದು ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವ ಹರಿತ ಮೊನೆ ಹೊಂದಿದೆ. ಬಲಪಾರ್ಶ್ವದ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ.






ಗಾತ್ರ ೧:೧

**ಕೊರೆಯುಳಿ**

೬೫. ಹಿರೇಗುಂಡಗಲ್ಲು:- ಜಾಸ್ಪರ್ ಶಿಲೆ. ಉದ್ದ ೨೮. ಅಗಲ ೨೨. ದಪ್ಪ ೧೦. ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಪರಿಧಿಯ ಕಡೆಗೆ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಕೊರೆಯುವ ಮೊನೆಯು ಬಲಪಾರ್ಶ್ವದ ಅಂಚಿಗೆ ಹೊಂದಿಕೊಂಡಂತಿದ್ದು ಎಡಪಾರ್ಶ್ವದಿಂದ ಆಳಚಕ್ಕೆ ತೆಗೆದು ಮೊನೆಯನ್ನು ಹರಿತಗೊಳಿಸಿದೆ. ಎಡಪಾರ್ಶ್ವದ ಅಲಗನ್ನು ಕತ್ತರಿಸಿ ಮೊಂಡು ಮಾಡಿದೆ ಬಲಪಾರ್ಶ್ವದ ಕೆಳಭಾಗ ಹರಿತ ಅಲಗನ್ನು ಹೊಂದಿದ್ದು ಮೇಲ್ಭಾಗದಲ್ಲಿ ಪುಡಿಗೆಲಸ ಮಾಡಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ಪುಡಿಗೆಲಸದಿಂದಾಗಿ ಅಲಗು ವಕ್ರರೇಖೆಯಲ್ಲಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಅಪರೂಪದ ಉಪಕರಣ.

೬೬. ಅಂಕನಬಾವಿ:- ಕ್ವಾರ್ಟ್ಜ್ ಶಿಲೆ. ಉದ್ದ ೨೬. ಅಗಲ ೧೮. ದಪ್ಪ ೬. ಮಿ.ಮೀ. ತ್ರಿಭುಜಾಕಾರ ಮುಂಬದಿ ಉಬ್ಬೇಣು ಬಲಬದಿಗಿದ್ದು ವಕ್ರರೇಖೆಯಲ್ಲಿ ಸಾಗಿದೆ. ಮೇಲ್ತುದಿ ಮಧ್ಯದಲ್ಲಿ ಚಕ್ಕೆ ತೆಗೆದು ಮುಂಚಾಚಿದ ಮೊನೆ ಇದ್ದು ಮೊಂಡಾಗಿದೆ. ಎಡಪಾರ್ಶ್ವದ ಮೇಲ್ಭಾಗದಲ್ಲಿ ಹಾಗು ಬಲಪಾರ್ಶ್ವದಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ಪುಡಿಗೆಲಸ ಮಾಡಿ ಗರಗಸದಂತಹ ಅಲಗನ್ನು ಮೂಡಿಸಿದೆ. ಕೆಳತುದಿ ಮೊನೆಯನ್ನು ಹೊಂದಿದೆ. ಹಿಂಬದಿ ಅಸಮತಲವಿದ್ದು ಹಲವು ಚಕ್ಕೆಗಳನ್ನು ತೆಗೆದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೯೬ ರಂತೆಯೇ

೬೭. ಹೂವಿನಕಟ್ಟೆ:- ಕ್ವಾರ್ಟ್ಜ್‌ಶಿಲೆ. ಉದ್ದ ೨೭. ಅಗಲ ೨೦. ದಪ್ಪ ೫. ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದ ಮೇಲ್ಭಾಗದಲ್ಲಿ ಆಳಚಕ್ಕೆ ತೆಗೆದು ಕೊರೆಯುವ ಮೊನೆ ಮೂಡಿಸಿದೆ. ಕೆಳಭಾಗ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಮೂಲಶಿಲಾ ತೊಗಟೆ ಅಂಶವನ್ನು ಹೊಂದಿದೆ. ಕೆಳತುದಿ ಅರ್ಧ ವೃತ್ತಾಕಾರದಲ್ಲಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ಆಯತಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೮೨ ರಂತೆಯೇ

೬೮. ಸಿದ್ಧಾಪುರ:- ಜಾಸ್ಪರ್ ಶಿಲೆ. ಉದ್ದ ೨೫. ಅಗಲ ೧೫. ದಪ್ಪ ೧೧. ಮಿ.ಮೀ. ತ್ರಿಭುಜಾಕಾರ ಮುಂಬದಿ ಉಬ್ಬೇಣು ಇದ್ದು ಹಲವು ಚಕ್ಕೆ ಕಲೆ ಮತ್ತು ಮೂಲಶಿಲಾ ತೊಗಟೆಯನ್ನು ಹೊಂದಿದೆ. ಮೇಲ್ತುದಿ ಕೊರೆಯುವ ಮೊನೆಯನ್ನು ಬಲಪಾರ್ಶ್ವಕ್ಕೆ ಹೊಂದಿಕೊಂಡಂತೆ ಮೂಡಿಸಿದೆ. ಎಡಪಾರ್ಶ್ವದ ಮಧ್ಯದಲ್ಲಿ ಮೊನೆ ಇದೆ. ಬಲಪಾರ್ಶ್ವದಲ್ಲಿ ಆಳ ಚಕ್ಕೆ ತೆಗೆದಿದೆ. ಕೆಳತುದಿಯ ಮಧ್ಯದಲ್ಲಿ ಮೊನೆಇದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಮೊದಲನೆಯ ಹಂತದ ಸಂಖ್ಯೆ- ೯೨ ರಂತೆಯೇ






ಗಾತ್ರ ೧:೧

**ಅರ್ಧ ಚಂದ್ರಾಕೃತಿ**

೬೯. ಸೀಗೆಪಾಳ್ಯ:- ಕ್ವಾರ್ಟ್ಜ್‌ಶಿಲೆ. ಉದ್ದ ೧೨. ಅಗಲ ೭. ದಪ್ಪ ೪. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಉಬ್ಬು ಬಲಭಾಗಕ್ಕಿದ್ದು ಎಡಭಾಗ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಎಡಪಾರ್ಶ್ವಕ್ಕೆ ಹೊಂದಿಕೊಂಡಿದ್ದು ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವ ದಪ್ಪವಿದ್ದು ವೃತ್ತಾಕಾರವಾಗಿದ್ದು ಮೊಂಡಾಗಿದೆ. ಕೆಳತುದಿಯ ಮೊನೆ ಎಡಪಾರ್ಶ್ವಕ್ಕೆ ಹೊಂದಿಕೊಂಡಿದೆ. ಹಿಂಬದಿ ಸಮತಲ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೬ ನಕ್ಷೆ- ೬೩ ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೬೪;೨೫೩)

೭೦. ಥರಟಿ:- ಕ್ವಾರ್ಟ್ಸ್‌ಶಿಲೆ. ಉದ್ದ ೨೨. ಅಗಲ ೧೦. ದಪ್ಪ ೫. ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿಯ ಬಲಭಾಗ ದಪ್ಪವಿದ್ದು ಎಡ-ಭಾಗ ತೆಳುವಾಗಿದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಮೊನೆ ಇದೆ. ಎಡಪಾರ್ಶ್ವದ ಹರಿತ ಅಲಗು ಪುಡಿಗೆಲಸದಿಂದಾಗಿ ಗರಗಸದಂತಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಮೊನೆ ಇದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೭ ನಕ್ಷೆ- ೬೩ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೭೪;೨೫೩)




ಗಾತ್ರ ೧:೧

ದಬ್ಬಳ

೭೧. ಹೂವಿನಕಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೨೫. ಅಗಲ ೬. ದಪ್ಪ ೫. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಎಡಪಾರ್ಶ್ವದಲ್ಲಿ ಪುಡಿಗೆಲಸ ಮಾಡಿದೆ. ಬಲಪಾರ್ಶ್ವದಲ್ಲಿ ಆಳಚಕ್ಕೆ ತೆಗೆದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಬೆರಳಿಡಿಕೆಗೆ ಅನುಕೂಲವಾಗಲು ಎರಡೂ ಬದಿಗಳಲ್ಲೂ ಚಕ್ಕೆ ತೆಗೆದಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೬೭ ನಕ್ಷೆ- ೪೪ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೭೨. ಹೂವಿನಕಟ್ಟೆ:- ಕ್ವಾರ್ಟ್ಸ್‌ಶಿಲೆ. ಉದ್ದ ೨೭. ಅಗಲ ೧೯. ದಪ್ಪ ೮. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಮೇಲ್ಭಾಗದಲ್ಲಿ ಉಬ್ಬೇಣನ್ನು ಕತ್ತರಿಸಿದೆ. ಮೇಲ್ತುದಿ ಹರಿತ ಮೊನೆಯನ್ನು ಹೊಂದಿದೆ. ಎಡಪಾರ್ಶ್ವ ದೀರ್ಘ ವೃತ್ತಾಕಾರದ ಅಲಗನ್ನು ಹೊಂದಿದೆ. ಬಲಪಾರ್ಶ್ವ ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದ್ದು ತೆಳುವಾಗಿ ಮೊಂಡಾಗಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೩೧ ನಕ್ಷೆ- ೬೩ ಲಾಂಗ್‌ನಾಜ್ (ಗುಜರಾತ್) (ಸಾಂಕಳಿಯಾ.ಎಚ್.ಡಿ:೧೯೭೪;೨೫೩)




ಗಾತ್ರ ೧:೧

೭೩. ದಬ್ಬೇಗಟ್ಟ:- ಕ್ವಾರ್ಟ್ಸ್‌ಶಿಲೆ. ಉದ್ದ ೩೮. ಅಗಲ ೩೨. ದಪ್ಪ ೧೫. ಮಿ.ಮೀ. ಅಸಮ ಅಂಡಾಕಾರ. ಮುಂಬದಿ ಅಸಮವಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿ ವೃತ್ತಾಕಾರವಾಗಿದ್ದು ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದೆ. ಮೇಲ್ತುದಿ ಮತ್ತು ಎರಡೂ ಪಾರ್ಶ್ವಗಳೂ ಹರಿತವಾಗಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ಚಕ್ಕೆ ಕಲೆಗಳಿವೆ.

೭೪. ಮಿಡಿಗೇಶಿ:- ಕ್ವಾರ್ಟ್ಸ್‌ಶಿಲೆ. ಉದ್ದ ೨೭. ಅಗಲ ೨೭. ದಪ್ಪ ೧೭. ಮಿ.ಮೀ. ಆಯತಾಕಾರ ಮುಂಬದಿಯ ಕೆಳಭಾಗದಲ್ಲಿ ಉಬ್ಬು ಇದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯ ಹರಿತ ಅಲಗು ವಕ್ರರೇಖೆಯಲ್ಲಿದೆ. ಎಡಪಾರ್ಶ್ವ ಹರಿತವಾಗಿದೆ. ಬಲಪಾರ್ಶ್ವ ಮತ್ತು ಕೆಳತುದಿ ದಪ್ಪ-ವಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ಆಯತಾಕಾರ.

೭೫. ಸೀಗೆಪಾಳ್ಯ:- ಕ್ವಾರ್ಟ್ಸ್‌ಶಿಲೆ. ಉದ್ದ ೨೫. ಅಗಲ ೨೦. ದಪ್ಪ ೧೩. ಮಿ.ಮೀ. ಆಯತಾಕಾರ. ಮುಂಬದಿಯಲ್ಲಿ ಹಲವು ನೀಳಚಕ್ಕೆ ಮತ್ತು ಕಿರುಚಕ್ಕೆಗಳನ್ನು ತೆಗೆದಿದೆ. ಎಡಪಾರ್ಶ್ವ ಮೂಲಶಿಲಾ ತೊಗಟೆಯನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ಚಕ್ಕೆ ತೆಗೆದಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದಿದೆ. ಹಿಂಬದಿ ಪೀನವಾಗಿದ್ದು ಹಲವು ಚಕ್ಕೆ ಕಲೆಗಳನ್ನು ಹೊಂದಿದೆ. ಅಡ್ಡವಿನ್ಯಾಸ ಅಂಡಾಕಾರ .

೭೬. ಅಂಕನಬಾವಿ:- ಕ್ವಾರ್ಟ್ಸ್‌ಶಿಲೆ. ಉದ್ದ ೨. ಅಗಲ ೧೭. ದಪ್ಪ ೮. ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಹಲವು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಮೊಂಡು ಮೊನೆ ಇದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ಮತ್ತು ಕೆಳತುದಿ ಮೊಂಡಾಗಿವೆ. ಹಿಂಬದಿ ಅಸಮತಲವಿದ್ದು ಚಕ್ಕೆ ಕಲೆಗಳಿವೆ. ಅಡ್ಡವಿನ್ಯಾಸ ತ್ರಿಭುಜಾಕಾರ.

೭೭. ಅಂಕನಬಾವಿ:- ಜಾಸ್ಪರ್‌ಶಿಲೆ. ಉದ್ದ ೨೦. ಅಗಲ ೧೫. ದಪ್ಪ ೧೨. ಮಿ.ಮೀ. ಆಯತಾಕಾರ. ಮುಂಬದಿ ಉಬ್ಬು ಇದ್ದು ಹಲವು ಚಕ್ಕೆ ತೆಗೆದಿದೆ. ಪರಿಧಿಯ ಸುತ್ತಲೂ ಹಲವಾರು ಕಿರುಚಕ್ಕೆಗಳನ್ನು ತೆಗೆದಿದ್ದು ಮೂಲಶಿಲಾ ತೊಗಟೆಯ ಅಂಶವಿದೆ. ಅಡ್ಡವಿನ್ಯಾಸ ಚೌಕಾಕಾರ.






ಅಧ್ಯಾಯ ಎಂಟು

# ನೂತನ ಶಿಲಾಯುಗ ಸಂಸ್ಕೃತಿ

## ಭಾರತದಲ್ಲಿ ನೂತನ ಶಿಲಾಯುಗ ಸಂಸ್ಕೃತಿ

ಹಾಲೋಸಿನ್ ಯುಗದ ಆರಂಭ ಕಾಲದಲ್ಲಿ ಸೂಕ್ಷ್ಮ ರೀತಿಯ ಶಿಲೋಪಕರಣಗಳನ್ನು ರೂಪಿಸುವುದನ್ನು ರೂಢಿಸಿಕೊಂಡ ಕೆಲವೇ ಸಾವಿರ ವರ್ಷಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಮಾನವ ಇನ್ನೂ ಕೆಲವು ಉತ್ಕೃಷ್ಟ ಆವಿಷ್ಕರಣಗಳನ್ನು ನಡೆಸಿದ. ಈ ಆವಿಷ್ಕರಣಗಳಲ್ಲಿ ಮುಖ್ಯವಾದವುವೆಂದರೆ ನಿಯಮಿತವಾದ ಕೃಷಿ, ಪ್ರಾಣಿಗಳನ್ನು ಪಳಗಿಸಿ ಪಶುಪಾಲನೆಯಲ್ಲಿ ನಿರತನಾದುದು, ಕಾಡು ಕಡಿದು ನೆಲ ಹಸನುಗೊಳಿಸಲು ಉಪಯುಕ್ತವಾದ ಹೊಸರೀತಿಯ ಉಪಕರಣ ತಯಾರಿಕೆ, ಧಾನ್ಯಾದಿಗಳ ಸಂಗ್ರಹಣೆ ಮತ್ತು ಇತರೆ ಗೃಹೋಪಯೋಗಕ್ಕಾಗಿ ವಿವಿಧ ಗಾತ್ರ ಹಾಗೂ ಆಕಾರಗಳ ಮಣ್ಣಿನ ಪಾತ್ರೆ ತಯಾರಿಸುವುದು ಮುಂತಾದವು.

ಪ್ರಾಣಿಗಳನ್ನು ಹುಡುಕಿ ಬೇಟೆಯಾಡಿ ಅಲೆಮಾರಿಯಂತೆ ಜೀವಿಸುತ್ತಿದ್ದ ಮಾನವ ವ್ಯವಸ್ಥಿತವಾಗಿ ಪ್ರಕೃತಿಯ ಮೇಲೆ ಸ್ವಲ್ಪ ಮಟ್ಟಿನ ಹತೋಟಿಯನ್ನು ಪಡೆದುಕೊಂಡು ಒಂದು ಸ್ಥಳದಲ್ಲಿ ನೆಲೆಸತೊಡಗಿದ. ಈ ಕಾಲವನ್ನು ಸಾಧಾರಣವಾಗಿ ನೂತನ ಶಿಲಾಯುಗ ಅಥವಾ ನವಶಿಲಾಯುಗವೆಂದು ಗುರುತಿಸಲಾಗಿದೆ.

ಭಾರತದಲ್ಲಿ ಉತ್ತರ ಪ್ರದೇಶದ ಪೂರ್ವ ತೋನ್ಸೆ ನದಿಯ ದಡದಲ್ಲಿ ಕ್ರಿ.ಶ. ೧೮೬೦ ರಲ್ಲಿ ಲಿಮೆಸೂರಿಯರ್ ಈ ನವಶಿಲಾಯುಗದ ಅವಶೇಷಗಳನ್ನು ಪ್ರಪ್ರಥಮವಾಗಿ ಗುರುತಿಸಿದರು. ಅಂದಿನಿಂದ ಅವಿರತವಾಗಿ ನಡೆಯುತ್ತಿರುವ ಕ್ಷೇತ್ರಕಾರ್ಯ ಹಾಗೂ ಸಂಶೋಧನೆಗಳಿಂದ ಸಾವಿರಾರು ನಿವೇಶನಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಬೃಹತ್ ಪ್ರಮಾಣದಲ್ಲಿ ಬೆಳಕಿಗೆ ಬಂದಿವೆ, ಬರುತ್ತಿವೆ. ಕಾಲಕಾಲಕ್ಕೆ ಈ ಅಧ್ಯಯನಗಳು ಫಲಿತಾಂಶಗಳು ಪ್ರಾದೇಶಿಕ ಹಾಗೂ ರಾಷ್ಟ್ರಮಟ್ಟದಲ್ಲಿ ಸಂಕಲನಗೊಳ್ಳುತ್ತಲೆ ಇವೆ. ಇಂತಹ ಅಧ್ಯಯನಗಳಲ್ಲಿ ಕೃಷ್ಣಸ್ವಾಮಿ (೧೯೬೦:೨೫-೬೩)ಯವರ ಅಧ್ಯಯನ ಗಮನಾರ್ಹವಾದ ಕೊಡುಗೆಯಾಗಿದೆ.

ಈ ಅಧ್ಯಯನ ಹಾಗೂ ಉತ್ಖನನಗಳಲ್ಲಿ ಬೆಳಕಿಗೆ ಬಂದಿರುವ ಮಾಹಿತಿಯ ಆಧಾರದ ಮೇಲೆ ಭಾರತದಲ್ಲಿ ವಿಭಿನ್ನ ಪ್ರಾದೇಶಿಕ ಲಕ್ಷಣಗಳನ್ನು ಹೊಂದಿರುವ ಈ ಸಂಸ್ಕೃತಿಯನ್ನು ಗುರುತಿಸಲಾಗಿದೆ. ಉದಾಹರಣೆಗೆ ಥಾಪರ್ (೧೯೭೪:೬೧-೫) ಇಂತಹ ಆರು ಉಪ ಸಂಸ್ಕೃತಿಗಳನ್ನು ಗುರುತಿಸಿರುವರು. ಅವು ಕ್ರಮವಾಗಿ (೧). ಕಾಶ್ಮೀರವನ್ನೊಳ-

ಗೊಂಡ ವಾಯುವ್ಯ ಪ್ರದೇಶ. (೨). ಡಾರ್ಜಲಿಂಗ್, ಹಿಮಾಲಯದ ತಪ್ಪಲು ಪ್ರದೇಶ, ಅಸ್ಸಾಂ, ಚಿತ್ತಗಾಂಗ್ ಮುಂತಾದ ಭಾಗಗಳನ್ನು ಒಳಗೊಂಡ ಪೂರ್ವಾಂಚಲ ಪ್ರದೇಶ (೩). ಬಿಹಾರ್, ಒರಿಸ್ಸಾ, ಪಶ್ಚಿಮ ಬಂಗಾಳ, ಚೋಟಾನಾಗಪುರ್ ಮತ್ತು ಅದನ್ನು ಸುತ್ತುವರಿದ ಉತ್ತರ ಪ್ರದೇಶದ ಕೆಲವು ಜಿಲ್ಲೆಗಳಿಂದ ಕೂಡಿರುವ ಈಶಾನ್ಯ ಪ್ರದೇಶ. (೪). ಬಿಹಾರದ ಸರಂಗ್ ಜಿಲ್ಲೆಯನ್ನೊಳಗೊಂಡಂತೆ ಮಧ್ಯ ಪೂರ್ವ ಪ್ರದೇಶ. (೫). ಕರ್ನಾಟಕ, ಆಂಧ್ರ ಪ್ರದೇಶ, ತಮಿಳುನಾಡು ಮತ್ತು ಕೇರಳಗಳನ್ನೊಳಗೊಂಡ ಇಡೀ ದಕ್ಷಿಣ ಭಾರತದ ಪ್ರದೇಶ ಹಾಗೂ (೬). ಬಲೂಚೀಸ್ಥಾನ, ಸ್ವಾತ್ ಮತ್ತು ಸಿಂಧೂ ಕಣಿ-ವೆಯ ಮೇಲ್ಭಾಗ ಮುಂತಾದ ಪ್ರದೇಶಗಳನ್ನೊಳಗೊಂಡ ಪಾಕಿಸ್ತಾನ. ಮುಂದೆ ಇನ್ನೂ ಹೆಚ್ಚಿನ ಪ್ರಾದೇಶಿಕ ಲಕ್ಷಣಗಳನ್ನು ಆಧರಿಸಿ ಇವು ೮ ಎಂದು ಗುರುತಿಸಲಾಗಿದೆ. (ನರಸಿಂಹಯ್ಯ:೧೯೮೦;vii-ix) ಹಾಗಿದ್ದರೂ ಹೆಚ್ಚಿನ ಪುರಾತತ್ವ ವಿದ್ವಾಂಸರು ಈ ಕೆಳಕಂಡ ನಾಲ್ಕು ವಿಭಾಗಗಳನ್ನು ಒಪ್ಪಿದ್ದಾರೆ. ಅವುಗಳೆಂದರೆ,

೧. ಔತ್ತರೇಯ ಪ್ರದೇಶ.
೨. ಆಗ್ನೇಯ ಪ್ರದೇಶ.
೩.ಗಂಗಾ-ಯಮುನಾ ದೋಆಬ್ ಮತ್ತು ಪೂರ್ವ ಭಾರತದ ಪ್ರದೇಶ, ಹಾಗೂ
೪. ದಕ್ಷಿಣ ಭಾರತದ ನವ ಶಿಲಾಯುಗ ಸಂಸ್ಕೃತಿ.

ಉತ್ತರ ಭಾರತದ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳನ್ನು ಬೂರ್ಸಹಾಮ್ (ಇಂ.ಆ.ರಿ:೧೯೬೦-೬೧;೧೧,೧೯೬೧-೬೨ ೧೭-೧೯ ಮತ್ತು ೧೯೬೨-೬೩; ೯-೧೦) ಮತ್ತು ಕುಫ್ ಕ್ರಾಲ್ (ಶರ್ಮಾ:೧೯೭೮;೧೯-೨೫) ನಿವೇಶನಗಳು ಪ್ರತಿಬಿಂಬಿಸುತ್ತವೆ. ಈ ನಿವೇಶನಗಳಲ್ಲಿ ವಿಸ್ತ್ರತ ರೀತಿಯಲ್ಲಿ ನಡೆದಿರುವ ವೈಜ್ಞಾನಿಕ ಉತ್ಖನನಗಳಿಂದ ಈ ಪ್ರಾದೇಶಿಕ ನೂತನ ಶಿಲಾಯುಗ ಸಂಸ್ಕೃತಿಯ ಅನೇಕ ಅಂಶಗಳ ಬಗೆಗೆ ಅಮೂಲ್ಯ ಮಾಹಿತಿ ದೊರೆತಿದೆ. ಬೂರ್ಸಹ್ಯಾಮ್‌ನ ಕಾಶ್ಮೀರ ಕಣಿವೆಯ ಪ್ರದೇಶದಲ್ಲಿ ಮೊಟ್ಟ ಮೊದಲ ಭಾರಿಗೆ ಎನ್ನುವಂತೆ ಯಾವುದೇ ರೀತಿಯ ಮಣ್ಣಿನ ಪಾತ್ರೆಗಳನ್ನು ಉಪಯೋಗಿಸದಿದ್ದ ನೂತನ ಶಿಲಾಯುಗ ಸಂಸ್ಕೃತಿಯ ಆರಂಭದ ಹಂತವೊಂದನ್ನು ಗುರುತಿಸಲಾಗಿದೆ. ಅದೇ ರೀತಿ ಗೂಪಕ್ರಾಲ್‌ನಲ್ಲಿ ನಡೆದ ಉತ್ಖನನದಲ್ಲಿ ಚೀನ ದೇಶದ ನೂತನ ಶಿಲಾಯುಗದ ಸಂಸ್ಕೃತಿಯ ಶಿಲೋಪಕರಣಗಳನ್ನು ಹೋಲುವ ಉಪಕರಣಗಳು ಮತ್ತು ಭೂಮಿಯಲ್ಲಿ ಹಳ್ಳ ತೆಗೆದು ವಸತಿಯನ್ನೇರ್ಪಡಿಸಿಕೊಂಡಿರುವುದು ಬೆಳಕಿಗೆ ಬಂದಿದೆ. ಬಾಣಗಂಗಾ (ಸಹನಿ ಮತ್ತು ಮಹಾಪಾತ್ರ:೧೯೬೪;೧೭೮-೧೮೦) ನದೀದಡದಲ್ಲಿರುವ ಪೂರ್ವ ಪಂಜಾಬಿನ ಕಾಂಗ್ರಾ ಜಿಲ್ಲೆ ಮೊದಲಾದೆಡೆಗಳಲ್ಲಿ ನವಶಿಲಾಯುಗದ ಕೊಡಲಿಗಳು, ಚರ್ಟ್‌ನಲ್ಲಿ ರೂಪಿಸಿದ ಸೂಕ್ಷ್ಮಶಿಲೋಪಕರಣ ಮೊದಲಾದವು ಬೆಳಕಿಗೆ ಬಂದಿವೆ.

ಆಗ್ನೇಯ ಭಾರತದ ನೂತನ ಶಿಲಾಯುಗ ಸಂಸ್ಕೃತಿಯನ್ನು ಪ್ರತಿನಿಧಿಸುವ ನಿವೇಶನವೆಂದರೆ ಉತ್ತರ ಕಚ್ಛಾರ್ (ಸಾಂಕಳಿಯಾ:೧೯೭೪;೨೯೦-೯೮) ಬೆಟ್ಟದ ಸಾಲುಗಳಲ್ಲಿರುವ ದಿಯೋಜಾಲಿ ಹಡಿಂಗ್ ನೆಲೆ. ಈ ನಿವೇಶನದಲ್ಲಿ ಸಾಂಕಳಿಯಾ ಅವರು ವಿಸ್ತ್ರತ ರೀತಿಯ ಉತ್ಖನನ ಕೈಗೊಂಡು ಆಗ್ನೇಯ ನೂತನ ಶಿಲಾಯುಗ ಸಂಸ್ಕೃತಿಯ ಬಗೆಗೆ ಇದುವರೆಗೆ ತಿಳಿದು ಬಂದಿರದ ಅನೇಕ ಹೊಸ ಮಾಹಿತಿಗಳನ್ನು ಬೆಳಕಿಗೆ ತಂದಿದ್ದಾರೆ. ಹೆಗಲು ಅಥವಾ ಭುಜವನ್ನು ಹೊಂದಿರುವ ಕೊಡಲಿಗಳೂ ಸೇರಿದಂತೆ ಇಲ್ಲಿನ ಉಪಕರಣಗಳು ಮತ್ತು ಸಾಂಸ್ಕೃತಿಕ ವೈವಿಧ್ಯತೆಯು ವಾಯುವ್ಯ ಚೀನಾ ಮತ್ತು ಇಂಡೋ-ಚೀನಾಗಳೆರಡರ ನೂತನ ಶಿಲಾಯುಗ ಸಂಸ್ಕೃತಿಗಳು ದಟ್ಟ ಪ್ರಭಾವದಿಂದ ಅಸ್ಸಾಂ ಪ್ರದೇಶದ ನೂತನ ಶಿಲಾಯುಗ ಸಂಸ್ಕೃತಿ ರೂಪುಗೊಂಡಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಗಂಗಾ ಯಮುನಾ ನದೀ ನಡುವಣ ಭೂಮಿ ಮತ್ತು ಇತರ ಪೂರ್ವಾಂಚಲ ಪ್ರದೇಶಗಳ ನೂತನ ಶಿಲಾಯುಗ ಸಂಸ್ಕೃತಿಗಳು ಒಟ್ಟಾರೆ ಭಾರತದ ನೂತನ ಶಿಲಾಯುಗ ಸಂಸ್ಕೃತಿಯ ಒಂದು ಅತಿ ಮುಖ್ಯ ಭಾಗವಾಗಿದೆ. ಗಂಗಾ ನದಿ ಕಣಿವೆಯ ವಿಸ್ತಾರವಾದ ಬಯಲು ಪ್ರದೇಶ (ಇಂ.ಆ.ರಿ:೧೯೬೩-೬೪ ರಿಂದ ೧೯೭೦-೭೧) ಮತ್ತು ಪಶ್ಚಿಮದಲ್ಲಿ ಬೇಲಾನ್ ನದಿ ಕಣಿವೆ (ಶರ್ಮಾ:೧೯೮೦)ಯ ವರೆಗಿನ ಸ್ಥಳಗಳಲ್ಲಿ ಹಲವಾರು ನೂತನ ಶಿಲಾಯುಗ ಸಂಸ್ಕೃತಿಯ ನಿವೇಶನಗಳು ಬೆಳಕಿಗೆ ಬಂದಿವೆ. ಅತಿ ಮುಖ್ಯ ನಿವೇಶನಗಳಾದ ಕೊಲ್ದಿವ, ಚಿರಾಂಡ್, ಮಹಾಗರಾ ಮುಂತಾದ ಸ್ಥಳಗಳಲ್ಲಿ ವಿಸ್ತ್ರತ ರೀತಿಯ ವೈಜ್ಞಾನಿಕ ಉತ್ಖನನಗಳನ್ನು ನಡೆಸಲಾಗಿದೆ. ಅವುಗಳಲ್ಲಿ ಗಂಗಾ ಮುಖಜ ಭೂಮಿಯಲ್ಲಿರುವ ಚಿರಾಂಡ್ (ಇಂ.ಆ.ರಿ:೧೯೬೩-೬೪ ರಿಂದ ೧೯೭೧-೭೨ ಮತ್ತು ಬಿ.ಎಸ್.ವರ್ಮಾ:೧೯೭೦-೭೧;೧೯-೨೨)ನಲ್ಲಿ ಸಿಲಿಕಾಯುಕ್ತ ಶಿಲೆಗಳ ಚಕ್ಕೆಗಳಿಂದ ರೂಪಿಸಿದ ವಿವಿಧ ಉಪಕರಣಗಳು, ಮೂಳೆ ಹಾಗೂ ಕೊಂಬುಗಳಿಂದ ತಯಾರಿಸಿದ ಅನೇಕ ರೀತಿಯ ಉಪಕರಣಗಳು ಬೆಳಕಿಗೆ ಬಂದಿವೆ. ಬೇಲಾನ್ ಕಣಿವೆಯಲ್ಲಿ ನಡೆಸಿದ ಉತ್ಖನನ (ಶರ್ಮಾ:೧೯೮೦)ಗಳಿಂದ ಒಂದು ಪ್ರಮುಖ ಲಕ್ಷಣವಾದ ಪಶುಪಾಲನೆಯ ಬಗೆಗೆ ಅಪೂರ್ವ ಮಾಹಿತಿ ದೊರೆತಿದೆ. ಈ ಪ್ರದೇಶಗಳಲ್ಲಿ ದನಗಳ ರಕ್ಷಣೆಗಾಗಿ ನಿರ್ಮಿಸಿದ ಕೊಟ್ಟಿಗೆಗಳು, ದನಗಳ ಹೆಜ್ಜೆಯ ಗುರುತುಗಳು ಕೊಟ್ಟಿಗೆಯ ಸುತ್ತ ಜನವಸತಿಯ ಕುರುಹುಗಳು ದೊರೆತಿವೆ. ಕುಚಾಯ್ (ಇಂ.ಆ.ರಿ:೧೯೬೧-೬೨;೩೬) ಮತ್ತು ಪಾಂಡುರಾಜರ್‌ಧಿಬಿ (ದಾಸ್‌ಗುಪ್ತ:೧೯೬೪) ಮುಂತಾದವು ಈ ಪ್ರದೇಶದ ಗಮನಾರ್ಹ ನೆಲೆಗಳು.

ಮೇಲೆ ಹೇಳಿದ ಮೂರೂ ಪ್ರಾದೇಶಿಕ ಅಧ್ಯಯನಗಳಿಗೆ ಹೋಲಿಸಿದರೆ ದಕ್ಷಿಣ ಭಾರತದಲ್ಲಿ ಸ್ವಲ್ಪ ಮಟ್ಟಿಗೆ ಕೇರಳವನ್ನು ಹೊರತುಪಡಿಸಿದಂತೆ ನೂತನ ಶಿಲಾ ಸಂಸ್ಕೃತಿಯ ನಿವೇಶನಗಳ ಶೋಧನೆ, ಉತ್ಖನನಗಳು ಅತಿ ಹೆಚ್ಚಿನ

ಪ್ರಮಾಣದಲ್ಲಿ ನಡೆದಿವೆ. ಇತ್ತೀಚೆಗೆ ಕೇರಳದಲ್ಲಿಯೂ ನೂತನ ಶಿಲಾ ಸಂಸ್ಕೃತಿಯ ನಿವೇಶನಗಳು ವೈನಾಡ್, ಯರ್ನಾಕುಲಂ, ಅಲೆಪ್ಪಿ ಮುಂತಾದ ಜಿಲ್ಲೆಗಳಲ್ಲಿ ಅಲ್ಲೊಂದು ಇಲ್ಲೊಂದು ಎನ್ನುವಂತೆ ಬೆಳಕಿಗೆ ಬಂದಿವೆ (ಶರ್ಮಾ :೧೯೮೨:೨೯೦-೩೧೦). ಕೇರಳ ಪ್ರದೇಶಕ್ಕೆ ಸಂಬಂಧಿಸಿದಂತೆ ಇನ್ನೂ ಹೆಚ್ಚಿನ ಸಂಶೋಧನೆಯ ಅವಶ್ಯಕತೆ ಇದೆ. ಆದರೆ ಆಂಧ್ರ ಪ್ರದೇಶ, ಕರ್ನಾಟಕ ಮತ್ತು ತಮಿಳುನಾಡುಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿ ಅವಶೇಷಗಳನ್ನೊಳಗೊಂಡ ನಿವೇಶನಗಳು ಅತ್ಯಧಿಕ ಸಂಖ್ಯೆಯಲ್ಲಿ ಶೋಧನೆಯಾಗಿದ್ದು ಹಲವಾರು ಮುಖ್ಯ ನಿವೇಶನಗಳಲ್ಲಿ ವಿಸ್ತ್ರತ ಉತ್ಖನನಗಳೂ ನಡೆದಿವೆ. ಬ್ರಹ್ಮಗಿರಿ (ವೀಲರ್:೧೯೪೮;೧೮೦-೨೭೦) ಮಸ್ಕಿ (ಥಾಪರ್:೧೯೫೭;೪-೧೪೨) ಪಿಕ್ಲಿಹಾಳ್ (ಅಲ್ಚಿನ್: ೧೯೬೦) ಉತ್ನೂರ್ (ಅಲ್ಚಿನ್:೧೯೬೧), ಪಯಂಪಳ್ಳಿ (ಇಂ.ಆ.ರಿ:೧೯೬೪-೬೫;೨೨-೨೩), ಕುಪ್ಪಗಲ್ (ಮಂಜು-ದಾರ್ ಮತ್ತು ರಾಜಗುರು:೧೯೬೫), ಕೆಸರಪಲ್ಲಿ (ಸರ್ಕಾರ್:೧೯೬೬), ಸಂಗನಕಲ್ಲು (ನಾಗರಾಜರಾವ್ ಮತ್ತು ಅನ್ಸಾರಿ:೧೯೬೯), ತಿ.ನರಸೀಪುರ (ಶೇಷಾದ್ರಿ:೧೯೭೧), ಹಳ್ಳೂರು(ನಾಗರಾಜರಾವ್:೧೯೭೧), ಕೊಡೆಕಲ್ (ಪದ್ದಯ್ಯ :೧೯೭೩), ಹೆಮ್ಮಿಗೆ (ಹುಮಂತರಾನ್ ಮತ್ತು ನಾಗರಾಜು:೧೯೭೪), ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್: ೧೯೭೫:೭೨-೧೬೪) ಪಾಲ್ವಾಯಿ (ರಾಮಿರೆಡ್ಡಿ.ವಿ:೧೯೭೬), ಟಿ.ಕಲ್ಪಟ್ಟಿ (ಇಂ.ಆ.ರಿ:೧೯೭೬-೭೭:೪೬-೪೭) ಮಲ್ಲಿಪಾಡಿ (ಇಂ.ಆ.ರಿ:೧೯೭೭-೭೮;೫೦), ಕೊರ್ ಕೈ, ಬಾಗಂಪಲ್ಲಿ, ಪರ್ಕಲಂ (ಮಹಲಿಂಗಮ್:೧೯೭೮), ತೊಗರಪಲ್ಲಿ (ನರಸಿಂಹಯ್ಯ:೧೯೮೦), ಬನಹಳ್ಳಿ (ಇಂ.ಆ.ರಿ:೧೯೮೩-೮೪;೪೨-೪೬, ೧೯೮೫-೮೬; ೪೩-೪೪ಮತ್ತು ೧೯೮೬-೮೭; ೪೨-೪೫ ಮತ್ತು ಅ.ಸುಂದರ(ಸಂ.) ೧೯೯೦:೬೭-೮೦) ಇವು ಮುಖ್ಯ ಉತ್ಖನನ ನೆಲೆಗಳು, ಇದರಿಂದ ನೂತನ ಶಿಲಾ ಸಂಸ್ಕೃತಿಯ ಉಪಕರಣ ವೈವಿಧ್ಯ, ವಸತಿ, ಪಶುಪಾಲನೆ, ಆಹಾರ ಪದ್ಧತಿ, ಮಣ್ಣಿನ ಪಾತ್ರೆಗಳ ಹೆಚ್ಚಳ, ಶವಸಂಸ್ಕಾರ ಮತ್ತಿತರ ಅನೇಕ ಅಂಶಗಳ ಬಗೆಗೆ ಮತ್ತು ಈ ಸಂಸ್ಕೃತಿಯ ಒಂದು ವಿಶಿಷ್ಟ ಲಕ್ಷಣವೆನಿಸಿದ್ದ ಬೂದಿದಿಬ್ಬಗಳ ಬಗೆಗೆ ವಿವರ-ವಾದ ಮಾಹಿತಿಗಳು ಬೆಳಕಿಗೆ ಬಂದಿವೆ.

**ಕರ್ನಾಟಕದಲ್ಲಿ ನೂತನ ಶಿಲಾಯುಗ ಸಂಸ್ಕೃತಿ**

ಕರ್ನಾಟಕದಲ್ಲಿ ಕ್ರಿ.ಶ. ೧೯ ನೇ ಶತಮಾನದ ಕಡೆಯ ದಶಕಗಳಿಂದಲೇ ನೂತನ ಶಿಲಾಯುಗಕ್ಕೆ ಸಂಬಂಧಿಸಿದ ಶೋಧನೆಗಳು ಬೆಳಕಿಗೆ ಬರಲಾರಂಭಿಸಿದವು. ಪ್ರಪ್ರಥಮವಾಗಿ ೧೮೭೨ ರಲ್ಲಿ ಫ್ರೇಸರ್ ಬಳ್ಳಾರಿ ಜಿಲ್ಲೆ ಕುಪ್ಪಗಲ್ಲು ಬೆಟ್ಟಗಳಲ್ಲಿ ನೂತನ ಶಿಲಾಯುಗದ ಉಪಕರಣಗಳ ಉತ್ಪಾದನಾ ಕೇಂದ್ರವೊಂದನ್ನು ಗುರುತಿಸಿದರು. ೧೮೮೧-೧೮೮೬ ರ ಹೊತ್ತಿಗೆ ಕೋಲಾರ ಜಿಲ್ಲೆ ಶ್ರೀನಿವಾಸಪುರ (ಫೂಟ್.ಆರ್.ಬಿ:೧೯೧೬;೭೫-೬) ಮತ್ತು ಬೀರಮಂಗಲ (ಫೂಟ್.ಆರ್.ಬಿ: ೧೯೧೬;೬೭) ಗಳಲ್ಲಿ ರಾಬರ್ಟ್ ಬ್ರೂಸ್ ಫೂಟ್ ರವರು ಕಲ್ಗೊಡಲಿಗಳನ್ನು ಶೋಧಿಸಿರುವರು. ಸುಮಾರು ಇದೇ ವೇಳೆಗೆ

ಅವರು ಮೈಸೂರು ಜಿಲ್ಲೆ ಲಕ್ಷ್ಮಾಪುರ(ಫೂಟ್.ಆರ್.ಬಿ:೧೯೧೬:೭೨), ತಿ.ನರಸೀಪುರ (ಫೂಟ್.ಆರ್.ಬಿ:೧೯೧೬:೬೯) ಫ್ರೆಂಚ್ ಹಿಲ್ಸ್ (ಫೂಟ್.ಆರ್.ಬಿ:೧೯೧೬:೭೨) ಮುಂತಾದೆಡೆಗಳಲ್ಲಿಯೂ ನೂತನ ಶಿಲಾಯುಗದ ಕುರುಹುಗಳನ್ನು ಬೆಳಕಿಗೆ ತಂದರು (ಫೂಟ್.ಆರ್.ಬಿ:೧೯೧೬;೬೭-೭೬). ಆನಂತರ ಉತ್ತರ ಕರ್ನಾಟಕದ ಹಲವೆಡೆ ನಡೆದ ವಿಶೇಷ ವೈಜ್ಞಾನಿಕ ಪರಿಶೋಧನೆಗಳ ಫಲವಾಗಿ ಕೃಷ್ಣಾ ಮೇಲ್ದಂಡೆ ಭೀಮಾ ಹಾಗೂ ಮಲಪ್ರಭಾ ನದಿ ಕಣಿವೆ, ಸುರಪುರ ಸಂಗಮ ಮತ್ತು ತುಂಗಭದ್ರಾ ಕೆಳದಂಡೆಗಳಲ್ಲಿ ಮಹತ್ವದ ಅನೇಕ ನೂತನ ಶಿಲಾಯುಗದ ನಿವೇಶನಗಳು ಬೆಳಕಿಗೆ ಬಂದಿವೆ.

ಪ್ರಸ್ತುತ ಅಧ್ಯಯನಕ್ಕೆ ಸಮೀಪದ ದಕ್ಷಿಣ ಕರ್ನಾಟಕ ಪ್ರದೇಶದ ಕಾವೇರಿ ಮೇಲ್ದಂಡೆಯಲ್ಲಿರುವ ತಿ. ನರಸೀಪುರ (ಶೇಷಾದ್ರಿ:೧೯೭೧) ಮತ್ತು ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪)ಗಳಲ್ಲಿ ಉತ್ಖನನ ನಡೆದು ಈ ಪ್ರದೇಶದಲ್ಲಿ ನೂತನ ಶಿಲಾ ಸಂಸ್ಕೃತಿಯ ಅನೇಕ ವಿಶೇಷ ಅಂಶಗಳು ಬೆಳಕಿಗೆ ಬಂದಿವೆ. ಇತ್ತೀಚೆಗೆ ಕೋಲಾರ ಜಿಲ್ಲೆಯ ಬನಹಳ್ಳಿ (ಇಂ.ಆ.ರಿ:೧೯೮೩-೮೪;.೪೨-೪೬,೧೯೮೫-೮೬;೪೩-೪೪ ಮತ್ತು ೧೯೮೬-೮೭;೪೨-೪೫ ಮತ್ತು ಅ.ಸುಂದರ(ಸಂ.) :೧೯೯೦;೬೭-೮೦) ಯಲ್ಲಿ ನಡೆದ ಉತ್ಖನನದಿಂದಾಗಿ ಈ ಸಂಸ್ಕೃತಿಯ ಕಾಲನುಕ್ರಮ, ಮಣ್ಣಿನ ಪಾತ್ರೆಗಳ ವೈವಿಧ್ಯ, ನಿವಾಸಗಳು ಮತ್ತು ಮೃತರನ್ನು ಸಂಸ್ಕಾರ ಮಾಡುವ ವಿಷಯಗಳ ಬಗೆಗೆ ಹೆಚ್ಚಿನ ಮಾಹಿತಿ ದೊರೆತಿದೆ. ಈ ಹಿಂದಿನ ಪ್ರಮುಖ ನಿವೇಶನಗಳಲ್ಲಿ ನಡೆದ ಉತ್ಖನನಗಳಲ್ಲಿ ಬ್ರಹ್ಮಗಿರಿ(ವೀಲರ್:೧೯೪೮;೧೮೦-೨೭೦)ಮಸ್ಕಿ(ಥಾಪರ್: ೧೯೫೭;೪-೧೪೨), ಪಿಕ್ಲಿಹಾಳ್(ಆಲ್ಚಿನ್:೧೯೬೦), ತೆಕ್ಕಲಕೋಟೆ(ನಾಗರಾಜರಾವ್ ಮತ್ತು ಮಲ್ಹೋತ್ರಾ:೧೯೬೫) ಕುಪ್ಪಗಲ್(ಮಂಜುದಾರ್ ಮತ್ತು ರಾಜಗುರು:೧೯೬೫) ಹಳ್ಳೂರು(ನಾಗರಾಜರಾವ್:೧೯೭೧),ಕೊಡೆಕಲ್ (ಪದ್ದಯ್ಯ: ೧೯೭೩) ಮತ್ತು ಪಾಲ್ವಾಯ್ (ರಾಮಿರೆಡ್ಡಿ.ವಿ:೧೯೭೬) ಮುಖ್ಯವಾದವು.

ಇತ್ತೀಚೆಗೆ ಮಾಂಜ್ರಾ ಮತ್ತು ಕಾರಂಜಾ ನದಿ ಕಣಿವೆಗಳಲ್ಲಿಯೂ ನೂತನ ಶಿಲಾಯುಗದ ಕೆಲವು ನಿವೇಶನಗಳು ಶೋಧವಾಗಿವೆ(ಷಡಕ್ಷರಯ್ಯ:೧೯೯೫;೧೦೭-೧೨೮). ಮಲೆನಾಡು ಮತ್ತು ಅರೆಮಲೆನಾಡುಗಳನ್ನೊಳಗೊಂಡ ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳಲ್ಲಿ ನಡೆಸಿದ ವೈಜ್ಞಾನಿಕ ಸ್ಥಳ ಪರಿಶೀಲನೆ ಮತ್ತು ಸಣ್ಣ ಪ್ರಮಾಣದ ಉತ್ಖನನಗಳಿಂದ ಇನ್ನಷ್ಟು ಹೆಚ್ಚಿನ ಮಾಹಿತಿ ದೊರೆತಿದೇ(ಪೂಣಚ್ಚ.ಕೆ.ಪಿ:೧೯೯೦;೪೪೭-೫೯೩).

ಈ ನಿವೇಶನಗಳಿಂದ ನೂತನ ಶಿಲಾಯುಗ ಸಂಸ್ಕೃತಿಯ ಶಿಲೋಪಕರಣಗಳ ವೈವಿಧ್ಯ, ಮಣ್ಣಿನ ಪಾತ್ರೆಗಳು, ವಸತಿ ಗೃಹಗಳ ವಿನ್ಯಾಸ, ಆಹಾರ ಸಂಪ್ರದಾಯಗಳು, ಪಶುಪಾಲನೆ, ಶವ ಸಂಸ್ಕಾರ ಪದ್ಧತಿ, ಕಲೆಗಾರಿಕೆ ಮುಂತಾದ ಅನೇಕ ವಿಷಯಗಳನ್ನು ಕುರಿತು ಮಹತ್ವದ ಮಾಹಿತಿಗಳು ತಿಳಿದು ಬಂದಿವೆ. ಈ ಸಂಸ್ಕೃತಿಯ ಉಗಮ ಮತ್ತು ವಿಕಾಸಕ್ಕೆ ಸಂಬಂಧಿ-

ಸಿದ ಇಂಗಾಲ-೧೪ ರ ಕಾಲಮಾನಗಳು ದೊರೆತಿವೆ. ಕೊಡೆಕಲ್ ನಲ್ಲಿ ದೊರೆತ ಅವಶೇಷದ ಕಾಲಮಾನ ಕ್ರಿ.ಪೂ.೨೪೬೦ ಎಂದು ತಿಳಿಯುತ್ತದೆ. ತಿ.ನರಸೀಪುರದ ಕಾಲಮಾನ ಕ್ರಿ.ಪೂ. ೧೪೯೫-೧೦೮೫. ಬೂದಿಹಾಳ್‌ನ ನೂತನ ಶಿಲಾಯುಗ ಕಾಲಮಾನ ಸು. ಕ್ರಿ.ಪೂ. ೧೮೦೦-೧೭೦೦ ಮತ್ತು ವಟಗಲ್‌ನ ಕಾಲಮಾನ ಸು. ಕ್ರಿ.ಪೂ. ೨೭೦೦ ರಿಂದ ೧೫೦೦ ಎಂದು ತಿಳಿದು ಬರುತ್ತದೆ.

ಈ ಎಲ್ಲಾ ಮಾಹಿತಿಗಳ ಜೊತೆಗೆ ಅತ್ಯಂತ ಕುತೂಹಲಕರವಾದ ಈ ಸಂಸ್ಕೃತಿಯ ವಿಕಸನ ಪದ್ಧತಿಯ ಮೇಲೆ ಬೆಳಕು ಚೆಲ್ಲುವಂತಹ ಕೆಲವು ಅಂಶಗಳು ಬೆಳಕಿಗೆ ಬಂದಿವೆ. ಅವುಗಳಲ್ಲಿ ಮುಖ್ಯವಾದುದೆಂದರೆ ಈ ನಿವೇಶನಗಳಲ್ಲಿ ಸರ್ವೇ ಸಾಧಾರಣವಾಗಿ ಕಂಡು ಬರುವ ಕೆಲವು ಸಾಮಾನ್ಯ ಅಂಶಗಳಿದ್ದರೂ ಪ್ರತಿಯೊಂದರಲ್ಲೂ ಕೆಲವು ವಿಶಿಷ್ಟಗಳಿರುವು-ದು. ಇದಕ್ಕೆ ಮುಖ್ಯ ಕಾರಣಗಳೆಂದರೆ ಮೊದಲನೆಯದಾಗಿ ಈ ನಿವೇಶನಗಳಲ್ಲಿಯ ಪರಸ್ಪರ ಸಾಂಸ್ಕೃತಿಕ ಸಂಬಂಧ ನಿಕಟ-ವಾಗಿದ್ದುದು. ಎರಡನೆಯದಾಗಿ ದೂರದೂರದ ಇತರ ಸಮಕಾಲೀನ ಸಂಸ್ಕೃತಿಗಳೊಡನೆ ಇಲ್ಲಿಯವರ ಸಂಪರ್ಕ ಮತ್ತು ಸಾಂಸ್ಕೃತಿಕವಾಗಿ ಪರಸ್ಪರ ಕೊಡುಕೊಳ್ಳುವಿಕೆಗಳು. ಮೂರನೆಯದಾಗಿ ಪ್ರಾದೇಶಿಕ ಪರಿಸರದ ಪ್ರಭಾವ ನೂತನ ಶಿಲಾಯುಗ ಸಂಸ್ಕೃತಿಯಲ್ಲಿ ಕಂಡು ಬರುತ್ತವೆ. ಇದರ ಜೊತೆಗೆ ಇಷ್ಟೊಂದು ವಿಶಾಲವಾದ ಭೂ ಪ್ರದೇಶದ ವಿವಿಧ ಭೂ ಭಾಗಗಳಲ್ಲಿ ಬೆಳೆದು ಬಂದ ಸಂಸ್ಕೃತಿಗಳು ಪರಸ್ಪರ ಅವಲಂಬನೆ ಮತ್ತು ಸಂಪರ್ಕಗಳಿಲ್ಲದೆ ಸ್ವತಂತ್ರವಾಗಿ ಬೆಳೆಯುವುದು ಅಸಹಜವೆಂದು ತೋರುತ್ತದೆ. ಹೀಗೆ ನೂತನ ಶಿಲಾಯುಗ ಸಂಸ್ಕೃತಿಯ ಜನರು ಸಾಂಸ್ಕೃತಿಕವಾಗಿ ವೈವಿಧ್ಯಮಯ ಬದುಕನ್ನು ರೂಢಿಸಿಕೊಂಡಿದ್ದರು.

ಅಧ್ಯಯನ ಪ್ರದೇಶದ ವಾಯುವ್ಯ ಭಾಗದಲ್ಲಿರುವ ಚಿತ್ರದುರ್ಗ ಜಿಲ್ಲಾ ಹಾಗು ಆಗ್ನೇಯ ಭಾಗದಲ್ಲಿರುವ ಕೋಲಾರ ಜಿಲ್ಲಾ ಪ್ರದೇಶಗಳಲ್ಲಿ ಬಹಳಷ್ಟು ಶಿಲಾ-ತಾಮ್ರಯುಗ ಹಂತದ ನೂತನ ಶಿಲಾಯುಗದ ನೆಲೆಗಳಿವೆ. ಇವುಗಳ ನಡುವಿನ ಭಾಗದಲ್ಲಿಯ ತುಮಕೂರು ಜಿಲ್ಲಾ ಪ್ರದೇಶದಲ್ಲಿ ಇಂಥ ನೆಲೆಗಳಿರುವುದು ಸಾಮಾನ್ಯ. ಇಲ್ಲಿ ಕೈಗೊಂಡ ಕ್ಷೇತ್ರ ಕಾರ್ಯದ ಫಲವಾಗಿ ನೂತನ ಶಿಲಾಯುಗದ ೩೧ ನೆಲೆಗಳು ಬೆಳಕಿಗೆ ಬಂದಿವೆ. ಈ ನೆಲೆಗಳು ವಿಶೇಷವಾಗಿ ಜಿಲ್ಲೆಯ ಉತ್ತರದ ಬೆಟ್ಟ ಸಾಲಿನ ಪ್ರದೇಶಗಳಿಂದೊಳಗೊಂಡ ಪೆನ್ನಾರ್ ನದಿ ಪಾತ್ರಕ್ಕೆ ಸೇರುವ ಪಾವಗಡ, ಮಧುಗಿರಿ, ಕೊರಟಗೆರೆ ಮತ್ತು ತುಮಕೂರು ತಾಲ್ಲೂಕುಗಳಲ್ಲಿ ಹೆಚ್ಚಾಗಿವೆ. ಜಿಲ್ಲೆಯ ದಕ್ಷಿಣದ ಶಿಂಷಾ ನದಿ ಪಾತ್ರದ ಉಳಿದ ಭಾಗಗಳಲ್ಲಿಯೂ ಅಲ್ಲೊಂದು ಇಲ್ಲೊಂದು ಎನ್ನುವಂತೆ ಬಿಡಿ ಉಪಕರಣಗಳು ದೊರೆತು ಈ ಸಂಸ್ಕೃತಿಯು ಉತ್ತರದಿಂದ ದಕ್ಷಿಣಕ್ಕೆ ಅಲ್ಪ ಪ್ರಮಾಣದಲ್ಲಿ ಪ್ರಸರಣವಾಗಿರುವ ಸೂಚನೆಯನ್ನು ನೀಡುತ್ತದೆ.

ಇಲ್ಲಿಯ ಬಹುತೇಕ ನಿವೇಶನಗಳು ಮಾನವನ, ನಿಸರ್ಗದ ಹಾಗೂ ಆನಂತರದ ಕಾಲದ ಜನರ ಚಟುವಟಿಕೆ-ಗಳಿಂದ ಬಹಳಷ್ಟು ಹಾಳಾಗಿವೆ. ನೆಲೆಗಳಿರುವ ಬಹಳಷ್ಟು ಸ್ಥಳಗಳನ್ನು ಕೃಷಿ ಭೂಮಿಯನ್ನಾಗಿ ಉಪಯೋಗಿಸಿರುವುದರಿಂದ ಹೆಚ್ಚಿನ ಅವಶೇಷಗಳು ಕಣ್ಮರೆಯಾಗುತ್ತಿವೆ. ಇಷ್ಟೆಲ್ಲಾ ಆಗಿದ್ದರೂ ೩೧ ಸ್ಥಳಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಕುರು-ಹುಗಳಾದ ವಿಶಿಷ್ಟ ಶಿಲೋಪಕರಣಗಳು, ಮಣ್ಣಿನ ಪಾತ್ರೆಯ ಭಾಗಗಳು, ಬೂದಿ ದಿಬ್ಬಗಳ ಅವಶೇಷಗಳು ಮೊದಲಾದವು ಪರಿಶೋಧಿತವಾಗಿವೆ.

**ನೂತನ ಶಿಲಾಯುಗದ ನೆಲೆಗಳು**

ಪ್ರಸ್ತುತ ಅಧ್ಯಯನ ಪ್ರದೇಶದ ೩೧ ನೆಲೆಗಳಲ್ಲಿ ನೂತನ ಶಿಲಾಯುಗದ ಅವಶೇಷಗಳು ದೊರೆಕಿವೆ. ಇಂತಹ ೨೨ ನೆಲೆಗಳು ಕೇವಲ ಉಪಕರಣಗಳು ಮಾತ್ರ ದೊರೆತಿವೆ. ೪ ನೆಲೆಗಳಲ್ಲಿ ಕೇವಲ ಮಣ್ಣಿನ ಪಾತ್ರೆ ಭಾಗಗಳುದೊರೆತರೆ ೫ ನೆಲೆಗಳಲ್ಲಿ ಉಪಕರಣ ಮತ್ತು ಮೃತ್ ಪಾತ್ರೆಗಳೆರಡೂ ದೊರೆತಿದ್ದು ಇವು ಸಮೃದ್ಧ ನೆಲೆಗಳಾಗಿವೆ. ಉಪಕರಣ, ಮೃತ್‌ಪಾ-ತ್ರೆಯ ಜೊತೆಯಲ್ಲಿ ೨ನೆಲೆಗಳಲ್ಲಿ ಬೂದಿದಿಬ್ಬದ ಅವಶೇಷಗಳೂ ದೊರೆತಿವೆ. ಒಟ್ಟು ೩೧ ನೆಲೆಗಳ ಪೈಕಿ ೧೭ ನೆಲೆಗಳಲ್ಲಿ ನೂತನಯುಗೀನ ಸೂಕ್ಷ್ಮ ಶಿಲೋಪಕರಣಗಳೂದೊರೆತಿವೆ. ಅವುಗಳನ್ನು ಪ್ರತ್ಯೇಕವಾಗಿಯೇ ವಿವರಿಸಲಾಗಿದೆ.

ಈ ನೂತನ ಶಿಲಾಯುಗದ ಅವಶೇಷಗಳಿರುವ ನೆಲೆಗಳು, ಅವುಗಳ ಆನುಪೂರ್ವಿ, ಪರಿಸರ ಇವುಗಳನ್ನು ಕೋಷ್ಟಕ ಸಂಖ್ಯೆ ೮.೧ ರಲ್ಲಿ ತಿಳಿಸಿದೆ. ನೆಲೆಗಳನ್ವಯದಂತೆ ರೂಪಿಸಿರುವ ಭ ನಕ್ಷೆಯನ್ನು ಪುಟ ಸಂಖ್ಯೆ ೩೫೦ ರಲ್ಲಿ ನೀಡಿದೆ.

## ಕೋಷ್ಟಕ ಸಂಖ್ಯೆ ೮.೧

| ಕ್ರಮ ಸಂಖ್ಯೆ | ನೆಲೆ | ಉಪಕರಣ ಮಾತ್ರ ದೊರೆತ ಸ್ಥಳ | ಮಡಿಕೆ ಭಾಗ ಮಾತ್ರ ದೊರೆತ ಸ್ಥಳ | ಉಪಕರಣ ಮತ್ತು ಮಣ್ಣಿನ ಪಾತ್ರೆ ದೊರೆತ ಸ್ತಳ | ಉಪಕರಣ, ಮಣ್ಣಿನ ಪಾತ್ರೆ ಜೊತೆಗೆ ಬೂದಿ ದಿಬ್ಬ ದೊರೆತ ಸ್ಥಳ | ನೆಲೆಯ ಪರಿಸರ |
|---|---|---|---|---|---|---|
| ೧. | ಅವರ್ಗಲ್ಲು | ✓ | | | | ಬೆಟ್ಟದ ತಪ್ಪಲು |
| ೨. | ಅಂಕನಬಾವಿ | ✓ | | | | ಸ್ವಾಭಾವಿಕ ನೀರಿನಾಸರೆ |
| ೩. | ಕತ್ತಿರಾಜನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೪. | ಕಲ್ಲೇನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೫. | ಕಲ್ಲೇನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೬. | ಕೈದಾಳ | ✓ | | | | ಸ್ವಾಭಾವಿಕ ನೀರಿನಾಸರೆ |
| ೭. | ಕೈಮರ | ✓ | | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ |
| ೮. | ಗುರಮ್ಮನಕಟ್ಟೆ | ✓ | | | | ಬೆಟ್ಟದ ತಪ್ಪಲು |
| ೯. | ಗೊಲ್ಲರಹಟ್ಟಿ | | ✓ | | | ಬೆಟ್ಟದ ತಪ್ಪಲು |
| ೧೦. | ನಾಗಲಾಪುರ | | | ✓ | | ಬೆಟ್ಟದ ತಪ್ಪಲು |
| ೧೧. | ನಿಡುಗಲ್ಲು | | | ✓ | | ಬೆಟ್ಟದ ತಪ್ಪಲು |
| ೧೨. | ಪಾವಗಡ | ✓ | | | | ಬೆಟ್ಟದ ತಪ್ಪಲು |
| ೧೩. | ಬುಕ್ಕಾಪಟ್ಟ | ✓ | | | | ಬಯಲು ಪ್ರದೇಶ |
| ೧೪. | ಬೂದಿಗುಡ್ಡ | ✓ | | | | ಬೆಟ್ಟದ ತಪ್ಪಲು |
| ೧೫. | ಬೂದಿಬೆಟ್ಟ | ✓ | | | | ಬೆಟ್ಟದ ತಪ್ಪಲು |
| ೧೬. | ಬೆಳ್ಳಿಬಟ್ಟಲಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೧೭. | ಮಧುಗಿರಿ | ✓ | | | | ಬೆಟ್ಟದ ತಪ್ಪಲು |
| ೧೮. | ಮರಿದಾಸನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೧೯. | ಮಾರನಾಯಕನಪಾಳ್ಯ | | ✓ | | | ಬೆಟ್ಟದ ತಪ್ಪಲು |
| ೨೦. | ಮಿಡಿಗೇಶಿ | | | ✓ | | ಬೆಟ್ಟದ ತಪ್ಪಲು |
| ೨೧. | ರಜತಾದ್ರಿಪುರ | ✓ | | | | ಬೆಟ್ಟದ ತಪ್ಪಲು |
| ೨೨. | ರಾಚಮಾರನಹಳ್ಳಿ | ✓ | | | | ಬೆಟ್ಟದ ತಪ್ಪಲು |
| ೨೩. | ಯಲಪ್ಪನಾಯಕನಹಳ್ಳಿ | | | ✓ | ✓ | ಬೆಟ್ಟದ ತಪ್ಪಲು |
| ೨೪. | ಯಲಪ್ಪನಾಯಕನಹೊಸಕೋಟೆ | | | ✓ | ✓ | ಬೆಟ್ಟದ ತಪ್ಪಲು |
| ೨೫. | ಸಿದ್ಧಗಂಗಾಬೆಟ್ಟ | | ✓ | | | ಬೆಟ್ಟದ ತಪ್ಪಲು |
| ೨೬. | ಸಿದ್ಧರಬೆಟ್ಟ | | ✓ | | | ಬೆಟ್ಟದ ತಪ್ಪಲು |
| ೨೭. | ಸಿದ್ಧಾಪುರ | ✓ | | | | ಬೆಟ್ಟದ ತಪ್ಪಲು |
| ೨೮. | ಸೀಗೆಪಾಳ್ಯ | ✓ | | | | ಬೆಟ್ಟದ ತಪ್ಪಲು |
| ೨೯. | ಸಂಪಿಗೆ | ✓ | | | | ಸ್ವಾಭಾವಿಕ ನೀರಿನಾಸರೆ |
| ೩೦. | ಹೂವಿನಕಟ್ಟೆ | ✓ | | | | ಬೆಟ್ಟದ ತಪ್ಪಲಿನಲ್ಲಿರುವ ಸ್ವಾಭಾವಿಕ ನೀರಿನಾಸರೆ |
| ೩೧. | ಹೊಸಹಳ್ಳಿ | ✓ | | | | ಬಯಲು ಪ್ರದೇಶ |


ಪಾವಗಡ
ನಿಡುಗಲ್ಲು
ಮರಿದಾಸನಹಳ್ಳಿ
ಬೂದಿಬೆಟ್ಟ
ಚಿತ್ರದುರ್ಗ ಜಿಲ್ಲೆ
ಅನಂತಪುರ ಜಿಲ್ಲೆ
ಶಿರಾ
ಬೂದಿಗುಡ್ಡ
ಮಧುಗಿರಿ
ಕೋಲಾರ ಜಿಲ್ಲೆ
ಹೊಸಹಳ್ಳಿ
ಹೂವಿನಕಟ್ಟೆ
ಕೊರಟಗೆರೆ
ಚಿಕ್ಕನಾಯಕನಹಳ್ಳಿ
ತುಮಕೂರು
ಗುಬ್ಬಿ
ತಿಪಟೂರು
ಬೆಂಗಳೂರು ಜಿಲ್ಲೆ
ತುರುವೇಕೆರೆ
ಹಾಸನ ಜಿಲ್ಲೆ
ಕುಣಿಗಲ್
ಮಂಡ್ಯ ಜಿಲ್ಲೆ

## ಅಧ್ಯಯನ ಪ್ರದೇಶದ ಪರಿಸರ ಮತ್ತು ಶಿಲಾಮಾದರಿ

ತುಮಕೂರು ಜಿಲ್ಲಾ ಪ್ರದೇಶದಲ್ಲಿ ದೊರೆತಿರುವ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಪ್ರಾಮುಖ್ಯವಾಗಿ ಬೆಟ್ಟಗುಡ್ಡಗಳ ಬುಡದಲ್ಲಿ ಮತ್ತು ನೀರಿನಾಸರೆ ಇರುವಂತಹ ಸ್ಥಳಗಳಲ್ಲಿ ದೊರೆತಿವೆ. ಜಿಲ್ಲೆಯ ಉತ್ತರದ ಪ್ರದೇಶದಲ್ಲಿ ನೆಲೆಗಳು ಹೆಚ್ಚಾಗಿ ಇವೆ. ದಕ್ಷಿಣ ಭಾಗದಲ್ಲಿ ಅತಿ ವಿರಳವಾಗಿರುವುದು ಕಂಡು ಬಂದಿದ್ದು, ಈ ಪ್ರದೇಶದಲ್ಲಿ ಒಂದೊಂದೇ ಉಪಕರಣ ದೊರೆತಿದೆ.

ದೊರೆತಿರುವ ಹೆಚ್ಚಿನ ನೆಲೆಗಳು ಪೆನ್ನಾರ್ ನದಿ ಪಾತ್ರದಲ್ಲಿ ಪ್ರಾಮುಖ್ಯವಾಗಿದ್ದು ಶಿಂಷಾನದಿ ಪಾತ್ರದಲ್ಲಿ ವಿರಳವಾಗಿವೆ. ಇದಕ್ಕೆ ಮುಖ್ಯ ಕಾರಣವೆಂದರೆ ತಮಗೆ ಪ್ರಾಮುಖ್ಯವಾಗಿ ಬೇಕಾಗಿರುವ ಮೂಲ ಸಾಮಗ್ರಿ. ಅಂತಹ ಕಚ್ಚಾವಸ್ತುವು ಜಿಲ್ಲೆಯ ಉತ್ತರ ಭಾಗದಲ್ಲಿ ಹೇರಳವಾಗಿ ದೊರಕುವುದರಿಂದ ಮತ್ತು ಆಯಕಟ್ಟಿನ ಪ್ರದೇಶವಾದ್ದರಿಂದ ನೂತನ ಶಿಲಾಯುಗ ಸಂಸ್ಕೃತಿಯ ಜನರ ಸಾಂದ್ರತೆ ಹೆಚ್ಚು ಇದ್ದುದು ತಿಳಿಯುತ್ತದೆ.

ಪ್ರಮುಖವಾಗಿ ನೆಲೆಗಳು ಬೆಟ್ಟದ ಬುಡದಲ್ಲಿಯೇ ನೆಲೆಗೊಂಡಿದ್ದು ನೀರಿನ ಹರಿವು ಸದಾ ಇರುವಂತಹ ಸ್ಥಳಗಳನ್ನೇ ಆಯ್ದುಕೊಳ್ಳಲಾಗಿದೆ. ಹೆಚ್ಚಿನ ಪ್ರದೇಶಗಳು ಸರೋವರಗಳನ್ನೊಳಗೊಂಡಂತೆ ತಿಳಿಯುತ್ತದೆ. ಇಂತಹ ಸರೋವರಗಳು ತಮ್ಮ ವ್ಯವಸಾಯ ಕಾರ್ಯಕ್ಕೆ ಪಶುಪಾಲನೆಗೆ ಯುಕ್ತವಾಗಿಯೂ, ಇಲ್ಲಿರುವ ಪ್ರಕೃತಿದತ್ತವಾದ ಗುಹೆಗಳು ಇವರಿಗೆ ಉಪಯೋಗವಾಗಿರುವ ಸಾಧ್ಯತೆಯನ್ನೂ ತಿಳಿಸುತ್ತವೆ.

ಸ್ಥಳೀಯವಾಗಿಯೇ ದೊರಕುವ ವಿವಿಧ ಶಿಲಾ ಪ್ರಭೇದಗಳು ತನಗೆ ಅತ್ಯವಶ್ಯವಾಗಿ ಬೇಕಿರುವ ಉಪಕರಣಗಳನ್ನು ರೂಪಿಸಲು ಸಹಾಯಕವಾಗಿವೆ. ದೊರಕುವ ಡೈಕ್, ಡಾಲರೈಟ್, ಬಳಪದಕಲ್ಲು ಮತ್ತು ಕಣಶಿಲೆ ಉಪಯೋಗವಾಗಿರುವುದು ತಿಳಿಯುತ್ತದೆ. ನಿರ್ದಿಷ್ಟ ಉಪಕರಣವನ್ನು ರೂಪಿಸಲು ಉಪಯುಕ್ತ ಮಾದರಿಯ ಶಿಲಾಗಟ್ಟಿಯನ್ನೇ ಬಳಸಿರುವುದು ತಿಳಿಯುತ್ತದೆ. ಎಸೆಗಲ್ಲನ್ನು ತಯಾರಿಸಲು ಕಣಶಿಲೆಯನ್ನೂ, ಉಂಗುರ ಕಲ್ಲನ್ನು ರೂಪಿಸಲು ಬಳಪದಕಲ್ಲನ್ನೂ ಬಲಸಲಾಗಿದೆ. ಉಳಿದ ಉಪಕರಣಗಳಿಗೆ ಡೈಕ್ ಮತ್ತು ಡಾಲರೈಟ್ ಶಿಲೆಯಬಳಕೆಯಾಗಿದೆ. ಆದರೆ ಯಾವುದೇ ಶಿಲಾಮಾದರಿಯನ್ನೂ ಆಮದು ಮಾಡಿಕೊಂಡಿಲ್ಲ. ಸ್ಥಳೀಯವಾಗಿಯೇ ದೊರಕುವ ಶಿಲಾ ಪ್ರಭೇಧಗಳನ್ನೇ ಬಳಸಲಾಗಿದೆ.

ನೂತನ ಶಿಲಾಯುಧಗಳ ಜೊತೆಯಲ್ಲಿ ಸೂಕ್ಷ್ಮ ಶಿಲೋಪಕರಣಗಳನ್ನೂ ರೂಪಿಸಿಕೊಂಡಿರುವುದು ತಿಳಿಯುತ್ತದೆ. ಇಂತಹ ಸೂಕ್ಷ್ಮ ಶಿಲೋಪಕರಣಗಳು ಒಟ್ಟು ೩೨೦ ದೊರೆತಿದ್ದು ಇವುಗಳನ್ನು ಸ್ಥಳೀಯ ಮೂಲಶಿಲಾ ಸಾಮಗ್ರಿ-

ಯಾದ ವಿವಿಧ ಬಣ್ಣಗಳನ್ನೊಳಗೊಂಡ ಕ್ವಾರ್ಟ್ಸ ಶಿಲೆ , ಅದಿರುಯುಕ್ತ ಜಾಸ್ಪರ್ ಮುಂತಾದ ಶಿಲೆಗಳನ್ನು ಉಪಯೋಗಿಸಿ ರೂಪಿಸಲಾಗಿದೆ. ಇಂತಹ ವಿವಿಧ ಶಿಲಾಮಾದರಿಗಳು ಸ್ಥಳೀಯವಾಗಿ ಸಿಗುವಂತಹವುಗಳೇ ಆಗಿವೆ.

ನೂತನ ಶಿಲಾಯುಗದ ಶಿಲಾ ಮಾದರಿಗಳ ವಿವರಣೆಯನ್ನು ಕೊಷ್ಟಕ ಸಂಖ್ಯೆ ೮.೧ ಮತ್ತು ೮.೨ ವೃತ್ತ ನಕ್ಷೆ ಸಂಖ್ಯೆ ೮.ಅ.೧ ಮತ್ತು ೮.ಅ.೨ ರಲ್ಲಿ ನೀಡಿದೆ.

ಕೊಷ್ಟಕ ಸಂಖ್ಯೆ ೮.೧

| | ಡೈಕ್ | ಡಾಲರೈಟ್ | ಬಳಪದಕಲ್ಲು | ಒಟ್ಟು |
|---|---|---|---|---|
| ಉಪಕರಣ | ೩೨ | ೭೬ | ೧೨ | ೧೨೦ |
| ಶೇ. | ೨೬.೬೭ | ೬೩.೩೩ | ೧೦.೦೦ | |

ವೃತ್ತ ನಕ್ಷೆ ಸಂಖ್ಯೆ ೮.ಅ.೧




ನೂತನ ಶಿಲಾಯುಗೀನ ಸೂಕ್ಷ್ಮ ಶಿಲೋಪಕರಣಗಳ ಶಿಲಾಮಾದರಿ

ಕೊಷ್ಟಕ ಸಂಖ್ಯೆ ೮.೨

| | ಕ್ವಾರ್ಟ್ಸ | ಅದಿರುಯುಕ್ತ ಕ್ವಾರ್ಟ್ಸ | ಜಾಸ್ಪರ್ | ಅದಿರುಯುಕ್ತ ಜಾಸ್ಪರ್ | ಒಟ್ಟು |
|---|---|---|---|---|---|
| ಉಪಕರಣ | ೧೬೬ | ೬೩ | ೫೫ | ೩೬ | ೩೨೦ |
| ಶೇ. | ೫೧.೮೭ | ೧೯.೬೯ | ೧೭.೧೮ | ೧೧.೨೫ | |

ವೃತ್ತ ನಕ್ಷೆ ಸಂಖ್ಯೆ ೮.ಅ.೨



**ನೂತನ ಶಿಲಾ ಉಪಕರಣಗಳ ವೈವಿಧ್ಯ.**

ನೂತನಶಿಲಾ ಉಪಕರಣಗಳನ್ನು ರೂಪಿಸಲು ಅಗತ್ಯವಾದ ಮೂಲ ಸಾಮಗ್ರಿಯು ಕೆಲವು ನೆಲೆಗಳಲ್ಲಿ ದೊರ-ಕುತ್ತವೆ. ಇಂತಹ ನೆಲೆಗಳಲ್ಲಿ ಸಿದ್ಧ ಉಪಕರಣಗಳು, ಅಪೂರ್ಣ ಉಪಕರಣಗಳ ನಿರುಪಯುಕ್ತ ಚಕ್ಕೆಗಳು ದೊರೆಯುವುದ-ರಿಂದ ಇವುಗಳನ್ನು ಶಿಲೋಪಕರಣಗಳ ಉತ್ಪಾಧನಾ ಕೇಂದ್ರವೆಂದು ತಿಳಿಯಲಾಗುತ್ತದೆ. ಪ್ರಸ್ತುತ ಸ್ಥಳ ಪರಿಶೋಧನೆಯಲ್ಲಿ ದೊರೆತ ಒಟ್ಟು ೩೧ ನೆಲೆಗಳ ಪೈಕಿ ನಾಗಲಾಪುರ, ಬೆಳ್ಳಿಬಟ್ಟಲಹಳ್ಳಿ, ಮಿಡಿಗೇಶಿ, ಯಲ್ಲಪ್ಪನಾಯಕನಹಳ್ಳಿ, ಯಲ್ಲಪ್ಪನಾಯ-ಕನಹೊಸಕೋಟೆ ನೆಲೆಗಳಲ್ಲಿ ಈ ಲಕ್ಷಣಗಳು ಕಾಣುತ್ತವೆ. ಈ ನೆಲೆಗಳಲ್ಲಿ ನವ ಶಿಲಾಯುಗದ ಬಹುತೇಕ ಎಲ್ಲಾ ಉಪಕರಣಗಳೂ ದೊರೆತಿದ್ದರೆ ಉಳಿದ ಪರಿಧಿ ಪ್ರದೇಶಗಳಲ್ಲಿ ಕ್ರಮೇಣ ಉಪಕರಣಗಳ ಸಂಖ್ಯೆ ಮತ್ತು ವೈವಿಧ್ಯ ಕಡಿ-ಮೆಯಾಗುವುದು ಗಮನಾರ್ಹ. ಕೆಲವು ನೆಲೆಗಳಲ್ಲಿ ಒಂದೊಂದೇ ಉಪಕರಣ ದೊರೆತಿರುವುದರ ಬಗ್ಗೆ ಹೆಚ್ಚಿನ ಪರಿಶೀಲನೆ ಅಗತ್ಯ.

ಉತ್ತರ ಕರ್ನಾಟಕದ ನವ ಶಿಲಾಯುಗದ ಉಪಕರಣಗಳ ತಯಾರಿಕೆ, ವೈವಿಧ್ಯ ಇವುಗಳ ಬಗೆಗೆ ವಿಶ್ಲೇಷಣೆ ನೀಡುವಾಗ ಸಾಂಕಳಿಯಾ (೧೯೭೪), ಅವರು ಉಪಕರಣಗಳ ತಯಾರಿಕೆಯಲ್ಲಿ ಚಕ್ಕೆ ಎಬ್ಬಿಸುವುದು, ಉಬ್ಬುಗಳನ್ನು ಹೊಡೆದು ತೆಗೆಯುವುದು, ಉಜ್ಜಿನಯಗೊಳಿಸುವುದು ಮತ್ತು ಹೊಳಪು ನೀಡುವುದು ಎಂದು ನಾಲ್ಕು ಮುಖ್ಯ ಹಂತಗಳನ್ನು ಗುರುತಿಸಿದ್ದಾರೆ.

ಮೇಲೆ ಹೇಳಿದ ಆಯುಧ ಉದ್ಯಮ ನೆಲೆಗಳಲ್ಲಿ ಈ ಎಲ್ಲಾ ಹಂತಗಳನ್ನೂ ನಿರ್ದೇಶಿಸುವ ಉಪಕರಣಗಳು ಬೆಳಕಿಗೆ ಬಂದಿವೆ. ಈ ಉಪಕರಣಗಳಲ್ಲಿ ಕೆಲವು ಮಾತ್ರ ಮೇಲ್ತುದಿ ಮತ್ತು ಹರಿತ ಅಲಗಿನ ಭಾಗಗಳಲ್ಲಿ ಹೆಚ್ಚು ಹೊಳಪು-ಗೊಳಿಸಿರುವುದು ಕಂಡು ಬರುತ್ತದೆ. ವಿಶೇಷವಾಗಿ ಹೊಳಪು ನೀಡುವುದಕ್ಕಾಗಿ ಪ್ರಾಣಿಗಳ ಕೊಬ್ಬಿನಂತಹ ಜಿಡ್ಡುಳ್ಳ ವಸ್ತುವನ್ನು ಉಪಯೋಗಿಸಿರಬಹುದೆಂದು ಪದ್ದಯ್ಯ (೧೯೭೩ ) ಅವರು ಅಭಿಪ್ರಾಯ ಪಟ್ಟಿದ್ದಾರೆ. ಜೊತೆಗೆ ರಂಗೋಲಿಯಂತಹ ಕ್ವಾರ್ಟ್ಸ್ ಶಿಲೆಯ ನುಣುಪು ಪುಡಿಯನ್ನು ಉಪಯೋಗಿಸಿರಬಹುದು.

ದೊರೆತಿರುವ ಉಪಕರಣಗಳಲ್ಲಿ ಸಾಧಾರಣವಾಗಿ ನವ ಶಿಲಾಯುಗದ ಎಲ್ಲಾ ರೀತಿಯ ಉಪಕರಣಗಳೂ ಬೆಳಕಿಗೆ ಬಂದಿವೆ. ಅವುಗಳೆಂದರೆ ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಕೊಡಲಿ ಸುತ್ತಿಗೆ, ಕೆತ್ತುಳಿ, ಉಜ್ಜುಗ ಅಥವಾ ಅರೆಯು-ವಕಲ್ಲು, ಕವಣೆಕಲ್ಲು ಮತ್ತು ಉಂಗುರ ಕಲ್ಲುಗಳು. ಪ್ರತಿಯೊಂದು ನೆಲೆಯಲ್ಲಿ ಈ ಉಪಕರಣಗಳು ದೊರೆಯುವ ಸಂಖ್ಯೆವಾರು

ಮತ್ತು ಶೇಕಡವಾರು ಪ್ರಮಾಣಗಳನ್ನು ಕೋಷ್ಟಕ ಸಂಖ್ಯೆ ೮.೩ ರಲ್ಲಿ ನೀಡಿದ್ದು ಪ್ರತಿಯೊಂದು ಮಾದರಿಗಳನ್ವಯದಂತೆ ವೃತ್ತ ನಕ್ಷೆ ರೂಪಿಸಿದ್ದು ವೃತ್ತ ನಕ್ಷೆ ಸಂಖ್ಯೆ ೮.ಇ ನಲ್ಲಿ ನಿರೂಪಿಸಿದೆ.

ಕೋಷ್ಟಕ ಸಂಖ್ಯೆ ೮.೩

| ಕ್ರಮ ಸಂಖ್ಯೆ | ನೆಲೆ | ಕೊಡಲಿ | | | | ಬಾಚಿ | ಉಳಿ | ಸುತ್ತಿಗೆ | ಕೊಡಲಿ ಸುತ್ತಿಗೆ | ಕೆತ್ತುಳಿ | ಉಜ್ಜುಗ ಅಥವಾ ಅರೆಯುವಕಲ್ಲು | ಕವಣೆ ಕಲ್ಲು | ಉಂಗರ ಕಲ್ಲು | ಭಗ್ನ ಉಪಕರಣ | ಒಟ್ಟು | ಶೇ |
|---|---|---|---|---|---|---|---|---|---|---|---|---|---|---|---|---|
| | | ಚಕ್ಕೆತೆಗೆದ | ಕುಟ್ಟಿದ | ನಯವಾದ | ಹೊಳಪಾದ | | | | | | | | | | | |
| ೧. | ಅವರ್ಗಲ್ಲು | ೧ | | | | | | | | | | | | | ೧ | ೦.೮೩ |
| ೨. | ಅಂಕನಬಾವಿ | | | | | | | | | | | | ೧ | | ೧ | ೦.೮೩ |
| ೩. | ಕತ್ತಿರಾಜನಹಳ್ಳಿ | | | | | | | | | | | | | ೧ | ೧ | ೦.೮೩ |
| ೪. | ಕಲ್ಲೇನಹಳ್ಳಿ | | | | ೩ | | | | | | | | | | ೩ | ೨.೫ |
| ೫. | ಕಲ್ಲೇನಹಳ್ಳಿ | | | | | | | | | | | | | ೨ | ೨ | ೧.೬೬ |
| ೬. | ಕೈದಾಳ | | | | ೧ | | | | | | | | | | ೧ | ೦.೮೩ |
| ೭. | ಕೈಮರ | ೧ | | | | | | | | | | | | ೨ | ೩ | ೨.೫ |
| ೮. | ಗುರಮ್ಮನಕಟ್ಟೆ | | | | ೨ | | | | | | | | | | ೨ | ೧.೬೬ |
| ೯. | ಗೊಲ್ಲರಹಟ್ಟಿ | ಮಡಿಕೆಯ ಭಾಗಗಳು ದೊರೆತಿವೆ | | | | | | | | | | | | | | |
| ೧೦. | ನಾಗಲಾಪುರ | | | | | | | | | | | | | ೭ | ೭ | ೫.೮೩ |
| ೧೧. | ನಿಡುಗಲ್ಲು | | | | ೧ | | | | ೧ | | | | | | ೨ | ೧.೬೬ |
| ೧೨. | ಪಾವಗಡ | | | | | | | | | | | | | ೧ | ೧ | ೦.೮೩ |
| ೧೩. | ಬುಕ್ಕಾಪಟ್ಟ | | | | | | | | | | | | | ೧ | ೧ | ೦.೮೩ |
| ೧೪. | ಬೂದಿಗುಡ್ಡ | | | | | | | | | | | | | ೧ | ೧ | ೦.೮೩ |
| ೧೫. | ಬೂದಿಬೆಟ್ಟ | | | | ೨ | | | | | | | | | | ೨ | ೧.೬೬ |
| ೧೬. | ಬೆಳ್ಳಿಬಟ್ಟಲಹಳ್ಳಿ | | | | | | | | | | | | ೧ | ೩ | ೪ | ೩.೩೩ |
| ೧೭. | ಮಧುಗಿರಿ | | | | | | | | | | | | | ೧ | ೧ | ೦.೮೩ |
| ೧೮. | ಮರಿದಾಸನಹಳ್ಳಿ | | | | | | | | | | | | ೧ | | ೧ | ೦.೮೩ |
| ೧೯. | ಮಾರನಾಯಕನಪಾಳ್ಯ | ಮಡಿಕೆಯ ಭಾಗಗಳು ದೊರೆತಿವೆ | | | | | | | | | | | | | | |
| ೨೦. | ಮಿಡಿಗೇಶಿ | | ೨ | | | ೧ | | | ೧ | ೧ | ೧ | | | ೧ | ೭ | ೫.೮೩ |
| ೨೧. | ರಜಾಕಾದ್ರಿಪುರ | | | ೧ | | | | | | | | | ೧ | ೧ | ೩ | ೨.೫ |
| ೨೨. | ರಾಚಮಾರನಹಳ್ಳಿ | | | | ೧ | | | | | | | | | | ೧ | ೦.೮೩ |
| ೨೩. | ಯಲಪ್ಪನಾಯಕನಹಳ್ಳಿ | | | | ೨ | | ೧ | | | | ೬ | | | ೧೦ | ೧೯ | ೧೫.೮೩ |
| ೨೪. | ಯಲಪ್ಪನಾಯಕನಹೊಸಕೋಟೆ | | ೧ | ೫ | ೩ | ೨ | ೨ | ೬ | ೧ | ೨ | ೫ | ೩ | | ೨೦ | ೫೦ | ೪೧.೬೬ |
| ೨೫. | ಸಿದ್ಧಗಂಗಾಬೆಟ್ಟ | ಮಡಿಕೆಯ ಭಾಗಗಳು ದೊರೆತಿವೆ | | | | | | | | | | | | | | |
| ೨೬. | ಸಿದ್ಧರಬೆಟ್ಟ | ಮಡಿಕೆಯ ಭಾಗಗಳು ದೊರೆತಿವೆ | | | | | | | | | | | | | | |
| ೨೭. | ಸಿದ್ದಾಪುರ | | | | | | | | | | | | | ೧ | ೧ | ೦.೮೩ |
| ೨೮. | ಸೀಗೆಪಾಳ್ಯ | | ೧ | | ೧ | | | | | | | | | | ೨ | ೧.೬೬ |
| ೨೯. | ಸಂಪಿಗೆ | | | | | | | | | | | | ೧ | | ೧ | ೦.೮೩ |
| ೩೦. | ಹೂವಿನಕಟ್ಟೆ | | | | | | | | | | | | ೧ | | ೧ | ೦.೮೩ |
| ೩೧. | ಹೊಸಹಳ್ಳಿ | | | | | | | | | | | | | ೧ | ೧ | ೦.೮೩ |
| | ಒಟ್ಟು | ೨ | ೪ | ೬ | ೧೬ | ೩ | ೩ | ೬ | ೩ | ೩ | ೧೨ | ೩ | ೬ | ೫೩ | ೧೨೦ | |
| | ಶೇ | ೧೬.೬೬ | ೩೩.೩೩ | ೫ | ೧೩.೩೩ | ೨.೫ | ೨.೫ | ೫ | ೨.೫ | ೨.೫ | ೧೦ | ೨.೫ | ೫ | ೪೪.೧೬ | | |

ವೃತ್ತ ನಕ್ಷೆ ಸಂಖ್ಯೆ ೮.ಇ



ಅಧ್ಯಯನ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಒಟ್ಟು ೩೧ ನವ ಶಿಲಾಯುಗದ ನೆಲೆಗಳಲ್ಲಿ ೧೭ ರಲ್ಲಿ ಮಾತ್ರ ದೊರಕುವ ಸೂಕ್ಷ್ಮ ಶಿಲೋಪಕರಣಗಳ ಬಗೆಗೆ ಇದೇ ಅಧ್ಯಾಯದಲ್ಲಿ ಪ್ರತ್ಯೇಕವಾಗಿ ಪರಶೀಲಿಸಿದೆ.
ಈಗ ವಿವಿಧ ಉಪಕರಣಗಳ ಮಾದರಿಗಳನ್ನು ಪರಿಶೀಲಿಸೋಣ.

**ಕೊಡಲಿ**

ನೂತನ ಶಿಲಾಯುಗ ಸಂಸ್ಕೃತಿಯಲ್ಲಿ ಪ್ರಮುಖ ನಿತ್ಯೋಪಯೋಗಿ ಉಪಕರಣ ಕೊಡಲಿ. ಇಂತಹ ಕೊಡ-ಲಿಗಳನ್ನು ರೂಪಿಸುವಲ್ಲಿ ನಾಲ್ಕು ಪ್ರಮುಖ ಹಂತಗಳನ್ನು ಗುರುತಿಸಲಾಗಿದೆಯೆಂದು ಮೇಲೆ ಹೇಳಿದೆಯಷ್ಟೆ. ಮೊದಲನೆಯ-ದಾಗಿ ನಿರ್ದಿಷ್ಟ ಮೂಲ ಶಿಲಾಗಟ್ಟಿ ಇಲ್ಲವೇ ದಪ್ಪ ಚಕ್ಕೆಯಲ್ಲಿ ಅವಶ್ಯವಾದ ಆಳತೆಗೆ ತಕ್ಕಂತೆ ಚಕ್ಕೆ ತೆಗೆಯಲಾಗುತ್ತದೆ. ಎರ-ಡನೆಯ ಹಂತದಲ್ಲಿ ಚಕ್ಕೆ ತೆಗೆದ ಉಬ್ಬು ಭಾಗಗಳನ್ನು ಕುಟ್ಟಿ ಅಂಡಾಕಾರದ ಅಥವಾ ಸಮೋನ್ನತ ಅಡ್ಡ ವಿನ್ಯಾಸಕ್ಕೆ ಸರಿ ಹೊಂದಿಸಲಾಗುತ್ತದೆ. ಹೀಗೆ ತಯಾರಿಸಿದ ಉಪಕರಣವನ್ನು ಕಲ್ಲಿನ ಮೇಲೆ ಉಜ್ಜಿ ಮೇಲ್ಮೈಯನ್ನು ನಯಗೊಳಿಸುವುದು ಮೂರನೆಯ ಹಂತ. ಕೊನೆಯ ಹಂತದಲ್ಲಿ ಇಡೀ ಉಪಕರಣವನ್ನು ಅಥವಾ ಅಲಗಿನ ಭಾಗವನ್ನು ಮತ್ತಷ್ಟು ಉಜ್ಜಿ ಅಲ-ಗನ್ನು ಹೊಳಪು ಮಾಡಿ ಹರಿತಗೊಳಿಸಲಾಗುತ್ತದೆ. ಇಂತಹ ಕೊಡಲಿ ಉಪಕರಣಗಳು ಸಾಮಾನ್ಯವಾಗಿ ತ್ರಿಭುಜಾಕಾರವನ್ನು ಹೊಂದಿರುತ್ತವೆ.ದೊರೆತ ಒಟ್ಟು ಉಪಕರಣಗಳ ವಿವರಣೆಯನ್ನು ಕೋಷ್ಟಕ ಸಂಖ್ಯೆ ೮.೪ ರಲ್ಲಿ ನೀಡಿದೆ

**ಕೋಷ್ಟಕ ಸಂಖ್ಯೆ ೮.೪**

| ಕ್ರಮ ಸಂಖ್ಯೆ | ನೆಲೆ | ಮೊದಲ ಹಂತ | ಎರಡನೆ ಹಂತ | ಮೂರನೆ ಹಂತೆ | ನಾಲ್ಕನೇ ಹಂತ | ಒಟ್ಟು |
|---|---|---|---|---|---|---|
| ೧. | ಅವರ್ಗಲ್ಲು | ೧ | | | | ೧ |
| ೨. | ಕಲ್ಲೇನಹಳ್ಳಿ (ಮಧುಗಿರಿ) | | | | ೩ | ೩ |
| ೩. | ಕೈದಾಳ | | | | ೧ | ೧ |
| ೪. | ಕೈಮರ | ೧ | | | | ೧ |
| ೫ | ಗುರಮ್ಮನಕಟ್ಟೆ | | | | ೨ | ೨ |
| ೬. | ನಿಡುಗಲ್ಲು | | | | ೧ | ೧ |
| ೭. | ಬೂದಿಬೆಟ್ಟ | | | | ೨ | ೨ |
| ೮. | ಮಿಡಿಗೇಶಿ | | ೨ | | | ೨ |
| ೯. | ರಜತಾದ್ರಿಪುರ | | | ೧ | | ೧ |
| ೧೦. | ರಾಚಮಾರನಹಳ್ಳಿ | | | | ೧ | ೧ |
| ೧೧. | ಯಲಪ್ಪನಾಯಕನಹಳ್ಳಿ | | | | ೨ | ೨ |
| ೧೨. | ಯಲಪ್ಪನಾಯಕನಹೊಸಕೋಟೆ | | ೧ | ೫ | ೩ | ೯ |
| ೧೩. | ಸಿಗೇಪಾಳ್ಯ | | ೧ | | ೧ | ೨ |
| | ಒಟ್ಟು | ೨ | ೪ | ೬ | ೧೬ | ೨೮ |

ಈ ನಾಲ್ಕೂ ಹಂತಗಳನ್ನು ಪ್ರತಿನಿಧಿಸುವ ಒಟ್ಟು ೨೮ (ಶೇ.೨೩.೩೩) ಉಪಕರಣಗಳಿದ್ದು ಅವುಗಳನ್ನು ಹಂತ ಒಂದರ ಎರಡು, ಹಂತ ಎರಡರ ನಾಲ್ಕು, ಹಂತ ಮೂರರ ಆರು ಹಾಗೂ ನಾಲ್ಕನೇ ಹಂತದ ಹದಿನಾರು ಕೊಡಲಿ ಉಪಕರಣಗಳು ಇವೆ.

ದೊರೆತಿರುವ ಉಪಕರಣಗಳಲ್ಲಿ ಕೆಲವು ಭಗ್ನ ಸ್ಥಿತಿಯಲ್ಲಿದ್ದು ಅವುಗಳನ್ನು ಬೇರೆಯಾಗಿಯೇ ವರ್ಗೀಕರಿಸಲಾಗಿದೆ.

ಮೊದಲನೆಯ ಹಂತವನ್ನು ಪ್ರತಿನಿಧಿಸುವ ಎರಡು (೨.೩೮ ಶೇ.) ಉಪಕರಣಗಳಿವೆ. (ಉದ್ದ ಕನಿಷ್ಠ ೧೧೦ ಗರಿಷ್ಠ ೧೩೩ ಅಗಲ ಕನಿಷ್ಠ ೭೫ ಗರಿಷ್ಠ ೮೩ ದಪ್ಪ ಕನಿಷ್ಠ ೩೩ ಗರಿಷ್ಠ ೪೫ ಮಿ.ಮೀ.) ಒಂದು ಉಪಕರಣದಲ್ಲಿ ಹೆಚ್ಚು ಕಬ್ಬಿಣದ ಅಂಶವುಳ್ಳ ಶಿಲೆಯ ದಪ್ಪ ಚಕ್ಕೆಯೊಂದರ ಮೇಲೆ ಮುಮ್ಮುಖದಲ್ಲಿ ಮಾತ್ರ ಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಆಕಾರಕ್ಕೆ ತರಲಾಗಿದೆ. ಬಹುಶಃ ಶಿಲೆಯು ಅನುಪಯುಕ್ತ ದರ್ಜೆಯದಾದುದರಿಂದ ತ್ಯಜಿಸಲಾಗಿದೆ. ಕಂಸಾಕಾರದ ಹರಿತ ಅಲಗು ಬಹುತೇಕ ಸಮಾನಾಂತರ ಪಾರ್ಶ್ವಗಳು ಸಮೋನ್ನತ ಓರೆನೋಟ ಹಾಗೂ ಮೊಂಡು ಮೇಲ್ತುದಿ ಇವುಗಳನ್ನು ಮೊದಲನೆಯ ಹಂತದಲ್ಲಿಯೇ ಗುರುತಿಸಬಹುದು. ಮತ್ತೊಂದು ಉಪಕರಣವು ಡಾಲರೈಟ್ ಶಿಲಾಗಟ್ಟಿಯಲ್ಲಿ ರೂಪಿಸಲಾಗಿದೆ. ಮುಮ್ಮುಖ-ದಲ್ಲಿ ಮಾತ್ರ ಚಕ್ಕೆ ಎಬ್ಬಿಸಿ ಸ್ವಲ್ಪ ಹರಿತವಾದ ಅಲಗು ಮತ್ತು ಚೂಪಾದ ಮೇಲ್ತುದಿಯನ್ನು ಸಾಧಿಸಿದೆ. ಶಿಲೆಯ ಅನುಪಯು-ಕ್ತತೆಯನ್ನು ಮನಗಂಡು ಈ ಹಂತದಲ್ಲಿಯೇ ಕೈಬಿಡಲಾಗಿದೆ.

ಎರಡನೇ ಹಂತದ ನಾಲ್ಕು (ಶೇ. ೪.೭೬) ಉಪಕರಣಗಳಿವೆ (ಉ.೧೧೦-೧೩೦ ಅ.೫೫-೮೦, ದಪ್ಪ ೨೦-೩೫ ಸೆಂ.ಮಿ). ಡಾಲರೈಟ್ ಶಿಲೆಯ ಈ ಉಪಕರಣಗಳಲ್ಲಿ ಮೂರನ್ನು ಕಡಿಮೆ ದಪ್ಪವಿರುವ ಮೂಲ ಶಿಲಾಘಟ್ಟಿಗಳ ಮೇಲೆ ಕಿರು ಚಕ್ಕೆಗಳನ್ನು ತೆಗೆದು ಉದ್ದೇಶಿತ ಆಕಾರಕ್ಕೆ ತರಲಾಗಿದ್ದರೆ ನಾಲ್ಕನೆಯ ಉಪಕರಣವನ್ನು ದಪ್ಪ ಚಕ್ಕೆಯ ಮೇಲೆ ರೂಪಿಸಲಾಗಿದೆ. ಸಣ್ಣ ಸಣ್ಣ ಚಕ್ಕೆಗಳನ್ನು ತೆಗೆದಿರುವ ಗುರುತುಗಳನ್ನು ಉಪಕರಣದ ಹೊರ ಆವರಣದ ಭಾಗದಲ್ಲಿ ವಿಶೇಷ-ವಾಗಿ ಗುರುತಿಸಬಹುದು. ಇವುಗಳಲ್ಲಿ ಎರಡು ಉಪಕರಣಗಳ ಮೇಲ್ತುದಿ ಚೂಪಾಗಿದ್ದರೆ ಅಲಗು ಸಾಕಷ್ಟು ಹರಿತವಾಗಿದ್ದರೂ ವಕ್ರ ರೇಖೆಯಲ್ಲಿದೆ. ಉಳಿದೆರಡು ಉಪಕರಣಗಳಲ್ಲಿ ಒಂದರ ಮೇಲ್ತುದಿ ಮುರಿದಿದ್ದು ಕಿರು ಚಕ್ಕೆಗಳನ್ನೆಬ್ಬಿಸಿ ಬಹುತೇಕ ಕಂಸಾಗಾಕಾರದ ಹರಿತ ಅಲಗು ಮತ್ತು ಪಾರ್ಶ್ವಗಳನ್ನು ಸಾಧಿಸಿದೆ. ಮುಮ್ಮುಖದ ಎಡಬದಿಯನ್ನು ಸ್ವಲ್ಪ ಉಜ್ಜಿ ನಯಗೊಳಿಸಿರುವುದು, ಬಲಭಾಗದಲ್ಲಿ ಹೊರ ಆವರಣದ ತೊಗಟೆಯನ್ನು ಉಳಿಸಿಕೊಂಡಿದೆ.ನಾಲ್ಕೂ ಉಪಕರಣಗಳೂ ತ್ರಿಭುಜಾಕಾರದಲ್ಲಿವೆ.

ಮೂರನೇ ಹಂತವನ್ನು ಪ್ರತಿನಿಧಿಸುವ ಒಟ್ಟು ಆರು (ಶೇ. ೭.೨) ಉಪಕರಣಗಳಿವೆ (ಉ.೧೧೦-೧೨೦, ಅ.೫೦-೭೦, ದಪ್ಪ ೨೫-೪೦). ಎಲ್ಲಾ ಉಪಕರಣಗಳೂ ಡಾಲರೈಟ್ ಶಿಲೆಯಲ್ಲಿವೆ. ಮೂರು ಉಪಕರಣಗಳ ಅಲಗಿನ ಭಾಗ ಮತ್ತು ಮೊಂಡು ತುದಿಗಳು ಭಗ್ನವಾಗಿವೆ. ಮತ್ತೊಂದು ಉಪಕರಣದ ಅಲಗು ಹರಿತವಾಗಿದ್ದು ವಿಷಮ ಕೋನದಲ್ಲಿ ಬಾಗಿದೆ. ಇನ್ನೊಂದರ ಎರಡೂ ತುದಿಗಳೂ ಮೊಂಡಾಗಿವೆ. ಈ ಎಲ್ಲಾ ಉಪಕರಣಗಳೂ ತ್ರಿಭುಜಾಕೃತಿಯಲ್ಲಿದ್ದು ಅಡ್ಡ ವಿನ್ಯಾಸದಲ್ಲಿ ಅಂಡಾಕಾರವನ್ನು ಹೊಂದಿವೆ. ಈ ಉಪಕರಣಗಳ ಮುಮ್ಮುಖದಲ್ಲಿ ಹೊರ ಆವರಣದ ತೊಗಟೆಯ ಅಂಶ-ಗಳು ಉಳಿದಿವೆ. ಇವೇ ಉಪಕರಣಗಳ ಹಿಮ್ಮುಖವು ಸಮತಲ ವಿನ್ಯಾಸವನ್ನು ಹೊಂದಿದ್ದರೆ ಐದನೆಯ ಉಪಕರಣ ಓರೆ-ನೋಟದಲ್ಲಿ ನಿಮ್ನೋನ್ನತ ವಿನ್ಯಾಸವನ್ನು ತೋರಿಸುತ್ತದೆ.

ನಾಲ್ಕನೇ ಪರಿಷ್ಕೃತ ಹಂತದಲ್ಲಿ ಒಟ್ಟು ಹದಿನಾರು(ಶೇ. ೧೯.೦೪) ಕೊಡಲಿಗಳಿವೆ. ಡೈಕ್ ಹಾಗೂ ಡಾಲ-ರೈಟ್ ಶಿಲೆಯಲ್ಲಿವೆ. ಇವುಗಳನ್ನು ರೂಪಿಸುವಲ್ಲಿ ಎರಡು ಮಾದರಿಯನ್ನು ಅಳವಡಿಸಲಾಗಿದೆ. ಮೊದಲನೆಯದು ಮೊನ-ಚಾದ ಮೇಲ್ಭಾಗವಿರುವ ಕೊಡಲಿ ಹಾಗೂ ಎರಡನೆಯದು ಮೊಂಡು ಮೇಲ್ತುದಿಯ ಉಪಕರಣ. ಇವುಗಳ ಎತ್ತರವನ್ನನುಸ-ರಿಸಿ ಮೂರು ಮುಖ್ಯ ಭಾಗಗಳನ್ನಾಗಿ ವಿಂಗಡಸಲಾಗಿದೆ. ಇವುಗಳಲ್ಲಿ ಎರಡು ಉಪಕರಣ ಉದ್ದ ಅಳತೆಯ ಮೊದಲನೆಯ ಗುಂಪಿಗೂ, ಮೂರು ಉಪಕರಣಗಳು ಮಧ್ಯಮ ಅಳತೆ ಗುಂಪಿಗೂ ಮತ್ತು ಹನ್ನೊಂದು ಉಪಕರಣಗಳು ಕೊನೆಯ ಚಿಕ್ಕ ಅಳತೆ ಗುಂಪಿಗೂ ಸೇರುತ್ತವೆ. ಮೊದಲೆರಡು ಗುಂಪಿನ ಉಪಕರಣಗಳೆಲ್ಲಾ, ಒಂದನ್ನು ಹೊರತು ಪಡಿಸಿ ಚೂಪು ಮೇಲ್ತು-ದಿಯ ಗುಂಪಿಗೆ ಸೇರಿದರೆ ಕಿರು ಗಾತ್ರದ ಮೂರನೇ ಗುಂಪಿನ ಉಪಕರಣಗಳೆಲ್ಲಾ ಮೊಂಡು ಮೇಲ್ತುದಿಯವುಗಳಾಗಿವೆ. ಬಹುಶಃ ಇವುಗಳ ಮೇಲ್ತುದಿ ಮೊದಲಿಗೆ ಚೂಪಾಗಿದ್ದು ಕಾರ್ಯ ನಿರ್ವಹಣೆಯಿಂದಾಗಿ ಸವೆದು ಮೊಂಡಾಗಿರುವ ಸಂಭವ-ವಿದೆ. ಹರಿತವಾದ ಅಲಗು ಬಹುತೇಕ ಸರಳ ರೇಖೆಯಲ್ಲಿದ್ದು ಪಾರ್ಶ್ವದಲ್ಲಿ ಸ್ವಲ್ಪ ಬಾಗಿವೆ. ಕಿರುಗಾತ್ರದ ಎರಡು ಉಪಕರಣ-ಗಳನ್ನು ಹೊರತುಪಡಿಸಿ ಉಳಿದವುಗಳ ಅಲಗುಗಳು ಮೊಂಡಾಗಿವೆ. ಮೊಂಡಾಗಿರುವ ಅಲಗುಗಳ ಉಭಯ ಪಾರ್ಶ್ವಗಳಲ್ಲಿ-ರುವ ಸಣ್ಣಸಣ್ಣ ಚಕ್ಕೆ ಎಬ್ಬಿಸಿರುವ ಗುರುತುಗಳು ಮರ ಮೊದಲಾದವುಗಳನ್ನು ಕಡಿಯುವಾಗ ಉಂಟಾಗಿರುವ ಸಾಧ್ಯತೆ ಇದೆ. ಮಧ್ಯಮ ಗಾತ್ರದ ಒಂದು, ಸಣ್ಣ ಗಾತ್ರದ ಮತ್ತೊಂದು ಮಾದರಿಗಳ ಮಧ್ಯ ಮೇಲ್ಭಾಗದಲ್ಲಿ ಉದ್ದೇಶ ಪೂರ್ವಕವಾಗಿ ಚಕ್ಕೆ ಎಬ್ಬಿಸಿರುವುದು ಹಿಡಿಕೆಯೊಡನೆ ಸಂಯೋಜಿಸಲು ಅನುಕೂಲವಾಗಲೆಂದೇ ಮಾಡಲಾಗಿದೆ.

ಈ ಹದಿನಾರು ಉಪಕರಣಗಳ ವಿವಿಧ ರೀತಿಯ ಅಳತೆಗಳನ್ನು ಕೋಷ್ಟಕ ಸಂಖ್ಯೆ ೮.೫ ರಲ್ಲಿ ನೀಡಿದೆ. ವಿಶೇಷವೆಂದರೆ ಈ ಅಳತೆಗಳಲ್ಲಿ ಕಂಡುಬರುವ ಸಾಮ್ಯತೆ ಮೊದಲ ಗುಂಪಿನಲ್ಲಿ ಉದ್ದ ಮತ್ತು ದಪ್ಪದಲ್ಲಿ ಸ್ವಲ್ಪ ವ್ಯತ್ಯಾಸವಿ-

ದ್ದರೂ ಅಲಗಿನ ಬಳಿಯ ಅಗಲ ಒಂದೇ ಆಗಿದೆ. ಎರಡನೇ ಗುಂಪಿನಲ್ಲಿಯೂ ಉದ್ದದಲ್ಲಿ ಅಲ್ಪ ವ್ಯತ್ಯಾಸವಿದ್ದರೂ ಅಗಲ ಮತ್ತು ದಪ್ಪದಲ್ಲಿ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ. ಮೂರನೆಯ ಗುಂಪಿನಲ್ಲಿ ಒಂದು ಉಪಕರಣವನ್ನು ಹೊರತುಪ-ಡಿಸಿ ಉಳಿದವುಗಳು ಒಂದೇ ಪರಿಮಾಣ ಹೊಂದಿರುವುದು ಗಮನಾರ್ಹ. ವಿವಿಧ ಪ್ರಮಾಣಗಳು ಬೇರೆ ಬೇರೆ ಉದ್ದೇಶಗಳಿ-ಗಾಗಿ ರೂಪಿಸಿರುವವೇ ಎಂಬುದನ್ನು ನಿರ್ಧರಿಸಬೇಕಾಗಿದೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೫ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೫

| ಕ್ರಮ ಸಂಖ್ಯೆ | ನೆಲೆ | ಕೊಡಲಿಯ | | | ಗರಿಷ್ಠ ಸುತ್ತಳತೆ |
|---|---|---|---|---|---|
| | | ಉದ್ದ | ಅಗಲ | ದಪ್ಪ | |
| ೧. | ಕಲ್ಲೇನಹಳ್ಳಿ(ಮಧುಗಿರಿ) | ೧೦೮ | ೪೫ | ೨೨ | ೧೧೫ |
| ೨. | ಕಲ್ಲೇನಹಳ್ಳಿ(ಮಧುಗಿರಿ) | ೧೧೫ | ೪೮ | ೨೭ | ೧೨೫ |
| ೩. | ಕಲ್ಲೇನಹಳ್ಳಿ(ಮಧುಗಿರಿ) | ೧೦೫ | ೫೧ | ೨೦ | ೧೩೦ |
| ೪. | ಕೈದಾಳ | ೧೦ | ೪೮ | ೨೦ | ೧೨೦ |
| ೫. | ಗುರಮ್ಮನಕಟ್ಟೆ | ೨೮೦ | ೮೦ | ೫೫ | ೧೯೦ |
| ೬. | ಗುರಮ್ಮನಕಟ್ಟೆ | ೨೩೦ | ೮೦ | ೪೫ | ೧೮೫ |
| ೭. | ನಿಡುಗಲ್ಲು | ೧೮೦ | ೬೮ | ೩೮ | ೧೭೦ |
| ೮. | ಯಲಪ್ಪನಾಯಕನಹಳ್ಳಿ | ೧೫೦ | ೭೦ | ೪೫ | ೧೭೬ |
| ೯. | ಬೂದಿಬೆಟ್ಟ | ೧೬೦ | ೭೦ | ೩೮ | ೧೬೫ |
| ೧೦. | ರಾಚಮಾರನಹಳ್ಳಿ | ೧೨೫ | ೫೮ | ೨೫ | ೧೩೫ |
| ೧೧. | ಯಲಪ್ಪನಾಯಕನಹೊಸಕೋಟೆ | ೧೨೫ | ೬೮ | ೩೫ | ೧೬೦ |
| ೧೨. | ಯಲಪ್ಪನಾಯಕನಹೊಸಕೋಟೆ | ೯೫ | ೫೦ | ೧೨ | ೧೩೫ |
| ೧೩. | ಯಲಪ್ಪನಾಯಕನಹೊಸಕೋಟೆ | ೮೦ | ೫೦ | ೨೫ | ೧೩೦ |
| ೧೪. | ಸೀಗೆಪಾಳ್ಯ | ೧೨೫ | ೫೩ | ೨೮ | ೧೪೦ |
| ೧೫. | ಬೂದಿಬೆಟ್ಟ | ೧೨೫ | ೬೫ | ೦ | ೧೬೦ |
| ೧೬. | ಯಲಪ್ಪನಾಯಕನಹಳ್ಳಿ | ೧೦೫ | ೫೫ | ೨೦ | ೧೨೫ |

**ಬಾಚಿ**

ಮೇಲ್ನೋಟಕ್ಕೆ ಮಧ್ಯಮ ಹಾಗೂ ಕಿರುಗಾತ್ರದ ಕೊಡಲಿಗಳಂತೆಯೇ ಕಾಣುವ ಬಾಚಿಗಳು ಎರಡು ಮುಖ್ಯ ಅಂಶಗಳಿಂದ ಕೊಡಲಿಗಿಂತ ವಿಭಿನ್ನವಾಗಿರುತ್ತವೆ. ಮೊದಲನೆಯದಾಗಿ ಬಾಚಿಯ ಹರಿತ ಅಲಗನ್ನು ಉಂಟು ಮಾಡುವ

ಮುಮ್ಮುಖವು ಸಮತಲ ರೀತಿಯಲ್ಲಿದ್ದರೆ ಹಿಮ್ಮುಖವು ಉನ್ನತವಾಗಿರುತ್ತದೆ. ಎರಡನೆಯದಾಗಿ ಬಾಚಿಗಳನ್ನು ಹಿಡಿಕೆಗೆ ಲಂಬಕೋನದಲ್ಲಿ ಜೋಡಿಸಿ ಉಪಯೋಗಿಸಲಾಗುತ್ತದೆ. ಸಾಮಾನ್ಯವಾಗಿ ಕೊಡಲಿಯ ಎರಡೂ ಮುಖಗಳನ್ನು ಹೊಳಪು ಬರುವಂತ ನಯಗೊಳಿಸಿದ್ದರೆ ಬಾಚಿಯ ಸಮತಲ ಮುಖವನ್ನು ಉನ್ನತ ಮುಖಕ್ಕಿಂತ ಹೆಚ್ಚು ನಯಗೊಳಿಸಲಾಗಿರುತ್ತದೆ. ಹರಿತ ಅಲಗು ಬಹುತೇಕ ಸರಳರೇಖೆಯಲ್ಲಿದ್ದರೂ ಕೆಲವೊಮ್ಮೆ ಅಂಡಾಕಾರವಾಗಿರುತ್ತದೆ. ಓರೆನೋಟದಲ್ಲಿ ಇದು ಸಮೋ-ನ್ನತ ರೀತಿಯಲ್ಲಿರುತ್ತದೆ. ವಿಶಿಷ್ಟ ರೀತಿಯ ಉಪಕರಣವಾಗಿರುವುದರಿಂದ ಸಮೃದ್ಧ ನೂತನ ಶಿಲಾಯುಗದ ನೆಲೆಗಳಲ್ಲಿ ಮಾತ್ರ ದೊರಕುತ್ತವೆ. ಉದಾಹರಣೆಗೆ ಬ್ರಹ್ಮಗಿರಿ(ವೀಲರ್:೧೯೪೮;೧೮೦-೩೧೦), ಪಿಕ್ಲಿಹಾಳ್ (ಆಲ್ಚಿನ್:೧೯೬೦),ಬನಹಳ್ಳಿ (ಇಂ.ಆ.ರಿ:೧೯೮೩-೮೪.೪೨-೪೬, ೧೯೮೫-೮೬. ೪೩-೪೪, ಮತ್ತು ೧೯೮೬-೮೭ ೪೨-೪೫ ಮತ್ತು ಅ.ಸುಂದರ(ಸಂ.):೧೯೯೦;೬೭-೮೦) ಮತ್ತು ತೆಕ್ಕಲಕೋಟ (ನಾಗರಾಜರಾವ್ ಮತ್ತು ಮಲ್ಹೋತ್ರಾ:೧೯೬೫) ಉತ್ಖನನಗಳಲ್ಲಿ ಬೆಳಕಿಗೆ ಬಂದಿವೆ.

ಅಧ್ಯಯನ ಪ್ರದೇಶದ ಸರ್ವೇಕ್ಷಣೆಯ ಸಮಯದಲ್ಲಿ ಇಂತಹ ಉಪಕರಣಗಳು ೩ (ಶೇ. ೩.೬)ದೊರೆತಿವೆ. (ಎತ್ತರ ಕನಿಷ್ಠ ೬೫ ಗರಿಷ್ಠ ೧೧೦ ಅಗಲ ಕನಿಷ್ಠ ೫೨ ಗರಿಷ್ಠ ೭೦ ದಪ್ಪ ಕನಿಷ್ಠ ೧೦ ಗರಿಷ್ಠ ೪೦ ಮಿ.ಮೀ.). ಸಮೃದ್ಧವಾದ ಎರಡು ನೆಲೆಗಳಲ್ಲಿ ಮಾತ್ರ ಬಾಚಿ ಉಪಕರಣ ದೊರೆತಿವೆ. ಈ ಉಪಕರಣಗಳು ಸಮೃದ್ಧ ನೆಲೆಗಳಲ್ಲಿ ಮಾತ್ರ ದೊರಕುವು-ದೆಂಬ ಅಂಶವನ್ನು ಸಮರ್ಥಿಸುತ್ತವೆ. ದೊರೆತ ಮೂರೂ ಉಪಕರಣ ಡಾಲರೈಟ್ ಶಿಲೆಯಲ್ಲಿದೆ.

ಪ್ರಸ್ತುತ ಮೂರು ಉಪಕರಣಗಳಲ್ಲಿ ಎರಡನ್ನು ತೆಳ್ಳನೆಯ ಉದ್ದವಾದ ಚಕ್ಕೆಗಳ ಮೇಲೂ ಒಂದನ್ನು ಸ್ವಲ್ಪ ದಪ್ಪವಾದ ಮೂಲ ಶಿಲಾಗಟ್ಟಿಯನ್ನು ಬಳಸಿ ರಚಿಸಲಾಗಿದೆ. ಮೂರು ಉಪಕರಣಗಳಲ್ಲೂ ಸಮತಲ ಮುಖವನ್ನು ಹೆಚ್ಚು ನಯಗೊಳಿಸಲಾಗಿದ್ದರೆ ಉನ್ನತ ಮುಖವು ಸ್ವಲ್ಪ ಒರಟಾಗಿಯೇ ಇದೆ. ಎರಡು ಉದಾಹರಣೆಗಳಲ್ಲೂ ಹೊರ ಆವರಣದ ತೊಗಟೆಯನ್ನು ಸ್ವಲ್ಪ ಮಟ್ಟಿಗೆ ಉಳಿಸಿಕೊಳ್ಳಲಾಗಿದ್ದು, ಚಕ್ಕೆಗಳ ಮೇಲೆ ರಚಿತವಾಗಿದೆ.

**ಉಳಿ**

ಉಳಿಯೂ ಸಹ ಬಾಚಿಯಂತೆ ಸಮೃದ್ಧ ನೆಲೆಗಳಲ್ಲಿಯೇ ದೊರಕುವ ವಿರಳ ಹಾಗೂ ವಿಶೇಷ ಉಪಕರಣ-ವಾಗಿದ್ದು ಪ್ರಸ್ತುತ ಪರಿಶೋಧನೆಯಲ್ಲಿ ೩ (ಶೇ ೩.೬) ದೊರೆತಿವೆ. (ಮಧ್ಯಮ ಗಾತ್ರದ ಉಪಕರಣಗಳ ಉದ್ದ ಕನಿಷ್ಠ ೮೫ ಗರಿಷ್ಠ ೧೧೦ ಅಗಲ ಕನಿಷ್ಠ ೬೫ ಗರಿಷ್ಠ ೭೦ ದಪ್ಪ ಕನಿಷ್ಠ ೩೫ ಗರಿಷ್ಠ ೪೦ ಮಿ.ಮೀ. ಕಿರುಗಾತ್ರದವುಗಳ ಉದ್ದ ಕನಿಷ್ಠ ೮೦

ಗರಿಷ್ಠ ೧೦೦ ಅಗಲ ಕನಿಷ್ಠ ೩೮ ಗರಿಷ್ಠ ೫೦ ದಪ್ಪ ಕನಿಷ್ಠ ೧೨ ಗರಿಷ್ಠ ೨೦ ಮಿ.ಮೀ.) ಮಧ್ಯಮ ಇಲ್ಲವೇ ಕಿರು ಗಾತ್ರದ ಕೊಡಲಿಗಳನ್ನು ಹೋಲುವ ಈ ಉಪಕರಣದಲ್ಲಿ ಸಾಮಾನ್ಯವಾಗಿ ಪಾರ್ಶ್ವರೇಖೆಗಳು ಸಮಾನಾಂತರವಾಗಿದ್ದು, ಅಲಗುಗಳು ಅಷ್ಟೇನೂ ಹರಿತವಾಗಿರುವುದಿಲ್ಲ. ಮೇಲ್ಭಾಗದ ಮೊಂಡು ತುದಿ ದುಂಡನೆಯ, ಕಂಸಾಕಾರ ಇಲ್ಲವೇ ಆಯತಾಕಾರ ಸಮತ-ಲವನ್ನು ಹೊಂದಿರುತ್ತದೆ.

ಇಂತಹ ಉಪಕರಣಗಳು ಮೂರು ದೊರೆತಿವೆ. ಡಾಲರೈಟ್ ಶಿಲೆಯಲ್ಲಿವೆ. ಎರಡು ಮಧ್ಯಮ ಮತ್ತು ಒಂದು ಕಿರು ಗಾತ್ರದಲ್ಲಿವೆ. ಮಧ್ಯಮ ಗಾತ್ರದ ಉಪಕರಣಗಳನ್ನು ಚಕ್ಕೆ ತೆಗೆದು, ಕುಟ್ಟಿ, ನಯಗೊಳಿಸಿ ಹೊಳಪು ಕೊಡಲಾಗಿದೆ. ಕಿರು-ಗಾತ್ರದ ಒಂದರಲ್ಲಿ ಅಲಗಿನ ತುದಿಯನ್ನು ಮಾತ್ರ ಹೊಳಪು ಬರುವಂತೆ ಮಾಡಿದರೆ ಉಳಿದ ಭಾಗದಲ್ಲಿ ಚಕ್ಕೆ ತೆಗೆದ ಹಂತ-ದಲ್ಲಿಯೇ ಇದೆ. ಮಧ್ಯಮ ಗಾತ್ರದ ಎರಡರಲ್ಲಿ ಹಿಮ್ಮುಖದ ಅಲಗಿನ ಬಳಿ ಚಕ್ಕೆಗಳೆದ್ದಿವೆ. ಮೇಲಿನ ಮೊಂಡು ತುದಿಯು ವೃತ್ತ ಇಲ್ಲವೆ ಕಂಸಾಕಾರದಲ್ಲಿವೆ. ಒಂದು ಉಪಕರಣವನ್ನು ಹೊರತು ಪಡಿಸಿ ಉಳಿದವುಗಳಲ್ಲಿ ಹೆಚ್ಚಿನ ಉಪಯೋಗವನ್ನು ಸೂಚಿಸುವ ಮೊಂಡು ತುದಿಯ ಸಮತಲ ಭಾಗದ ಸುತ್ತಲೂ ಸಾಕಷ್ಟು ಚಕ್ಕೆಗಳೆದ್ದಿರುವುದು ವಿಶೇಷ ಅಲಗಿನ ಭಾಗವೂ ಸಹ ಹೆಚ್ಚಿನ ಉಪಯೋಗವನ್ನು ಸೂಚಿಸುತ್ತದೆ.

**ಸುತ್ತಿಗೆ ಮತ್ತು ಕೊಡಲಿ ಸುತ್ತಿಗೆ**

ಬಡಗಿ ಅಥವಾ ಮರಗೆಲಸದ ಉಪಕರಣಗಳಾದ ಉಳಿ, ಕೆತ್ತುಳಿ, ಬಾಚಿ ಮುಂತಾದುವನ್ನು ಉಪಯೋಗಿ-ಸುವಾಗ ನಿಯಮಿತ ಬಲಪ್ರಯೋಗ ಮಾಡಿ ಒಡೆಯಲು ಇದು ಉಪಯುಕ್ತವಾಗುತ್ತದೆ. ಕೆಲವೊಮ್ಮೆ ಜಜ್ಜುವ, ಪುಡಿಮಾ-ಡುವ ಹಾಗೂ ಇನ್ನಿತರ ಕಾರ್ಯಗಳಿಗೂ ಉಪಯೋಗವಾಗಿರಬಹುದು. ಹೀಗಿದ್ದರೂ ಈ ಉಪಕರಣಗಳ ಗಾತ್ರ, ಆಕಾರ, ಮತ್ತು ಉಪಯೋಗದ ಕಚ್ಚುಗಳು ರೂಪುಗೊಂಡಿರುವ ಭಾಗ ಇವುಗಳನ್ನಾಧರಿಸಿ ಅವು ನಿರ್ವಹಿಸಿದ್ದಿರಬಹುದಾದ ನಿರ್ದಿಷ್ಟ ಕಾರ್ಯವನ್ನು ನಿರ್ಧರಿಸಬೇಕಾಗುತ್ತದೆ.

ಈ ಉಪಕರಣಗಳು ಯಾವುದೇ ರೀತಿಯ ವಿಶಿಷ್ಟ ಹರಿತ ಅಲಗನ್ನು ಹೊಂದಿಲ್ಲದೆ ಕೊಡಲಿ, ಬಾಚಿ ಮುಂತಾದ ಮುಖ್ಯ ಉಪಕರಣಗಳ ತಯಾರಿಕೆಯ ವಿವಿಧ ಹಂತಗಳಲ್ಲಿ ಮೂಲ ಶಿಲಾಗಟ್ಟಿ ಆಕಸ್ಮಿಕವಾಗಿ ಮುರಿದು ಉದ್ದೇಶಿತ ಅಲಗಿನ ಉಪಕರಣವನ್ನು ಸಿದ್ಧಗೊಳಿಸಲು ಅನುಪಯುಕ್ತವಾದಾಗ ಮತ್ತು ಕೆಲವೊಮ್ಮೆ ಸಿದ್ಧ ಉಪಕರಣಗಳ ಅಲಗು ಮುರಿದಾಗ ನಿರುಪಯುಕ್ತವಾದವುಗಳನ್ನು ವಿವಿಧ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳುವ ಸಾಧ್ಯತೆ ಇದ್ದು ಇದರ ನಿರ್ದಿಷ್ಟ ಉಪಯೋಗವನ್ನು ಕುರಿತಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದೆ.

ಪ್ರಸ್ತುತ ಒಟ್ಟು ೯ (ಶೇ. ೧೦.೬) ಇಂತಹ ಉಪಕರಣಗಳು ದೊರೆತಿವೆ. ಇಂತಹ ಉಪಕರಣಗಳನ್ನು ಎರಡು ಗುಂಪಾಗಿ ವರ್ಗೀಕರಿಸಬಹುದು. ಮೊದಲನೆಯದು ಸಾಧಾರಣ ರೀತಿಯ ಸುತ್ತಿಗೆಕಲ್ಲು. ಎರಡನೆಯದು ಕೊಡಲಿ ಸುತ್ತಿಗೆ. ಎರಡೂ ಗುಂಪುಗಳನ್ನೂ ಅವುಗಳ ಆಕಾರಕ್ಕೆ ತಕ್ಕಂತೆ ತ್ರಿಭುಜಾಕಾರ, ವರ್ತುಲ ಸ್ತಂಭಾಕೃತಿ, ಅಂಡಾಕಾರ, ಆಯ-ತಾಕಾರ, ಮುಂತಾದ ಉಪಗುಂಪುಗಳೆಂದು ವರ್ಗೀಕರಿಸಬಹುದು. ಆರು ಉಪಕರಣ ಮೊದಲ ಗುಂಪಿಗೂ ಮೂರೂ ಉಪಕರಣ ಎರಡನೆಯ ಗುಂಪಿಗೂ ಸೇರುತ್ತವೆ. ಹೀಗಾಗಿ ಈ ಉಪಕರಣಗಳು ತಯಾರಿಕೆಯ ವಿವಿಧ ಹಂತವನ್ನು ಪ್ರತಿನಿ-ಧಿಸುತ್ತಿದ್ದು ಕೆಲವು ತೀರಾ ಒರಟು ಮೇಲ್ಮೈಯನ್ನು ಹೊಂದಿದ್ದರೆ ಉಳಿದವು ನಯವಾದ ಮೇಲ್ಮೈಯನ್ನು ಹೊಂದಿವೆ.

**ಸುತ್ತಿಗೆ ಕಲ್ಲು**

ಪ್ರಸ್ತುತ ಉಪಕರಣ ಸಮೂಹದಲ್ಲಿ ಆರು ಸುತ್ತಿಗೆ ಕಲ್ಲುಗಳಿದ್ದು ಮೂರು ಡಾಲರೈಟ್, ಎರಡು ಡೈಕ್ ಮತ್ತು ಒಂದು ಬಳಪದ ಕಲ್ಲಿನಲ್ಲಿ ರೂಪಿಸಿದೆ. ಇವುಗಳ ಅಡ್ಡ ವಿನ್ಯಾಸವು ಮೂರು ಅಂಡಾಕಾರ, ಎರಡು ಆಯತಾಕಾರ ಹಾಗೂ ಒಂದು ತ್ರಿಕೋಣಾಕಾರವಾಗಿವೆ. ಅಂಡಾಕಾರದ ಒಂದು ಉಪಕರಣ ಮಾತ್ರ ಸುಸ್ಥಿತಿಯಲ್ಲಿದ್ದು ಉಳಿದವುಗಳ ಒಂದಿಲ್ಲೊಂದು ಭಾಗ ಭಗ್ನವಾಗಿದೆ. ಈ ಉಪಕರಣಗಳ ವಿವಿಧ ಅಳತೆ ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೮.೬ ರಲ್ಲಿ ಕೊಡಲಾಗಿದೆ.

ಕೋಷ್ಟಕ ಸಂಖ್ಯೆ ೮.೬

| ಕ್ರಮ ಸಂಖ್ಯೆ | ನೆಲೆ | ಅಡ್ಡವಿನ್ಯಾಸ | ಉಳಿದಿರುವ ಭಾಗದ | | | ಸುತ್ತಳತೆ |
|---|---|---|---|---|---|---|
| | | | ಉದ್ದ ಮಿ.ಮೀ | ಅಗಲ ಮಿ.ಮೀ | ದಪ್ಪ ಮಿ.ಮೀ | |
| ೧. | ಯಲಪ್ಪನಾಯಕನಹೊಸಕೋಟೆ | ಆಯತಾಕಾರ | ೯೫ | ೫೦ | ೩೦ | ೧೬೦ |
| ೨. | ಯಲಪ್ಪನಾಯಕನಹೊಸಕೋಟೆ | ಆಯತಾಕಾರ | ೬೦ | ೪೦ | ೪೫ | ೧೮೦ |
| ೩. | ಯಲಪ್ಪನಾಯಕನಹೊಸಕೋಟೆ | ತ್ರಿಕೋಣ | ೫೦ | ೫೦ | ೫೦ | ೧೭೦ |
| ೪. | ಯಲಪ್ಪನಾಯಕನಹೊಸಕೋಟೆ | ಅಂಡಾಕಾರ | ೧೦೦ | ೫೦ | ೪೫ | ೧೮೦ |
| ೫. | ಯಲಪ್ಪನಾಯಕನಹೊಸಕೋಟೆ | ಅಂಡಾಕಾರ | ೯೦ | ೫೦ | ೩೦ | ೧೫೫ |
| ೬. | ಯಲಪ್ಪನಾಯಕನಹೊಸಕೋಟೆ | ಅಂಡಾಕಾರ | ೮೫ | ೫೦ | ೩೮ | ೧೬೦ |
| ೭. | ಯಲಪ್ಪನಾಯಕನಹೊಸಕೋಟೆ | ಆಯತಾಕಾರ | ೧೧೦ | ೬೦ | ೪೫ | ೧೬೦ |
| ೮. | ಯಲಪ್ಪನಾಯಕನಹೊಸಕೋಟೆ | ತ್ರಿಕೋಣ | ೯೮ | ೫೫ | ೩೫ | ೧೭೦ |
| ೯. | ಯಲಪ್ಪನಾಯಕನಹೊಸಕೋಟೆ | ಅಂಡಾಕಾರ | ೮೫ | ೫೫ | ೫೦ | ೧೬೦ |

**ಕೆತ್ತುಳಿ**

ಈ ಉಪಕರಣಗಳನ್ನು ಮಧ್ಯಮ ಗಾತ್ರದ ಮೂಲ ಶಿಲೆಯಲ್ಲಿ ರೂಪಿಸಲಾಗಿದ್ದು ಆಯತಾಕಾರ, ವೃತ್ತಾಕಾರ ಇಲ್ಲವೇ ತ್ರಿಭುಜಾಕಾರದಲ್ಲಿರುತ್ತವೆ. ದಪ್ಪ ಮತ್ತು ಮೊಂಡು ಅಲಗಿದ್ದು ಇನ್ನೊಂದು ತುದಿಯು ಚಪ್ಪಟೆಯಾಗಿರುತ್ತದೆ. ಇವು-ಗಳ ಅಡ್ಡ ವಿನ್ಯಾಸವೂ ಕೂಡ ಅಲಗಿನ ಆಕಾರದಲ್ಲಿಯೇ ಇರುತ್ತವೆ.

ಪ್ರಸ್ತುತ ಉಪಕರಣ ಸಮೂಹದಲ್ಲಿ ೩ (ಶೀ.೩.೫೬)ಇವೆ. (ತ್ರಿಭುಜಾಕಾರದ ಉಪಕರಣದ ಉದ್ದ ೮೦ ಅಗಲ ೪೫ ದಪ್ಪ ೨೮ ಮಿ.ಮೀ. ಆಯತಾಕಾರದ ಉಪಕರಣದ ಉದ್ದ ೧೦೦ ಅಗಲ ೬೦ ದಪ್ಪ ೪೦ ವೃತ್ತಾಕಾರದ ಉಪಕರಣದ ಉದ್ದ ೮೦ ಗರಿಷ್ಠ ವ್ಯಾಸ ೫೦ ಮಿ.ಮೀ. ) ದೊರೆತಿರುವ ಮೂರು ಉಪಕರಣಗಳ ಸುತ್ತಲೂ ಸಣ್ಣ ಚಕ್ಕೆಗ-ಳನ್ನು ತೆಗೆದಿರುವ ಗುರುತುಗಳಿದ್ದು ಎರಡರಲ್ಲಿ ಹೊರ ಆವರಣ ತೊಗಟೆಯ ಭಾಗಗಳು ಉಳಿದಿವೆ. ಮೂರನೆಯದರಲ್ಲಿ ಸ್ವಲ್ಪ ಉಜ್ಜಿ ನಯಗೊಳಿಸಿರುವುದು ಕಂಡು ಬರುತ್ತದೆ. ಆದೇ ಉಪಕರಣವನ್ನು ತುದಿ ಮೊಂಡಾದ ನಂತರ ಕುಟ್ಟುವ ಕೆಲಸಕ್ಕೆ ಮತ್ತು ಸುತ್ತಿಗೆಯಂತೆ ಉಪಯೋಗಿಸಿರುವ ಸಾಧ್ಯತೆ ಇದೆ.

**ಉಜ್ಜುಗ ಅಥವಾ ಅರೆಯುವ ಕಲ್ಲು**

ನೂತನ ಶಿಲಾಯುಗದ ಉಪಕರಣ ಸಮೂಪದ ಅವಿಭಾಜ್ಯ ಅಂಗವಾದ ಉಜ್ಜುಗ ಅಥವಾ ಅರೆಯುವ ಕಲ್ಲು ಸಾಮಾನ್ಯವಾಗಿ ಅಡಿಗೆ ಮನೆಯ ಉಪಕರಣ. ಉಜ್ಜಲು, ಜಜ್ಜಲು ಮತ್ತು ಅರೆಯಲು ಉಪಯೋಗವಾಗುತ್ತಿತ್ತು. ಪ್ರಸ್ತುತ ಇಂತಹ ೧೨(ಶೀ. ೧೪.೨೮) ಉಪಕರಣ ದೊರೆತಿದೆ. (ದುಂಡನೆಯ ಉಪಕರಣಗಳ ಗಾತ್ರ ೬೫ ರಿಂದ ೮೫ ಮಿ.ಮೀ. ಅಂಡಾಕಾರದವುಗಳ ಉದ್ದ ೧೦೦ ರಿಂದ ೧೨೫ ದಪ್ಪ ೨೦ ರಿಂದ ೪೫ ಮಿ.ಮೀ. ಅಸಮ ಆಯತಾಕಾರದ ಗಾತ್ರವು ೬೦ X ೫೫ X ೩೩ ಮಿ.ಮೀ. ಆಗಿದೆ.) ಸಾಧಾರಣವಾಗಿ ದುಂಡನೆಯ, ಅಂಡಾಕಾರ ಇಲ್ಲವೇ ಆಯತಾಕಾರದ ಉಂಡೆಕಲ್ಲು ಅಥವಾ ಚಕ್ಕೆಕಲ್ಲುಗಳಲ್ಲಿ ಇವುಗಳನ್ನು ತಯಾರಿಸಲಾಗುತ್ತದೆ. ಉಪಯೋಗ ಹಾಗೂ ಮೂಲಶಿಲೆಯ ಆಕಾರ ಇವುಗಳನ್ನಾಧರಿಸಿದಂತೆ ಒಂದು, ಎರಡು ಅಥವಾ ಎಲ್ಲಾ ಕಡೆಗಳಲ್ಲೂ ಚಕ್ಕೆ ಎಬ್ಬಿಸಿ ಕುಟ್ಟಿ ನಯಗೊಳಿಸಲಾಗಿದೆ. ಅರೆ-ಯಲು ಉಪಯೋಗಿಸಿರುವ ಮೇಲ್ಮೈ ಸಹಜವಾಗಿ ಅತ್ಯಂತ ನಯವಾಗಿರುತ್ತದೆ. ದೊರೆತಿರುವ ಮೂರು ಉಪಕರಣ ಕಣ ಶಿಲೆಯಾದರೆ, ಉಳಿದವು ಡೈಕ್ ಶಿಲೆಯಲ್ಲಿವೆ. ಆಕಾರದ ದೃಷ್ಟಿಯಿಂದ ನಾಲ್ಕು ದುಂಡನೆಯವು ಏಳು ಅಂಡಾಕಾರದವು ಹಾಗೂ ಉಳಿದೊಂದು ಆಸಮ ಆಯತಾಕಾರದ್ದಾಗಿದೆ.

ಸ್ಥಳ ಪರಿಶೀಲನೆಯ ಸಮಯದಲ್ಲಿ ಕನಿಷ್ಠ ಮೂರು ನಿವೇಶನಗಳಲ್ಲಿ ದೊಡ್ಡ ಗಾತ್ರದ ಮಸೆಯುವ ಅಥವಾ ಅರೆಯುವ ಹಾಸುಗಲ್ಲು (ಒರಳುಗಳನ್ನು) ಗಳನ್ನು ಗಮನಿಸಲಾಗಿದೆ. ಬೃಹತ್ ಬಂಡೆಗಳ ಮೇಲ್ಭಾಗದಲ್ಲಿ ಅಸಮ ಆಯತಾ-ಕಾರ ಇಲ್ಲವೆ ಅಂಡಾಕಾರದ ಒರಳುಗಳು ಕಂಡುಬಂದಿವೆ. ಅತ್ಯಂತ ನಯವಾದ ನಿಮ್ನ ಒಳಭಾಗವನ್ನು ಹೊಂದಿವೆ.

## ಕವಣೆಕಲ್ಲು

ಭಾರತದ ಸುಮಾರು ಎಲ್ಲಾ ನೂತನ ಶಿಲಾಯುಗದ ನೆಲೆಗಳಲ್ಲಿ ಸರ್ವೇ ಸಾಮಾನ್ಯವಾಗಿ ದೊರಕುವ ಈ ಉಪಕರಣವನ್ನು ಬೆಳೆಯನ್ನು ಹಾಳುಮಾಡುವ ಹಕ್ಕಿಗಳನ್ನು ಬೆದರಿಸಿ ಓಡಿಸಲು ಮತ್ತು ತಿನ್ನಬಹುದಾದ ಹಕ್ಕಿ ಹಾಗೂ ಸಣ್ಣ ಪ್ರಾಣಿಗಳನ್ನು ದೂರದಿಂದಲೇ ಹೊಡೆದು ಕೊಲ್ಲಲು ಬಳಸಲಾಗುತ್ತಿತ್ತು. ಉಳಿದ ಉಪಕರಣಗಳಿಗೆ ಹೋಲಿಸಿದರೆ ಪ್ರಮಾಣ ಅತ್ಯಲ್ಪ. ಮಧ್ಯಮಗಾತ್ರದ ಈ ಉಪಕರಣಗಳು ಪೂರ್ಣ ದುಂಡಾಗಿ ಇಲ್ಲವೇ ಅಂಡಾಕಾರದಲ್ಲಿರುತ್ತವೆ.

ಸಾಮಾನ್ಯವಾಗಿ ಸಮಗಾತ್ರದ ದುಂಡನೆಯ ಅಥವಾ ಅಂಡಾಕಾರದ ಉಂಡೆಕಲ್ಲುಗಳನ್ನು ಅವಶ್ಯವಾದ ಕಡೆ ಚಕ್ಕೆ ತೆಗೆದು ಕುಟ್ಟಿ ಕನಿಷ್ಠ ಜಾಮಿತೀಯ ಆಕಾರಕ್ಕೆ ತಂದಿರಲಾಗುತ್ತದೆ. ಹೊಡೆತ ಬಲವಾಗುವ ಉದ್ದೇಶದಿಂದ ಒರಟು ಮೇಲ್ಮೈಯನ್ನು ಉಳಿಸಿಕೊಂಡಿರಲಾಗುತ್ತದೆ.

ದೊರೆತ ೩(ಶೇ. ೩.೫೭) ಉಪಕರಣಗಳಲ್ಲಿ ಒಂದು ಬಳಪದ ಕಲ್ಲು ಉಳಿದೆರಡು ಡೈಕ್ ಶಿಲೆಯಲ್ಲಿವೆ. ಮೂರರಲ್ಲಿ ಎರಡು ದುಂಡಾಗಿದ್ದು ಒಂದು ಅಂಡಾಕಾರವಾಗಿದೆ. ದುಂಡಾಕಾರದ ಎರಡು ಉಪಕರಣಗಳ ವ್ಯಾಸ ಕ್ರಮವಾಗಿ ೬೦ ಮತ್ತು ೫೦ ಮಿ.ಮೀ. ಅಂಡಾಕಾರದ ಉಪಕರಣದ ವ್ಯಾಸ ೬೦ ದಪ್ಪ ೨೫ ಮಿ.ಮೀ. ಇದೆ.

## ಉಂಗುರ ಕಲ್ಲು

ಆರು ನಿವೇಶನಗಳಲ್ಲಿ ಉಂಗುರಕಲ್ಲು ಅಥವಾ ಗದೆ ಕಲ್ಲು ಎಂದು ಕರೆಯುವ ಉಪಕರಣ ದೊರೆತಿದೆ. ಈ ಉಪಕರಣವು ಹಿಂದಿನ ಸೂಕ್ಷ್ಮಶಿಲಾಯುಗದ ಶಿಲೋಪಕರಣಗಳ ಮುಂದುವರಿಕೆಯನ್ನು ಸೂಚಿಸುತ್ತಿದ್ದು ಬಹುತೇಕ ಕೃಷಿ-ಗಾರಿಕೆ ಹಾಗೂ ಅರೆಯುವ ಅಥವಾ ಕುಟ್ಟುವ ಕೆಲಸಗಳಿಗೆ ಉಪಯೋಗವಾಗುತ್ತಿತ್ತು. ದಕ್ಷಿಣ ಭಾರತದ ನವ ಶಿಲಾಯುಗ ಉಪಕರಣ ಸಮೂಹದಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಇವು ದೊರಕುತ್ತವೆ.

ದೊರೆತ ೬ (ಶೇ. ೭.೧೪) ಉಂಗುರ ಕಲ್ಲುಗಳು ಬಳಪದ ಕಲ್ಲಿನಿಂದ ಮಾಡಲ್ಪಟ್ಟಿವೆ. ಉಪಯೋಗಿಸಿರುವ ಮೂಲ ವಸ್ತುವು ರೂಪಾಂತರಗೊಳ್ಳುತ್ತಿರುವ ಬಳಪದ ಕಲ್ಲಿನ ವಿವಿಧ ಹಂತಗಳನ್ನು ಪ್ರತಿನಿಧಿಸುತ್ತವೆ. ಒಂದು ಉಪಕರಣ ಒರಟು ಕಣಗಳಿಂದ ಕೂಡಿದ ಪದರ ಪದರವಾದ ಸ್ತರಗಳಿರುವ ಬಳಪದ ಕಲ್ಲಿನಲ್ಲಿ ರೂಪಿತವಾಗಿದೆ. ಇನ್ನೊಂದು ಉಪಕರಣ ಕಾಗೆ ಬಂಗಾರ (ಅಬ್ರಕ)ದ ಕಣಗಳಿರುವ ಬಳಪದ ಕಲ್ಲಾಗಿದೆ. ಮತ್ತೊಂದು ಉತ್ತಮ ಗುಣಮಟ್ಟದ ಬಳಪದ ಕಲ್ಲಿನಲ್ಲಿದೆ. ಈ ಎಲ್ಲಾ ಮಾದರಿಗಳನ್ನೂ ವೃತ್ತಾಕಾರದ ದಪ್ಪ ಶಿಲಾಖಂಡವನ್ನು ಚಕ್ಕೆ ತೆಗೆದು ಕುಟ್ಟಿ ಸ್ವಲ್ಪ ಮಟ್ಟಿಗೆ ನಯಗೊಳಿಸಿದೆ. ಮಧ್ಯದಲ್ಲಿ

ವೃತ್ತಾಕಾರದ ರಂಧ್ರವನ್ನು ಮಾಡಲಾಗಿದೆ. ಮೂರು ಉಪಕರಣಗಳಲ್ಲಿ ಎರಡೂ ಕಡೆಯಿಂದಲೂ ಕುಟ್ಟಿ ರಂಧ್ರ ಮಾಡಿರು-ವಂತೆ ಕಾಣುತ್ತದೆ. ಓರೆನೋಟದಲ್ಲಿ ಒಂದು ಪೂರ್ಣ ವೃತ್ತಾಕಾರವಾದರೆ ಉಳಿದವು ಅಂಡಾಕಾರದವುಗಳಾಗಿವೆ. ಪ್ರತಿ-ಯೊಂದು ಉಪಕರಣದ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೭ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೭

| ಕ್ರಮ ಸಂಖ್ಯೆ | ನೆಲೆ | ಉಪಕರಣದ ವ್ಯಾಸ ಮಿ.ಮೀ | ದಪ್ಪ ಮಿ.ಮೀ | ರಂದ್ರದ ವ್ಯಾಸ ಮಿ.ಮೀ |
|---|---|---|---|---|
| ೧. | ಅಂಕನಬಾವಿ | ೧೧೦ | ೪೦ | ೨೦ |
| ೨. | ಬೆಳ್ಳಿಬಟ್ಟಲು | ೧೨೦ | ೩೫ | ೪೦ |
| ೩. | ಹೂವಿನಕಟ್ಟೆ | ೯೦ | ೫೦ | ೪೦ |
| ೪. | ಮರಿದಾಸನಹಳ್ಳಿ | ೯೦ | ೫೦ | ೪೦ |
| ೫. | ರಜತಾದ್ರಿಪುರ | ೧೨೦ | ೫೨ | ೧೫ |
| ೬. | ಸಂಪಿಗೆ | ೧೨೫ | ೪೦ | ೧೫ |

**ಮೂಲಸಾಮಗ್ರಿ ಮತ್ತು ತಾಂತ್ರಿಕತೆ**

ಇದುವರೆಗೆ ವಿವರಿಸಲಾಗಿರುವ ಶಿಲೋಪಕರಣಗಳ ವೈವಿಧ್ಯತೆ ಮತ್ತು ಅವುಗಳನ್ನು ರೂಪಿಸಲು ಬಳಸಲಾಗಿರುವ ಮೂಲ ಸಾಮಗ್ರಿಗಳು ಮತ್ತು ತಂತ್ರ ವಿಧಾನಗಳನ್ನು ಕುರಿತ ಒಂದೆರಡು ವಿಶೇಷ ಅಂಶಗಳನ್ನು ಕೆಳಕಂಡಂತೆ ನಿರೂಪಿಸಬಹುದು.

**ಮೂಲ ಸಾಮಗ್ರಿ**

ನೂತನ ಶಿಲಾಯುಗದ ಉಪಕರಣಗಳನ್ನು ಸಾಧಾರಣವಾಗಿ ಶಿಲೆ, ಮೂಳೆ ಮತ್ತು ಮರದ ಮಾಧ್ಯಮಗಳಲ್ಲಿ ತಯಾರಿಸುವುದು ಸರ್ವೇ ಸಾಮಾನ್ಯ. ಆದರೆ ಈ ಪ್ರದೇಶದಲ್ಲಿ ಶಿಲೋಪಕರಣಗಳು ಮಾತ್ರ ದೊರೆತಿವೆ. ಉಪಯೋಗಿಸಿ-ರುವ ಶಿಲಾಮಾದರಿಗಳು ಹೆಚ್ಚಿನ ಪ್ರಮಾಣದಲ್ಲಿ ಡೈಕ್ ಮತ್ತು ಡಾಲರೈಟ್ ಹಾಗೂ ಅಲ್ಪ ಪ್ರಮಾಣದಲ್ಲಿ ಕಣಶಿಲೆ ಮತ್ತು ಬಳಪದಕಲ್ಲು. ನೂತನಶಿಲಾಯುಗದ ಪ್ರಾಥಿನಿಧಿಕ ಉಪಕರಣಗಳೆನಿಸಿದ ಕೊಡಲಿ, ಬಾಚಿ, ಉಳಿ, ಕೆತ್ತುಳಿ, ಉಜ್ಜುಗ, ಉಂಗುರಕಲ್ಲು ಮುಂತಾದವುಗಳ ತಯಾರಿಕೆಯಲ್ಲಿ ಉಳಿದ ಪ್ರದೇಶಗಳಲ್ಲಿನಂತೆಯೇ ಇಲ್ಲಿಯೂ ಡೈಕ್ ಮತ್ತು ಡಾಲರೈಟ್-ಗಳನ್ನು ಸರ್ವೇ ಸಾಮಾನ್ಯವಾಗಿ ಬಳಸಲಾಗಿದೆ. ಈ ಪ್ರದೇಶದಲ್ಲಿ ಉಂಗುರ ಕಲ್ಲುಗಳ ತಯಾರಿಕೆಗೆ ನೂತನ ಶಿಲಾಯುಗದ ಮಾನವ ಬಳಪದ ಕಲ್ಲನ್ನು ಬಳಸಿರುವುದು ವಿಶೇಷವಾಗಿ ಕಾಣುತ್ತದೆ. ಬಳಪದ ಕಲ್ಲು ಸಾಂದ್ರ ಹಾಗೂ ನಯವಾದ ಕಣಗ-ಳುಳ್ಳ ಭಾರ ಶಿಲೆ. ಆದರಲ್ಲಿ ಹರಿತ ಅಲಗಿನ ಉಪಕರಣಗಳನ್ನು ತಯಾರಿಸಲು ಸಾಧ್ಯವಿಲ್ಲದಿದ್ದರೂ ಭಾರ ಮತ್ತು ಒತ್ತಡ-

ವನ್ನು ನಿರ್ವಹಿಸುವಂತಹ ಉಪಕರಣಗಳ ತಯಾರಿಕೆಯಲ್ಲಿ ಸಮರ್ಥ ಮಾಧ್ಯಮವಾಗುತ್ತದೆ. ಜೊತೆಗೆ ರಂಧ್ರ ಕೊರೆಯು-ವುದನ್ನೂ ಒಳಗೊಂಡಂತೆ ಯಾವುದೇ ಉಪಕರಣವನ್ನು ನಾಜೂಕಾಗಿ ರೂಪಿಸಲು ಈ ಮೃದುಶಿಲೆ ಸಹಕರಿಸುತ್ತದೆ. ಆದ್ದ-ರಿಂದ ಉಂಗುರ ಕಲ್ಲಿನ ತಯಾರಿಕೆಗೆ ಈ ಶಿಲೆಯನ್ನು ವಿಶೇಷವಾಗಿ ಉಪಯೋಗಿಸಿರಬಹುದು. ಈ ಪ್ರದೇಶದಲ್ಲಿ ದೊರೆತಿ-ರುವ ಎಲ್ಲಾ ಉಂಗುರ ಕಲ್ಲುಗಳೂ ಬಳಪದ ಕಲ್ಲಿನಲ್ಲಿ ರೂಪಿಸಲಾಗಿರುವುದು ಈ ಅಂಶವನ್ನು ಸಮರ್ಥಿಸುತ್ತದೆ. ಅದರಂ-ತೆಯೇ ಅರೆಯುವ ಕಲ್ಲುಗಳ ತಯಾರಿಕೆಗೆ ಕಣಶಿಲೆಯನ್ನು ಉದ್ದೇಶಪೂರ್ವಕವಾಗಿ ಆರಿಸಿಕೊಂಡಂತೆ ಕಾಣುತ್ತದೆ. ಈ ಶಿಲೋಪಕರಣಗಳ ತಯಾರಿಕೆಗೆ ಬೇಕಾದ ಎಲ್ಲಾ ಶಿಲಾಮಾದರಿಗಳು ಈ ಬೆಟ್ಟಗುಡ್ಡ ಪ್ರದೇಶದಲ್ಲಿ ವಿಪುಲವಾಗಿ ದೊರೆಯು-ತ್ತಿದ್ದು ಯಾವುದೇ ಶಿಲಾಮಾದರಿಯನ್ನು ವಿಶಿಷ್ಟ ಉದ್ದೇಶಕ್ಕಾಗಿ ಆಮದು ಮಾಡಿಕೊಂಡಿರುವುದು ಕಂಡು ಬರುವುದಿಲ್ಲ.

**ತಾಂತ್ರಿಕತೆ**

ಈಗಾಗಲೇ ಬಹು ಚರ್ಚಿತವಾಗಿ ಪ್ರಸಿದ್ಧವಾಗಿರುವ ವಿವಿಧ ತಾಂತ್ರಿಕ ವಿಧಾನಗಳನ್ನು ಬಳಸಿ ರೂಪುಗೊಳಿಸ-ಲಾಗಿದೆ. ಪ್ರಮುಖ ಉಪಕರಣಗಳ ಎರಡೂ ಮುಖಗಳಲ್ಲಿ ಕಂಡು ಬರುವ ತೆಳುವಾದ ಚಕ್ಕೆಗಳನ್ನೆಬ್ಬಿಸಿರುವುದರಿಂದ ಉಂಟಾದ ನೀಳ ಹಾಗೂ ಅಷ್ಟೇನೂ ಆಳವಲ್ಲದ ತಗ್ಗುಗಳು ಹೆಚ್ಚಾಗಿ ಕಲ್ಲು ಸುತ್ತಿಗೆ ಮತ್ತು ಮರದ ಇಲ್ಲವೇ ಮೂಳೆಯ ಸುತ್ತಿಗೆಗಳನ್ನು ಉಪಯೋಗಿಸಿ ನಿಯಮಿತ ಹಾಗೂ ಕೇಂದ್ರೀಕೃತ ಬಲಪ್ರಯೋಗ ವಿಧಾನವನ್ನು ಉಪಯೋಗಿಸಿದಂತೆ ಕಾಣುತ್ತದೆ. ದೊರೆಕಿರುವ ಉಪಕರಣ ಸಮೂಹದಲ್ಲಿರುವ ತಯಾರಿಕೆಯ ವಿವಿಧ ಹಂತದಲ್ಲಿರುವ ಉಪಕರಣಗಳು ಮತ್ತು ಭಗ್ನವಾದ ಭಾಗಗಳು ಮೂಲ ಶಿಲಾ ಖಂಡದಿಂದ ಉದ್ದೇಶಿತ ಆಕಾರ ಮತ್ತು ಉಪಯೋಗದ ವಿಶಿಷ್ಟ ಉಪಕರಣನ್ನು ನಿರ್ಮಿಸುವ ವಿವಿಧ ಸೂಕ್ಷ್ಮ ಹಂತಗಳನ್ನು ವ್ಯವಸ್ಥಿತವಾಗಿ ನಿರೂಪಿಸುತ್ತದೆ.

**ಪರಿಶೀಲನೆ**

ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳ ಪ್ರಸರಣ ವಿಶೇಷವಾಗಿ ಗಮನಾರ್ಹ. (ಕೋಷ್ಟಕ ಸಂಖ್ಯೆ ೮.೩ ಮತ್ತು ಭೂನಕ್ಷೆ ಸಂಖ್ಯೆ ೩೫೦) ಈ ಸಂಸ್ಕೃತಿಯ ನೆಲೆಗಳು ಆದಿ, ಮಧ್ಯ, ಅಂತ್ಯ ಮತ್ತು ಸೂಕ್ಷ್ಮ ಶಿಲಾಯುಧ ಸಂಸ್ಕೃ-ತಿಯ ಪ್ರಧಾನ ಪ್ರದೇಶವಾದ ಹೊನ್ನೆಮಾರನಹಳ್ಳಿ ಮೂಗನಾಯಕನಕೋಟೆ, ಮಾರಶೆಟ್ಟಿಹಳ್ಳಿ, ಮಂಚಲ್ದೊರೆ ಪ್ರದೇಶದಲ್ಲಿ ಹಾಗೂ ಇದರ ಪಶ್ಚಿಮ ಭಾಗದಲ್ಲಿ ಇಲ್ಲದಿರುವುದು, ಬದಲಾಗಿ ಸೂಕ್ಷ್ಮ ಶಿಲಾಯುಗದ ನೆಲೆಗಳು ಪ್ರಧಾನ ಕೇಂದ್ರವಾದ ತಿಪಟೂರು, ತುಮಕೂರು, ಮಧುಗಿರಿ ಮತ್ತು ಕೊರಟಗೆರೆ ಪ್ರದೇಶವಲ್ಲದೆ ಉತ್ತರದಲ್ಲಿ ಪಾವಗಡ ತಾಲ್ಲೂಕಿನವರೆಗೂ ಪ್ರಸ-ರಿಸಿವೆ. ಪ್ರಪ್ರಥಮವಾಗಿ ಪಾವಗಡ ತಾಲ್ಲೂಕಿನಲ್ಲಿ ಜನವಸತಿ ಹೆಚ್ಚಿರುವುದನ್ನು ಕಾಣಬಹುದು.

ಅಧ್ಯಯನ ಪ್ರದೇಶದ ೩೧ ನೆಲೆಗಳನ್ನೂ ಅವುಗಳಲ್ಲಿದೊರೆತ ಸಾಂಸ್ಕೃತಿಕ ಅವಶೇಷ ಪ್ರಕಾರಗಳ ಆಧಾರದ ಮೇಲೆ ಮೂರು ವರ್ಗಗಳನ್ನಾಗಿ ವಿಂಗಡಿಸಬಹುದು. (೧) ಕೇವಲ ನೂತನ ಶಿಲಾ ಉಪಕರಣಗಳು .ದೊರೆತಿರುವ ನೆಲೆ (ಒಟ್ಟು ೨೨) (೨) ಕೇವಲ ಮೃತ್ ಪಾತ್ರೆಗಳು ದೊರೆತಿರುವ ನೆಲೆ(ಒಟ್ಟು ೪) ಮತ್ತು (೩) ಶಿಲೋಪಕರಣ ಮೃತ್ ಪಾತ್ರೆ-ಗಳೆರಡೂ ದೊರೆತಿರುವ ಅವಶೇಷಗಳನ್ನೊಳಗೊಂಡ ವಸತಿ ನೆಲೆಗಳು (ಒಟ್ಟು ೫) ಈ ಸಂಸ್ಕೃತಿಯ ನೆಲೆಗಳಲ್ಲಿ ದೊರೆ-ಯುವ ಅವಶೇಷಗಳಿಗನುಗುಣವಾಗಿ ಅವುಗಳನ್ನು ಮೂರು ಪ್ರಕಾರದಲ್ಲಿ ವಿಂಗಡಿಸಿದೆಯಷ್ಟೆ. ಈ ವಿಂಗಡಣೆಯು ವಿಶಿಷ್ಟ ಅವಶೇಷಗಳ ಇರುವಿಕೆ ಇಲ್ಲದಿರುವಿಕೆಯನ್ನು ಮಾತ್ರವೇ ಅವಲಂಬಿಸಿಲ್ಲ. ಈ ಪ್ರಸರಣ ನೀತಿಯನ್ನು ತುಲನಾತ್ಮಕವಾಗಿ ನೋಡಿದರೆ ಈ ಸಂಸ್ಕೃತಿಯ ಬೆಳವಣಿಗೆಯ ಉಪ ಹಂತಗಳನ್ನು ಗುರುತಿಸಬಹುದೆಂದು ಕಾಣುತ್ತದೆ.

ಶಿವರಾಯ್ (ತಮಿಳುನಾಡು) ಗುಡ್ಡಗಳ ಮೇಲಿನ ಸಮತಟ್ಟು ಪ್ರದೇಶದಲ್ಲಿ ಬಹಳ ಹಿಂದಿನಿಂದಲೂ ನೂರಾರು ಶಿಲಾ ಉಪಕರಣಗಳು ದೊರೆಯುತ್ತಿರುವುದು ರಾಬರ್ಟ್ ಬ್ರೂಸ್ ಫೂಟ್‌ರವರ ಅನ್ವೇಷಣೆಗಳಿಂದ ತಿಳಿದು ಬಂದಿದೆ. (ಫೂಟ್.ಆರ್.ಬಿ:೧೯೧೬;೭೦-೭೧), ನರಸಿಂಹಯ್ಯ (೧೯೮೦;೩೫)ನವರು ಈ ಗುಡ್ಡದ ತಪ್ಪಲಲ್ಲಿ ಮುಲ್ಲಿಕಾ-ಡು, ದೈಲ್‌ಮಲೈ ಮತ್ತು ತೊಗರಪಲ್ಲಿ ಈ ಮೂರು ನೂತನ ಶಿಲಾಯುಗದನೆಲೆಗಳನ್ನು ಗುರುತಿಸಿ ಈ ನೆಲೆಗಳಲ್ಲಿ ಸಣ್ಣ ಪ್ರಮಾಣದಲ್ಲಿ ವೈಜ್ಞಾನಿಕವಾಗಿ ಪರೀಕ್ಷಾ ಗುಂಡಿಗಳ ಉತ್ಖನನದಿಂದ ಈ ಸಂಸ್ಕೃತಿಯ ಮೂರು ಹಂತಗಳನ್ನು ಗುರುತಿಸಿದ್ದಾ-ರೆ. ಸುಂದರ ಅವರು (೧೯೮೫;೩೯-೫೭) ಇಡೀ ಭಾರತದ ನೂತನ ಶಿಲಾ ಸಂಸ್ಕೃತಿಯನ್ನು ಪರಿಶೀಲಿಸುವಾಗ ದಕ್ಷಿಣ ಭಾರತದಲ್ಲಿ ಮೂರು ಹಂತಗಳನ್ನು ಗುರುತಿಸಿದ್ದಾರೆ. ೧. ಮೃತ್ ಪಾತ್ರೆ (ಬಳಕೆಯ) ಪೂರ್ವ (ಅಥವಾ ಇಲ್ಲದ) ನೂತನ ಶಿಲಾ ಸಂಸ್ಕೃತಿ, ೨. ಪ್ರಾಯಶಃ ಮೊದಲಾದ ಪ್ರದೇಶದಲ್ಲಿಯ ನೂತನ ಶಿಲಾ ಉಪಕರಣಗಳಲ್ಲದ ಸುಧಾಂತ ಮೃತ್ ಪಾತ್ರೆ ಬಳಕೆಯುಳ್ಳ ಸಂಸ್ಕೃತ. ೩. ಪ್ರಾಯಶಃ ಮಸ್ಕಿ (ಥಾಪರ್.ಬಿ.ಕೆ:೧೯೫೭;೪-೧೪೨) ತಿ.ನರಸಿಪುರ (ಶೇಷಾದ್ರಿ.ಎಂ:೧೯೭೧) ಇವೆರಡೂ ವರ್ಗಗಳ ಸಂಗಮದಿಂದ ಬೆಳದು ಬಂದ ಬ್ರಹ್ಮಗಿರಿ, (ವೀಲರ್: ೧೯೪೮;೧೮೦-೨೭೦) ಸಂಗನಕಲ್ಲು, (ನಾಗ-ರಾಜರಾವ್ ಮತ್ತು ಮಲ್ಹೋತ್ರಾ:೧೯೬೫) ತೆಕ್ಕಲಕೋಟ(ನಾಗರಾಜರಾವ್ ಮತ್ತು ಅನ್ಸಾರಿ:೧೯೬೯) ಮೊದಲಾದ ಪ್ರದೇ-ಶಗಳಲ್ಲಿ ಕಂಡು ಬಂದ ಶಿಲಾ-ತಾಮ್ರ ಹಂತದಲ್ಲಿಯ ನೂತನ ಶಿಲಾ ಸಂಸ್ಕೃತಿ. ನಾಗಾರ್ಜುನಕೊಂಡದಲ್ಲಿಯೂ ಮೊದಲೆ-ರಡು ಹಂತಗಳನ್ನು ಸ್ವಲ್ಪ ಹೆಚ್ಚು ಕಡಿಮೆ ಗುರುತಿಸಲ್ಪಟ್ಟಿವೆ. ಎರಡನೇ ಹಂತದ ಕಾಲಮಾನ. ಸು.ಕ್ರಿ.ಪೂ. ೧೭೦೦ ರಿಂದ ೧೪೦೦ ರವರೆಗೆ. ಕೊನೆಯ ಹಂತದ ಸಂಸ್ಕೃತಿಯ ಕಾಲಮಾನ ಸು.ಕ್ರಿ.ಪೂ. ೧೪೦೦ ರಿಂದ ೧೦೦೦ ದವರೆಗೆ. ಮೊದಲನೆ ಹಂತದ ಕಾಲಮಾನವನ್ನು ಸ್ಪಷ್ಟವಾಗಿ ನಿರ್ಧರಿಸಲು ಸಾಧ್ಯವಾಗಿಲ್ಲ. ಇದು ಎರಡನೆಯ ಹಂತದ ಸಂಸ್ಕೃತಿಗೆ ಪೂರ್ಣ ಸಮ-ಕಾಲೀನ ಇಲ್ಲವೆ ಅದರ ಪೂರ್ವದ್ದಾಗಿದ್ದು ಕೊನೆಯ ಹಂತದಲ್ಲಿ ಎರಡನೆಯದಕ್ಕೆ ಸಮಕಾಲೀನವಾಗಿರಬಹುದು.

ಒಟ್ಟಾರೆ ದಕ್ಷಿಣ ಭಾರತದ ಈ ಸಂಸ್ಕೃತಿಯ ವೈಶಿಷ್ಟ್ಯಗಳ ವಿದ್ಯಮಾನದ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದ ನೆಲೆಗಳನ್ನು ಪರಿಶೀಲಿಸಿದರೆ ಇಲ್ಲಿಯೂ ಕೂಡ ಈ ಪ್ರಕಾರದ ಮೂರು ಹಂತಗಳನ್ನು ಗುರುತಿಸಬಹುದೆಂದು ಕಾಣುತ್ತದೆ. ಆದರೆ ಆಯ್ದ ಉತ್ತಮ ನೆಲೆಗಳಲ್ಲಿ ವೈಜ್ಞಾನಿಕ ಉತ್ಖನನ ನಡೆಸದ ಹೊರತು ಏನನ್ನೂ ಹೇಳುವುದು ಕಷ್ಟ.

ಅನ್ವೇಷಣೆಯ ಯಾವುದೇ ಸ್ಥಳದಲ್ಲಿ ಬ್ರಹ್ಮಗಿರಿ ೧ಎ, ೧ಬಿ, (ವೀಲರ್:೧೯೪೮;೧೮೦-೨೬೦), ಮಸ್ಕಿ (ಥಾಪರ್:೧೯೫೭;೪-೧೪೫), ಪಿಕ್ಲಿಹಾಳ(ಅಲ್ಚಿನ್:೧೯೬೦), ತೆಕ್ಕಲಕೋಟ (ನಾಗರಾಜರಾವ್ ಮತ್ತು ಮಲ್ಹೋತ್ರಾ: ೧೯೬೫), ಸಂಗನಕಲ್ಲು (ನಾಗರಾಜರಾವ್ ಮತ್ತು ಅನ್ಸಾರಿ:೧೯೬೯) ಮೊದಲಾದ ನೆಲೆಗಳಲ್ಲಿ ಕಂಡುಬಂದಂತೆ ವರ್ಣ-ರೇಖಾ ಚಿತ್ರಗಳಿಂದ ಅಲಂಕೃತವಾದ ೨ಎ ಪ್ರಕಾರದ ಅಥವಾ ಅಭ್ರಕ ಬೂದುವರ್ಣದ ಮಣ್ಣಿನ ಪಾತ್ರೆಗಳ ಅವಶೇಷಗ-ಳಾಗಲೀ ದೊರೆತಿಲ್ಲ. ಅಪರೂಪವಾಗಿ ಅಲ್ಲಲ್ಲಿ ಹಾಗೂ ವಿರಳವಾಗಿ ೧೨ ನೆಲೆಗಳಲ್ಲಿ ಒಟ್ಟು ೪೩ ಸಮಾನಾಂತರ ಅಲಗುಳ್ಳ ಉದ್ದನೆಯ ನೀಳಚಕ್ಕೆಗಳು ಮತ್ತು ಸಮಾನಾಂತರ ಬಹು ಪಟ್ಟಿಗೆಗಳುಳ್ಳ ಮೂಲ ಶಿಲಾಗಟ್ಟಿಗಳಿವೆ. ಆದ್ದರಿಂದ ಈ ನೆಲೆಗಳ-ಲ್ಲಿಯ ಸಂಸ್ಕೃತಿಯು ಬಹು ಮಟ್ಟಿಗೆ ಕೋಲಾರ, ತಿ.ನರಸೀಪುರ ಮೊದಲಾದ ನೆಲೆಗಳಲ್ಲಿ ಕಂಡು ಬಂದ ಸಂಸ್ಕೃತಿಗಳನ್ನು ಹೆಚ್ಚಾಗಿ ಹೋಲುತ್ತದೆ. ಆದರೆ ತಿ.ನರಸೀಪುರದಲ್ಲಿ ದೊರೆತ ತಲೆಯಾನಿಕೆ, ಒಳಲೆ ಮಾದರಿಯ ದೊಡ್ಡ ಬಟ್ಟಲುಗಳಂತಹ ವಿಶಿಷ್ಟ ಮೃತ್ ಪಾತ್ರೆಗಳ ಅವಶೇಷಗಳು ಕಂಡು ಬಂದಿಲ್ಲ. ಆದ್ದರಿಂದ ಈ ಪ್ರದೇಶದ ನೂತನ ಶಿಲಾ ಸಂಸ್ಕೃತಿಯು ಬಹು-ಮಟ್ಟಿಗೆ ಮೊದಲೆರಡು ಉಪಹಂತಗಳನ್ನು ಹೆಚ್ಚಾಗಿ ಪ್ರತಿನಿಧಿಸಿದ್ದು ಸ್ವಲ್ಪ ಮಟ್ಟಿಗೆ ಪ್ರಾದೇಶಿಕ ವೈಶಿಷ್ಟ್ಯತೆಯಿಂದ ಕೂಡಿದೆ.

**ಆಯ್ದ ಉಪಕರಣಗಳ ವಿವರಣೆ**

**ಕೊಡಲಿ**

೧. ಕೈಮರ:- ಡಾಲರೈಟ್ ಶಿಲೆ. ಉದ್ದ ೧೩೫ ಅಗಲ ೮೫ ದಪ್ಪ ೩೮ ಮಿ.ಮೀ. ಮೊದಲ ಹಂತ. ದಪ್ಪ ಚಕ್ಕೆ ತೆಗೆದ ಉಬ್ಬುಗಳಿವೆ. ಆಯತಾಕಾರ. ಕಂದು ಬಣ್ಣದ ನೈಸರ್ಗಿಕ ಪೊರೆ ಇದೆ.
ಸಾಮ್ಯ:- ಸಂಖ್ಯೆ - ೪೩ ಪ್ಲೇಟ್ - LIV ನಾಗಾರ್ಜುನಕೊಂಡ, ಸುಬ್ರಹ್ಮಣ್ಯಂ ಆರ್:೧೯೭೫)






ಗಾತ್ರ ೧:೦.೩

೨. ಮಿಡಿಗೇಶಿ:- ಡಾಲರೈಟ್ ಶಿಲೆ. ಉದ್ದ ೧೩೦ ಅಗಲ ೨೮ ದಪ್ಪ ೩೫ ಮಿ.ಮೀ. ಎರಡನೇ ಹಂತ. ತ್ರಿಕೋಣಾಕಾರ. ಚಪ್ಪಟೆ ಉಪಕರಣ. ಅಲಗು ಮುರಿದಿದೆ. ಒಂದು ಅಂಚಿನಲ್ಲಿ ಸಣ್ಣ ಸಣ್ಣ ಚಕ್ಕೆ ತೆಗೆಯಲಾಗಿದೆ.

ಸಾಮ್ಯ:- ಸಂಖ್ಯೆ - ೨೩ ಪ್ಲೇಟ್ - LI (ನಾಗಾರ್ಜುನಕೊಂಡ, ಸುಬ್ರಹ್ಮಣ್ಯಂ ಆರ್:೧೯೭೫)

೩. ಯಲಪ್ಪನಾಯಕನಹೊಸಕೋಟೆ:- ಡೈಕ್ ಶಿಲೆ. ಉದ್ದ ೧೧೦ ಅಗಲ ೬೫ ದಪ್ಪ ೨೦ ಮಿ.ಮೀ. ಎರಡನೇ ಹಂತ. ತ್ರಿಕೋಣಾಕಾರ. ಚಪ್ಪಟೆ ಉಪಕರಣ. ಅಲಗು ಅರ್ಧ ಚಂದ್ರಾಕೃತಿಯಲ್ಲಿದೆ. ಮೇಲಿನ ಮೊಂಡು ತುದಿ ಚೂಪಾಗಿದೆ. ಹೊರ ಆವರಣದ ತೊಗಟೆ ಅಲ್ಲಲ್ಲಿ ಇದೆ.

ಸಾಮ್ಯ:- ಸಂಖ್ಯೆ - ೧೦೨, ಪ್ಲೇಟ್ - LXIX ನಾಗಾರ್ಜುನಕೊಂಡ, (ಸುಬ್ರಹ್ಮಣ್ಯಂ ಆರ್:೧೯೭೫)




ಗಾತ್ರ ೧:೦.೩



೪. ಯಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೧೨೦ ಅಗಲ ೬೫ ದಪ್ಪ ೩೦ ಮಿ.ಮೀ. ಮೂರನೇ ಹಂತ. ತ್ರಿಕೋಣಾಕಾರ. ಚಪ್ಪಟೆಯಾಗಿದೆ. ಮೊಂಡು ತುದಿ ಮುರಿದಿದೆ. ಅಲಗು ಭಾಗದಲ್ಲಿ ಸಣ್ಣಸಣ್ಣ ಚಕ್ಕೆ ತೆಗೆದಿದೆ. ಉಜ್ಜಿ ನಯಗೊಳಿಸಿಲ್ಲ.

ಸಾಮ್ಯ:- ಸಂಖ್ಯೆ - ೭ ಪ್ಲೇಟ್ - ೩೫ ತಿ.ನರಸೀಪುರ (ಶೇಷಾದ್ರಿ.ಎಂ:೧೯೭೧;೧೪೨)

೫. ಯಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೧೩೦ ಅಗಲ ೬೫ ದಪ್ಪ ೪೦ ಮಿ.ಮೀ. ಮೂರನೇ ಹಂತ. ತ್ರಿಕೋಣಾಕೃತಿ. ಅಡ್ಡ ವಿನ್ಯಾಸ ಅಂಡಾಕೃತಿ. ಅಲಗು ಮುರಿದಿದೆ. ಮೇಲ್ಮೈ ಉಜ್ಜಲಾಗಿದೆ.

ಸಾಮ್ಯ:- ಸಂಖ್ಯೆ - ೧೬ ಪ್ಲೇಟ್ - CXIII ಬ್ರಹ್ಮಗಿರಿ (ಎ.ಇಂ. - ೪:೧೯೪೮)

೭. ಗುರಮ್ಮನಕಟ್ಟೆ:- ಡಾಲರೈಟ್ ಶಿಲೆ. ಉದ್ದ ೨೮೦ ಅಗಲ ೮೦ ದಪ್ಪ ೫೫ ಗರಿಷ್ಟ ಸುತ್ತಳತೆ ೧೯೦ ಮಿ.ಮೀ. ಮೂರನೇ ಹಂತ. ತ್ರಿಕೋಣಾಕಾರ. ಚೂಪಾದ ನೇರ ಅಲಗಿದೆ. ಮೇಲ್ಮೈಯನ್ನು ಉಜ್ಜಲಾಗಿದೆ. ಅಲಗು ಭಾಗ ಹೊಳಪಾಗಿದೆ. ಅತಿ ದೊಡ್ಡ ಕೊಡಲಿ.

ಸಾಮ್ಯ:- ಸಂಖ್ಯೆ - ೩ ಪ್ಲೇಟ್ - XIII B ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು ; ೧೯೭೪)

೮. ನಿಡುಗಲ್ಲು:- ಡಾಲರೈಟ್ ಶಿಲೆ. ಉದ್ದ ೧೮೦ ಅಗಲ ೬೮ ದಪ್ಪ ೩೮ ಗರಿಷ್ಟ ಸುತ್ತಳತೆ ೧೭೦ ಮಿ.ಮೀ. ಮೂರನೇಹಂತ. ತ್ರಿಕೋಣಾಕಾರ. ಕಂಸಾಕಾರದ ಅಲಗಳನ್ನು. ನಯ ಮಾಡಲಾಗಿದೆ. ಹೊಳಪು ನೀಡಿಲ್ಲ.

ಸಾಮ್ಯ:- ಸಂಖ್ಯೆ -೨ ಪ್ಲೇಟ್ - XIIB ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು ; ೧೯೭೪)

ಸಂಖ್ಯೆ - ೭ ಪ್ಲೇಟ್ - CXIII ಬ್ರಹ್ಮಗಿರಿ (ಎ.ಇಂ. ೪.೧೯೪೮)

೧೨. ಯಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೯೫ ಅಗಲ ೭೦ ದಪ್ಪ ೪೫ ಮಿ.ಮೀ. ತ್ರಿಕೋಣಾಕಾರ ಮೂರನೇ ಹಂತ. ಉಬ್ಬಿದ ಮೈ ಹೊಂದಿದೆ. ಮೇಲ್ತುದಿ ಮೊಂಡಾಗಿದೆ. ಅಲಗು ಒಡೆದಿದೆ. ಉಜ್ಜಲಾಗಿದೆ. ಹೊಳಪು ನೀಡಿಲ್ಲ.

ಸಾಮ್ಯ:- ಸಂಖ್ಯೆ - ೫೨ ಪ್ಲೇಟ್ - XX ಸಂಗನಕಲ್ಲು (ಸುಬ್ಬಾರಾವ್ ಬಿ. ೧೯೪೮.೫೭)

ಸಂಖ್ಯೆ - ೯೪ ಪ್ಲೇಟ್ - LXVIII ನಾಗಾರ್ಜುನಕೊಂಡ, (ಸುಬ್ರಹ್ಮಣ್ಯಂ.ಆರ್:೧೯೭೫)



೪



೫







೭





೮







೧೨

ಗಾತ್ರ ೧:೦.೩







೯. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೧೨೦ ಅಗಲ ೬೦ ದಪ್ಪ ೩೫ ಮಿ.ಮೀ. ನಾಲ್ಕನೇ ಹಂತ. ತ್ರಿಕೋಣಾಕಾರ. ಚಪ್ಪಟೆಯಾಗಿದೆ. ಎರಡೂ ಪಾರ್ಶ್ವಗಳೂ ಒರಟಾಗಿವೆ. ಅಲಗು ನೇರವಾಗಿದೆ. ಉಜ್ಜಿ ಹರಿತಗೊಳಿಸಿ ಹೊಳಪು ನೀಡಿದೆ.
ಸಾಮ್ಯ:- ಸಂಖ್ಯೆ - ೬ ನಕ್ಷೆ - ೨೫ ತೆಕ್ಕಲಕೋಟ (ನಾಗರಾಜರಾವ್ ಮತ್ತು ಮಲ್ಹೋತ್ರ ೧೯೬೫;೬೨)

೧೦. ರಾಚಮಾರನಹಳ್ಳಿ:- ಡೈಕ್ ಶಿಲೆ. ಉದ್ದ ೧೨೫ ಅಗಲ ೫೮ ದಪ್ಪ ೨೫ ಗರಿಷ್ಠ ಸುತ್ತಳತೆ ೧೩೫ ಮಿ.ಮೀ. ನಾಲ್ಕನೇ ಹಂತ. ತ್ರಿಕೋಣಾಕೃತಿ. ಚಪ್ಪಟೆ ಕೊಡಲಿ. ನೇರ ಅಲಗು ಮೊಂಡಾಗಿದೆ. ಅಲ್ಪ ಪ್ರಮಾಣದ ಹೊಳಪಿದೆ.
ಸಾಮ್ಯ:- ಸಂಖ್ಯೆ - ೧೦ ಪ್ಲೇಟ್ - CXIII ಬ್ರಹ್ಮಗಿರಿ (ಎ.ಇಂ. - ೪: ೧೯೪೮)

೧೧. ಯಲ್ಲಪ್ಪನಾಯಕನಯನಾಹಳ್ಳಿ:- ಡಾಲರೈಟ್ ಶಿಲೆ. ಉದ್ದ ೧೦೫ ಅಗಲ ೫೫ ದಪ್ಪ ೨೦ ಗರಿಷ್ಠ ಸುತ್ತಳತೆ ೧೨೫ ಮಿ.ಮೀ. ನಾಲ್ಕನೇ ಹಂತ. ತ್ರಿಕೋಣಾಕೃತಿ. ಚಪ್ಪಟೆ ಉಪಕರಣ. ಮೊಂಡು ಮೇಲ್ತುದಿ. ನೇರ ಹರಿತ ಅಲಗು. ಪೂರ್ಣ ಉಜ್ಜಿ ನಯಗೊಳಿಸಲಾಗಿದೆ.
ಸಾಮ್ಯ:- ಸಂಖ್ಯೆ - ೯೬ ಪ್ಲೇಟ್ - LXVII ನಾಗಾರ್ಜುನಕೊಂಡ, (ಸುಬ್ರಹ್ಮಣ್ಯಂ.ಆರ್:೧೯೭೫)

೧೭. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೧೦೦ ಅಗಲ ೬೦ ದಪ್ಪ ೧೦ ಮಿ.ಮೀ. ನಾಲ್ಕನೇ ಹಂತ. ತ್ರಿಕೋಣಾಕೃತಿ. ಚಕ್ಕೆ ಉಪಕರಣ. ಒಂದು ಮೈ ಉಬ್ಬಿದೆ ಮತ್ತೊಂದು ಮೈ ಚಪ್ಪಟೆ. ಅಲಗನ್ನು ಉಜ್ಜಿ ಹೊಳಪಾಗಿಸಿದೆ. ಹರಿತವಾಗಿದೆ.
ಸಾಮ್ಯ:- ಸಂಖ್ಯೆ -೩ ನಕ್ಷೆ -೩ (ರಾಮಿರೆಡ್ಡಿ.ವಿ:೧೯೭೮)

೧೮. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೮೫ ಅಗಲ ೫೦ ದಪ್ಪ ೩೦ ಮಿ.ಮೀ. ನಾಲ್ಕನೇ ಹಂತ. ಕಿರುಗಾತ್ರದ ಕೊಡಲಿ. ತ್ರಿಕೋಣಾಕಾರ. ಕಂಸಾಕಾರದ ಹರಿತ ಅಲಗಿದೆ. ಉಜ್ಜಿ ಹೊಳಪಾಗಿಸಿದೆ. ಮೊಂಡು ತುದಿ ಮೇಲ್ಮೈಯನ್ನು ಉಜ್ಜಿ ನಯ ಮಾಡಲಾಗಿದೆ.
ಸಾಮ್ಯ:- ಸಂಖ್ಯೆ - ೨೫ ಪ್ಲೇಟ್ - LI ನಾಗಾರ್ಜುನಕೊಂಡ, (ಸುಬ್ರಹ್ಮಣ್ಯಂ.ಆರ್:೧೯೭೫)









**ಬಾಚಿ**

೧೩. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೯೫ ಅಗಲ ೭೦ ದಪ್ಪ ೪೫ ಮಿ.ಮೀ. ಅಂಡಾಕೃತಿಯಲ್ಲಿದೆ. ಎರಡೂ ಮೈಗಳನ್ನು ಉಜ್ಜಿದೆ. ಕೆಳ ಅರ್ಧ ಭಾಗ ಉಜ್ಜಿ ಹೊಳಪು ನೀಡಿದೆ. ಅಲಗು ಸ್ವಲ್ಪ ಬಿದಿಗೆ ಚಂದ್ರಾಕೃತಿಯಲ್ಲಿದೆ. ಮೇಲ್ತುದಿ ಚಪ್ಪಟೆ.
ಸಾಮ್ಯ:- ಸಂಖ್ಯೆ - ೯೪ ಪ್ಲೇಟ್ - LXVIII ನಾಗಾರ್ಜುನಕೊಂಡ, (ಸುಬ್ರಹ್ಮಣ್ಯಂ.ಆರ್:೧೯೭೫)

೧೪. ಮಿಡಿಗೇಶಿ:- ಡಾಲರೈಟ್ ಶಿಲೆ. ಉದ್ದ ೮೨ ಅಗಲ ೬೫ ದಪ್ಪ ೩೫ ಮಿ.ಮೀ. ಮೇಲ್ತುದಿ ಅಗಲವಾಗಿದೆ. ಅಲಗು ಮೊಂಡಾಗಿದೆ. ಉಪಕರಣ ನಯವಾಗಿದೆ. ಎರಡೂ ಮುಖಗಳಲ್ಲಿ ಚಕ್ಕೆಯ ರೇಖೆಗಳಿವೆ.
ಸಾಮ್ಯ:- ಅಪರೂಪದ ಉಪಕರಣ





**ಉಳಿ**

೧೫. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೧೧೫ ಅಗಲ ೬೫ ದಪ್ಪ ೪೦ ಮಿ.ಮೀ. ತ್ರಿಕೋಣಾಕಾರ. ಚಕ್ಕೆ ತೆಗೆದು ಕುಟ್ಟುವ ಹಂತದವರೆಗಿದೆ. ಮೂಲ ತೊಗಟೆ ಕವಚ ಎರಡೂ ಮುಖಗಳಲ್ಲಿ ಇದೆ.
ಸಾಮ್ಯ:- ಸಂಖ್ಯೆ - ೧೯ ನಕ್ಷೆ - ೪ (ರಾಮಿರೆಡ್ಡಿ.ವಿ:೧೯೭೮)
ಸಂಖ್ಯೆ - ೬೫ ಪ್ಲೇಟ್ - LX ನಾಗಾರ್ಜುನಕೊಂಡ, (ಸುಬ್ರಹ್ಮಣ್ಯಂ.ಆರ್:೧೯೭೫)

೧೬.ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೯೨ ಅಗಲ ೪೦ ದಪ್ಪ ೩೫ ಮಿ.ಮೀ. ತ್ರಿಕೋಣಾಕಾರ. ಎರಡೂ ಮುಖಗಳಲ್ಲಿ ಹೊರ ತೊಗಟೆ ಕವಚವಿದೆ. ಮೇಲ್ತುದಿ ಅಗಲವಿದೆ.

ಸಾಮ್ಯ:- ಸಂಖ್ಯೆ - ೧೭ ಪ್ಲೇಟ್ - XXIII ಸಂಗನಕಲ್ಲು (ಸುಬ್ಬಾರಾವ್.ಬಿ: ೧೯೪೮)




ಗಾತ್ರ ೧:೦.೩




**ಕೊಡಲಿ ಸುತ್ತಿಗೆ**

೧೯. ಮಿಡಿಗೇಶಿ:- ಡಾಲರೈಟ್ ಶಿಲೆ. ಉದ್ದ ೧೩೦ ಅಗಲ ೯೦ ದಪ್ಪ ೪೫ ಮಿ.ಮೀ. ಚಕ್ಕೆ ತೆಗೆದು ಕುಟ್ಟಿದ ಹಂತ. ದವರೆಗಿದೆ. ಎರಡೂ ಮುಖಗಳಲ್ಲಿ ಆವರಣ ತೊಗಟೆ ಇದೆ. ಮೇಲ್ತುದಿ ಅಲಗು ಭಾಗಗಳು ಸಮತಟ್ಟಾಗಿವೆ. ಕೊಡಲಿ ಹಾಳಾಗಿರುವುದರಿಂದ ಸುತ್ತಿಗೆಯಾಗಿ ಮಾಡಲಾಗಿದೆ.

ಸಾಮ್ಯ:- ಸಂಖ್ಯೆ - ೧೬ ನಕ್ಷೆ (ರಾಮಿರೆಡ್ಡಿ.ವಿ: ೧೯೭೮)

೨೦. ಯಲ್ಲಪ್ಪನಾಯಕನಹೊಸಕೋಟೆ:- ಡೈಕ್ ಶಿಲೆ. ಉದ್ದ ೧೨೦ ಅಗಲ ೮೫ ದಪ್ಪ ೫೦ ಮಿ.ಮೀ. ಮೇಲ್ತುದಿ ಚೂಪಾಗಿದೆ. ಕುಟ್ಟಿ ನಯಗೊಳಿಸುವ ಹಂತ. ದವರೆಗಿದೆ. ಅಲಗು ಭಾಗ ಸಮತಟ್ಟಾಗಿದೆ.

ಸಾಮ್ಯ:- ಸಂಖ್ಯೆ - ೭೫ ಪ್ಲೇಟ್ - LX ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್: ೧೯೭೫)

೨೧. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೯೫ ಅಗಲ ೯೦ ದಪ್ಪ ೫೫ ಮಿ.ಮೀ. ಕೊಡಲಿ ಮುರಿದಿರುವುದರಿಂದ ಸುತ್ತಿಗೆಯಾಗಿ ಪರಿವರ್ತಿಸಿದೆ. ಕುಟ್ಟಿ ನಯಗೊಳಿಸಲಾಗಿದೆ. ಹಿಮ್ಮುಖದಲ್ಲಿ ಹೊರ ಆವರಣ ತೊಗಟೆ ಇದೆ.

ಸಾಮ್ಯ:- ಸಂಖ್ಯೆ - ೭೭ ಪ್ಲೇಟ್ - LXI ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)






೨೧

ಗಾತ್ರ ೧:೦.೩




**ಸುತ್ತಿಗೆ**

೨೨. ಯಲ್ಲಪ್ಪನಾಯಕನಹೊಸಕೋಟೆ:- ಡೈಕ್ ಶಿಲೆ. ಉದ್ದ ೧೧೦ ಅಗಲ ೭೦ ದಪ್ಪ ೪೫ ಮಿ.ಮೀ. ಹಿಮ್ಮುಖ ಮತ್ತು ಎಡಪಾರ್ಶ್ವ ಸಮತಟ್ಟಾಗಿದೆ. ಮುಮ್ಮುಖ ಹಾಗೂ ಬಲಪಾರ್ಶ್ವ ದೀರ್ಘ ವೃತ್ತಾಕಾರವಾಗಿದೆ. ಮೇಲ್ತುದಿ ಮತ್ತು ಅಲಗು ಸಮತಟ್ಟಾಗಿದೆ.
ಸಾಮ್ಯ:- ಸಂಖ್ಯೆ - ೨೩ ಪ್ಲೇಟ್ - ೩೦ಎ ತಿ. ನರಸೀಪುರ (ಶೇಷಾದ್ರಿ.ಎಂ:೧೯೭೧)

೨೪. ಯಲ್ಲಪ್ಪನಾಯಕನಹೊಸಕೋಟೆ:- ಒರಟು ಬಳಪದ ಕಲ್ಲು. ಉಳಿದಿರುವ ಭಾಗದ ಉದ್ದ ೯೮ ಅಗಲ ೫೫ ದಪ್ಪ ೩೫ ಮಿ.ಮೀ. ಆಯತಾಕಾರದಲ್ಲಿದೆ. ಮೇಲ್ತುದಿ ಮತ್ತು ಕೆಳತುದಿ ಒಡೆದಿದೆ.
ಸಾಮ್ಯ:- ಸಂಖ್ಯೆ - ೧೧ ಪ್ಲೇಟ್ - CXVI ಬ್ರಹ್ಮಗಿರಿ (ಎ.ಇಂ-೪:೧೯೪೮)

೨೫ ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉಳಿದಿರುವ ಭಾಗದ ಉದ್ದ - ೫೮ ಅಗಲ ೫೫ ದಪ್ಪ ೫೦ ಮಿ.ಮೀ. ತ್ರಿಕೋಣಾಕಾರ . ಉಜ್ಜಿ ನಯಗೊಳಿಸಿದ ಹಂತದಲ್ಲಿದೆ.
ಸಾಮ್ಯ:- ಅಪರೂಪದ ಉಪಕರಣ





೨೨





೨೫





೨೪




ಗಾತ್ರ ೧:೦.೩

**ಕೆತ್ತುಳಿ**

೨೩. ಮಿಡಿಗೇಶಿ:- ಡೈಕ್ ಶಿಲೆ. ಉದ್ದ ೧೧೫ ಅಗಲ ೯೫ ದಪ್ಪ ೭೦ ಮಿ.ಮೀ. ಚಕ್ಕೆ ತೆಗೆದು ಕುಟ್ಟಿದ ಉಪಕರಣ. ಮೇಲ್ತುದಿಯಲ್ಲಿ ಅಸಮತಲ ಮೊನಚಿದೆ. ಹಿಮ್ಮುಖದಲ್ಲಿ ಹೊರ ಆವರಣದ ತೊಗಟೆ ಇದೆ. ಎರಡೂ ಪಾರ್ಶ್ವ ಅಗಲವಾಗಿದೆ.
ಸಾಮ್ಯ:- ಸಂಖ್ಯೆ -೩ ಪ್ಲೇಟ್ - VIIIB ಹಳ್ಳೂರು (ನಾಗರಾಜರಾವ್:೧೯೭೧)

೨೬. ನಿಡುಗಲ್ಲು:- ಡಾಲರೈಟ್ ಶಿಲೆ. ಉದ್ದ ೧೦೦ ವ್ಯಾಸ ೫೦ ಮಿ.ಮೀ. ಮೇಲ್ಮೈನಲ್ಲಿ ಕುಟ್ಟಿರುವ ಹಂತದವರೆಗಿದೆ. ಕೊಡಲಿಯನ್ನು ಕೆತ್ತುಳಿಯಾಗಿ ಮಾರ್ಪಡಿಸಿದೆ. ಅಂಡಾಕಾರದ ಅಡ್ಡ ವಿನ್ಯಾಸವಿದೆ.
ಸಾಮ್ಯ:- ಸಂಖ್ಯೆ - ೬ಎ ಪ್ಲೇಟ್ - XXIII ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮)

೨೭. ಯಲ್ಲಪ್ಪನಾಯಕನಹೊಸಕೋಟೆ:- ಡಾಲರೈಟ್ ಶಿಲೆ. ಉದ್ದ ೭೫ ಅಗಲ ೪೫ ದಪ್ಪ ೩೦ ಮಿ.ಮೀ. ತ್ರಿಭುಜದ ಮೂರೂ ಮುಖ ೪೫x೩೦x೩೫ ಮಿ.ಮೀ. ತ್ರಿಭುಜಾಕಾರ. ಅಡ್ಡ ವಿನ್ಯಾಸದಲ್ಲಿಯೂ ತ್ರಿಭುಜಾಕಾರವಿದೆ. ತ್ರಿಭುಜಾಕಾರದ ಎರಡೂ ಪಾರ್ಶ್ವದ ಹೊರಮೈಯಲ್ಲಿ ತೊಗಟೆ ಇದೆ. ಉಳಿದ ಭಾಗದಲ್ಲಿ ಕಿರುಚಕ್ಕೆ ತೆಗೆದಿದೆ. ಹಿಮ್ಮುಖ ಬಹುತೇಕ ಸಮತಟ್ಟಾಗಿದೆ.
ಸಾಮ್ಯ:- ಸಂಖ್ಯೆ - ೭ ಪ್ಲೇಟ್ - viii ಹಳ್ಳೂರು (ನಾಗರಾಜರಾವ್:೧೯೭೧)








ಗಾತ್ರ ೧:೦.೩

**ಉಜ್ಜುಗ ಅಥವಾ ಅರೆಯುವ ಕಲ್ಲು**

೨೮. ಮಿಡಿಗೇಶಿ:- ಒರಟು ಕಣಶಿಲೆ. ಉಳಿದ ಭಾಗದ ಉದ್ದ ೮೦ ಅಗಲ ೬೦ ದಪ್ಪ ೨೫ ಮಿ.ಮೀ. ಅಂಡಾಕಾರ. ಅರ್ಧಕ್ಕಿಂತ ಹೆಚ್ಚು ಮುರಿದಿದೆ. ಎರಡೂ ಪಾರ್ಶ್ವಗಳನ್ನೂ ಉಜ್ಜಿ ನಯಗೊಳಿಸಲಾಗಿದೆ.
ಸಾಮ್ಯ:- ಸಂಖ್ಯೆ - ೪ ಪ್ಲೇಟ್ - IX ಹಳ್ಳೂರು (ನಾಗರಾಜರಾವ್:೧೯೭೧)
ಸಂಖ್ಯೆ - ೮ ಪ್ಲೇಟ್ - CXVIಬ್ರಹ್ಮಗಿರಿ (ಎ.ಇಂ-೪:೧೯೪೮)

೨೯. ಯಲ್ಲಪ್ಪನಾಯಕನಹೊಸಕೋಟೆ:- ಡೈಕ್ ಶಿಲೆ ಉದ್ದ ೫೦ ಅಗಲ ೬೦ ದಪ್ಪ ೩೦ ಮಿ.ಮೀ. ಅಸಮ ಆಯತಾಕಾರ. ಕೊಡಲಿಯನ್ನು ಅರೆಯುವ ಕಲ್ಲಾಗಿ ರೂಪಿಸಿದೆ. ಚಕ್ಕೆಗಳನ್ನು ಕುಟ್ಟಿ ನಯಗೊಳಿಸಿದೆ. ಮುಮ್ಮುಖ ನಯವಾಗಿದೆ. ಪಾರ್ಶ್ವಗಳಲ್ಲಿ ಮೈಮೇಲೆ ತೊಗಟೆ ಇದೆ.
ಸಾಮ್ಯ:- ಸಂಖ್ಯೆ - ೯ ಪ್ಲೇಟ್ - XIII ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು;೧೯೭೪)

೩೦. ಯಲ್ಲಪ್ಪನಾಯಕನಹಳ್ಳಿ:- ಕಣ ಶಿಲೆ. ವ್ಯಾಸ ೮೦ ದಪ್ಪ ೫೫ ಮಿ.ಮೀ. ಅಂಡಾಕಾರ. ಅರ್ಧಕ್ಕಿಂತ ಹೆಚ್ಚು ಭಾಗ ಉಳಿದಿದೆ. ಎಲ್ಲಾ ಮೇಲ್ಮೈ ನಯವಾಗಿದೆ.
ಸಾಮ್ಯ:- ಸಂಖ್ಯೆ - ೯ ಪ್ಲೇಟ್ - CXVI ಬ್ರಹ್ಮಗಿರಿ ( ಎ.ಇಂ. - ೪: ೧೯೪೮)
(ರೇಖಾ ನಕ್ಷೆ ಮತ್ತು ಛಾಯಾ ಚಿತ್ರದ ವಿವರಣೆ ನೀಡಿಲ್ಲ)







ಗಾತ್ರ ೧:೦.೩

**ಕವಡೆ ಕಲ್ಲು**

೩೧. ಯಲ್ಲಪ್ಪನಾಯಕನಹೊಸಕೋಟೆ:- ಬಳಪದ ಕಲ್ಲು (ಕೆನೆಹಳದಿ ಬಣ್ಣದಲ್ಲಿದೆ) ಉಳಿದಿರುವ ಭಾಗದ ಗರಿಷ್ಠ ವ್ಯಾಸ ೬೦ ಮಿ.ಮೀ. ಅರ್ಧಕ್ಕಿಂತ ಹೆಚ್ಚು ಭಾಗ ಉಳಿದಿದೆ. ಗೋಲಾಕಾರ. ಗಟ್ಟಿಯಾದ ಬೂದಿ ಅಂಶ ಅಲ್ಲಲ್ಲಿ ಇದೆ.

ಸಾಮ್ಯ:- ಸಂಖ್ಯೆ - ೧ ಪ್ಲೇಟ್ - CXVI ಬ್ರಹ್ಮಗಿರಿ (ಎ.ಇಂ.-೪:೧೯೪೮)

ಸಂಖ್ಯೆ - ೧೧ ಪ್ಲೇಟ್ - XIII ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪)

೩೨. ಯಲ್ಲಪ್ಪನಾಯಕನಹೊಸಕೋಟೆ:- ಡೈಕ್ ಶಿಲೆ. ವ್ಯಾಸ ೬೦ ದಪ್ಪ ೨೫ ಮಿ.ಮೀ. ವೃತ್ತಾಕಾರ. ಕಚ್ಚುಗಳಲ್ಲಿ ಕ್ವಾರ್ಟ್ಜೈಟ್ ಕಣಗಳಿವೆ. ಹೊರ ತೊಗಟೆ ಅಲ್ಲಲ್ಲಿ ಇದೆ. ಉಂಡೆಗಲ್ಲಿನಲ್ಲಿದೆ.

ಸಾಮ್ಯ:- ಸಂಖ್ಯೆ - ೫೮ ನಕ್ಷೆ ೬ (ರಾಮಿರೆಡ್ಡಿ.ವಿ:೧೯೭೮)

ಸಂಖ್ಯೆ - ೬ ಪ್ಲೇಟ್ - CXVI ಬ್ರಹ್ಮಗಿರಿ (ಎ.ಇಂ.-೪:೧೯೪೮)

೩೩. ಯಲ್ಲಪ್ಪನಾಯಕನಹೊಸಕೋಟೆ:- ಡೈಕ್‌ಶಿಲೆ. ಗರಿಷ್ಟ ವ್ಯಾಸ ೫೫ ದಪ್ಪ ೪೪ ಮಿ.ಮೀ. ಅಂಡಾಕಾರ. ಅಲ್ಪ ಪ್ರಮಾಣದಲ್ಲಿ ಕುಟ್ಟಿ ನಂತರ ಉಜ್ಜಲಾಗಿದೆ.

ಸಾಮ್ಯ:- ಸಂಖ್ಯೆ - ೪ ಪ್ಲೇಟ್ - CXVI ಬ್ರಹ್ಮಗಿರಿ (ಎ.ಇಂ-೪:೧೯೪೮)

ಸಂಖ್ಯೆ - ೫೧ ನಕ್ಷೆ - ೬ (ರಾಮಿರೆಡ್ಡಿ.ವಿ : ೧೯೭೮)










ಗಾತ್ರ ೧:೦.೩



**ಉಂಗುರ ಕಲ್ಲು**

೩೪. ಸಂಪಿಗೆ:- ಬಳಪದ ಕಲ್ಲು. ವ್ಯಾಸ ಸು. ೧೨೫ ಮಿ.ಮೀ. ರಂಧ್ರದ ಒಳ ವ್ಯಾಸ ೧೫ ಮಿ.ಮೀ. ಅರ್ಧಕ್ಕಿಂತ ಹೆಚ್ಚು ಭಾಗ ಮಧ್ಯ ರಂಧ್ರವನ್ನೊಳಗೊಂಡು ಉಳಿದಿದೆ. ಅಂಡಾಕಾರದ ಅಡ್ಡ ವಿನ್ಯಾಸವನ್ನು ಹೊಂದಿದೆ. ಕಲ್ಲಿನ ಸ್ವಭಾವದಿಂದಾಗಿ ಹಾಳಾಗಿದೆ.
ಸಾಮ್ಯ:- ಸಂಖ್ಯೆ - ೮ ಪ್ಲೇಟ್ - XII ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮)

೩೫. ಮರಿದಾಸನಹಳ್ಳಿ:- ಒರಟು ಬಳಪದ ಕಲ್ಲು. ಪೂರ್ಣ ವ್ಯಾಸ ಸು. ೬೦ ಮಿ.ಮೀ. ಮಧ್ಯ ರಂಧ್ರದ ವ್ಯಾಸ ೪೦ ಮಿಮೀ.ಅರ್ಧ ಭಾಗ ಉಳಿದಿದೆ. ಎರಡೂ ಮುಖಗಳಲ್ಲಿ ಮಧ್ಯ ರಂಧ್ರದ ವ್ಯಾಸ ಹೆಚ್ಚಾಗಿದೆ. ಒಳ ಭಾಗದಲ್ಲಿ ಕಡಿಮೆ ಇದೆ. ಅಡ್ಡ ವಿನ್ಯಾಸ ವೃತ್ತಾಕಾರದಲ್ಲಿದೆ.
ಸಾಮ್ಯ:- ಸಂಖ್ಯೆ - ೭೨ ನಕ್ಷೆ- ೭ (ರಾಮಿರೆಡ್ಡಿ.ವಿ:೧೯೭೮)



೩೪


೩೫

ಗಾತ್ರ ೧:೦.೩



## ನೂತನ ಶಿಲಾಯುಗೀನ ಸೂಕ್ಷ್ಮ ಶಿಲೋಪಕರಣಗಳು

ಅಂತ್ಯಹಳೆ ಶಿಲಾಯುಗ ಮತ್ತು ನೂತನ ಶಿಲಾಯುಗಗಳ ಮಧ್ಯಂತರ ಕಾಲದಲ್ಲಿ ವಿವಿಧ ರೀತಿಯ ಶಿಲಾ ಮಾದರಿಗಳಲ್ಲಿ ಮುಂದುವರಿದ ವಿವಿಧ ತಂತ್ರಜ್ಞಾನಗಳನ್ನು ಉಪಯೋಗಿಸಿ ರೂಪಿಸಿದ ಕಿರುಗಾತ್ರದ ಉಪಕರಣಗಳ ವಿಶಿಷ್ಟ ಲಕ್ಷಣವಾದ ಸೂಕ್ಷ್ಮ ಶಿಲಾಯುಗವನ್ನು ಪ್ರತಿನಿಧಿಸುವ ಕೆಲವು ನೆಲೆಗಳನ್ನು ಈಗಾಗಲೇ ವಿಶದವಾಗಿ ಚರ್ಚಿಸಿದೆ. ಇದೇ ಸೂಕ್ಷ್ಮ ಶಿಲಾಯುಗದ ಪರಿಷ್ಕೃತ ಹಾಗೂ ಮತ್ತಷ್ಟು ಸೂಕ್ಷ್ಮ ರೀತಿಯ ಉಪಕರಣಗಳು ನೂತನ ಶಿಲಾಯುಗದಲ್ಲಿಯೂ ಕಂಡು ಬರುತ್ತವೆ.

೩೧ ನೂತನ ಶಿಲಾಯುಗದ ನೆಲೆಗಳ ಪೈಕಿ ೧೭ ನೆಲೆಗಳಲ್ಲಿ ಸೂಕ್ಷ್ಮ ಶಿಲೋಪಕರಣಗಳು ದೊರೆತಿವೆ. ಇವು ಕೆಲವೇ ಮುಖ್ಯ ಕೇಂದ್ರಗಳಲ್ಲಿ ಇವುಗಳ ಹೆಚ್ಚಳ ಮತ್ತು ಇನ್ನಿತರ ಪರಿಧಿ ನೆಲೆಗಳಲ್ಲಿ ಇವುಗಳ ಒಟ್ಟಾರೆ ಅಭಾವವನ್ನು ಕುರಿತು ಹೆಚ್ಚಿನ ಪರಿಶೋಧನೆ ಹಾಗೂ ಚರ್ಚೆ ಅವಶ್ಯಕವೆನಿಸುತ್ತದೆ. ನೂತನ ಶಿಲಾಯುಗದ ನೆಲೆಗಳ ಸ್ವಾಭಾವಿಕ ಪರಿಸರ ಬೆಟ್ಟದ ತಪ್ಪಲುಗಳಲ್ಲಿದ್ದು ಮಳೆಗಾಲದಲ್ಲಿ ಬೆಟ್ಟದ ಮೇಲಿಂದ ರಭಸವಾಗಿ ಹರಿವ ನೀರು ಬಹುಶಃ ಸಿದ್ಧಪಡಿಸಿದ ಸೂಕ್ಷ್ಮ ಉಪಕರಣ-ಗಳು ಕೊಚ್ಚಿಕೊಂಡು ಹೋಗಿರುವ ಸಂಭವ ಹೆಚ್ಚು. ಹಾಗಿದ್ದರೂ ಕೆಲವೆಡೆ ಮೂಲಶಿಲಾಗಟ್ಟಿ ಮತ್ತಿತರ ತುಲನಾತ್ಮಕವಾಗಿ ಸ್ಥೂಲ ರೀತಿಯ ಉಪಕರಣಗಳು ಲಭಿಸುತ್ತವೆ. ಇನ್ನೊಂದು ದೃಷ್ಟಿಯಿಂದ ಸೂಕ್ಷ್ಮ ಶಿಲೋಪಕರಣಗಳನ್ನು ತಯಾರಿಸಲು ಅತ್ಯಂತ ಅವಶ್ಯವಾದ ಕೆಲವು ವಿಶಿಷ್ಟ ಜಾತಿಯ ಶಿಲೆಗಳು ಪ್ರತಿಯೊಂದು ನೆಲೆಯ ಪರಿಸರದಲ್ಲಿಯೂ ದೊರಕುವುದಿಲ್ಲ. ಹಾಗಾಗಿ ಹಲವಾರು ಪರಿಧಿ ನೆಲೆಗಳ ಕೇಂದ್ರ ಪ್ರದೇಶದಲ್ಲಿ ಇರಬಹುದಾದ ಮತ್ತು ಅವಶ್ಯಕ ಶಿಲಾ ಮಾದರಿಗಳು ದೊರೆ-ಯುವ ನೆಲಗಳಲ್ಲಿ ಮಾತ್ರ ಇಂತಹ ಉಪಕರಣಗಳನ್ನು ಉತ್ಪಾಧಿಸಿ ಸಿದ್ಧಉಪಕರಣಗಳನ್ನು ಮಾತ್ರ ಪರಿಧಿ ನೆಲೆಗಳಿಗೆ ಕೊಂಡೊಯ್ದು ಉಪಯೋಗಿಸಿರುವ ಸಾಧ್ಯತೆಯೂ ಇದೆ.

ಈ ಹಿನ್ನೆಲೆಯಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವೆನ್ನಬಹುದಾದ ಸೂಕ್ಷ್ಮ ಶಿಲಾಯುಧಗಳನ್ನು ಪರಿಶೀಲಿಸೋಣ.

## ಶಿಲಾ ಮಾಧ್ಯಮ ಮತ್ತು ತಾಂತ್ರಿಕತೆ

ಸೂಕ್ಷ್ಮ ಶಿಲೋಪಕರಣಗಳ ಉತ್ಪಾಧನೆ ವಿಶೇಷವಾಗಿ ಸೂಕ್ತವೆನಿಸಿದ ಚರ್ಟ್, ಜಾಸ್ಪರ್, ಬೆಣಚುಕಲ್ಲು,ಪಾರ-ದರ್ಶಕ ಕಲ್ಲು, ಸ್ಪಟಿಕ ಶಿಲೆ, ಪ್ರಶಸ್ತ ಶಿಲೆ, ಹರಳುಯುಕ್ತ ಸ್ಪಟಿಕ ಶಿಲೆ, ಹಾಲುಗಲ್ಲು ಮುಂತಾದ ಅರೆ ಪ್ರಶಸ್ತ ಶಿಲೆಗಳು ಹೆಚ್ಚಾಗಿ

ಬಳಕೆಯಾಗಿವೆ. ಇಂತಹ ಅರೆ ಪ್ರಶಸ್ತ ಶಿಲೆಗಳಲ್ಲಿ ರೂಪಿಸಿದ ಉಪಕರಣಗಳು ಶೇ.೮೦ ರಿಂದ ೮೫ ರವರೆಗೆ ಇದ್ದರೆ ಇನ್ನಿತರ ಸಾಂದ್ರವಲ್ಲದ ಒರಟು ಕಣಗಳಿಂದ ಕೂಡಿದ ಶಿಲಾ ಮಾಧ್ಯಮಗಳಲ್ಲಿ ರೂಪಿಸಿದ ಉಪಕರಣಗಳು ಶೇ. ೫ ರಿಂದ ೧೦ ರವ-ರೆಗೆ ಇರುತ್ತವೆ. ನೀಳಚಕ್ಕೆಯನ್ನು ಹೋಲುವ ಚಕ್ಕೆಗಳು ಮತ್ತು ಹೆರೆಚಕ್ಕೆಯ ಗುಂಪಿನ ಉಪಕರಣಗಳನ್ನು ಮೂಲಗಟ್ಟಿ ಶಿಲೆಗ-ಳಿಂದ ಸಾಧಾರಣವಾಗಿ ಅಸಮಾಕಾರದ ತೆಳುಚಕ್ಕೆಗಳಿಂದ ರೂಪಿಸಲಾಗುತ್ತದೆ. ಕೆಲವೊಮ್ಮೆ ಸವೆದ ಅಲಗುಗಳನ್ನು ಎರಡನೆ-ಸಲ ಸೂಕ್ಷ್ಮ ಕಿರುಚಕ್ಕೆಗಳನ್ನೆಬ್ಬಿಸಿ, ಹರಿತಗೊಳಿಸಿ ಪುನಃ ಉಪಯೋಗಿಸಿರುವುದು ಕಂಡುಬರುತ್ತದೆ. ಕೆಲವು ಸಂದರ್ಭಗಳಲ್ಲಿ ಸೂಕ್ತ ಶಿಲಾ ಮಾಧ್ಯಮದ ಅಭಾವದಿಂದಾಗಿ ಅತಿ ಸೂಕ್ಷ್ಮ ರೀತಿಯ ಚಕ್ಕೆ ಎಬ್ಬಿಸಿರುವ ಗುರುತುಗಳನ್ನೂ ಕಾಣಬಹುದು. ಪರಿಧಿ ನೆಲೆಗಳಲ್ಲಿಯೇ ಉತ್ಪಾದಿಸಿಕೊಂಡ ಕಡಿಮೆ ದರ್ಜೆಯ ಉಪಕರಣಗಳಲ್ಲಿ ಇಂತಹ ಸೂಕ್ಷ್ಮ ತಂತ್ರವು ಕಂಡುಬರದು. ಸಹಜವಾಗಿ ಈ ಪ್ರದೇಶದ ಹೆಚ್ಚಿನ ನೆಲೆಗಳಲ್ಲಿ ಒರಟಾಗಿ ರೂಪಿಸಿದ ಉಪಕರಣಗಳೇ ಕಂಡು ಬರುತ್ತವೆ.

### ಉಪಕರಣ ವೈವಿಧ್ಯ ಮತ್ತು ವಿಶ್ಲೇಷಣೆ

ಒಟ್ಟು ೧೭ ನೆಲೆಗಳಲ್ಲಿ ದೊರಕಿರುವ ಉಪಕರಣಗಳಲ್ಲಿ ಸಿದ್ಧಪಡಿಸಿದ ಉಪಕರಣಗಳು ತ್ಯಾಜ್ಯ ಚಕ್ಕೆಗಳು ಮತ್ತು ಮೂಲ ಶಿಲಾಗಟ್ಟಿಗಳನ್ನು ಹೆಚ್ಚಿನ ಸಂಖ್ಯೆಗಳಲ್ಲಿ ಸಂಗ್ರಹಿಸಿದೆ. ಸಿದ್ಧಪಡಿಸಿದ ಉಪಕರಣ ಸಮೂಹದಲ್ಲಿ ನೀಳಚಕ್ಕೆಯ-ಗುಂಪು, ಹೆರೆಚಕ್ಕೆ ಗುಂಪು, ಮೊನೆಗಳು, ಕೊರೆಯುವ ಉಪಕರಣ ಮತ್ತು ಅರ್ಧ ಚಂದ್ರಾಕೃತಿಗಳಿವೆ.
ಒಟ್ಟು ಉಪಕರಣಗಳು, ದೊರೆತಿರುವ ನೆಲೆ ಉಪಕರಣಗಳ ಸಂಖ್ಯೆ ಮತ್ತು ಪ್ರತಿ ಗುಂಪಿನಲ್ಲಿ ಅವುಗಳ ಶೇಕಡಾವಾರು ಪ್ರಮಾಣ ಈ ವಿವರಣೆಗಳನ್ನು ಕೋಷ್ಟಕ ಸಂಖ್ಯೆ ೮.೮ ರಲ್ಲಿ ವೃತ್ತ ನಕ್ಷೆ ಸಂಖ್ಯೆ ೮.೩ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೮

| ಕ್ರಮ ಸಂಖ್ಯೆ | ನೆಲೆ | ನೀಳಚಕ್ಕೆ ಮಾದರಿ | | | | ಮೊನೆ ಮಾದರಿ | | | ಹೆರೆಚಕ್ಕೆ ಮಾದರಿ | | | | ಕೊರೆಗ | ಅರ್ಧ ಚಂದ್ರಾಕೃತಿ | ಮೂಲಶಿಲಾಗಟ್ಟಿ | ಒಟ್ಟು | % |
|---|---|---|---|---|---|---|---|---|---|---|---|---|---|---|---|---|---|
| | | [illegible] | [illegible] ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ | [illegible] ನೀಳಚಕ್ಕೆ | [illegible] ನೀಳಚಕ್ಕೆ | [illegible] ಮೊನೆ | [illegible] ಮೊನೆ | [illegible] ಮೊನೆ | [illegible] | [illegible] | [illegible] | ಮೂಲಗಟ್ಟಿ [illegible] | | | | | |
| ೧ | [illegible] | ೩ | ೧ | ೬ | ೧೨ | ೧೦ | ೩ | ೧ | ೪ | ೧ | ೧ | ೪ | ೪ | ೧ | ೫ | ೫೭ | ೧೭.೮೧ |
| ೨ | ಕೈಮರ | ೧೪ | ೮ | ೧೫ | ೧೭ | ೮ | ೮ | | ೪ | ೧ | ೧ | ೮ | ೪ | ೫ | ೪ | ೯೭ | ೩೦.೩೧ |
| ೩ | ಕಲ್ಲಿನಹಳ್ಳಿ (ಮ) | ೨ | | ೩ | ೧ | ೨ | ೨ | ೨ | | | | ೨ | ೧ | ೩ | | ೧೮ | ೫.೬೨ |
| ೪ | ಗಂಗಮ್ಮನಹಳ್ಳಿ | ೨ | | ೩ | ೧ | | ೧ | | ೧ | | | ೩ | | ೪ | | ೧೫ | ೪.೬೯ |
| ೫ | ಗೊಲ್ಲರಹಟ್ಟಿ | | | | | | ೧ | | | | | ೧ | | | ೧ | ೩ | ೦.೯೩ |
| ೬ | ಬೂದಿಗುಡ್ಡ | | | | | | | | | | | | | | ೧ | ೧ | ೦.೩೧ |
| ೭ | [illegible] | | ೧ | ೧ | | ೨ | | ೧ | ೩ | ೧ | | ೬ | | | ೧ | ೧೬ | ೫.೦೦ |
| ೮ | ಮದಗಿರಿ | ೪ | ೨ | ೧ | ೧ | ೧ | ೪ | ೧ | | | ೧ | ೩ | | ೨ | ೧ | ೨೧ | ೬.೫೬ |
| ೯ | [illegible] | | | | | | | | | | | ೨ | ೧ | | ೧ | ೪ | ೧.೨೫ |
| ೧೦ | ಹಿರೇಹಳ್ಳಿ | ೧ | | ೧ | | ೨ | | | | | | ೩ | | | ೧ | ೮ | ೨.೫ |
| ೧೧ | ಸಿದ್ದಾಪುರ | ೪ | ೩ | ೪ | | ೨ | ೩ | | | | | ೩ | ೨ | ೪ | | ೨೫ | ೭.೮೧ |
| ೧೨ | [illegible] | ೩ | ೩ | ೩ | | ೧ | ೩ | | ೩ | | ೧ | ೪ | ೨ | ೨ | ೪ | ೨೯ | ೯.೦೬ |
| ನೂತನ ಶಿಲಾ ಉಪಕರಣ, ಮಡಿಕೆ ಮತ್ತು ಇತರೆ ಅವಶೇಷಗಳ ಜೊತೆಗೆ ದೊರೆತ ನೂತನ ಸೂಕ್ಷ್ಮ ಶಿಲಾಯುಧಗಳು | | | | | | | | | | | | | | | | | |
| ೧ | [illegible] | | | ೨ | | | ೧ | | ೧ | ೧ | | ೨ | | | ೨ | ೯ | ೨.೮೧ |
| ೨ | [illegible] | | ೧ | ೧ | | | | | ೧ | | | | | | | ೩ | ೦.೯೩ |
| ೩ | [illegible] | | | | | ೨ | ೨ | | ೧ | | | ೨ | ೨ | ೧ | ೧ | ೧೧ | ೩.೪೩ |
| ೪ | [illegible] | | | ೧ | | | | | | | | | | | | ೧ | ೦.೩೧ |
| ೫ | [illegible] | | | ೧ | | | | | | | | ೧ | | | ೧ | ೩ | ೦.೯೩ |
| | ಒಟ್ಟು | ೩೩ | ೧೯ | ೪೨ | ೩೦ | ೩೦ | ೨೮ | ೫ | ೧೮ | ೪ | ೪ | ೪೪ | ೧೬ | ೨೧ | ೨೩ | ೩೨೦ | |
| | % | ೧೦.೩೧ | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | [illegible] | |

ವೃತ್ತ ನಕ್ಷೆ ಸಂಖ್ಯೆ ೮.೩




**ನೂತನ ಶಿಲಾಯುಗೀನ ಸೂಕ್ಷ್ಮ ಶಿಲಾ ಉಪಕರಣಗಳು ನೀಳಚಕ್ಕೆ ಮಾದರಿ**

ನೂತನ ಶಿಲಾಯುಗ ಸಂದರ್ಭದ ಸೂಕ್ಷ್ಮ ಶಿಲೋಪಕರಣಗಳಲ್ಲಿ ಅತಿ ಹೆಚ್ಚು ಶೇಕಡಾವಾರು (ಶೇ. ೩೯.೩೭) ಪ್ರಮಾಣದಲ್ಲಿ ದೊರೆತಿರುವ ಉಪಕರಣಗಳು ನೀಳಚಕ್ಕೆ ಗುಂಪಿನವು. ಪ್ರಸ್ತುತ ಉಪಕರಣ ಸಮೂಹದಲ್ಲಿ ೧೨೬ ನೀಳಚಕ್ಕೆಗಳಿದ್ದು ಅಧ್ಯಯನಾನುಕೂಲಕ್ಕೆಂದು ರೂಪಣಾ ವಿಧಾನ ಮತ್ತು ಗಾತ್ರಗಳನ್ನಾಧರಿಸಿ ನಾಲ್ಕು ಉಪ ಗುಂಪುಗಳನ್ನಾಗಿಸಿದೆ. ಅವುಗಳೆಂದರೆ

೧. ನೀಳಚಕ್ಕೆಯಂತಹ ಚಕ್ಕೆ
೨. ದ್ವಿತೀಯ ಶ್ರೇಣಿಯ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ
೩. ಇಬ್ಬದಿ ನೀಳಚಕ್ಕೆ
೪. ಕಿರು ನೀಳಚಕ್ಕೆ

ನೀಳಚಕ್ಕೆ ಸಮೂಹದಲ್ಲಿ ಈ ಉಪಗುಂಪುಗಳ ಒಟ್ಟು ಸಂಖ್ಯೆ ಮತ್ತು ಶೇಕಡಾವಾರು ಪ್ರಮಾಣವನ್ನು ಕೋಷ್ಟಕ ಸಂಖ್ಯೆ ೮.೯ ರಲ್ಲಿ ನೀಡಲಾಗಿದೆ.

ಕೋಷ್ಟಕ ಸಂಖ್ಯೆ ೮.೯

| ಕ್ರಮ ಸಂಖ್ಯೆ | ನೀಳ ಚಕ್ಕೆ ಉಪಗುಂಪುಗಳು | ಉಪಕರಣಗಳ ಸಂಖ್ಯೆ | ಶೇ |
|---|---|---|---|
| ೧. | ನೀಳಚಕ್ಕೆಯಂತಹ ಚಕ್ಕೆ | ೩೩ | ೨೬.೧೯ |
| ೨. | ದ್ವಿತೀಯ ಶ್ರೇಣಿಯ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ | ೧೯ | ೧೫.೦೭ |
| ೩. | ಇಬ್ಬದಿ ನೀಳಚಕ್ಕೆ | ೪೩ | ೩೪.೧೨ |
| ೪. | ಕಿರು ನೀಳಚಕ್ಕೆ | ೩೧ | ೨೪.೬೦ |
| | ಒಟ್ಟು | ೧೨೬ | ೯೯.೯೮ |

ಮೇಲೆ ತಿಳಿಸಿರುವ ಕೋಷ್ಟಕದಲ್ಲಿ ಕಾಣುವಂತೆ ಈ ಸಮೂಹದಲ್ಲಿ ಇನ್ನಿತರ ನೆಲೆಗಳಂತೆ ಇಬ್ಬದಿ ನೀಳಚಕ್ಕೆಗಳ ಸಂಖ್ಯೆ ಹಾಗೂ ಶೇಕಡಾವಾರು ಪ್ರಮಾಣ ಗರಿಷ್ಠವಾಗಿದ್ದು (ಸಂ. ೪೩ ಶೇ. ೩೪.೦೯), ಸೂಕ್ಷ್ಮ ರೀತಿಯಲ್ಲಿ ಪುನರ್ ರೂಪಣಾ ಕಿರುಚಕ್ಕೆಗಳನ್ನೆಬ್ಬಿಸಿ ಪುನಃ ಉಪಯೋಗಿಸಲು ಸಿದ್ಧಪಡಿಸದ ನೀಳಚಕ್ಕೆಗಳ ಸಂಖ್ಯೆ ಹಾಗೂ ಶೇಕಡಾವಾರು ಪ್ರಮಾಣ (ಸಂಖ್ಯೆ - ೧೯ ಶೇ. ೧೫.೦೬) ಅತ್ಯಂತ ಕಡಿಮೆ ಇದೆ.

## ನೀಳಚಕ್ಕೆಯಂತಹ ಚಕ್ಕೆ

ಎಂಟು ನೆಲೆಗಳಲ್ಲಿ ಮಾತ್ರ ದೊರಕುವ ಈ ಗುಂಪಿನ ಉಪಕರಣಗಳು ನೀಳಚಕ್ಕೆ ಗುಂಪಿನ ಶೇಕಡ ೨೬.೧೯ ರಷ್ಟಿದೆ. ಕಿರು ಉದ್ದದ ಸ್ವಲ್ಪ ಅಗಲವಿರುವ ಈ ಉಪಕರಣಗಳ ಮಧ್ಯ ಉಬ್ಬುರೇಖೆ ಎದ್ದು ಕಾಣುತ್ತದೆ. ಇಬ್ಬದಿಗಳಲ್ಲಿ ಅಥವಾ ಒಂದು ಬದಿ ಮಾತ್ರ ಹರಿತವಾದ ಕೆಲವೊಮ್ಮೆ ಸಮಾನಾಂತರದಲ್ಲಿರದ ಅಲಗುಗಳಿವೆ. ಪ್ರಮುಖವಾದ ಹಿಂಭಾಗು, ತಾಡನ ಉಬ್ಬು ಹಾಗೂ ವೇದಿಕೆಗಳು ಹಿಂಬದಿಯಲ್ಲಿ ಎದ್ದು ಕಾಣುತ್ತವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೦ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೦

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೧೦-೧೫ | ೧೩ | ೩೯.೩೯ | ೫-೧೦ | ೦೫ | ೧೬.೫೦ | ೩-೬ | ೩೩ | ೧೦೦.೦ |
| ೧೫-೨೦ | ೧೦ | ೩೦.೩೦ | ೧೦-೧೫ | ೨೨ | ೬೬.೬೬ | | | |
| ೨೦-೨೫ | ೧೦ | ೩೦.೩೦ | ೧೫-೨೦ | ೦೬ | ೧೮.೧೮ | | | |
| ಒಟ್ಟು | ೩೩ | | | ೩೩ | | | ೩೩ | |

## ದ್ವಿತೀಯ ಶ್ರೇಣಿಯ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ

ಏಳು ನೆಲೆಗಳಲ್ಲಿ ದೊರೆತಿರುವ ಈ ಮಾದರಿಯ ಉಪಕರಣಗಳು ಶೇಕಡಾ ೧೫.೦೬ ರಷ್ಟಿವೆ. ಮೊದಲ-ನೆಯ ರೀತಿಯ ಉಪಕರಣಗಳ ಲಕ್ಷಣಗಳ ಜೊತೆಗೆ ಇವುಗಳ ಅಲಗುಗಳಲ್ಲಿ ಮರುಚಕ್ಕೆ ಎಬ್ಬಿಸಿದ ಗುರುತುಗಳು ಮತ್ತು ಚಕ್ಕೆಕಲೆಗಳೂ ಕಂಡು ಬರುತ್ತವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೧ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೧

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೧೦-೧೫ | ೦೭ | ೩೬.೮೪ | ೫-೧೦ | ೦೭ | ೩೬.೮೪ | ೨-೫ | ೦೫ | ೨೬.೩೧ |
| ೧೫-೨೦ | ೧೦ | ೫೨.೬೩ | ೧೦-೧೫ | ೦೭ | ೩೬.೮೪ | ೫-೮ | ೦೬ | ೩೧.೫೭ |
| ೨೦-೨೫ | ೦೨ | ೧೦.೫೨ | ೧೫-೨೦ | ೦೫ | ೨೬.೩೧ | ೮-೧೦ | ೦೮ | ೪೨.೧೦ |
| ಒಟ್ಟು | ೧೯ | | | ೧೯ | | | ೧೯ | |

## ಇಬ್ಬದಿ ನೀಳಚಕ್ಕೆ

ನೀಳಚಕ್ಕೆ ಉಪಕರಣ ಸಮೂಹದಲ್ಲಿ ಅತಿ ಹೆಚ್ಚು ಸಂಖ್ಯೆ ಮತ್ತು ಶೇಕಡಾವಾರು ಪ್ರಮಾಣದಲ್ಲಿರುವ ಇವು ಹದಿಮೂರು ನಿವೇಶನಗಳಲ್ಲಿ ದೊರೆತಿದ್ದು ನೂತನ ಶಿಲಾಯುಗದ ನೆಲೆಗಳಲ್ಲಿ ಈ ಉಪಕರಣದ ಪ್ರಾಮುಖ್ಯವನ್ನು ಹೇಳುತ್ತ-

ವೆ. ತೀರಾ ಕಡಿಮೆ ಗಾತ್ರದ್ದಾದರೂ ಬಹುತೇಕ ಸಮಾನಾಂತರ ಪಾರ್ಶ್ವಗಳು, ಮರು ಚಕ್ಕೆ ಎಬ್ಬಿಸಿದ ಗುರುತುಗಳು, ಎದ್ದು ಕಾಣುವ ಮಧ್ಯ ಉಬ್ಬು, ಚೂಪಾದ ಅಥವಾ ಅಂಡಾಕಾರದ ಮೊನೆ, ಹಿಂಬದಿಯಲ್ಲಿ ತಾಡನ ಉಬ್ಬು ಮತ್ತು ಅಲೆಅಲೆಗ-ಳಂತೆ ಸಾಗುವ ಚಕ್ಕೆ ಕಲೆಗಳು ನೀಳಚಕ್ಕೆಯ ವಿಶೇಷ ಲಕ್ಷಣಗಳು. ಅತಿ ಕಡಿಮೆ ಉದ್ದದ ನೀಳಚಕ್ಕೆ ೧೦ ರಿಂದ೧೫ಮಿ-ಮೀ.ಇದ್ದು ಅತಿ ಹೆಚ್ಚು ಉದ್ದ ೨೦ ರಿಂದ ೨೫ ಮಿ.ಮೀ. ಇವೆ. ಅಗಲ ೫ ರಿಂದ ೧೦ ಹಾಗೂ ೧೦ ರಿಂದ ೧೫ ಮಿ.ಮೀ. ವರೆಗೆ ಇವೆ. ದಪ್ಪ ೨ ರಿಂದ ೫ ಹಾಗೂ ೧೦ ರಿಂದ ೧೫ ಮಿ.ಮೀ. ವರೆಗೆ ಇವೆ. ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷ-ಣೆಯನ್ನು ಕೋಷ್ಟಕ ಸಂಖ್ಯೆ ೮.೧೨ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೨

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೧೦-೧೫ | ೧೯ | ೪೪.೧೮ | ೫-೧೦ | ೧೨ | ೨೭.೯೦ | ೨-೫ | ೧೬ | ೩೭.೨೦ |
| ೧೫-೨೦ | ೧೮ | ೪೧.೮೬ | ೧೦-೧೫ | ೧೬ | ೩೭.೨೦ | ೫-೧೦ | ೨೭ | ೬೨.೭೯ |
| ೨೦.೨೫ | ೦೬ | ೧೩.೯೫ | ೧೫-೨೦ | ೧೫ | ೩೪.೮೮ | | | |
| ಒಟ್ಟು | ೪೩ | | | ೪೩ | | | ೪೩ | |

**ಕಿರು ನೀಳಚಕ್ಕೆ**

ವಿವಿಧ ರೂಪದ ನೀಳಚಕ್ಕೆಗಳನ್ನು ತಯಾರಿಸುವಾಗ ಮುರಿದ ಭಾಗಗಳು, ಇನ್ನಿತರ ಜಾಮಿತಿಯಾಕಾರದ ಸೂಕ್ಷ್ಮ ಉಪಕರಣಗಳ ತಯಾರಿಕೆ ಸಂದರ್ಭದಲ್ಲಿ ಉಂಟಾದ ಕಿರು ನೀಳಚಕ್ಕೆಗಳು ನೂತನ ಶಿಲಾಯುಗ ಸಂದರ್ಭದ ಸೂಕ್ಷ್ಮ ಉಪಕರಣಗಳಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ದೊರೆಯುತ್ತವೆ. ಒಬ್ಬದಿ ನೀಳಚಕ್ಕೆಗಳ ಎಲ್ಲಾ ಲಕ್ಷಣಗಳೂ ಈ ಉಪ-ಕರಣಗಳಲ್ಲಿಯೂ ಕಂಡು ಬರುತ್ತವೆ. ಇವು ಸಂಯುಕ್ತೋಪಕರಣಗಳ ತಯಾರಿಕೆಯಲ್ಲಿ ಮುಖ್ಯ ಪಾತ್ರವಹಿಸುತ್ತವೆ. ಪ್ರಸ್ತುತ ಉಪಕರಣ ಸಮೂಹದಲ್ಲಿ ಐದು ನಿವೇಶನಗಳಿಂದ ಒಟ್ಟು ೩೧ ಮಾದರಿಗಳು ದೊರೆತಿವೆ (ಶೇ. ೨೪.೫೦) ಕೆಲವು ಚೂಪಾದ ಮೊನೆಯನ್ನು ಮಧ್ಯದಲ್ಲಿ ಇಲ್ಲವೇ ಪಾರ್ಶ್ವಗಳಲ್ಲಿ ಹೊಂದಿದ್ದು ಮೊನೆಗಳಂತೆ ಉಪಯೋಗಿಸುವ ಸಾಧ್ಯತೆಯೂ ಇದೆ. ಇವುಗಳ ಉದ್ದ ೫ ರಿಂದ ೧೦ ಮಿ.ಮೀ. ಅತಿ ಕಡಿಮೆ ಅಗಲ ೫ ರಿಂದ ೮ ಮಿ.ಮೀ. ಇದ್ದರೆ ಅತಿ ಹೆಚ್ಚು ಅಗಲ ೧೦ ರಿಂದ ೧೫ ಮಿ.ಮೀ. ಇದೆ. ಮತ್ತು ದಪ್ಪ ೩ ರಿಂದ ೬ಮಿ.ಮೀ. ಇವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೩ ನಲ್ಲಿ ನೀಡಿದೆ.

**ಕೋಷ್ಟಕ ಸಂಖ್ಯೆ ೮.೧೩**

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೫-೧೦ | ೩೧ | ೧೦೦ | ೫-೮ | ೦೮ | ೨೫.೮೦ | ೩-೬ | ೩೧ | ೧೦೦ |
| | | | ೮-೧೦ | ೧೬ | ೫೧.೬೧ | | | |
| | | | ೧೦-೧೫ | ೦೭ | ೨೨.೫೮ | | | |
| ಒಟ್ಟು | ೩೧ | | | ೩೧ | | | ೩೧ | |

## ಮೊನೆಗಳ ಮಾದರಿ

ಪ್ರಸ್ತುತ ಹತ್ತು ನೆಲೆಗಳಿಂದ ಒಟ್ಟು ೬೩ ಮೊನೆ ಉಪಕರಣಗಳನ್ನು ಸಂಗ್ರಹಿಸಲಾಗಿದೆ (ಶೇ. ೧೯.೬೫).

ಸಾಮಾನ್ಯವಾಗಿ ನೀಳಚಕ್ಕೆ ಮತ್ತು ಇತರೆ ರೀತಿಯ ಚಕ್ಕೆಗಳನ್ನು ಉಪಯೋಗಿಸಿ ಈ ಉಪಕರಣವನ್ನು ರೂಪಿಸಲಾಗುತ್ತದೆ. ಮುಖ್ಯವಾಗಿ ಸಮಾಕಾರ ಮತ್ತು ವಿಷಮಾಕಾರ ಎಂದು ಮೊನೆಗಳಲ್ಲಿ ಎರಡು ವಿಧ. ಉದ್ದೇಶಿತ ಕಾರ್ಯ ನಿರ್ವಹಣೆಯ ಮೊನಚು ತುದಿಯನ್ನು ಎರಡು ಅಥವಾ ಅದಕ್ಕಿಂತ ಹೆಚ್ಚು ನಿಯಂತ್ರಿತ ಚಕ್ಕೆಗಳನ್ನೆಬ್ಬಿಸಿ ಸಾಧಿಸಲಾಗಿರುತ್ತದೆ. ಪರ್ಣಾಕಾರ, ತ್ರಿಭುಜಾಕಾರ, ಕೊಕ್ಕಿನಾಕಾರದ ವಿಶೇಷ ರೀತಿಯ ಮೊನೆಗಳನ್ನು ರೂಪಿಸಲು ಹಲವಾರು ದ್ವಿತೀಯ ಶ್ರೇಣಿಯ ಸೂಕ್ಷ್ಮ ಚಕ್ಕೆಗಳನ್ನು ಎಬ್ಬಿಸಲಾಗುತ್ತದೆ. ಸಾಧಾರಣವಾಗಿ ಮೊನೆಯು ಉಪಕರಣದ ಮೇಲ್ಮಧ್ಯ ತುದಿಯಲ್ಲಿ ಸಾಧಿಸಲಾಗು-ತ್ತದಾದರೂ ಕೆಲವೊಮ್ಮೆ ಮೂಲಚಕ್ಕೆ ಅಥವಾ ನಿರ್ದಿಷ್ಟ ಉಪಯೋಗಕ್ಕಾಗಿ ಪಾರ್ಶ್ವಗಳಲ್ಲಿಯೂ ಕಂಡು ಬರುತ್ತದೆ. ಅಡ್ಡ ವಿನ್ಯಾಸದಲ್ಲಿ ಅಂಡಾಕಾರ, ವಜ್ರಾಕೃತಿ, ತ್ರಿಭುಜ ಇಲ್ಲವೇ ಆಯತಾಕಾರವನ್ನು ಹೊಂದಿರುವ ಈ ಉಪಕರಣಗಳ ಒಂದು ಬದಿ ಸಮತಲ ಇಲ್ಲವೇ ಸ್ವಲ್ಪ ಬಾಗುಳ್ಳದ್ದಾಗಿದ್ದರೆ ಇನ್ನೊಂದು ಬದಿ ಪ್ರಮುಖ ಮಧ್ಯ ಉಬ್ಬನ್ನು ತೋರಿಸುತ್ತದೆ. ಆಕಾರ ಮತ್ತು ಉಪಯೋಗವನ್ನಾಧರಿಸಿ ಮೊನೆಗಳನ್ನು ಮೂರು ಗುಂಪುಗಳಾಗಿ ವಿಭಾಗಿಸಲಾಗಿದೆ. ಅವುಗಳೆಂದರೆ:

೧. ತ್ರಿಭುಜಾಕಾರದ ಮೊನೆ ಒಟ್ಟು ಉಪಕರಣ ೩೦ ಶೇ. ೪೭.೬೧
೨. ಕೊಕ್ಕುಳ್ಳ ಮೊನೆ ಒಟ್ಟು ಉಪಕರಣ ೨೮ ಶೇ. ೪೪.೪೪
೩. ಎಲೆಯಾಕಾರದ ಮೊನೆ ಒಟ್ಟು ಉಪಕರಣ ೦೫ ಶೇ. ೭.೯೩

ಪ್ರತಿಯೊಂದು ಮಾದರಿಯ ಉಪಕರಣಗಗಳ ವಿವರಣೆಯನ್ನು ಪ್ರತ್ಯೇಕವಾಗಿ ವಿವರಿಸಿದೆ.

### ತ್ರಿಭುಜಾಕಾರದ ಮೊನೆ

ಈ ಮಾದರಿಯ ಉಪಕರಣಗಳು ಒಂಬತ್ತು ನೆಲೆಗಳಲ್ಲಿ ದೊರಕಿದ್ದು ಒಟ್ಟು ೩೦ (ಶೇ. ೪೭.೬೧) ಇವೆ. ಇವುಗಳನ್ನು ತೆಳ್ಳನೆಯ ಕಿರು ಹಾಗೂ ಮಧ್ಯಮ ಗಾತ್ರದ ಚಕ್ಕೆಗಳ ಮೇಲೆ ರೂಪಿಸಲಾಗಿದೆ. ನೀಳಚಕ್ಕೆಯನ್ನು ಎರಡೂ

ಪಾರ್ಶ್ವಗಳಿಂದ ಲಘುಕೋನದಲ್ಲಿ ಕತ್ತರಿಸಿ ರೂಪಿಸಿದೆ. ಒಟ್ಟಾರೆ ತ್ರಿಭುಜಾಕಾರದಲ್ಲಿದ್ದರೂ ವಜ್ರಾಕೃತಿಗಳು ಹಾಗೂ ಪಂಚಭುಜಾಕೃತಿಗಳೂ ಕಾಣುತ್ತವೆ. ಹೆಚ್ಚು ಕಡಿಮೆ ಎಲ್ಲಾ ಉಪಕರಣಗಳ ಹಿಂಬದಿ ಸಮತಲವಿದ್ದು ಮುಂಬದಿಯಲ್ಲಿ ಉಬ್ಬೇಣನ್ನು ಕತ್ತರಿಸಿ ಉಪಕರಣವನ್ನು ತೆಳುವಾಗಿಸಿದೆ. ಕೆಲವು ಉಪಕರಣಗಳಲ್ಲಿ ತ್ರಿಭುಜದ ಒಂದು ಅಥವಾ ಎರಡೂ ಭುಜಗಳೂ ಹರಿತವಾಗಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೪ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೪

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೧೦-೧೫ | ೧೪ | ೪೪.೬೬ | ೫-೧೦ | ೧೩ | ೪೩.೩೩ | ೧-೫ | ೧೫ | ೫೦.೦೦ |
| ೧೫-೨೦ | ೧೬ | ೫೩.೩೩ | ೧೦-೧೫ | ೧೭ | ೫೬.೬೩ | ೫-೧೦ | ೧೫ | ೫೦.೫೦ |
| ಒಟ್ಟು | ೩೦ | | | ೩೧ | | | ೩೧ | |

## ಕೊಕ್ಕುಳ್ಳ ಮೊನೆ

ಪ್ರಸ್ತುತ ಅಧ್ಯಯನ ಪ್ರದೇಶದ ೧೭ ನೆಲೆಗಳ ಪೈಕಿ ೧೦ ನೆಲೆಗಳಲ್ಲಿ ಒಟ್ಟು ೨೮ ( ಶೇ. ೪೪.೪೪) ಉಪಕರಣಗಳು ದೊರೆತಿವೆ. ಹೆಚ್ಚಿನ ಉಪಕರಣಗಳಲ್ಲಿ ನೀಳಚಕ್ಕೆಯ ಮೇಲ್ತುದಿಯಲ್ಲಿಯೇ ಕೊಕ್ಕಿನ ಮೊನೆ ಮೂಡಿಸಿದೆ. ದಪ್ಪನೆಯ ತುದಿಯನ್ನು ಒಂದು ಪಾರ್ಶ್ವದಿಂದ ಅಧಿಕ ಕೋನದಲ್ಲಿ ಕತ್ತರಿಸಿ ಮೇಲ್ತುದಿಯನ್ನು ಅಗಲವಾದ ಸಮತಲವನ್ನಾಗಿ ರೂಪಿಸಿ ಇನ್ನೊಂದು ತುದಿಯಲ್ಲಿ ಮುಂಚಾಚಿದ ಮೊನೆ ಮೂಡಿಸಲಾಗಿದೆ. ಮೇಲಿನಿಂದ ಮರು ಚಕ್ಕೆ ತೆಗೆದು ಅಥವಾ ಕಚ್ಚು ಮೂಡಿಸಿ ಕೊಕ್ಕನ್ನು ಪ್ರಧಾನವಾಗಿ ಕಾಣುವಂತೆ ಮಾಡಲಾಗಿದೆ. ಸಾಧಾರಣವಾಗಿ ಎಲ್ಲಾ ಉಪಕರಣಗಳ ಹಿಂಬದಿ ಸಮತಲವಾಗಿದೆ. ಕೆಲವು ಉಪಕರಣಗಳಲ್ಲಿ ಮೇಲ್ತುದಿಯಲ್ಲಿ ತಾಡನ ಶಂಖು ಎದ್ದು ಕಾಣುತ್ತದೆ. ಮುಂಬದಿಯ ಉಬ್ಬೇಣನ್ನು ಕೆಲವು ಉಪಕರಣಗಳಲ್ಲಿ ಕತ್ತರಿಸಿ ತೆಗೆಯಲಾಗಿದೆ. ಕೆಲವು ಉಪಕರಣಗಳಲ್ಲಿ ಮಾತ್ರ ಪುಡಿಗೆಲಸ ಮಾಡಿ ಕಾರ್ಯ ಸಾಧಕ ಮೊನೆಯನ್ನು ಬಲಗೊಳಿಸಲಾಗಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೫ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೫

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೫-೧೦ | ೧೩ | ೪೬.೪೨ | ೫-೧೦ | ೧೨ | ೪೨.೮೫ | ೩-೬ | ೨೮ | ೧೦೦ |
| ೧೫-೨೦ | ೬ | ೨೧.೪೨ | ೧೦-೧೫ | ೧೨ | ೪೨.೮೫ | | | |
| ೨೦-೨೫ | ೯ | ೩೨.೧೪ | ೧೫-೨೦ | ೪ | ೧೪.೨೮ | | | |
| ಒಟ್ಟು | ೨೮ | | | ೨೮ | | | ೨೮ | |

## ಎಲೆಯಾಕಾರದ ಮೊನೆ

ಪ್ರಸ್ತುತ ನಾಲ್ಕು ನೆಲೆಗಳಲ್ಲಿ ಮಾತ್ರ ಒಟ್ಟು ೫ ( ಶೇ. ೭.೯೩) ಉಪಕರಣಗಳು ದೊರೆತಿವೆ. ಸಾಧಾರಣವಾಗಿ ತ್ರಿಭುಜಾಕಾರದ ಮೊನೆಗಳ ಲಕ್ಷಣಗಳನ್ನು ತೋರ್ಪಡಿಸುವ ಈ ಉಪಕರಣಗಳನ್ನು ಹಿಡಿಕೆಗೆ ಸಿಕ್ಕಿಸುವಂತೆ ಗೂಟವನ್ನು ಮೂಡಿಸಲಾಗಿದೆ. ಮಧ್ಯ ಉಬ್ಬುಗಳನ್ನು ಹೊಂದಿದ್ದು ಎರಡೂ ಪಾರ್ಶ್ವಗಳೂ ಹರಿತವಾಗಿದೆ. ಹಿಂಬದಿ ಸಮತಲವಿರುವುದನ್ನು ಕಾಣಬಹುದು.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೬ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೬

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೧೩-೧೫ | ೧ | ೧೧-೧೩ | ೨ | ೩-೫ | ೨ |
| ೧೫-೧೮ | ೨ | ೧೫-೧೮ | ೩ | ೫-೮ | ೩ |
| ೨೫-೨೮ | ೨ | | | | |
| ಒಟ್ಟು | ೫ | | ೫ | | ೫ |

## ಹೆರೆಚಕ್ಕೆ ಮಾದರಿ

ನೂತನ ಶಿಲಾಯುಗೀನ ಸೂಕ್ಷ್ಮ ಶಿಲೋಪಕರಣಗಳ ಸಮೂಹದಲ್ಲಿ ನೀಳಚಕ್ಕೆ ಗುಂಪಿನ ಬಳಿಕ ಅತಿ ಹೆಚ್ಚಿನ ಬಹು ಉಪಯೋಗಿ ಉಪಕರಣ ಹೆರೆಚಕ್ಕೆ. ಅಸಮಾಕಾರದ ವಿವಿಧ ಗಾತ್ರಗಳ ಚಕ್ಕೆ ಅಥವಾ ಉದ್ದೇಶಿತ ಚಕ್ಕೆಗಳನ್ನೆಬ್ಬಿಸಿ ಕಿರು ಮೂಲಗಟ್ಟಿಗಳಲ್ಲಿ ರೂಪಿತವಾಗಿರುವ ಹೆರೆಚಕ್ಕೆಗಳ ಆಕಾರ, ಕಾರ್ಯ ನಿರ್ವಾಹಕ ಹರಿತ ಅಲಗು, ತುದಿಯನ್ನು ಸಾಧಿಸಿರುವ ಅಂಚು, ತುದಿ ಅಥವಾ ಬದಿ ಇವುಗಳನ್ನಾಧರಿಸಿ ಒಟ್ಟು ಉಪಕರಣಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

ಅ. ಒಬ್ಬದಿ ಹೆರೆಚಕ್ಕೆ (೧೮ ಶೇ. ೨೫.೭೧ )
ಆ. ತುದಿ ಹೆರೆಚಕ್ಕೆ ( ೪ ಶೇ. ೫.೭೧)
ಇ. ಒಳಬಾಗಿದ ಅಂಚಿನ ಹೆರೆಚಕ್ಕೆ ( ೪ ಶೇ. ೫.೭೧)
ಈ. ಮೂಲಗಟ್ಟಿ ಹೆರೆಚಕ್ಕೆ ( ೪೪ ಶೇ. ೬೨.೮೫)

ಪ್ರಸ್ತುತ ಒಟ್ಟು ೧೪ ನೆಲೆಗಳಿಂದ ೭೦ ( ಶೇ. ೨೧.೮೪) ಉಪಕರಣಗಳು ದೊರೆತಿವೆ. ಪ್ರತಿಯೊಂದು ಮಾದರಿಯ ಉಪಕರಣಗಳ ವಿವರಣೆಯನ್ನು ಪ್ರತ್ಯೇಕವಾಗಿ ವಿವರಿಸಲಾಗಿದೆ.

## ಒಬ್ಬದಿ ಹೆರೆಚಕ್ಕೆ

ಸಮತಲವಾದ ಹಿಮ್ಮುಖ ಉಳ್ಳ, ಕಿರುಗಾತ್ರದ ಚಕ್ಕೆ ಅಥವಾ ಮೂಲಗಟ್ಟಿಯ ಒಂದು ಅಥವಾ ಎರಡೂ ಪಾರ್ಶಗಳನ್ನೂ ಚಕ್ಕೆ ಎಬ್ಬಿಸಿ ಹರಿತಗೊಳಿಸಿ ಒಬ್ಬದಿ ಹೆರೆಚಕ್ಕೆಗಳನ್ನು ರೂಪಿಸಲಾಗಿದೆ. ಹೆರೆಚಕ್ಕೆ ಸಮೂಹದಲ್ಲಿ ಒಬ್ಬದಿ ಹೆರೆಚಕ್ಕೆಗಳು ಒಟ್ಟು ೧೮ (ಶೇ. ೨೫.೭೧) ಇವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೭ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೭

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೧೦-೧೫ | ೮ | ೪೪.೪ | ೧೦-೧೫ | ೧೧ | ೬೧.೦೫ | ೩-೫ | ೧೧ | ೬೧.೦೫ |
| ೧೫-೨೦ | ೭ | ೩೯.೯೬ | ೧೫-೨೦ | ೭ | ೩೯.೯೬ | ೫-೧೦ | ೭ | ೩೯.೯೬ |
| ೨೦-೨೫ | ೩ | ೧೬.೬೫ | | | | | | |
| ಒಟ್ಟು | ೧೮ | | | ೧೮ | | | ೧೮ | |

## ತುದಿ ಹೆರೆಚಕ್ಕೆ

ಈ ಗುಂಪಿನ ೪ ( ಶೇ. ೫.೭೧ ) ಉಪಕರಣಗಳು ನಾಲ್ಕು ನೆಲೆಗಳಿಂದ ದೊರೆತಿವೆ. ತುದಿ ಅಥವಾ ಅಂಚು ಹೆರೆಚಕ್ಕೆಗಳು ಕಿರುಗಾತ್ರದ ಚಕ್ಕೆಗಳ ಮೇಲಣ ಅಥವಾ ಕೆಳತುದಿಯಲ್ಲಿ ಕಿರು ಮರುಚಕ್ಕೆಗಳನ್ನೆಬ್ಬಿಸಿ ರೂಪಿಸಿದೆ. ಒಟ್ಟು ಉಪ-ಕರಣಗಳಲ್ಲಿ ಉದ್ದ ಕನಿಷ್ಠ ೧೦ ಗರಿಷ್ಠ ೨೦ ಮಿ.ಮೀ. ಗಳಾಗಿದ್ದು, ಅಗಲ ಕನಿಷ್ಠ ೧೦ ಗರಿಷ್ಠ ೨೦ ಮಿ.ಮೀ. ಗಳೂ ದಪ್ಪ ಕನಿಷ್ಠ ೪ ಗರಿಷ್ಠ ೭ ಮಿ.ಮೀ. ಗಳಿವೆ.

## ಇ. ಒಳಬಾಗಿದ ಅಂಚಿನ ಹೆರೆಚಕ್ಕೆ

ಕಿರುಗಾತ್ರದ ನಿಮ್ನ ಅಥವಾ ಉನ್ನತ ಮುಖ ಅಥವಾ ಅಲಗುಳ್ಳ ಪಾರ್ಶ್ವವಿರುವ ಈ ಹೆರೆಚಕ್ಕೆಗಳು ಪ್ರಸ್ತುತ ಸಮೂಹದಲ್ಲಿ ೪ (ಶೇ. ೫.೭೮) ಇವೆ. ಇವುಗಳ ಕನಿಷ್ಠ ಮತ್ತು ಗರಿಷ್ಠ ೨೦ ಮಿ.ಮೀ. ಗಳಾಗಿವೆ, ಹಾಗೆಯೇ ದಪ್ಪ ಕನಿಷ್ಠ ೪ ಗರಿಷ್ಠ ೭ ಮಿ.ಮೀ. ಗಳಾಗಿವೆ.

## ಈ. ಮೂಲಗಟ್ಟಿ ಹೆರೆಚಕ್ಕೆ

ಒಟ್ಟು ಸಂಗ್ರಹದಲ್ಲಿ ಮೂಲಗಟ್ಟಿ ಹೆರೆಚಕ್ಕೆಗಳು ೪೪ (ಶೇ. ೬೨.೮೩) ಇವೆ. ಇವುಗಳನ್ನು ವಿಭಿನ್ನ ಶಿಲಾ ಮಾದರಿಗಳಾದ ವಿವಿಧ ವರ್ಣದ ಜಾಸ್ಪರ್ ಮತ್ತು ಕ್ವಾರ್ಟ್ಸ್ ಶಿಲೆಗಳಲ್ಲಿ ರೂಪಿಸಲಾಗಿದೆ. ಮೂಲ ಶಿಲಾಗಟ್ಟಿ ಅಥವಾ ದಪ್ಪ ಚಕ್ಕೆಗಳನ್ನು ಇತರ ಕಿರು ಉಪಕರಣಗಳ ತಯಾರಿಕೆಗೆ ಚಕ್ಕೆಗಳನ್ನೆಬ್ಬಿಸಿರುವುದರಿಂದ ಈ ಹೆರೆಚಕ್ಕೆಗಳನ್ನು ಮೂಲಗಟ್ಟಿ ಹೆರೆಚಕ್ಕೆ

ಗಳೆಂದು ಕರೆಯಲಾಗುತ್ತದೆ. ಸಾಧಾರಣವಾಗಿ ಇವು ಯಾವುದೇ ನಿರ್ದಿಷ್ಟ ಆಕಾರ ಹೊಂದಿರದಿದ್ದರೂ ಕೆಲವಾದರೂ ಉಪ-ಕರಣಗಳು ತ್ರಿಭುಜ, ಅಂಡ, ಆಯತ, ವಿಷಮಕೋನ, ಮುಂತಾದ ಆಕಾರಗಳನ್ನು ಹೊಂದಿವೆ. ಎರಡೂ ಬದಿಗಳಲ್ಲಿ ವಿವಿಧ ರೀತಿಯ ಕಿರುಚಕ್ಕೆಕಲೆಗಳನ್ನು ಹೊಂದಿರುವುದು ಈ ಉಪಕರಣಗಳ ವೈಶಿಷ್ಟ್ಯ. ಕೆಲವು ಉಪಕರಣಗಳು ವಿಶೇಷವಾಗಿ ಅಂಡಾಕಾರದವು. ಲೆವಲಾಸಿಯನ್ ಮೂಲಗಟ್ಟಿಗಳಂತೆ ರೂಪಿಸಿರುವುದನ್ನು ವಿಶೇಷವಾಗಿ ಕಾಣಬಹುದು. ಪಾರ್ಶ್ವ, ಬದಿ, ಅಂಚು ಅಥವಾ ಪರಿಧಿಯ ಸುತ್ತಲೂ ಕಿರುಚಕ್ಕೆಗಳನ್ನೆಬ್ಬಿಸಿ ಹರಿತ ಅಲಗನ್ನು ರೂಪಿಸಿರುವುದರಿಂದ ಇವು ಆಯಾ ವರ್ಗ-ಗಳ ಹೆರೆಚಕ್ಕೆಗಳ ಗುಂಪಿಗೆ ಸೇರಬಹುದಾದರೂ ಕಿರು ಉಪಕರಣಗಳ ತಯಾರಿಕೆಗೆ ಅವುಗಳನ್ನು ಮೂಲ ಶಿಲೆಯಾಗಿ ಬಳ-ಸಿರುವುದರಿಂದ ಸಾಧಾರಣವಾಗಿ ಈ ಉಪಕರಣಗಳನ್ನು ಮೂಲಗಟ್ಟಿ ಹೆರೆಚಕ್ಕೆಗಳೆಂದು ಕರೆದಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೮ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೮

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ಶೇ. | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ | ಶೇ. |
|---|---|---|---|---|---|---|---|---|
| ೧೫-೨೦ | ೧೮ | ೪೦.೮೬ | ೧೦-೧೫ | ೧೯ | ೪೩.೧೩ | ೩-೫ | ೧೯ | ೪೩.೧೩ |
| ೨೦-೨೫ | ೧೪ | ೩೧.೭೮ | ೧೫-೨೦ | ೧೯ | ೪೩.೧೩ | ೫-೧೦ | ೧೩ | ೨೯.೫೧ |
| ೨೫-೩೦ | ೧೨ | ೨೭.೨೪ | ೨೦-೨೫ | ೬ | ೧೩.೬೨ | ೧೦-೧೫ | ೧೨ | ೨೭.೨೪ |
| ಒಟ್ಟು | ೪೪ | | | ೪೪ | | | ೪೪ | |

**ಕೊರೆಗ**

ಪ್ರಸ್ತುತ ಉಪಕರಣ ಸಮೂಹದಲ್ಲಿ ಒಟ್ಟು ೧೬ (ಶೇ. ೪.೯೯) ಕೊರೆಗಗಳು ದೊರೆತಿವೆ. ವಿವಿಧ ಆಕಾರಗ-ಳಲ್ಲಿರುವ ಈ ಉಪಕರಣಗಳನ್ನು ಸಾಧಾರಣವಾಗಿ ತೆಳುದಪ್ಪದ, ಕಡಿಮೆ ಅಗಲದ ಯಾವುದೇ ನಿರ್ದಿಷ್ಟ ಆಕಾರವಿಲ್ಲದೆ ಆದರೆ ಸಮತಲ ಹಿಂಬದಿಯಿರುವ ಕಿರು ಚಕ್ಕೆಗಳನ್ನು ತೆಗೆದು ರೂಪಿಸಲಾಗಿರುತ್ತದೆ. ವಿಶೇಷವಾಗಿ ಜಾಸ್ಪರ್ ಮತ್ತು ಕ್ವಾರ್ಟ್ಸ್ ಶಿಲಾ ಮಾಧ್ಯಮದಲ್ಲಿ ಉಪಕರಣಗಳನ್ನು ತಯಾರಿಸಲಾಗಿದೆ. ವಿಷಮಕೋನದಲ್ಲಿ ನಿಯಂತ್ರಿತ ಚಕ್ಕೆ ಎಬ್ಬಿಸಿ ಮೊನೆಯನ್ನು ರೂಪಿಸಿ, ಮೊನೆಯ ಇನ್ನೊಂದು ಪಾರ್ಶ್ವದಲ್ಲಿ ಮತ್ತೊಮ್ಮೆ ಕೋನದಲ್ಲಿ ಆಳವಾದ ಅರೆಚಕ್ಕೆಗಳನ್ನೆಬ್ಬಿಸಿ ಉದ್ದೇಶಿತ ಮುಂಚಾಚಿದ ಕೊಕ್ಕಿನಂತಹ ಅಲಗನ್ನು ಸಾಧಿಸಲಾಗಿರುತ್ತದೆ. ಹೀಗೆ ಕೊಕ್ಕಲಗು ಉಪಕರಣದ ಮಧ್ಯದಲ್ಲಿ ಇಲ್ಲವೆ ಪಾರ್ಶ್ವದ-ಲ್ಲಿದ್ದು ಲಂಬಕೋನದಲ್ಲಿ ಇಲ್ಲವೆ ಎಡಕ್ಕೆ ಅಥವಾ ಬಲಕ್ಕೆ ವಾಲಿದೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೧೯ ನಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೧೯

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೧೫-೨೦ | ೪ | ೧೦-೧೫ | ೭ | ೧-೫ | ೫ |
| ೨೦-೨೫ | ೧೧ | ೧೫-೨೦ | ೯ | ೫-೧೦ | ೯ |
| ೨೫-೩೦ | ೧ | | | ೧೦-೧೫ | ೨ |
| ಒಟ್ಟು | ೧೬ | | ೧೬ | | ೧೬ |

## ಅರ್ಧಚಂದ್ರಾಕೃತಿ ಉಪಕರಣ

ಪ್ರಸ್ತುತ ೨೨ (ಶೇ. ೬.೮೭) ಅರ್ಧಚಂದ್ರಾಕೃತಿ ಉಪಕರಣಗಳು ದೊರೆತಿದ್ದು ಅವು ವಿವಿಧ ಜ್ಯಾಮಿತೀಯ ಆಕೃತಿಯಲ್ಲಿವೆ. ಸಮ ತ್ರಿಭುಜಾಕಾರ, ವಿಷಮಚತುರಸ್ರಾಕಾರ ಹಾಗೂ ದೀರ್ಘವೃತ್ತಾಕಾರದ ಉದಾಹರಣೆಗಳಿದ್ದರೂ ಅರ್ಧ ಚಂದ್ರಾಕೃತಿಯವೇ ಹೆಚ್ಚು. ಹೆಚ್ಚಿನ ಉದಾಹರಣೆಗಳಲ್ಲಿ ಸರಳ ರೇಖೆಯಲ್ಲಿ ಸಾಗುವ ಒಳ ಅಲಗು ಹರಿತವಾಗಿದ್ದರೆ ಕೆಲವದ-ರಲ್ಲಿ ಮಾತ್ರ ಬಾಗು ರೇಖೆಯಲ್ಲಿ ಸಾಗುವ ಹೊರ ಅಲಗನ್ನು ಹರಿತವಾಗಿ ರೂಪಿಸಿದ್ದು ಇನ್ನೂ ಒಂದೆರಡು ಉದಾಹರಣೆಗ-ಳಲ್ಲಿ ಎರಡೂ ಅಲಗೂ ಹರಿತವಾಗಿವೆ.

ಒಟ್ಟು ಉಪಕರಣಗಳ ಪ್ರಮಾಣ ವಿಶ್ಲೇಷಣೆಯನ್ನು ಕೋಷ್ಟಕ ಸಂಖ್ಯೆ ೮.೨೦ ರಲ್ಲಿ ನೀಡಿದೆ.

ಕೋಷ್ಟಕ ಸಂಖ್ಯೆ ೮.೨೦

| ಉದ್ದ ಮಿ.ಮೀ. | ಉಪಕರಣ ಸಂಖ್ಯೆ | ಅಗಲ ಮಿ.ಮೀ. | ಉಪಕರಣ ಸಂಖ್ಯೆ | ದಪ್ಪ ಮಿ.ಮೀ. | ಉಪಕರಣ ಸಂಖ್ಯೆ |
|---|---|---|---|---|---|
| ೫-೧೫ | ೧೧ | ೧-೫ | ೩ | ೧-೫ | ೧೭ |
| ೧೫-೨೦ | ೭ | ೫-೧೦ | ೧೪ | ೫-೧೦ | ೫ |
| ೨೦-೩೦ | ೪ | ೧೦-೨೦ | ೫ | | |
| ಒಟ್ಟು | ೨೨ | | ೨೨ | | ೨೨ |

## ಮೂಲ ಶಿಲಾಗಟ್ಟಿಗಳು.

ದೊರೆತಿರುವ ಮೂಲ ಶಿಲಾಗಟ್ಟಿಗಳು (ಒಟ್ಟು ೨೩ ಶೇ. ೭.೧೮) ವಿವಿಧ ಜಾತಿಯ ಅರೆಪ್ರಶಸ್ತ ಶಿಲಾ ಮಾಧ್ಯಮದಲ್ಲಿ ರೂಪಿಸಲಾಗಿದ್ದರೂ ಶೇ. ೯೫ ರಷ್ಟು ಮೂಲ ಶಿಲಾಗಟ್ಟಿಗಳು ಮಾತ್ರ ನಯವಾದ ಸಾಂದ್ರಕಣಗಳುಳ್ಳ ವಿವಿಧ ವರ್ಣಗಳ ಕ್ವಾರ್ಟ್ಸ್ ಜಾತಿಯ ಶಿಲೆಯಲ್ಲಿಯೇ ಇವೆ. ದೊರೆತ ಒಂದು ಮೂಲಶಿಲಾಗಟ್ಟಿ ನಸುಗೆಂಪು ವರ್ಣದ ಜಾಸ್ಪರ್ ನಲ್ಲಿ-ದೆ. ಇದು ಬಹುಶಃ ಕ್ವಾರ್ಟ್ಸ್ ಗುಂಪಿನ ಶಿಲೆಗಳು ವಿಪುಲವಾಗಿಯೂ ಇತರ ಅರೆ ಪ್ರಶಸ್ತ ಶಿಲೆಗಳು ಅತ್ಯಂತ ಕಡಿಮೆ ಪ್ರಮಾಣ-ದಲ್ಲಿ ಈ ಪ್ರದೇಶದಲ್ಲಿ ದೊರೆಯುವುದನ್ನು ನಿರೂಪಿಸುತ್ತದೆ. ಜಾಸ್ಪರ್‌ನಲ್ಲಿ ರೂಪಿಸಿದ ಮೂಲ ಶಿಲಾಗಟ್ಟಿಯ ಮೇಲೆ ಮೊನೆ, ನೀಳಚಕ್ಕೆ ಮುಂತಾದ ಉಪಕರಣಗಳನ್ನು ತಯಾರಿಸಲು ಚಕ್ಕೆಗಳನ್ನೆಬ್ಬಿಸಿದ ಗುರುತುಗಳಿವೆ. ಈ ಮೂಲಗಟ್ಟಿಯು ಅಗಲವಾದ

ತೆಳುದಪ್ಪದ ಮತ್ತು ಹರಿತವಾದ ಪಾರ್ಶ್ವಗಳುಳ್ಳ ಅಂಚು ಹೆರೆಚಕ್ಕೆಯಂತೆಯೂ ಉಪಯೋಗಿಸಿರುವ ಸಾಧ್ಯತೆ ಇದೆ. ಇದರ ಉದ್ದ ೨೦ ಮಿ.ಮೀ. ಅಗಲ ೨೮ ಮಿ.ಮೀ. ಮತ್ತು ದಪ್ಪ ೮ ಮಿ.ಮೀ. ಇದೆ.

ಕ್ವಾರ್ಟ್ಜ್ ಶಿಲಾ ಮಾಧ್ಯಮದಲ್ಲಿ ದೊರೆತಿರುವ ಮೂಲ ಶಿಲಾಗಟ್ಟಿಗಳು ಕೆನೆ ಬಿಳುಪು, ನಸುಗೆಂಪು, ನಸುಕಂದು, ನಸುಗೆಂಪಿನಿಂದ ಕಡುಗಪ್ಪಿನವರೆಗೆ ವರ್ಣಗಳನ್ನು ಹೊಂದಿವೆ. ಬಹುತೇಕ ಮೂಲಗಟ್ಟಿಗಳು ವಿಷಮಕೋನದಲ್ಲಿ ಕತ್ತರಿಸಿದ ವರ್ತುಲ ಸ್ತಂಭಾಕಾರದಲ್ಲಿದ್ದು ಕೆಲವು ಶಂಖ, ತ್ರಿಭುಜ, ಆಯತ ಮತ್ತು ಅಂಡಾಕಾರದ ಅಡ್ಡ ವಿನ್ಯಾಸವನ್ನು ಹೊಂದಿವೆ. ದಪ್ಪನೆಯ ತುದಿಯಲ್ಲಿ ಸಮತಲ ತಾಡನ ವೇದಿಕೆ ಇರುವುದು ಬಹುತೇಕ ಎಲ್ಲಾ ಮೂಲಗಟ್ಟಿಗಳಲ್ಲಿಯೂ ಗಮನಿಸಬಹು-ದಾದ ಅಂಶ ದೊರೆತಿರುವ ಮೂಲಗಟ್ಟಿಗಳಲ್ಲಿ ಕನಿಷ್ಠ ಮೂರರಿಂದ ಗರಿಷ್ಠ ಹದಿನೇಳು ಚಕ್ಕೆ ಕಲೆಗಳನ್ನು ಗುರುತಿಸಬಹುದಾಗಿ-ದೆ. ಈ ಮೂಲಶಿಲೆಗಳ ಕನಿಷ್ಠ ಎತ್ತರ ೧೦ ಮಿ.ಮೀ. ಇದ್ದು ಗರಿಷ್ಠ ಎತ್ತರ ೪೫ ಮಿ.ಮೀ. ಇವುಗಳ ಕನಿಷ್ಠ ಸುತ್ತಳತೆ ೩೫ ಮಿ.ಮೀ. ಇದ್ದು ಗರಿಷ್ಠ ಸುತ್ತಳತೆ ೮೦ ಮಿ.ಮೀ. ಇದೆ. ಮೂಲಗಟ್ಟಗಳ ಮೇಲಿರುವ ಚಕ್ಕೆಕಲೆಗಳ ಸೂಕ್ಷ್ಮಾವಲೋಕನದಿಂದ ತೆಳುವಾದ ಕಡಿಮೆ ಅಗಲದ ಸಮಾನಾಂತರ ಪಾರ್ಶ್ವಗಳ ಉದ್ದವಾದ ನೀಳಚಕ್ಕೆಗಳು, ಕಿರುಚಕ್ಕೆಗಳು ಮತ್ತು ವಿವಿಧಾಕಾರ-ವಾದ ಮೊನೆ ಉಪಕರಣಗಳನ್ನು ತಯಾರಿಸಿರಬಹುದೆಂದು ಗುರುತಿಸಬಹುದು.

**ಆಯ್ದ ಉಪಕರಣಗಳ ವಿವರಣೆ**

**ನೀಳಚಕ್ಕೆ ಮಾದರಿ**

**೧.೧ ನೀಳಚಕ್ಕೆಯಂತಹ ಚಕ್ಕೆ**

೧. ಅಂಕನಬಾವಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೨ ಅಗಲ ೧೩ ದಪ್ಪ ೫ ಮಿ.ಮೀ. ಆಯತಾಕಾರ. ಮುಂಬದಿ ಹೆಚ್ಚು ಕಡಿಮೆ ಸಮತಲ ಉಬ್ಬೇಣುಗಳಿವೆ. ಮೇಲ್ತುದಿ ಅರ್ಧ ವೃತ್ತಾಕಾರವಾಗಿದ್ದು ಹರಿತವಾಗಿದೆ. ಎಡಪಾರ್ಶ್ವದಲ್ಲಿ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಪುಡಿಕೆಲಸ ಮಾಡಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ದಪ್ಪ, ಅಗಲ ಹಾಗೂ ಮೊಂಡಾಗಿದೆ. ಹಿಂಬದಿ ಸಮತಲನಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೬೪ ಪ್ಲೇಟ್- LXIV. ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨. ಕೈಮರ:- ಕ್ವಾರ್ಟ್ಜ್ ಶಿಲೆ. ಉದ್ದ ೨೦ ಅಗಲ ೧೦ ದಪ್ಪ ೪ ಮಿ.ಮೀ. ಆಯತಾಕಾರ. ಮುಂಬದಿ ಸಮತಲ. ಮೇಲ್ತುದಿ ಮೊನಚಾಗಿದೆ. ಎಡಪಾರ್ಶ್ವ ಮೊಂಡಾಗಿದೆ. ಬಲಪಾರ್ಶ್ವ ಪುಡಿಗೆಲಸ ಮಾಡಿದ್ದು ಹರಿತ ಅಲಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ ಅಡ್ಡ ವಿನ್ಯಾಸ ಆಯತಾಕಾರ.
ಸಾಮ್ಯ:- ಸಂಖ್ಯೆ- ೨೨ ಪ್ಲೇಟ್- XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)

೩. ಗುರಮ್ಮನಕಟ್ಟೆ:- ಕ್ವಾರ್ಟ್ಜ್ ಶಿಲೆ. ಉದ್ದ ೧೮ ಅಗಲ ೧೨ ದಪ್ಪ ೪ ಮಿ.ಮೀ. ಹೆಚ್ಚು ಕಡಿಮೆ ಆಯತಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬೇಣು ಇದೆ. ಬಲಬದಿಗೆ ತೆಳುಚಕ್ಕೆ ತೆಗೆದಿದೆ. ಮೇಲ್ತುದಿಯಲ್ಲಿ ಮೊನೆಯಿದೆ. ಎಡಪಾರ್ಶ್ವದಲ್ಲಿ ಮೂಲಶಿಲಾ ತೊಗಟೆ ಇದ್ದು ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ನೇರ ಹರಿತ ಅಲಗಿದೆ. ಕೆಳತುದಿಯಲ್ಲಿ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೮೪ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)





ಗಾತ್ರ ೧:೧ ೧ ೨ ೩

**ದ್ವಿತೀಯ ಶ್ರೇಣಿ ಮರುಚಕ್ಕೆ ಎಬ್ಬಿಸಿದ ನೀಳಚಕ್ಕೆ**

೪. ಅಂಕನಬಾವಿ:- ಬಿಳಿ ಕ್ವಾರ್ಟ್ಸ್ ಶಿಲೆ. ಉದ್ದ ೨೦ ಅಗಲ ೧೧ ದಪ್ಪ ೫ ಮಿ.ಮೀ. ಆಯತಾಕಾರ. ಮುಂಬದಿ ಬಲಪಾರ್ಶ್ವ ದಪ್ಪವಾಗಿದ್ದು ಎಡಪಾರ್ಶ್ವದಲ್ಲಿ ತೆಳುವಾಗಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಕಿರು ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದೆ.

ಸಾಮ್ಯ:- ಸಂಖ್ಯೆ- ೬೦ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫. ಕೈಮರ:- ಬಿಳಿ ಕ್ವಾರ್ಟ್ಸ್ ಶಿಲೆ. ಉದ್ದ ೧೭ ಅಗಲ ೬ ದಪ್ಪ ೫ ಮಿ.ಮೀ. ಚತುರ್ಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ತೆಳುವಾಗಿದ್ದು ಹರಿತ ಅಲಗು ಹೊಂದಿದೆ. ಎರಡೂ ಪಾರ್ಶ್ವಗಳೂ ತೆಳುವಾಗಿದ್ದು ಹರಿತ ಅಲಗು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೪)

೬. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೧೭ ಅಗಲ ೧೦ ದಪ್ಪ ೪ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ತೆಳುವಾಗಿದೆ. ಕೆಳತುದಿ ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಪುಡಿಕೆಲಸಮಾಡಿ ವಕ್ರವಾದ ಹರಿತ ಅಲಗು ರೂಪಿಸಿದೆ. ಹಿಂಬದಿ ಸಮತಲವಾಗಿಲ್ಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೭ ಪ್ಲೇಟ್ XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)

೭. ಸಿದ್ಧಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೧೮ ಅಗಲ ೬ ದಪ್ಪ ೨ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಕೆಳಭಾಗ ದಪ್ಪವಿದ್ದು ಮೇಲ್ಭಾಗ ತೆಳುವಾಗಿದೆ. ಮೇಲ್ತುದಿಯಲ್ಲಿ ಹರಿತ ಅಲಗು ಇದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಕೆಳತುದಿ ತೆಳುವಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೫೭ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೮. ಸಿದ್ಧಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦ ಅಗಲ ೧೩ ದಪ್ಪ ೮ ಮಿ.ಮೀ. ಆಯತಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬು ಇದೆ. ಮೇಲ್ತುದಿ ತೆಳುವಾಗಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಪುಡಿಗೆಲಸ ಮಾಡಿ ಗರಗಸದಂತಹ ಹರಿತ ಅಲಗು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಹಿಂಬದಿ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಹಿಂಬದಿ ನಿಮ್ನ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೪ ನಕ್ಷೆ- ೭ ಪಾಲಪಾಯ್ (ರಾಮಿರೆಡ್ಡಿ.ವಿ:೧೯೭೬)

೯. ಸಿದ್ಧಾಪುರ:- ಫೆಲ್ಸಪರ್ ಶಿಲೆ. ಉದ್ದ ೩೦ ಅಗಲ ೨೫ ದಪ್ಪ ೫ ಮಿ.ಮೀ. ಆಯತಾಕಾರ. ಮುಂಬದಿಯ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಮೇಲ್ತುದಿಯಲ್ಲಿ ಹಿಂಬದಿಯಿಂದ ಪುಡಿ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಎಡಪಾರ್ಶ್ವದ ಮೇಲ್ಬದಿಯಲ್ಲಿ ಪುಡಿಗೆಲಸ ಮಾಡಿ ಕೊಕ್ಕು ಮೂಡಿಸಿದೆ. ಬಲಪಾರ್ಶ್ವ ಗರಗಸದಂತಹ ಹರಿತ ಅಲಗನ್ನು ಹೊಂದಿದೆ. ಕೆಳತುದಿ ತೆಳುವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೯ ನಕ್ಷೆ ೮ (ರಾಮಿರೆಡ್ಡಿ.ವಿ:೧೯೭೮)

೧೦. ಹೂವಿನಕಟ್ಟೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೦ ಅಗಲ ೧೮ ದಪ್ಪ ೫ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಮೊನೆಯಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದೆ. ಬಲಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಹಿಂಬದಿ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- XII A ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪)







ಗಾತ್ರ ೧:೧



**ಸಾಮಾನಾಂತರ ಪಾರ್ಶ್ವಗಳ ನೀಳಚಕ್ಕೆ (ಇಬ್ಬದಿ ನೀಳಚಕ್ಕೆ)**

೧೧. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೨೦ ಅಗಲ ೧೦ ದಪ್ಪ ೫ ಮಿ.ಮೀ. ತ್ರಿಭುಜಾಕಾರ. ಮುಂಬದಿಯ ಮಧ್ಯ ಉಬ್ಬೇಣು ನೇರವಾಗಿದೆ. ಮೇಲ್ತುದಿ ಎರಡೂ ಬದಿ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಮೂಡಿಸಿದೆ. ಪುಡಿಗೆಲಸ ಮಾಡಿದೆ. ಕೆಳತುದಿ ಎರಡೂ ಬದಿ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಸಮತಲ ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೩೬ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೨. ಅಂಕನಬಾವಿ:- ಕ್ವಾರ್ಟ್ಸ ಶಿಲೆ. ಉದ್ದ ೩೩ ಅಗಲ ೨೦ ದಪ್ಪ ೮ ಮಿ.ಮೀ. ಅಸಮ ಆಯತಾಕಾರ. ಮುಂಬದಿಯ ಮಧ್ಯ ಉಬ್ಬೇಣು ಇದ್ದು ಮೇಲ್ಭಾಗ ತೆಳುವಾಗಿದೆ. ಮೇಲ್ತುದಿ ಪುಡಿಗೆಲಸ ಮಾಡಿದ್ದು ಮೊನೆಯಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಚಕ್ಕೆಕಲೆ ಇದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೪೦ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೩. ಕೈಮರ:- ಆದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೨ ಅಗಲ ೧೪ ದಪ್ಪ ೬ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿಯಲ್ಲಿ ಮಧ್ಯ ಉಬ್ಬೇಣು ಇದೆ. ಪುಡಿಗೆಲಸ ಮಾಡಿ ಮೇಲ್ತುದಿ ಮೊನೆ ಮೂಡಿಸಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವದ ಅಲಗು ಪುಡಿಗೆಲಸದಿಂದಾಗಿ ವಕ್ರರೇಖೆಯಲ್ಲಿದೆ. ಕೆಳತುದಿ ದಪ್ಪವಿದ್ದು ಅಗಲವಾಗಿ ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೭ ಪ್ಲೇಟ್ XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)

೧೪. ಗುರಮ್ಮನಕಟ್ಟೆ:- ಫೆಲ್ಸಪರ್ ಶಿಲೆ. ಉದ್ದ ೨೬ ಅಗಲ ೧೭ ದಪ್ಪ ೫ ಮಿ.ಮೀ. ಅಂಡಾಕಾರ ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಮೇಲ್ತುದಿ ಮೊನೆ ಮುರಿದಿದ್ದು ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದೆ. ಪುಡಿಗೆಲಸ ಮಾಡಿದೆ. ಕೆಳತುದಿಯ ಮೊನೆ ಎಡಬದಿಗಿದೆ. ಹಿಂಬದಿ ನಿಮ್ನವಾಗಿದೆ.
ಸಾಮ್ಯ:- ಸಂಖ್ಯೆ- ೫೩ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೫. ಗುರಮ್ಮನಕಟ್ಟೆ:- ಕ್ವಾರ್ಟ್ಸ ಶಿಲೆ. ಉದ್ದ ೧೮ ಅಗಲ ೮ ದಪ್ಪ ೩ ಮಿ.ಮೀ. ಅಂಡಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ತೆಳುವಾಗಿದ್ದು ಅರ್ಧ ವೃತ್ತಾಕಾರದ ಹರಿತ ಅಲಗನ್ನು ಹೊಂದಿದೆ. ಎರಡೂ ಪಾರ್ಶ್ವಗಳೂ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೧೪ ಪ್ಲೇಟ್ XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)

೧೬. ಕಲ್ಲೇನಹಳ್ಳಿ:- ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೧೫ ದಪ್ಪ ೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎರಡೂ ತುದಿಗಳೂ ದಪ್ಪವಿದ್ದು ಮೊಂಡಾಗಿದೆ. ಎಡಪಾರ್ಶ್ವದಲ್ಲಿ ಪುಡಿಗೆಲಸ ಮಾಡಿ ಗರಗಸದಂತಹ ಅಲಗು ಮೂಡಿಸಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೫೯ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೧೭. ನಾಗಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೨೮ ಅಗಲ ೧೩ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿಯ ಕೆಳಭಾಗದಲ್ಲಿ ಉಬ್ಬು ಇದ್ದು ಮೇಲ್ಭಾಗ ತೆಳುವಾಗಿದೆ. ಹಲವಾರು ಉಬ್ಬೇಣುಗಳಿವೆ. ಮೇಲ್ತುದಿ ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ನಿಮ್ನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೩೫ ಪ್ಲೇಟ್ XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)

೧೮. ನಿಡುಗಲ್ಲು:- ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೧೮ ದಪ್ಪ ೧೦ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಹಿಂಬದಿಯಿಂದ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದೆ. ಎಡಪಾರ್ಶ್ವದ ಅಲಗು ಶೀನವಾಗಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ತಾಡನಶಂಖುವಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ
ಸಾಮ್ಯ:- ಸಂಖ್ಯೆ- ೧೬ ಪ್ಲೇಟ್ XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)







ಗಾತ್ರ ೧:೧



**ಕಿರು ನೀಳಚಕ್ಕೆ**

೧೯. ಅಂಕನಬಾವಿ:- ಕ್ವಾರ್ಟ್ಜ಼ ಶಿಲೆ. ಉದ್ದ ೧೩ ಅಗಲ ೮ ದಪ್ಪ ೫ ಮಿ.ಮೀ. ಅಸಮ ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಮೊನೆ ಇದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಬಲಪಾರ್ಶ್ವ ತೆಳು ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಕೆಳತುದಿಯಲ್ಲಿ ಪುಡಿಗೆಲಸ ಮಾಡಿ ಮೊನೆ ಮೂಡಿಸಿದೆ. ಹಿಂಬದಿ ನಿಮ್ನವಾಗಿದೆ.
ಸಾಮ್ಯ:- ಸಂಖ್ಯೆ- ೩೪ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)

೨೦. ಅಂಕನಬಾವಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೮ ಅಗಲ ೩ ದಪ್ಪ ೫ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ತುದಿಗಳು ಮೊಂಡಾಗಿವೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ. ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೭ ಪ್ಲೇಟ್- XII A ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪)

೨೧. ಅಂಕನಬಾವಿ:- ಅದಿರುಯುಕ್ತ ಕ್ವಾರ್ಟ್ಜ಼ ಶಿಲೆ. ಉದ್ದ ೧೪ ಅಗಲ ೧೦ ದಪ್ಪ ೫ ಮಿ.ಮೀ. ಅಸಮ ಆಯತಾಕಾರ. ಮೇಲ್ತುದಿ ಮೊಂಡಾಗಿದೆ. ಎರಡೂ ಪಾರ್ಶ್ವಗಳಲ್ಲೂ ಪುಡಿಗೆಲಸ ಮಾಡಿ ನಿಮ್ನ ಹರಿತ ಅಲಗು ಮೂಡಿಸಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗನ್ನು ರೂಪಿಸಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೨೧ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)

೨೨. ಅಂಕನಬಾವಿ:- ಅದಿರುಯುಕ್ತ ಕ್ವಾರ್ಟ್ಜ಼ ಶಿಲೆ. ಉದ್ದ ೧೨ ಅಗಲ ೧೦ ದಪ್ಪ ೩ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಉಬ್ಬೇಣು ಇದೆ. ಮೇಲ್ತುದಿ ಮೊಂಡಾಗಿದೆ. ಎಡಪಾರ್ಶ್ವದ ಹರಿತ ಅಲಗನ್ನು ರೂಪಿಸಲು ಕಿರುಚಕ್ಕೆ ತೆಗೆದಿದೆ. ಬಲಪಾರ್ಶ್ವ ಮೊಂಡಾಗಿದ್ದು ಮೂಲಶಿಲಾ ತೊಗಟೆಯನ್ನು ಹೊಂದಿದೆ. ಕೆಳತುದಿ ದಪ್ಪವಾಗಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೬ ಪ್ಲೇಟ್- XII A ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪)

೨೩. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೧೨ ಅಗಲ ೯ ದಪ್ಪ ೨ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯ ಎರಡೂ ಬದಿಯಿಂದ ಚಕ್ಕೆ ತೆಗೆದು ಎಡಬದಿಯಲ್ಲಿ ಮೊನೆ ಮೂಡಿಸಿದೆ. ಎಡಪಾರ್ಶ್ವದ ಅಲಗು ಗರಗಸದಂತಿದೆ. ಪುಡಿಗೆಲಸ ಮಾಡಿದೆ. ಬಲಪಾರ್ಶ್ವದ ಅಲಗು ಹರಿತವಾಗಿದ್ದು ನೇರವಾಗಿದೆ. ಕೆಳತುದಿಯ ಹಿಂಬದಿಯಿಂದ ಚಕ್ಕೆ ತೆಗೆದು ಮೊನೆ ರೂಪಿಸಲಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೯ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)

೨೪. ಕೈಮರ:- ಕ್ವಾರ್ಟ್ಜ಼ ಶಿಲೆ. ಉದ್ದ ೧೩ ಅಗಲ ೮ ದಪ್ಪ ೨ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯ ಬಲಕ್ಕೆ ಮೊನೆ ಇದೆ. ಉಳಿದ ಭಾಗ ಮೊಂಡಾಗಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗನ್ನು ಹೊಂದಿವೆ. ಕೆಳತುದಿಯ ಎಡಕ್ಕೆ ಮೊನೆ ರೂಪಿಸಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೮ ಪ್ಲೇಟ್- XII A ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪)

೨೫. ಕೈಮರ:- ಕ್ವಾರ್ಟ್ಜ಼ ಶಿಲೆ. ಉದ್ದ ೧೫ ಅಗಲ ೫ ದಪ್ಪ ೩ ಮಿ.ಮೀ. ಆಯತಾಕಾರ ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ಮೊಂಡಾಗಿದೆ. ಎರಡೂ ಪಾರ್ಶ್ವ ಹರಿತ ಅಲಗನ್ನು ಹೊಂದಿವೆ. ಕೆಳತುದಿ ತೆಳುವಾಗಿದ್ದು ಹರಿತವಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೨೭ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)








ಗಾತ್ರ ೧:೧

**ಮೊನೆ ಮಾದರಿ**

**ಅ) ತ್ರಿಭುಜಾಕಾರದ ಮೊನೆ**

೨೬. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೧೮ ಅಗಲ ೧೫ ದಪ್ಪ ೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆಕಲೆಗಳಿವೆ. ಮೇಲ್ತುದಿಯಲ್ಲಿ ಹರಿತ ಮೊನೆ ರೂಪಿಸಿದೆ. ಎಡಪಾರ್ಶ್ವ ಮೊಂಡಾಗಿದೆ. ಬಲಪಾರ್ಶ್ವದಲ್ಲಿ ತೆಳುಚಕ್ಕೆ ತೆಗೆದು ಅಲಗು ಮೂಡಿಸಿದೆ. ಕೆಳತುದಿಯಲ್ಲಿ ಹಿಂಬದಿಯಿಂದ ಚಕ್ಕೆ ತೆಗೆದಿದ್ದು ಅಲಗು ರೂಪಿಸಿದೆ. ಹಿಂಬದಿ ಪೀನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೭೩ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೭. ಅಂಕನಬಾವಿ:- ನಸುಗೆಂಪು ಬಣ್ಣದ ಕ್ವಾರ್ಟ್ಸ್ ಶಿಲೆ. ಉದ್ದ ೧೭ ಅಗಲ ೧೦ ದಪ್ಪ ೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಸಮವಿದ್ದು ಚಕ್ಕೆಕಲೆಗಳಿವೆ. ಮೇಲ್ತುದಿಯಲ್ಲಿ ಹರಿತ ಮೊನೆ ಇದೆ. ಎಡಪಾರ್ಶ್ವ ಅಲಗನ್ನು ಹೊಂದಿದೆ. ಪುಡಿಗೆಲಸ ಮಾಡಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಪುಡಿಗೆಲಸ ಮಾಡಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ ಅಡ್ಡ ವಿನ್ಯಾಸ ಅಯತಾಕಾರ.
ಸಾಮ್ಯ:- ಸಂಖ್ಯೆ- ೭೨ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೨೮. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೨೩ ಅಗಲ ೧೬ ದಪ್ಪ ೭ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣಿದೆ. ಮೇಲ್ತುದಿಯ ಎರಡೂ ಬದಿಗೆ ಚಕ್ಕೆ ತೆಗೆದು ಮೊನೆ ಮೂಡಿಸಿದೆ. ಎರಡೂ ಪಾರ್ಶ್ವಗಳೂ ಹರಿತ ಅಲಗುನ್ನು ಹೊಂದಿವೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ.
ಸಾಮ್ಯ:- ಅಪರೂಪದ ಉಪಕರಣ

೨೯. ಕೈಮರ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೦ ಅಗಲ ೧೩ ದಪ್ಪ ೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಎಡಭಾಗದಲ್ಲಿದೆ. ಹಲವು ಚಕ್ಕೆಕಲೆ ಇದೆ ಮೇಲ್ತುದಿ ಮೊನೆ ಗಳಿವೆ. ಎಡಪಾರ್ಶ್ವದಲ್ಲಿ ಪುಡಿಗೆಲಸ ಮಾಡಿ ಗರಗಸದಂತಹ ಅಲಗು ಮೂಡಿಸಿದೆ. ಬಲಪಾರ್ಶ್ವದ ಅಲಗು ಭಾಗ ತೆಳುವಾಗಿದ್ದು ಗರಗಸದಂತಹ ಅಲಗನ್ನು ಹೊಂದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಅಪರೂಪದ ಉಪಕರಣ




ಗಾತ್ರ ೧:೧



೩೦. ಅಂಕನಬಾವಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೨ ಅಗಲ ೬ ದಪ್ಪ ೫ ಮಿ.ಮೀ. ಅರ್ಧಚಂದ್ರಾಕಾರ. ಮುಂಬದಿ ಸಮತಲ. ಮೇಲ್ತುದಿಯಲ್ಲಿ ಬಲಕ್ಕೆ ಕೊಕ್ಕು ಮೂಡಿಸಿದೆ. ಕೊಕ್ಕಿನ ಕೆಳಭಾಗದಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಎಡಪಾರ್ಶ್ವ ದಪ್ಪವಾಗಿದ್ದು ಮೊಂಡಾಗಿದೆ. ಕೆಳತುದಿ ಬಲಕ್ಕೆ ಮೊನೆ ಇದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೭ ಪ್ಲೇಟ್- LXV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೧. ಅಂಕನಬಾವಿ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೩ ಅಗಲ ೧೨ ದಪ್ಪ ೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬೇಣು ಎಡ ಬದಿಗಿದೆ. ಮೇಲ್ತುದಿ ಕೊಕ್ಕು ಬಲಕ್ಕೆ ಬಾಗಿದೆ. ಎಡಪಾರ್ಶ್ವದಲ್ಲಿ ಆಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದೆ. ಬಲಪಾರ್ಶ್ವ ಮತ್ತು ಕೆಳತುದಿ ತೆಳುವಾಗಿದ್ದು ಅಲಗನ್ನು ಹೊಂದಿದೆ. ಹಿಂಬದಿ ಸಮತಲ.
ಸಾಮ್ಯ:- ಅಪರೂಪದ ಉಪಕರಣ

೩೨. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೧೮ ದಪ್ಪ ೮ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿಯ ಎಡಭಾಗದಲ್ಲಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಮೊನೆ ಇದೆ. ಬಲಕ್ಕೆ ಕೊಕ್ಕು ಮೂಡಿಸಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಕೆಳತುದಿ ಮೊನೆ ಇದೆ. ಹಿಂಬದಿ ಅಸಮತಲವಿದ್ದು ಮೂಲಶಿಲಾ ತೊಗಟೆ ಅಂಶವಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೯ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೬;೧೫೧)

೩೩. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೨೦ ಅಗಲ ೧೫ ದಪ್ಪ ೭ ಮಿ.ಮೀ. ಆಯತಾಕಾರ. ಮುಂಬದಿ ಬಲಭಾಗ ದಪ್ಪವಿದ್ದು ಎಡಭಾಗ ತೆಳುವಾಗಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಬಲಬದಿಗೆ ಕೊಕ್ಕು ಮೂಡಿಸಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಪುಡಿಗೆಲಸ ಮಾಡಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಅಪರೂಪದ ಉಪಕರಣ

೩೪. ಕೈಮರ:- ಅದಿರುಯುಕ್ತ ಕ್ವಾರ್ಟ್ಸ್ ಶಿಲೆ. ಉದ್ದ ೨೦ ಅಗಲ ೧೫ ದಪ್ಪ ೩ ಮಿ.ಮೀ. ಅಸಮ ಆಯತಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಬಲಕ್ಕೆ ಕೊಕ್ಕು ಮೂಡಿಸಿದೆ. ಎಡಪಾರ್ಶ್ವ ತೆಳುವಾಗಿದ್ದು ಅಲಗನ್ನು ಹೊಂದಿದೆ. ಬಲಪಾರ್ಶ್ವದ ಕೊಕ್ಕಿನ ಕೆಳಗೆ ಚಿಕ್ಕಚಿಕ್ಕ ಚಕ್ಕೆ ತೆಗೆದಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೬೭ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)









ಗಾತ್ರ ೧:೧

ಎಲೆಯಾಕಾರದ ಮೊನೆ

೩೫. ಅಂಕನಬಾವಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೧೮ ಅಗಲ ೧೮ ದಪ್ಪ ೬ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಮೇಲ್ತುದಿ ಮೊನೆ ಇದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದ್ದು ಪುಡಿಗೆಲಸ ಮಾಡಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದೆ.
ಸಾಮ್ಯ:- ಸಂಖ್ಯೆ- ೭೯ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೬. ಕಲ್ಲೇನಹಳ್ಳಿ:- ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೧೩ ದಪ್ಪ ೫ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಮೇಲ್ತುದಿ ಎರಡೂ ಬದಿ ಚಕ್ಕೆ ತೆಗೆದು ಮೊನೆ ರೂಪಿಸಿದೆ. ಎರಡೂ ಪಾರ್ಶ್ವಗಳಲ್ಲೂ ಹರಿತ ಅಲಗು ಇದೆ. ಬಲಪಾರ್ಶ್ವದ ಅಲಗು ವಕ್ರರೇಯಲ್ಲಿದೆ. ಕೆಳತುದಿ ಮೊನೆ ಇದೆ. ಹಿಂಬದಿ ಪೀನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೩೯ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೭. ಕಲ್ಲೇನಹಳ್ಳಿ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೧೫ ದಪ್ಪ ೭ ಮಿ.ಮೀ. ಎಲೆಯಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಎಡಬದಿ ಮೂಲಶಿಲಾ ತೊಗಟೆ ಇದೆ. ಬಲತುದಿ ತೆಳು ಚಕ್ಕೆ ತೆಗೆದಿದೆ. ಮೇಲ್ತುದಿ ಮೊನೆ ಇದೆ. ಎಡಪಾರ್ಶ್ವದಲ್ಲಿ ಅಲಗು ಪೀನವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಪೀನವಾಗಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೬೧ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)




ಪಾರ್ಶ್ವ ಹೆರೆಚಕ್ಕೆ

೩೮. ಅಂಕನಬಾವಿ:- ಕ್ವಾರ್ಟ್ಸ ಶಿಲೆ. ಉದ್ದ ೩೦ ಅಗಲ ೨೪ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿಯ ಕೆಳಭಾಗ ತೆಳುವಿದ್ದು ಮೇಲ್ಭಾಗ ದಪ್ಪವಾಗಿದೆ. ಮಧ್ಯ ಉಬ್ಬೇಣು ವಕ್ರರೇಖೆಯಲ್ಲಿದೆ. ಮೇಲ್ತುದಿ ದಪ್ಪವಿದ್ದು ಮೊಂಡಾಗಿದೆ. ಮೂಲಶಿಲಾ ತೊಗಟೆ ಇದೆ. ಎಡಪಾರ್ಶ್ವ ತೆಳುವಾಗಿದ್ದು ಹರಿತವಾಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಪುಡಿಗೆಲಸ ಮಾಡಿದ್ದು ಮೊನೆ ಇದೆ. ಹಿಂಬದಿ ಪೀನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೨ ಪ್ಲೇಟ್- LXV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೩೯. ಅಂಕನಬಾವಿ:- ಕಪ್ಪು ಜಾಸ್ಪರ್ ಶಿಲೆ. ಉದ್ದ ೨೦ ಅಗಲ ೧೫ ದಪ್ಪ ೭ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಮಧ್ಯ ಸಮವಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿಯಲ್ಲಿ ಪುಡಿಗೆಲಸ ಮಾಡಿ ಎಡಬದಿಗೆ ಕೊಕ್ಕು ಮೂಡಿಸಿದೆ. ಎಡಪಾರ್ಶ್ವದ ಹರಿತ ಅಲಗು ವಕ್ರರೇಖೆಯಲ್ಲಿದೆ. ಪುಡಿಗೆಲಸ ಮಾಡಿದೆ. ಬಲಪಾರ್ಶ್ವ ದಪ್ಪದಿದ್ದು ಮೊಂಡಾಗಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೮ ನಕ್ಷೆ- ೭ (ರಾಮಿರೆಡ್ಡಿ.ವಿ:೧೯೭೬;೧೫೦)

೪೦. ನಾಗಲಾಪುರ:- ಡಾಲರೈಟ್ ಶಿಲೆ. ಉದ್ದ ೨೩ ಅಗಲ ೨೦ ದಪ್ಪ ೭ ಮಿ.ಮೀ. ಆಯತಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆಕಲೆಗಳನ್ನು ಹೊಂದಿದೆ. ಮೇಲ್ತುದಿ ಅಗಲವಾಗಿದ್ದು ಹರಿತ ಅಲಗನ್ನು ಹೊಂದಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿದ್ದು ಕೆಳ ಬದಿಯಲ್ಲಿ ಮೊನೆ ಇದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಮೇಲ್ಭಾಗ ಹರಿತವಾಗಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವನ್ನು ಹೊಂದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೧೧ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)





೩೮ ೩೯ ೪೦

ಗಾತ್ರ ೧:೧



**ತುದಿ ಹೆರೆಚಕ್ಕೆ**

೪೧. ಅಂಕನಬಾವಿ:- ಅದಿರುಯುಕ್ತ ಕಪ್ಪು ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೧೫ ದಪ್ಪ ೧೦ ಮಿ.ಮೀ. ವಿಷಮಭುಜ. ಚೌಕೋನಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆಕಲೆಗಳಿವೆ. ಮೇಲ್ತುದಿ ಮಧ್ಯದಲ್ಲಿ ಮೊನೆ ಇದೆ. ಎರಡೂ ಬದಿಗೆ ಅಲಗು ಮೂಡಿಸಿದೆ. ಎಡಪಾರ್ಶ್ವದ ಕೆಳಭಾಗ ಹರಿತ ಅಲಗನ್ನು ಹೊಂದಿದೆ. ಬಲಪಾರ್ಶ್ವ ಪೀನವಾಗಿದ್ದು ಮೊಂಡಾಗಿದೆ. ಕೆಳತುದಿ ಮೊನೆಯಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ಚಕ್ಕೆ ಕಲೆಗಳನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೨ ಪ್ಲೇಟ್- ೪೯ ತಿ.ನರಸೀಪುರ (ಶೇಷಾದ್ರಿ.ಎಂ:೧೯೭೧;೧೫೬)

೪೨. ನಾಗಲಾಪುರ:- ಕ್ವಾರ್ಟ್ಜ಼ ಶಿಲೆ. ಉದ್ದ ೨೧ ಅಗಲ ೧೬ ದಪ್ಪ ೫ ಮಿ.ಮೀ. ವಿಷಮ ಚತರ್ಭುಜಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಚಕ್ಕೆ ಕಲೆಗಳಿವೆ. ಮೇಲ್ತುದಿ ಹರಿತ ಅಲಗನ್ನು ಹೊಂದಿದೆ. ಎಡಪಾರ್ಶ್ವದ ಮೇಲ್ಬದಿ ಅಲಗನ್ನು ಹೊಂದಿದೆ. ಕೆಳಬದಿ ದಪ್ಪವಾಗಿದ್ದು ಮೊಂಡಾಗಿದೆ. ಬಲಪಾರ್ಶ್ವದ ಮೇಲ್ಬದಿ ಅಲಗನ್ನು ಹೊಂದಿದೆ. ಕೆಳಬದಿ ದಪ್ಪವಾಗಿದ್ದು ಮೊಂಡಾಗಿದೆ ಕೆಳತುದಿ ಅರ್ಧವೃತ್ತಾಕಾರದಲ್ಲಿದ್ದು ದಪ್ಪವಾಗಿದೆ. ಹಿಂಬದಿ ನಿಮ್ನವಾಗಿದೆ.

ಸಾಮ್ಯ:- ಸಂಖ್ಯೆ- ಪ್ಲೇಟ್- ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೬;೧೫೧)







ಗಾತ್ರ ೧:೧ ೪೧ ೪೨

**ಒಳಬಾಗಿದ ಅಂಚಿನ ಹೆರೆಚಕ್ಕೆ**

೪೩. ಅಂಕನಬಾವಿ:- ಕ್ವಾರ್ಟ್ಜ಼ ಶಿಲೆ. ಉದ್ದ ೨೭ ಅಗಲ ೨೦ ದಪ್ಪ ೧೧ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿಯ ಎಡಬದಿ ತೆಳುವಾಗಿದ್ದು ಬಲಬದಿ ದಪ್ಪವಾಗಿದೆ. ಮೇಲ್ತುದಿಯಲ್ಲಿ ಪುಡಿಗೆಲಸ ಮಾಡಿ ಅಲಗು ಮೂಡಿಸಿದೆ. ಬಲಪಾರ್ಶ್ವದಲ್ಲಿ ಹರಿತ ಅಲಗದ್ದು ನಿಮ್ನವಾಗಿದೆ. ಕೆಳತುದಿ ಮೊನೆ ಇದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ.

ಸಾಮ್ಯ:- ಸಂಖ್ಯೆ- ೧ ಪ್ಲೇಟ್- ೪೯ ತಿ.ನರಸೀಪುರ (ಶೇಷಾದ್ರಿ.ಎಂ:೧೯೭೧;೧೫೬)

೪೪. ಹೂವಿನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೨೬ ಅಗಲ ೨೦ ದಪ್ಪ ೮ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿ ಸಮತಲವಿದ್ದು ಎಡಭಾಗ ಚಕ್ಕೆ ತೆಗೆದು ತೆಳುವಾಗಿದೆ. ಮೇಲ್ತುದಿಯ ಎಡಬದಿ ತೆಳುವಾಗಿದ್ದು, ಬಲಬದಿ ದಪ್ಪವಾಗಿ ಮೊಂಡಾಗಿದೆ. ಎಡಪಾರ್ಶ್ವ ಹರಿತ ಅಲಗನ್ನು ಹೊಂದಿ ಮಧ್ಯದಲ್ಲಿ ನಿಮ್ನವಾಗಿದ್ದು ಹಿಂಬದಿಯಿಂದ ಚಕ್ಕೆಗಳನ್ನು ತೆಗೆದಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಎಡ ಬದಿಯಲ್ಲಿ ಮೊನೆ ರೂಪಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ. ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೮ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೬;೧೫೧)







ಗಾತ್ರ ೧:೧ ೪೩ ೪೪

**ಮೂಲಗಟ್ಟ ಹೆರೆಚಕ್ಕೆ**

೪೬. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೩೦ ಅಗಲ ೨೫ ದಪ್ಪ ೧೨ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆಕಲೆಗಳಿವೆ. ಮೇಲ್ತುದಿ ಮೊನೆ ಇದ್ದು ಎರಡೂ ಬದಿಗೂ ಚಕ್ಕೆ ತೆಗೆದು ಹರಿತ ಅಲಗನ್ನು ಮೂಡಿಸಿದೆ. ಎರಡೂ ಪಾರ್ಶ್ವಗಳೂ ದಪ್ಪವಾಗಿದ್ದು ಮೊಂಡಾಗಿವೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಮೊಂಡು ಮೊನೆ ಮೂಡಿಸಿದೆ. ಹಿಂಬದಿ ಪೀನವಾಗಿದ್ದು ಹಲವಾರು ಚಕ್ಕೆ ಕಲೆಗಳಿವೆ. ಅಡ್ಡ ವಿನ್ಯಾಸ ಆಯತಾಕಾರ.

ಸಾಮ್ಯ:- ಸಂಖ್ಯೆ- ೭೬ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೭. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೨೭ ಅಗಲ ೨೧ ದಪ್ಪ ೧೦ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆಕಲೆಗಳಿವೆ. ಮೇಲ್ತುದಿ ಮೊನೆ ರೂಪಿಸಿದೆ. ಎಡಪಾರ್ಶ್ವದಲ್ಲಿ ಹರಿತ ಅಲಗಿದೆ. ಬಲಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ಆಳಚಕ್ಕೆ ತೆಗೆದು ಹರಿತ ಅಲಗು ಮೂಡಿಸಿದ್ದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.

ಸಾಮ್ಯ:- ಸಂಖ್ಯೆ- ೪ ಪ್ಲೇಟ್- LXV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೮. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೨೦ ಅಗಲ ೧೫ ದಪ್ಪ ೫ ಮಿ.ಮೀ. ಅಂಡಾಕಾರ. ಮುಂಬದಿ ಮಧ್ಯ ಉಬ್ಬಿದ್ದು ಚಕ್ಕೆಕಲೆಗಳಿವೆ. ಪರಿಧಿಯ ಸುತ್ತಲೂ ಚಕ್ಕೆಗಳನ್ನು ತೆಗೆದಿದೆ. ಮೇಲ್ತುದಿ ಎರಡೂ ಬದಿ ಚಕ್ಕೆ ತೆಗೆದು ಮಧ್ಯದಲ್ಲಿ ಕಿರುಮೊನೆ ಮೂಡಿಸಿದೆ. ಎರಡೂ ಪರ್ಶ್ವಗಳಲ್ಲೂ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಪುಡಿಗೆಲಸ ಮಾಡಿದ್ದು ಗರಗಸದಂತಹ ಅಲಗು ಮೂಡಿಸಿದೆ. ಕೆಳತುದಿ ತೆಳುವಾಗಿದ್ದು ಹರಿತ ಅಲಗನ್ನು ಹೊಂದಿದೆ. ಹಿಂಬದಿ ಪೀನವಾಗಿದ್ದು ಚಕ್ಕೆಕಲೆಗಳಿವೆ. ಅಡ್ಡ ವಿನ್ಯಾಸ ಅಂಡಾಕಾರ.

ಸಾಮ್ಯ:- ಸಂಖ್ಯೆ- ೩ ಪ್ಲೇಟ್- LXV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೪೯. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೨೫ ಅಗಲ ೨೦ ದಪ್ಪ ೧೦ ಮಿ.ಮೀ. ಚೌಕಾಕಾರ. ಮುಂಬದಿ ಮಧ್ಯ ಉಬ್ಬು ಇದ್ದು ಚಕ್ಕೆಕಲೆಗಳಿವೆ. ಮೇಲ್ತುದಿಯಲ್ಲಿ ವಕ್ರರೇಖೆಯ ಹರಿತ ಅಲಗಿದೆ ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ಚಕ್ಕೆ ತೆಗೆದು ವಕ್ರರೇಖೆಯ ಅಲಗು ಮೂಡಿಸಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದಿದ್ದು ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲವಿದ್ದು ಮೂಲಶಿಲಾ ತೊಗಟೆಯನ್ನು ಹೊಂದಿದೆ.

ಸಾಮ್ಯ:- ಸಂಖ್ಯೆ- ೭೦ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫೦. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೨೫ ಅಗಲ ೨೨ ದಪ್ಪ ೧೩ ಮಿ.ಮೀ. ಅಸಮ ಚತುರ್ಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದ್ದು ಚಕ್ಕೆಕಲೆಗಳಿವೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದ್ದು ವಕ್ರರೇಖೆಯ ಅಲಗು ಇದೆ. ಎಡಪಾರ್ಶ್ವ ಪುಡಿಗೆಲಸ ಮಾಡಿ ವಕ್ರರೇಖೆಯ ಅಲಗನ್ನು ಮೂಡಿಸಿದೆ. ಬಲಪಾರ್ಶ್ವ ವಿರುದ್ಧ ದಿಕ್ಕಿನಲ್ಲಿ ಚಕ್ಕೆ ತೆಗೆದು ಅಲಗು ಮೂಡಿಸಿದೆ. ಕೆಳತುದಿ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಅಸಮತಲವಿದ್ದು ಚಕ್ಕೆಕಲೆಗಳಿವೆ.

ಸಾಮ್ಯ:- ಅಪರೂಪದ ಉಪಕರಣ


















ಗಾತ್ರ ೧:೧



**ಕೊರೆಗ**

೫೧. ಅಂಕನಬಾವಿ:- ಜಾಸ್ಪರ್ ಶಿಲೆ. ಉದ್ದ ೨೧ ಅಗಲ ೧೩ ದಪ್ಪ ೭ ಮಿ.ಮೀ. ಅನಿರ್ದಿಷ್ಟ ಆಕಾರ. ಮುಂಬದಿ ಮಧ್ಯ ಉಬ್ಬೇಣು ಮಧ್ಯದಲ್ಲಿದ್ದು ಕೊರೆಯುವ ಮೊನೆಯವರೆಗೂ ಸಾಗಿದೆ. ಎಡಪಾರ್ಶ್ವದಲ್ಲಿ ಚಕ್ಕೆ ತೆಗೆದು ಕೊರೆಯುವ ಮೊನೆಯನ್ನು ಬಲಕ್ಕೆ ರೂಪಿಸಿದ್ದು ಎಡಕ್ಕೆ ಬಾಗಿದೆ. ಮುಂಬದಿ ಚಕ್ಕೆ ತೆಗೆದು ಬೆರಳಿಡಿಕೆಗೆ ಅನುಕೂಲವಾಗಿಸಿದೆ. ಕೆಳತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದಿದೆ. ಹಿಂಬದಿ ಸಮತಲ. ಅಡ್ಡವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೧೨ ಪ್ಲೇಟ್- XIII ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೦)

೫೨. ಕೈಮರ:- ಕ್ವಾರ್ಟ್ಸ ಶಿಲೆ. ಉದ್ದ ೨೫ ಅಗಲ ೨೦ ದಪ್ಪ ೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬೇಣು ಇದೆ. ಮೇಲ್ತುದಿಯಲ್ಲಿ ಎರಡೂ ಬದಿ ಹರಿತ ಅಲಗಿದ್ದು ಮಧ್ಯದಲ್ಲಿ ಕೊರೆಯುವ ಮೊನೆಯನ್ನು ರೂಪಿಸಿದೆ. ಪರಿಧಿಯ ಸುತ್ತಲೂ ಪುಡಿ ಚಕ್ಕೆ ತೆಗೆದು ಅಲಗನ್ನು ಮೂಡಿಸಿದೆ. ಹಿಂಬದಿ ನಿಮ್ನವಾಗಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೮೩ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫)

೫೩. ಕೈಮರ:- ಕ್ವಾರ್ಟ್ಸ ಶಿಲೆ. ಉದ್ದ ೨೬ ಅಗಲ ೧೮ ದಪ್ಪ ೧೧ ಮಿ.ಮೀ. ಅರ್ಧಚಂದ್ರಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಮೇಲ್ತುದಿಯ ಎಡಕ್ಕೆ ಕಿರುಮೊನೆ ಮೂಡಿಸಿದೆ. ಎಡಪಾರ್ಶ್ವಕ್ಕೆ ಆಳಚಕ್ಕೆ ತೆಗೆದು ಅಲಗು ಮೂಡಿಸಿದೆ. ಬಲಪಾರ್ಶ್ವ ಅರ್ಧಚಂದ್ರಾಕಾರದ ಅಲಗನ್ನು ಹೊಂದಿದೆ. ಕೆಳತುದಿ ತೆಳುವಾಗಿದ್ದು ಅಲಗು ಇದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಅಪರೂಪದ ಉಪಕರಣ.

೫೪. ಕಲ್ಲೇನಹಳ್ಳಿ:- ಜಾಸ್ಪರ್ ಶಿಲೆ. ಉದ್ದ ೨೦ ಅಗಲ ೧೮ ದಪ್ಪ ೮ ಮಿ.ಮೀ. ತ್ರಿಭುಜಾಕಾರ. ಮುಂಬದಿ ಮಧ್ಯ ಉಬ್ಬು ಇದೆ. ಮೇಲ್ತುದಿಯಲ್ಲಿ ಎಡಬದಿಗೆ ಚಕ್ಕೆ ತೆಗೆದು ಹರಿತ ಅಲಗನ್ನು ಹೊಂದಿ ಬಲಬದಿಗೆ ಕೊರೆಯುವ ಮೊನೆಯನ್ನು ಮೂಡಿಸಿದೆ. ಕೊರೆಯುವ ಮೊನೆಯ ತುದಿಯನ್ನು ಚಕ್ಕೆ ತೆಗೆದು ಅಲಗು ರೂಪಿಸಿದೆ. ಎಡಪಾರ್ಶ್ವ ಅರ್ಧ ವೃತ್ತಾಕಾರದ ಅಲಗನ್ನು ಹೊಂದಿದೆ. ಬಲಪಾರ್ಶ್ವದಲ್ಲಿ ನೇರ ಅಲಗಿದೆ. ಕೆಳತುದಿಯಲ್ಲಿ ಆಳಚಕ್ಕೆ ತೆಗೆದಿದ್ದು ಅಲಗನ್ನು ಹೊಂದಿದೆ. ಹಿಂಬದಿ ಸಮತಲವಿದ್ದು ತಾಡನ ವೇದಿಕೆ ಮತ್ತು ಶಂಖುವಿದೆ.
ಸಾಮ್ಯ:- ಅಪರೂಪದ ಉಪಕರಣ.

೫೫. ಮಿಡಿಗೇಶಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೧ ಅಗಲ ೧೭ ದಪ್ಪ ೬ ಮಿ.ಮೀ. ವಿಷಮ ಚತುರ್ಭುಜಾಕಾರ. ಮುಂಬದಿ ಮಧ್ಯ ಉಬ್ಬಿದೆ. ಮೇಲ್ತುದಿ ಎರಡೂ ಬದಿ ಚಕ್ಕೆ ತೆಗೆದು ಕೊರೆಯುವ ಮೊನೆಯನ್ನು ಮೂಡಿಸಿದೆ. ಎಡಪಾರ್ಶ್ವ ಮೊಂಡಾಗಿದೆ. ಬಲಪಾರ್ಶ್ವ ಹರಿತ ಅಲಗನ್ನು ಹೊಂದಿದೆ. ಕೆಳತುದಿಯಲ್ಲಿ ಎರಡೂ ಬದಿಯಿಂದ ಆಳಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಹೆಚ್ಚು ಕಡಿಮೆ ಸಮತಲ.
ಸಾಮ್ಯ:- ಸಂಖ್ಯೆ- ೧೧ ಪ್ಲೇಟ್- XIII ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೦)

೫೬. ಮಿಡಿಗೇಶಿ:- ಕ್ವಾರ್ಟ್ಸ್ ಶಿಲೆ. ಉದ್ದ ೨೫ ಅಗಲ ೧೭ ದಪ್ಪ ೫ ಮಿ.ಮೀ. ತ್ರಿಭುಜಾಕಾರ. ಮುಂಬದಿ ಉಬ್ಬು ಇದ್ದು ಮೇಲ್ತುದಿಯಲ್ಲಿ ಕೊರೆಯುವ ಮೊನೆಯನ್ನು ಎಡ ಬದಿಗೆ ಮೂಡಿಸಿದ್ದು ಬಲಬದಿಗೆ ಚಕ್ಕೆ ತೆಗೆದಿದೆ. ಎಡಪಾರ್ಶ್ವ ದಪ್ಪವಿದ್ದು ಮೊಂಡಾಗಿದೆ. ಬಲಪಾರ್ಶ್ವ ತೆಳುವಾಗಿದ್ದು ಮೊಂಡಾಗಿದೆ. ಕೆಳತುದಿ ಚಕ್ಕೆ ತೆಗೆದು ಮಧ್ಯದಲ್ಲಿ ಮೊನೆ ಮೂಡಿಸಿದೆ. ಹಿಂಬದಿ ಸಮತಲವಿದ್ದು ಕೆಳಭಾಗದಲ್ಲಿ ಚಕ್ಕೆ ತೆಗೆದು ಬೆರಳಡಿಕೆಗೆ ಅನುಕೂಲವಾಗಿಸಿದೆ.
ಸಾಮ್ಯ:- ಸಂಖ್ಯೆ- ೧೨ ಪ್ಲೇಟ್- XIV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫)




ಗಾತ್ರ ೧:೧



**ಅರ್ಧ ಚಂದ್ರಾಕೃತಿ**

೫೭. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೨೭ ಅಗಲ ೧೨ ದಪ್ಪ ೩ ಮಿ.ಮೀ. ಅರ್ಧಚಂದ್ರಾಕಾರ. ಮುಂಬದಿ ಮಧ್ಯದಲ್ಲಿ ಉಬ್ಬಿದ್ದು ಮೇಲ್ಭಾಗ ತೆಳುವಾಗಿದೆ. ಮೇಲ್ತುದಿಯಲ್ಲಿ ವಿರುದ್ಧ ದಿಕ್ಕಿನಿಂದ ಚಕ್ಕೆ ತೆಗೆದು ನಿಮ್ನ ಹರಿತ ಅಲಗನ್ನು ರೂಪಿಸಿದೆ. ಉಳಿದ ಪರಿಧಿಯು ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೬ ನಕ್ಷೆ- ೮ (ರಾಮಿರೆಡ್ಡಿ.ವಿ.೧೯೭೬:೧೫೧)

೫೮. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೧೭ ಅಗಲ ೧೬ ದಪ್ಪ ೧೦ ಮಿ.ಮೀ. ಅರ್ಧ ಚಂದ್ರಾಕಾರ ಮುಂಬದಿ ಕೆಳಭಾಗ ದಪ್ಪವಿದ್ದು ಮೇಲ್ಭಾಗ ತೆಳುವಾಗಿದೆ. ಮೇಲ್ತುದಿಯಲ್ಲಿ ಚಕ್ಕೆ ತೆಗೆದು ನೇರ ಹರಿತ ಅಲಗು ಮೂಡಿಸಿದೆ. ಎರಡೂ ತುದಿ ಮೊನೆ ಇದೆ. ಉಳಿದ ಭಾಗದ ಪರಿಧಿ ದಪ್ಪವಿದೆ. ಹಿಂಬದಿ ಸಮತಲ. ಅಡ್ಡ ವಿನ್ಯಾಸ ತ್ರಿಭುಜಾಕಾರ.
ಸಾಮ್ಯ:- ಸಂಖ್ಯೆ- ೨ ಪ್ಲೇಟ್- XV ಸಂಗನಕಲ್ಲು (ಸುಬ್ಬಾರಾವ್.ಬಿ:೧೯೪೮;೫೨)

೫೯. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೧೧ ಅಗಲ ೬ ದಪ್ಪ ೪ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲ. ಮೇಲ್ತುದಿಯಲ್ಲಿ ಗರಗಸದಂತಹ ಹರಿತ ಅಲಗು ಮೂಡಿಸಿದೆ. ಉಳಿದ ಪರಿಧಿಯು ಅರ್ಧ ವೃತ್ತಾಕಾರವಾಗಿದ್ದು ದಪ್ಪವಾಗಿ ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೫೨ ಪ್ಲೇಟ್- LXIII ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೬೫)

೬೦. ಕೈಮರ:- ಕ್ವಾರ್ಟ್ಸ್ ಶಿಲೆ. ಉದ್ದ ೧೦ ಅಗಲ ೫ ದಪ್ಪ ೨ ಮಿ.ಮೀ. ತ್ರಿಭುಜಾಕಾರ. ಮುಂಬದಿ ಸಮತಲವಿದ್ದು ಮೇಲ್ಭಾಗದಲ್ಲಿ ಚಕ್ಕೆ ತೆಗೆದಿದೆ. ಮೇಲ್ತುದಿಯ ಹರಿತ ಅಲಗು ನೇರವಾಗಿದೆ. ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೬೪ ಪ್ಲೇಟ್- LXIV ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೬೫)

೬೧. ಗುರಮ್ಮನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೧೬ ಅಗಲ ೬ ದಪ್ಪ ೫ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲವಿದ್ದು ಮೇಲ್ತುದಿಯಲ್ಲಿ ನೇರ ಹರಿತ ಅಲಗನ್ನು ಮೂಡಿಸಿದೆ. ಮೇಲ್ತುದಿಯ ಮೊನೆ ಮೊಂಡಾಗಿದೆ. ಕೆಳತುದಿಯ ಮೊನೆ ಹರಿತವಾಗಿದೆ. ಪರಿಧಿಯ ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೨೮ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)

೬೨. ಕಲ್ಲೇನಹಳ್ಳಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೭ ಅಗಲ ೮ ದಪ್ಪ ೫ ಮಿ.ಮೀ. ಅರ್ಧ ವೃತ್ತಾಕಾರ. ಮುಂಬದಿ ಸಮತಲವಿದ್ದು ಮೇಲ್ಭಾಗ ನೇರ ಹರಿತ ಅಲಗನ್ನು ಹೊಂದಿದೆ. ಎರಡೂ ತುದಿಯಲ್ಲಿ ಮೊನೆ ಹರಿತವಾಗಿದೆ. ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೨೫ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)

೬೩. ಸಿದ್ಧಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೭ ಅಗಲ ೫ ದಪ್ಪ ೩ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲ. ಮೇಲ್ತುದಿ ನೇರ ಹರಿತ ಅಲಗನ್ನು ಹೊಂದಿದ್ದು ಎರಡೂ ತುದಿ ಮೊನೆಗಳಿವೆ. ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೩೫ ಪ್ಲೇಟ್- VIII(b) ತೆಕ್ಕಲಕೋಟ (ನಾಗರಾಜರಾವ್ ಮತ್ತು ಮಲ್ಹೋತ್ರಾ:೧೯೬೫)

೬೪. ಸಿದ್ಧಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೧೨ ಅಗಲ ೫ ದಪ್ಪ ೩ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲ. ಮೇಲ್ತುದಿ ನೇರ ಹರಿತ ಅಲಗನ್ನು ಹೊಂದಿದೆ. ಎರಡೂ ಬದಿ ಮೊನೆ ಇದೆ. ಉಳಿದ ಭಾಗ ದಪ್ಪವಿದ್ದು ಮೊಂಡಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೨೧ ಪ್ಲೇಟ್- VIII(b) ತೆಕ್ಕಲಕೋಟ (ನಾಗರಾಜರಾವ್ ಮತ್ತು ಮಲ್ಹೋತ್ರಾ:೧೯೬೫)

೬೫. ಹೂವಿನಕಟ್ಟೆ:- ಕ್ವಾರ್ಟ್ಸ್ ಶಿಲೆ. ಉದ್ದ ೧೨ ಅಗಲ ೭ ದಪ್ಪ ೩ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲ. ಮೇಲ್ತುದಿ ಆಳಚಕ್ಕೆ ತೆಗೆದು ಅಲಗು ಮೂಡಿಸಿದೆ. ಎರಡೂ ಬದಿ ಮೊನೆ ಇದೆ. ಎರಡೂ ಪಾರ್ಶ್ವ ಮತ್ತು ಕೆಳತುದಿ ಮೊಂಡಾಗಿದೆ. ಹಿಂಬದಿ ಸಮತಲ
ಸಾಮ್ಯ:- ಸಂಖ್ಯೆ- ೨೬ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)

೬೬. ಮಿಡಿಗೇಶಿ:- ಕ್ವಾರ್ಟ್ಸ್ ಶಿಲೆ. ಉದ್ದ ೧೫ ಅಗಲ ೮ ದಪ್ಪ ೩ ಮಿ.ಮೀ. ಅರ್ಧ ಚಂದ್ರಾಕಾರ. ಮುಂಬದಿ ಸಮತಲ. ಮೇಲ್ತುದಿ ಯಲ್ಲಿ ಆಳಚಕ್ಕೆ ತೆಗೆದಿದ್ದು ನೇರ ಹರಿತ ಅಲಗು ಇದೆ. ಎರಡೂ ತುದಿಯಲ್ಲೂ ಮೊನೆ ಇದೆ. ಎರಡೂ ಪಾರ್ಶ್ವಗಳೂ ದಪ್ಪವಿದ್ದು ಮೊಂಡಾಗಿದೆ. ಕೆಳತುದಿ ತೆಳುವಾಗಿದ್ದು ಹಂತವಾಗಿದೆ. ಹಿಂಬದಿ ಸಮತಲ.
ಸಾಮ್ಯ:- ಸಂಖ್ಯೆ- ೨೭ ನಕ್ಷೆ- ೮ (ರಾಮಿರೆಡ್ಡಿ.ವಿ:೧೯೭೮)




ಗಾತ್ರ ೧:೧

## ಮೂಲ ಶಿಲಾಗಟ್ಟ

೬೭. ಬೂದಿಗುಡ್ಡ:- ಅದಿರುಯುಕ್ತ ಜಾಸ್ಪರ್ ಶಿಲೆ. ಉದ್ದ ೨೨ ಅಗಲ ೨೦ ದಪ್ಪ ೧೮ ಮಿ.ಮೀ. ಸ್ಥಂಭಾಕಾರ. ಮೇಲ್ತುದಿಯಲ್ಲಿ ಚಕ್ಕೆ ತೆಗೆದಿದ್ದು ಅಸಮತಲವಾಗಿದೆ. ಕೆಳತುದಿಯಲ್ಲಿ ಅಸಮತಲವಿದೆ. ಚಕ್ಕೆ ಕಲೆಗಳಿವೆ. ಶಿಲಾಗಟ್ಟಿಯ ಸುತ್ತಲೂ ಸಣ್ಣಸಣ್ಣ ನೇರ ಚಕ್ಕೆ ತೆಗೆದಿದ್ದು, ೧೨ಕ್ಕೂ ಹೆಚ್ಚು ಚಕ್ಕೆ ಕಲೆಗಳಿವೆ. ಚಕ್ಕೆ ಕಲೆ ವಿವಿಧ ಅಗಲದಲ್ಲಿ ತೆಗೆದಿರುವಂತಿದೆ. ಅಡ್ಡ ವಿನ್ಯಾಸ ಅಂಡಾಕಾರ.

೬೮. ಯಲ್ಲಪ್ಪನಾಯಕನಹೊಸಕೋಟೆ:- ಜಾಸ್ಪರ್ ಶಿಲೆ. ಉದ್ದ ೨೫ ಅಗಲ ೨೫ ದಪ್ಪ ೧೦ ಮಿ.ಮೀ. ಶಿಲಾಗಟ್ಟಿಯ ಸುತ್ತಲೂ ಹಲವಾರು ಚಕ್ಕೆಗಳನ್ನು ತೆಗೆದಿರುವ ಕಲೆಗಳಿವೆ. ವಿವಿಧ ಅಳತೆಯ ಚಕ್ಕೆಗಳನ್ನು ತೆಗೆದಿರುವುದು ಕಂಡುಬರುತ್ತದೆ. ಹಿಂಬದಿ ಪೀನವಾಗಿದ್ದು ಚಕ್ಕೆ ಕಲೆಗಳಿವೆ.

೬೯. ನಾಗಲಾಪುರ:- ಕ್ವಾರ್ಟ್ಸ್ ಶಿಲೆ. ಉದ್ದ ೩೫ ಅಗಲ ೨೭ ದಪ್ಪ ೧೪ ಮಿ.ಮೀ. ಅಸಮ ಚತುರ್ಭುಜಾಕಾರ. ಮೂಲಗಟ್ಟಿಯ ಸುತ್ತಲೂ ಹಲವಾರು ಪ್ರಮಾಣದ ಚಕ್ಕೆಗಳನ್ನು ತೆಗೆದಿರುವುದು ಕಂಡು ಬರುತ್ತದೆ. ಕೆಳತುದಿ ದಪ್ಪವಿದ್ದು ಹಿಂಬದಿ ನಿಮ್ನವಾಗಿದೆ.

೭೦. ಯಲ್ಲಪ್ಪನಾಯಕನಹೋಸಕೋಟೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಆಯತಾಕಾರ. ಮುಂಬದಿಯಲ್ಲಿ ಹಲವಾರು ತೆಳು ಚಕ್ಕೆಗಳನ್ನು ತೆಗೆದಿರುವ ಕಲೆಗಳಿವೆ. ೫ ಕ್ಕೂ ಹೆಚ್ಚು ಚಕ್ಕೆ ತೆಗೆದಿದೆ. ಮೇಲ್ತುದಿ ಮೊಂಡಾಗಿದೆ. ಕೆಳತುದಿಯಲ್ಲಿ ಹಿಂಬದಿಯಿಂದ ಚಕ್ಕೆ ತೆಗೆದಿದ್ದು ಅಲ್ಲಲ್ಲಿ ಮೂಲ ಶಿಲಾ ತೊಗಟೆ ಅಂಶವಿದೆ.

೭೧. ಯಲ್ಲಪ್ಪನಾಯಕನಹೊಸಕೋಟೆ:- ಅದಿರುಯುಕ್ತ ಜಾಸ್ಪರ್ ಶಿಲೆ. ಅಂಡಾಕಾರ. ಮುಂಬದಿಯಲ್ಲಿ ಚಕ್ಕೆ ಕಲೆಗಳಿವೆ. ಮೇಲ್ತುದಿಯಿಂದ ಚಕ್ಕೆ ತೆಗೆದಿದೆ. ಕೆಳತುದಿಯಿಂದಲೂ ಹಲವು ಚಕ್ಕೆಗಳನ್ನು ತೆಗೆದಿದೆ. ಹಿಂಬದಿ ಅಸಮತಲವಾಗಿದ್ದು ಹಲವು ದೊಡ್ಡ ಚಕ್ಕೆಗಳನ್ನು ತೆಗೆದಿದೆ. ಅಡ್ಡ ವಿನ್ಯಾಸ ತ್ರಿಭುಜಾಕಾರ.












ಗಾತ್ರ ೧:೧



**ನೂತನ ಶಿಲಾಯುಗದ ಮೃತ್ ಪಾತ್ರೆಗಳು**

ಕರ್ನಾಟಕ, ಆಂಧ್ರ ಪ್ರದೇಶ ಮತ್ತು ತಮಿಳುನಾಡುಗಳನ್ನೊಳಗೊಂಡಂತೆ ನೂತನ ಶಿಲಾಯುಗದ ಅಸಂಖ್ಯಾತ ನಿವೇಶನಗಳು ಸ್ಥಳ ಪರಿಶೋಧನೆಯಲ್ಲಿ ಬೆಳಕಿಗೆ ಬಂದಿವೆ. ಈ ಸಂಸ್ಕೃತಿಯ ವಿಶೇಷ ಲಕ್ಷಣವೆನಿಸಿರುವ ಉಜ್ಜಿ ಹೊಳಪು ನೀಡಿದ ಶಿಲಾಯುಧಗಳು ಮತ್ತು ಅವುಗಳೊಡನೆ ದೊರೆಯುವ ಮೃತ್ ಪಾತ್ರೆಗಳು ಹೆಚ್ಚಿನ ಸಂಖ್ಯೆಯಲ್ಲಿ ಬೆಳಕಿಗೆ ಬಂದಿವೆ. ಕೆಂಪು ಮತ್ತು ಬೂದು ವರ್ಣದ ವಿವಿಧ ವರ್ಣಗಳ ಮೃತ್ ಪಾತ್ರೆಗಳು ಗಣನೀಯ ಪ್ರಮಾಣದಲ್ಲಿಯೂ ಪೂರ್ಣ ಕಪ್ಪು, ಕಂದು, ಕಂದುಗೆಂಪು ಮತ್ತು ಊದಾ ಬಣ್ಣದ ಮೃತ್ಪಾತ್ರೆಗಳು ಅಲ್ಪ ಪ್ರಮಾಣದಲ್ಲಿಯೂ ಈ ನಿವೇಶನಗಳಲ್ಲಿ ಕಂಡುಬರುತ್ತವೆ.

ನೂತನ ಶಿಲಾಯುಗದ ಆರಂಭಿಕ ಹಂತದಲ್ಲಿ ಕೈಯಲ್ಲಿ ಮಾಡಿದ ಮೃತ್ ಪಾತ್ರೆಗಳೇ ಹೆಚ್ಚು. ಆ ನಂತರದ ಹಂತದಲ್ಲಿ ನಿಧಾನವಾಗಿ ತಿರುಗಿಸಲ್ಪಡುವ ಮೇಜು (Turntable),ಮಂದಗತಿಯಲ್ಲಿ ತಿರುಗಿಸಿರುವ ಚಕ್ರ ಮತ್ತು ಪರಿಷ್ಕೃತ ಚಕ್ರಗಳಲ್ಲಿ ತಯಾರಿಸಲಾದ ಹೆಚ್ಚು ತೆಳ್ಳನೆಯಮೃತ್ ಪಾತ್ರೆಗಳು ಕಂಡು ಬರುತ್ತವೆ. ಉತ್ಖನನಗಳಲ್ಲಿ ಈ ಹಂತಗಳನ್ನು ನಿರ್ದಿಷ್ಟವಾಗಿ ಗುರುತಿಸಬಹುದಾದರೂ ಸ್ಥಳ ಪರಿಶೋಧನೆಯಲ್ಲಿ ದೊರೆಯುವ ಮೃತ್ ಪಾತ್ರೆಗಳನ್ನು ಅಷ್ಟು ನಿಖರವಾಗಿ ಗುರುತಿಸಿ ಬೇರ್ಪಡಿಸಲು ಸಾಧ್ಯವಾಗುವುದಿಲ್ಲ.

ದಕ್ಷಿಣ ಭಾರತದಲ್ಲಿ ನೂತನ ಶಿಲಾಯುಗದ ಮುಖ್ಯ ಮೃತ್ ಪಾತ್ರೆಗಳು ಕೆಂಪು ಮತ್ತು ಬೂದು ಬಣ್ಣದವು ಮಾತ್ರ. ಇವುಗಳನ್ನು ವಿವಿಧ ಉಷ್ಣತೆಗಳಲ್ಲಿ ನಿಯಂತ್ರಿಸಿ ಸುಡುವುದರ ಮೂಲಕ ಪಡೆಯಬಹುದಾಗಿದ್ದು ಭೌಗೋಳಿಕವಾಗಿ ಇವುಗಳ ವ್ಯಾಪ್ತಿಯ ಬಗೆಗೆ ಹಲವಾರು ಚರ್ಚೆಗಳು ನಡೆದಿವೆ. ಸಾಧಾರಣವಾಗಿ ಕೆಂಪು ವರ್ಣದ ಮೃತ್ಪಾತ್ರೆಗಳ ಶೇಕಡಾವಾರು ಪ್ರಮಾಣ ಆಂಧ್ರಪ್ರದೇಶದ ನೂತನ ಶಿಲಾಯುಗದ ಲಕ್ಷಣವೆಂದೂ, ಬೂದು ಬಣ್ಣದ ಮೃತ್‌ಪಾತ್ರೆಗಳು ತಮಿಳುನಾಡಿನ ನಿವೇಶನಗಳಲ್ಲಿ ಹೆಚ್ಚಾಗಿ ದೊರಕುತ್ತವೆಂದೂ ಕರ್ನಾಟಕದಲ್ಲಿ ಇವೆರಡೂ ವಿವಿಧ ಪ್ರಮಾಣಗಳಲ್ಲಿ ದೊರೆಯುತ್ತದೆಂದೂ ಅಭಿಪ್ರಾಯ ಪಡಲಾಗಿದೆ. ಇನ್ನುಳಿದ ಬಣ್ಣಗಳ ಮೃತ್ ಪಾತ್ರೆಗಳು ಬೇರೆ ಬೇರೆ ನಿವೇಶನಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ದೊರೆಯುವುದರಿಂದ ಅವು ಪ್ರಾತಿನಿಧಿಕ ಮೃತ್ ಪಾತ್ರೆಗಳಲ್ಲ. ಈ ವರ್ಣಗಳ ವಿಭಿನ್ನತೆ ಮಣ್ಣಿನ ಜೊತೆಯಲ್ಲಿ ಮಿಶ್ರಿತವಾಗಿರುವ ಕಶ್ಮಲಗಳೂ ಸಾವಯವ ವಸ್ತುಗಳೂ ಉಷ್ಣತೆಯ ವೈಪರಿತ್ಯ ಇವು ಕಾರಣವಾಗಿದ್ದು ಪ್ರಾದೇಶಿಕ ಭಿನ್ನತೆಯೇನೂ ಅವು ತೋರಿಸುವುದಿಲ್ಲ. ಆಕೃತಿಗಳ ದೃಷ್ಟಿಯಿಂದ ಕೆಂಪು ಮತ್ತು ಬೂದು ಬಣ್ಣದ ಮೃತ್ ಪಾತ್ರೆಗಳೆರಡೂ ಹೆಚ್ಚಿನ ಸಾಮ್ಯತೆಯನ್ನೇ ಪ್ರದರ್ಶಿಸುತ್ತವೆ. ಅವುಗಳಲ್ಲಿ ದೊಡ್ಡ ಗಾತ್ರದ ಸಂಗ್ರಹಣಾ ಪಾತ್ರೆಗಳು ಮತ್ತು ಮಧ್ಯಮ ಗಾತ್ರದ ದೈನಂದಿನ

ಗೃಹೋಪಯೋಗಿ ಪಾತ್ರೆಗಳು ಮುಖ್ಯವಾದವು. ಸಂಗ್ರಹಣಾ ಪಾತ್ರೆಗಳಲ್ಲಿ ಗೂಡೆಯಾಕಾರದ ದೊಡ್ಡ ಗುಡಾಣಗಳು ಅಗಲ-ಬಾಯಿನ ಮುಚ್ಚಳಸಹಿತ ಕೊಡಗಳು ಮುಚ್ಚಳಸಹಿತ ಎತ್ತರವಾದ ಮಧ್ಯದಲ್ಲಿ ಉಬ್ಬಿದ ಜಾಡಿಗಳು ಅಥವಾ ಕೊಳಗಗಳು ಹೆಚ್ಚಾಗಿ ದೊರೆಯುತ್ತವೆ. ಸಂಗ್ರಹಣೆ ಮತ್ತು ಸಾಗಾಣಿಕೆಗೆ ಅನುಕೂಲವಾಗುವಂತೆ ದೊಡ್ಡ ಪಾತ್ರೆಗಳಿಗೆ ಮುಂಚಾಚಿದ ಕಾಲರಿ-ನಂತಹ ಹಿಡಿಕೆಗಳು, ವಿವಿಧ ಆಕಾರದ ಹಿಡಿಕೆಗಳನ್ನು ಪಾತ್ರೆಗಳ ಮೇಲ್ಭಾಗ ಮತ್ತು ಮಧ್ಯಭಾಗದಲ್ಲಿ ಜೋಡಿಸಲಾಗಿರುತ್ತದೆ. ಅದರಂತೆಯೇ ಪಾತ್ರೆಗಳ ಅಡಿಯಲ್ಲಿ ಗಿಡ್ಡಾದ ಗೂಳಿಕೊಂಬಿನಂತಹ ಕಾಲುಗಳು ಮತ್ತು ಉಂಗುರಾಕಾರದ ತಳವನ್ನು ಜೋಡಿಸಿರುತ್ತದೆ. ಗೃಹೋಪಯೋಗಿ ಪಾತ್ರೆಗಳಲ್ಲಿ ವಿವಿಧ ಆಕಾರ ಮತ್ತು ಗಾತ್ರದ ಬಟ್ಟಲುಗಳು ಬಳೆಯಾಕಾರದ ಬೋಗುಣಿ(Lipped Bowls) , ಅಗಲ ತಳದ, ಕಡಿಮೆ ಎತ್ತರದ ಬೋಗುಣಿಗಳು, ಹಿಡಿಕೆಯುಳ್ಳ ಮುಚ್ಚಳಗಳು, ಸಣ್ಣ ಹಾಗೂ ಮಧ್ಯಮ ಗಾತ್ರದ ಕೊಡಗಳು, ಕಮಂಡಲದಾಕಾರದ ಹೂಜಿಗಳು, ತಳದಲ್ಲಿ ರಂಧ್ರವುಳ್ಳ ಪಾತ್ರೆಗಳು ಮತ್ತು ಬೋಗುಣಿಗಳು ಸಾಧಾರಣವಾಗಿ ಕಂಡುಬರುವ ಆಕೃತಿಗಳು.

ಕೆಂಪು ಮತ್ತು ಬೂದು ಬಣ್ಣದ ಮೃತ್ ಪಾತ್ರೆಗಳನ್ನು ಸಾಧಾರಣವಾಗಿ ಹೊಳಪುಳ್ಳವು ಮತ್ತು ಹೊಳಪಿಲ್ಲದವು ಎಂದು ಎರಡು ಗುಂಪುಗಳಾಗಿ ವರ್ಗೀಕರಿಸಲಾಗುತ್ತದೆ. ಸುಡುವ ಮೊದಲು ಮೂಳೆ, ಕಲ್ಲು ಅಥವಾ ಮರದ ಚಕ್ಕೆಯಿಂದ ಚೆನ್ನಾಗಿ ತಟ್ಟಿ ಉಜ್ಜುವುದರ ಮೂಲಕ ಸುಟ್ಟ ನಂತರ ಹೊಳಪು ಬರುವಂತೆ ರೂಪಿಸಲಾಗುತ್ತದೆ. ಹೆಚ್ಚಿನ ಹೊಳಪು ನೀಡಲು ನವಿರಾಗಿ ಶೋಧಿಸಿ ತೆಗೆದ ಆವೆ ಮಣ್ಣಿನ ಲೇಪನವನ್ನು ಕೊಡುವುದುಂಟು. ಸಾಧಾರಣವಾಗಿ ಮಧ್ಯಮ ಹಾಗೂ ಕಿರುಗಾತ್ರದ ಗೃಹಪಯೋಗಿ ಪಾತ್ರೆಗಳಿಗೆ ಹೊಳಪು ನೀಡಿರುವುದು ಹೆಚ್ಚಾಗಿಕಂಡು ಬಂದರೂ ದೊಡ್ಡ ಗಾತ್ರದ ಸಂಗ್ರಹಣಾ ಪಾತ್ರೆಗೂ ಇಂತಹ ಹೊಳಪುನ್ನು ನೀಡಿರುತ್ತದೆ.

ಸಂಗ್ರಹಣಾ ಪಾತ್ರೆಗಳ ಹೊರಮೈನಲ್ಲಿ ಕಂಠದ ಕೆಳಗೆ ಮತ್ತು ಕಂಠದಲ್ಲಿ ಮಾತ್ರಕೆಲವು ವಿಶಿಷ್ಟ ಅಲಂಕರಣಗಳಿ-ರುತ್ತವೆ. ಈ ಅಲಂಕರಣಗಳನ್ನು ಪಾತ್ರೆಗಳನ್ನು ರೂಪಿಸಿದ ನಂತರ ಸುಡುವ ಮೊದಲು ಮೂಡಿಸಲಾಗುತ್ತದೆ. ಇಂತಹ ಅಲಂಕರಣಗಳಲ್ಲಿ ಮಣ್ಣಿನ ಸಣ್ಣ ಮುದ್ದೆಗಳನ್ನು ಮೆತ್ತಿ ಮೂಡಿಸಿರುವ ಬೆರಳೊತ್ತಿನ ಗುರುತುಗಳು, ಕಡ್ಡಿ ಅಥವಾ ಮೂಳೆಯ ಮೊನಚು ತುದಿಯಿಂದ ರೂಪಿಸಿದ ಕಚ್ಚುಗಳು, ಕಂಠದ ಸುತ್ತಲೂ ಎಳೆದಿರುವ ವರ್ತುಲಾಕಾರದ ಗೆರೆಗಳು, ತ್ರಿಭುಜಾಕೃತಿಗಳು ಮುಖ್ಯವಾದವುಗಳಾಗಿವೆ.

ಗೃಹೋಪಕರಣ ಮೃತ್ ಪಾತ್ರೆಗಳಲ್ಲಿ ಮಾತ್ರ ಕಂಡುಬರುವ ಅಲಂಕರಣಗಳೆಂದರೆ ಕಂಠದಂಚಿನ ಒಳಭಾಗದ

ಮೇಲ್ತುದಿಗೆ ಮಾತ್ರ ಖಾವಿ ಬಣ್ಣದ ಲೇಪನವನ್ನು ಮಾಡಲಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶದ ೯ ನೆಲೆಗಳಲ್ಲಿ ಮೃತ್ ಪಾತ್ರೆ ಅವಶೇಷಗಳು ದೊರೆತಿವೆ. ಗಣನೀಯ ಪ್ರಮಾಣದಲ್ಲಿ ಮೃತ್ ಪಾತ್ರೆಗಳು ದೊರೆತಿರುವ ನೆಲೆಗಳಲ್ಲಿ ಹೆಚ್ಚಿನ ಎಲ್ಲಾ ಮಾದರಿಗಳನ್ನೂ ಗುರುತಿಸಬಹುದು. ಪ್ರಮುಖ-ವಾಗಿ ದೊರೆತಿರುವ ಮೃತ್ ಪಾತ್ರೆಗಳನ್ನು ಮೂರು ಪ್ರಮುಖ ಗುಂಪುಗಳಾಗಿ ವಿಭಾಗಿಸಿಕೊಳ್ಳಬಹುದು (೧) ಬೂದು ಬಣ್ಣದ ಮೃತ್ ಪಾತ್ರೆ, (೨) ಕೆಂಪು ಬಣ್ಣದ ಮೃತ್ ಪಾತ್ರೆ ಮತ್ತು (೩) ಇತರೆ ವರ್ಣಗಳ ಮೃತ್ ಪಾತ್ರೆಗಳು. ಹೀಗೆ ದೊರೆತ ಆಯ್ದ ವಿವಿಧ ಮೃತ್ ಪಾತ್ರೆಗಳ ವಿವಿರಣೆಯನ್ನು ಈ ಕೆಳಗೆ ವಿವರಿಸಿದೆ.

**ಆಯ್ದ ಮೃತ್ ಪಾತ್ರೆಗಳ ವಿವರಣೆ**
**ಬೂದು ವರ್ಣ**

೧. ಯಲ್ಲಪ್ಪನಾಯಕನಹೊಸಕೋಟೆ:- ಸ್ವಲ್ಪ ಚಪ್ಪಟೆ, ದಪ್ಪ ಅಂಚಿನ ಅಗಲ ಬಾಯಿಯ ಕಂಠವಿಲ್ಲದ ಶೇಖರಣಾ ಪಾತ್ರೆಯ ಭಾಗ.

೨. ಯಲ್ಲಪ್ಪನಾಯಕನಹೊಸಕೋಟೆ:- ದುಂಡು ಅಂಚಿನ ಕಂಠವಿಲ್ಲದ, ಅಗಲ ಬಾಯಿಯ ಶೇಖರಣಾ ಪಾತ್ರೆಯ ಭಾಗ.

೩. ಯಲ್ಲಪ್ಪನಾಯಕನಹೊಸಕೋಟೆ:- ಬೂದು ಬಣ್ಣದ ಹೊರಚಾಚಿದ ಅಂಚಿನ(flared) ಅಗಲ ಬಾಯಿಯ, ದೊಡ್ಡ ಗಾತ್ರದ ಗೋರಿಯ ಪಾತ್ರೆಯ ಭಾಗ. ಇದರ ಒಳ ಭಾಗವನ್ನು ನುಣುಪು ಮಾಡಲಾಗಿದೆ.

೪. ಯಲ್ಲಪ್ಪನಾಯಕನಹೊಸಕೋಟೆ:- ಬೂದು ಬಣ್ಣದ ಅಂಚು ಹೊರಚಾಚಿದ ಅಗಲ ಬಾಯಿಯ ಮಧ್ಯಮ ಗಾತ್ರದ ಗೋರಿಯ ಪಾತ್ರೆ ಭಾಗ.

೫. ಯಲ್ಲಪ್ಪನಾಯಕನಹೊಸಕೋಟೆ:- ನಸು ಬೂದು ವರ್ಣದ ಸಾಮಾನ್ಯವಾಗಿ ದೊರಕುವ ಅಂಚು ಚೂಪುಗೊಳಿಸಿದ ಬೋಗುಣಿ. ಹೊರಭಾಗದಲ್ಲಿ ಉಜ್ಜಿ ಹೊಳಪನ್ನು(Burnished) ನೀಡಲಾಗಿದೆ.

೬. ಯಲ್ಲಪ್ಪನಾಯಕನಹೊಸಕೋಟೆ:- ಬೂದು ವರ್ಣದ ಅಂಚು ಹೊರಚಾಚಿದ ಸಣ್ಣ ಕಂಠದ ಅಗಲ ಬಾಯಿಯ ಮಡಕೆಯ ಭಾಗ.

೭. ಯಲ್ಲಪ್ಪನಾಯಕನಹೊಸಕೋಟೆ:- ಬೂದು ಬಣ್ಣದ ಗುಂಡು ಶರೀರದ ಅಂಚು ಹೊರಚಾಚಿದ ಕರಂಡಕ ರೀತಿಯ ಪಾತ್ರೆ. ಅಂಚಿನ ಹೊರಬಾಗದಲ್ಲಿ ಉಜ್ಜಿ ಹೊಳಪನ್ನು ನೀಡಲಾಗಿದ್ದು ಅಂಚಿನಲ್ಲಿ ಸುಮಾರು ೨.೨ ಸೆಂ.ಮೀ. ನ ಕಪ್ಪು ವರ್ಣದ ಅಲಂಕರಣದ ಪಟ್ಟಿ ಇದೆ.

೮. ಯಲ್ಲಪ್ಪನಾಯಕನಹೊಸಕೋಟೆ:- ಬೂದು ವರ್ಣದ ಅಂಚು ಬಾಗಿದ(Everted) ಕಂಠವಿಲ್ಲದ ಸಣ್ಣ ಬಾಯಿಯ ಕುಡಿಕೆ.

೯., ೧೦. ಮತ್ತು ೧೧. ಯಲ್ಲಪ್ಪನಾಯಕನಹೊಸಕೋಟೆ:- ಬೂದು ಬಣ್ಣದ ಅಗಲ ಬಾಯಿಯ ಹೊರಚಾಚಿದ ಅಂಚಿನ ಸಣ್ಣ ಕಂಠದ ದುಂಡು ಮಡಕೆ.

೧೨. ಯಲ್ಲಪ್ಪನಾಯಕನಹೊಸಕೋಟೆ:- ಅಗಲ ಬಾಯಿಯ ದುಂಡು ಅಂಚಿನ ಬೋಗುಣಿ.

೧೩. ಯಲ್ಲಪ್ಪನಾಯಕನಹೊಸಕೋಟೆ:- ಸ್ವಲ್ಪ ನಸು ಬೂದು ಬಣ್ಣದ ಅಗಲ ಬಾಯಿಯ, ಅಂಚಿನ ಒಳಭಾಗವು ತುಸು ಚಪ್ಪಟೆ ಇರುವ ಬೋಗುಣಿ.

೧೪. ಯಲ್ಲಪ್ಪನಾಯಕನಹೊಸಕೋಟೆ:- ಬೂದು ಬಣ್ಣದ ಅಗಲ ಹೊರ ಚಾಚಿದ ಬಾಯಿಯ ಅಂಚಿನ ನೀಳ ಕಂಠದ ಪಾತ್ರೆಯ ಭಾಗ.

೧೫. ಯಲ್ಲಪ್ಪನಾಯಕನಹೊಸಕೋಟೆ:- ಹೊರಚಾಚಿದ ದಪ್ಪ ಚಪ್ಪಟೆ ಅಂಚಿನ ಬೂದು ವರ್ಣದ ಪಾತ್ರೆಯ ಭಾಗ.

೧೬. ಯಲ್ಲಪ್ಪನಾಯಕನಹಳ್ಳಿ:- ಕಪ್ಪು ಮಿಶ್ರಿತ ಬೂದು ವರ್ಣದ ಅಂಚು ಹೊರಚಾಚಿದ ಅಗಲ ಬಾಯಿಯ ತುಸು ನೀಳ ದುಂಡು ಮಡಕೆಯ ಭಾಗ. ಬಾಯಿಯ ಹೊರ ಅಂಚಿನಲ್ಲಿ ಎರಡು ಸೆಂ.ಮೀ. ಕಪ್ಪು ವರ್ಣದ ಪಟ್ಟಿ ಇದೆ.

೧೭. ಯಲ್ಲಪ್ಪನಾಯಕನಹಳ್ಳಿ:- ಬೂದು ವರ್ಣದ ನಾಲೆ ತುಟಿಯ (Lipped) ಬೋಗುಣಿಯ ಭಾಗ.

೧೮. ನಾಗಲಾಪುರ:- ಬೂದು ವರ್ಣದ ಗುಂಡು ಶರೀರದ ಅಂಚು ಹೊರಚಾಚಿದ ಕರಂಡಕ ರೀತಿಯ ಪಾತ್ರೆ. ಅಂಚಿನ ಹೊರಬಾಗದಲ್ಲಿ ಉಜ್ಜಿ ಹೊಳಪನ್ನು ನೀಡಲಾಗಿದೆ.

೧೯. ನಾಗಲಾಪುರ:- ಬೂದು ಬಣ್ಣದ ಸಣ್ಣ ಬಾಯಿಯ ಅಂಚು ಹೊರಬಾಗಿದ ಕುಡಿಕೆಯ ಭಾಗ.

೨೦. ಮತ್ತು ೨೧. ಮಿಡಿಗೇಶಿ:- ಸಾಧಾರಣವಾಗಿ ದೊರಕುವ ಬೂದು ಬಣ್ಣದ ಚುಂಬುಳ್ಳ ಪಾತ್ರೆ.




ಗಾತ್ರ ೧,೨,೫,೬,೭,೮-೧:೦.೨೫
೩,೪,-೧:೦.೨೦ ೯,೧೦,೧೧



೧೨



೧೩



೧೪



೧೫



೧೬



೧೭



೧೮



೧೯



೨೦,೨೧

**ಗಾತ್ರ ೧:೦.೨೫**

**ಕೆಂಪು ವರ್ಣ**

೨೨., ೨೩. ಮತ್ತು ೨೪. ಯಲ್ಲಪ್ಪನಾಯಕನಹೊಸಕೋಟೆ:- ಇವುಗಳು ನಸು ಕೆಂಪು ವರ್ಣದ ರಂಧ್ರವುಳ್ಳ ಮಡಕೆಯ ಭಾಗಗಳು ಇದರಲ್ಲಿ ಮಡಕೆ ತೇವವಾಗಿರುವಾಗಲೇ ರಂಧ್ರಗಳನ್ನು ಮೂಡಿಸಲಾಗಿರುವುದರಿಂದ ಹೆಚ್ಚಿನ ಮಣ್ಣು ರಂಧ್ರ ಮಾಡಿದ ಆಚೆಯ ಬದಿಯಲ್ಲಿ ಬಂದಿರುವುದೇ ಅಲ್ಲದೆ ಅದನ್ನು ಬೆರಳಿನಿಂದ ಒತ್ತಿ ಸರಿ ಮಾಡಿದ ಗುರುತು ಕಂಡು ಬರುತ್ತದೆ. ಪ್ರಾಯಶಃ ಇವುಗಳನ್ನು ಹವಾನಿಯಂತ್ರಿತ ಮುಚ್ಚಳಗಳನ್ನಾಗಿ ಉಪಯೋಗಿಸಬಹುದು.

೨೫. ಮಿಡಿಗೇಶಿ:- ಕೆಂಪು ವರ್ಣದ ಸಾಮಾನ್ಯವಾಗಿ ದೊರಕುವ ಆಳವಾದ ಬೋಗುಣಿಯ ಭಾಗ.



೨೨,೨೩,೨೪



೨೫

ಗಾತ್ರ ೧:೦.೨೫

ಅಧ್ಯಾಯ ಒಂಬತ್ತು

# ಬೃಹತ್ ಶಿಲಾಯುಗ ಸಂಸ್ಕೃತಿ

ಸಂಶೋಧನೆಗಳಿಂದ ತಿಳಿದು ಬಂದಿರುವಂತೆ ಭಾರತದಲ್ಲಿ ನೂತನ ತಾಮ್ರ ಶಿಲಾಯುಗ ಸಂಸ್ಕೃತಿಯು ಕಬ್ಬಿಣವನ್ನು ಉಪಯೋಗಿಸುವ ಬೃಹತ್ ಶಿಲಾಯುಗ ಸಂಸ್ಕೃತಿಗೆ ಹಾದಿ ಮಾಡಿಕೊಟ್ಟಿತು. ಕುತೂಹಲಕರವಾದ ವಿವಿಧ ಮಾದರಿಯ ಬೃಹತ್ ಶಿಲಾಗೋರಿಗಳನ್ನು ಈ ಸಂಸ್ಕೃತಿಯ ಜನರು ನಿರ್ಮಿಸುತ್ತಿದ್ದುದರಿಂದ ಈ ಸಂಸ್ಕೃತಿಯನ್ನು 'ಬೃಹತ್ ಶಿಲಾ ಸಂಸ್ಕತಿ' ಎಂದು ಕರೆಯುತ್ತಾರೆ. ಇಂತಹ ಕಲ್ಗೋರಿಗಳು ಆ ಜನರ ಪಾರಂಪರಿಕ ನಂಬಿಕೆಗಳ ತಳಹದಿಯ ಮೇಲೆ ರೂಪಿತವಾದವುಗಳು.

ಬೃಹತ್ ಶಿಲಾ ಸಮಾಧಿಯ ಮೊದಲ ಶೋಧನೆಯನ್ನು ೧೮೨೩ ಬ್ಯಾಬಿಂಗ್‌ಟನ್‌ರವರು ಮಾಡಿದರು. ಅಂದಿನಿಂದ ಇಂದಿನವರೆಗೂ ವಿದೇಶಿಯ ಮತ್ತು ದೇಶಿಯ ಪುರಾತತ್ವಜ್ಞರಿಂದ ಸಾಕಷ್ಟು ಅಧ್ಯಯನವು ನಡೆದು ಹಲವಾರು ಹೊಸ ಹೊಸ ವಿವರಗಳು ಬೆಳಕಿಗೆ ಬಂದಿವೆ. ಈ ಕಲ್ಗೋರಿಗಳ ನಿರ್ಮಾತೃಗಳು, ಅವುಗಳ ಕಾಲಮಾನ, ಅವುಗಳ ನಿರ್ಮಾತೃಗಳ ವಸತಿಗಳು, ಅವರ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಪದ್ಧತಿಗಳು, ಆ ಕಾಲದ ಪ್ರಾಚ್ಯ ವಸ್ತುಗಳು ಮತ್ತು ವೈವಿಧ್ಯಮಯ ವಿನ್ಯಾಸವುಳ್ಳ ಸಮಾಧಿ ನಿರ್ಮಿತಿಗಳ ಬಗೆಗೂ ಅನೇಕ ವಿವರಗಳು ಪ್ರಕಟವಾಗುತ್ತಲೇ ಇವೆ. ಹಾಗಿದ್ದರೂ ಇಡೀ ಭಾರತದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಉಗಮ, ಪ್ರಸಾರ ಹಾಗೂ ವೈವಿಧ್ಯಗಳ ಬಗೆಗೆ ಎಲ್ಲಾ ವಿದ್ವಾಂಸರೂ ಒಪ್ಪುವಂತಹ ನಿಖರವಾದ ಮಾಹಿತಿಗಳು ದೊರಕಿಲ್ಲವೆಂದೇ ಹೇಳಬೇಕು.

ಭಾರತದಂತಹ ವಿಸ್ತಾರವಾದ ದೇಶದಲ್ಲಿ ಇತರ ಸಂಸ್ಕೃತಿಗಳಂತೆ ಬೃಹತ್ ಶಿಲಾಯುಗ ಸಂಸ್ಕೃತಿಯಾದರೂ ವಿವಿಧ ಕಾಲಘಟ್ಟಗಳಲ್ಲಿ ಅನೇಕ ಪ್ರಾದೇಶಿಕ ಲಕ್ಷಣವನ್ನೊಳಗೊಂಡು ಪ್ರಸಾರವಾಗಿರುವುದರಿಂದ ಈ ಸಂಸ್ಕೃತಿಯನ್ನು ಒಟ್ಟಾರೆ ಪರಿಚಯಿಸಿಕೊಳ್ಳಲು ಆಯಾ ಪ್ರದೇಶಗಳ ನೆಲೆಗಳಲ್ಲಿಯೇ ಸ್ಥಳ ಪರಿಶೋಧನೆ ಹಾಗೂ ಉತ್ಖನನಗಳಿಂದ ದೊರೆತಿರುವ ಮಾಹಿತಿಗಳ ಪರಿಶೀಲನೆ ಮುಖ್ಯವಾಗುತ್ತದೆ.

ಉತ್ತರ ಭಾರತದಲ್ಲಿ ಉತ್ತರ ಪ್ರದೇಶದ ಫತೇಪೂರ್ ಸಿಕ್ರಿಯ ಪಶ್ಚಿಮಕ್ಕಿರುವ ಜಾಗ್ನೇರ್ ಮತ್ತು ಖೇರಾ ನಿವೇಶನಗಳಲ್ಲಿದ್ದ ಕಲ್ಗುಪ್ಪೆ(cairns) ರೀತಿಯ ಕಲ್ಗೋರಿಗಳನ್ನು ಕಾರ್ಲೇಲ್ ೧೮೭೧-೭೨ ರಲ್ಲಿಯೇ ಶೋಧಿಸಿದರು. ಅನಂತರ ೧೮೯೪ ರಲ್ಲಿ ಕಾಕ್‌ಬರ್ನ್ ಮಿರ್ಜಾಪುರ್ ಬಳಿಯಲ್ಲಿ ಇನ್ನಷ್ಟು ನಿವೇಶನಗಳನ್ನು ಶೋಧಿಸಿದರು. ೨೦ನೆಯ

ಶತಮಾನದಲ್ಲಿ ನಡೆದ ಪರಿಶೋಧನೆಗಳಿಂದ ಉತ್ತರದಲ್ಲಿ ಗಂಗಾ ನದೀ ಕಣಿವೆಯಿಂದ ಹಿಡಿದು ದಕ್ಷಿಣದಲ್ಲಿ ವಿಂಧ್ಯ ಪರ್ವತ ಶ್ರೇಣಿಯ ತಪ್ಪಲಿನವರೆಗೂ ವಿವಿಧ ರೀತಿಯ ಕಲ್ಗೋರಿಗಳುಳ್ಳ ನಿವೇಶನಗಳು ಬೆಳಕಿಗೆ ಬಂದವು (ಶರ್ಮ.ಜಿ.ಆರ್:೧೯೮೦). ಅಲಹಾಬಾದ್ ಪ್ರದೇಶದಲ್ಲಿನ ಮಿರ್ಜಾಪುರ ಕುಳಿ ಸಮಾಧಿ(pit burials) , ಅಸ್ತಿ ಪಾತ್ರೆ ದಫನ(urn burial) ಹಾಗೂ ವಾರಣಾಸಿ ಬಾಂದ ಪ್ರದೇಶದಲ್ಲಿನ ಕಲ್ಲುಪ್ಪೆಗಳು ಇವುಗಳಲ್ಲಿ ಮುಖ್ಯವಾಗಿವೆ. ಇವಲ್ಲದೆ ಶಿಲಾ ಸಂಪುಟವಿರುವ ಕಲ್ಲುಪ್ಪೆ, ಅಸ್ತಿಪಾತ್ರೆ ದಫನ, ನಿಲಸುಗಲ್ಲು(Menhir) ಮುಂತಾದ ಇತರ ಮಾದರಿಗಳೂ ದೊರೆತಿವೆ.

ಉತ್ತರ ಭಾರತದಲ್ಲಿ ವಾರಣಾಸಿ ಜಿಲ್ಲೆಯ ಚಂದ್ರ ಪ್ರಭಾ ಕಣಿವೆ ಕಲ್ಗೋರಿಗಳ ಉತ್ಖನನದಿಂದ ಕಪ್ಪು ಮತ್ತು ಕೆಂಪು ವರ್ಣದ ಮಡಕೆಗಳು, ಕಪ್ಪು ಲೇಪನವುಳ್ಳ ಮಡಕೆ ಮತ್ತು ಕೆಂಪು ಬಣ್ಣದ ಮಡಕೆಗಳು, ಸುಡಾವೆ ಮಣ್ಣಿನ ಮಣಿಗಳು, ಚಿನ್ನದ ಬಳೆ, ಸೂಕ್ಷ್ಮಶಿಲಾಯುಧಗಳು, ಚತುಶ್ಪಾದಿ ಪ್ರಾಣಿಗಳು ಅಸ್ತಿಗಳು, ಮಾನವ ಅಸ್ತಿಪಂಜರಗಳು ದೊರೆತವು. ಈ ಶಿಲಾ ವೃತ್ತಗಳ ಕೇಂದ್ರ ಭಾಗದಲ್ಲಿ ಆಳವಾದ ಕುಳಿಗಳನ್ನು ತೋಡಿ ಅದರ ನೆಲದ ಮೇಲೆ ಮರಳಿನ ತೆಳು ಪದರವನ್ನು ಹಾಸಿ ದಫನ ಸಾಮಗ್ರಿಗಳನ್ನು ಜಾಗರೂಕತೆಯಿಂದ ಇಡಲಾಗಿತ್ತು. ಸಾಮಾನ್ಯವಾಗಿ ಈ ಕುಳಿ ಸಮಾಧಿಗಳು(pit burial) ದಕ್ಷಿಣ ಭಾರತದಲ್ಲಿ ಕಂಡು ಬರುವ ಕುಳಿ ಸಮಾಧಿಗಳಿಗಿಂತ ಗಾತ್ರದಲ್ಲಿ ಚಿಕ್ಕವು. ಕಾಲಗಣನೆಯ ದೃಷ್ಟಿಯಿಂದ ವಿಂಧ್ಯ ಪ್ರದೇಶದ ವಿವಿಧ ರೀತಿಯ ಕಲ್ಗೋರಿ ಗುಂಪುಗಳು ಕ್ರಿ.ಪೂ. ೮೦೦-೩೦೦ ರ ಅವಧಿಯಲ್ಲಿ ಇದ್ದಿರಬಹುದೆಂದು ಭಾವಿಸಲಾಗಿದೆ. (ಶ-ರ್ಮ. ಜಿ.ಆರ್;೧೯೮೫). ಅದರಂತೆ ಉತ್ತರ ಭಾರತದ ಮತ್ತೊಂದು ಪ್ರಮುಖ ನೆಲೆಯಾದ ಕಾಶ್ಮೀರದ ಬೂರ್ಜಹೆಂನಲ್ಲಿನ ನಿಲಸುಗಲ್ಲಿನ ಉತ್ಖನನದಲ್ಲಿ ವಸತಿ ಪ್ರದೇಶದಲ್ಲಿ (ಹಂತ ಮೂರು) ಕೆಂಪುಬಣ್ಣದ ಮಡಕೆ, ಹೊಳಪು ನೀಡಿದ ಕಪ್ಪು ಮಡಕೆಗಳ ಜೊತೆಗೆ ಉಜ್ಜಿ ಹೊಳಪು ನೀಡಿರುವ ನವ ಶಿಲಾಯುಗದ ಉಪಕರಣಗಳು ಮತ್ತು ಮೂಳೆಯಲ್ಲಿ ರೂಪಿಸಿದ ಉಪಕರಣಗಳೂ ದೊರಕಿವೆ (ಇಂ.ಆ.ರಿ:೧೯೬೦-೬೧;೧೧ ಮತ್ತು ೧೯೬೧-೬೨;೧೭-೨೧)

ಈಶಾನ್ಯ ಭಾರತದಲ್ಲಿ ಕಲ್ಮನೆ(dolmen) ಮತ್ತು ನಿಲಸುಗಲ್ಲುಗಳೇ ಪ್ರಧಾನ ಕಲ್ಗೋರಿ ಮಾದರಿಗಳು. ೧೯೨೩ ರಲ್ಲಿ ಅಸ್ಸಾಂ ಪ್ರದೇಶದ ಜಮಗುರಿ ಮತ್ತು ದೀಮಾಪುರ್‌ಗಳಲ್ಲಿ ದೊರೆತ ಕಲ್ಗೋರಿಗಳೇ ಪ್ರಾಚೀನತಮ ಅನ್ವೇಷಣೆ-ಗಳು (ಹಟ್ಟನ್ .ಜೆ.ಎಚ್:೧೯೨೩). ಮಣಿಪುರದ ಚುರ್‌ಚಾಂದ್‌ಪುರ್ ಮತ್ತು ಉಕ್ರುಲ್ ಜಿಲ್ಲೆಗಳಲ್ಲಿ ಇತ್ತೀಚೆಗೆ ನಡೆದ ಸ್ಥಳ ಪರಿಶೋಧನೆಗಳಲ್ಲಿ ಅನೇಕ ನಿವೇಶನಗಳು ಬೆಳಕಿಗೆ ಬಂದಿವೆ (ಇಂ.ಆ.ರಿ.;೧೯೮೩-೮೪;೫೯-೬೦). ಈಶಾನ್ಯ ಭಾರತದ ಧಾರ್ಮಿಕ ಪದ್ಧತಿಗಳಲ್ಲಿ ಬೃಹತ್ ಶಿಲಾ ಕಲ್ಗೋರಿಗಳನ್ನು ನಿರ್ಮಿಸುವ ಪದ್ಧತಿ ಉಳಿದು ಬಂದಿದೆ. ಉದಾಹರಣೆಗೆ ಅಸ್ಸಾಂ ಖಾಸ್ಸಿ ಜನಾಂಗ (ಹ್ಯಮನ್ ಡೊರ್ಪ್:೧೯೪೩) ಮತ್ತು ಮಣಿಪುರದ ಮಾವೋ-ನಾಗ ಜನಾಂಗಗಳಲ್ಲಿ

(ಸಿಂಗ್.ಒ.ಕೆ.:೧೯೮೫) ಈ ಪದ್ಧತಿ ಇಂದಿಗೂ ಪ್ರಚಲಿತವಿದೆ. ಈ ಪ್ರದೇಶದ ಸ್ಥಳ ಪರಿಶೋಧನೆ ಮತ್ತು ಉತ್ಖನನಗಳಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ನಿರ್ದಿಷ್ಟ ಕಾಲ ನಿರ್ಣಯಕ್ಕೆ ಪೂರಕವಾದ ಯಾವುದೇ ಮಾಹಿತಿ ಇದುವರೆಗೆ ಲಭ್ಯವಾಗಿಲ್ಲ.

ಬಿಹಾರಿನ ಚೋಟಾ ನಾಗಪೂರ್(ಡಲ್ಟನ್.ಈ.ಟಿ:೧೮೭೩) ಮತ್ತು ರಾಂಚಿ ಪ್ರದೇಶಗಳಲ್ಲಿ (ರಾಯ್.ಎಸ್.ಸಿ:೧೯೧೫) ಸಂಶೋಧಿತವಾಗಿರುವ ನಿವೇಶನಗಳು ಪೂರ್ವ ಭಾರತದಲ್ಲಿ ಮೊದ ಮೊದಲು ಬೆಳಕಿಗೆ ಬಂದ ಬೃಹತ್ ಶಿಲಾ ನಿವೇಶನಗಳು. ಭಾರತದ ಈ ಭಾಗದಲ್ಲಿ ಕಲ್ಗೋರಿ ಸಂಸ್ಕೃತಿಗಳ ಅಧ್ಯಯನಕ್ಕೆ ಹಿನ್ನೆಲೆಯಾಗಿ ಹ್ಯಮನ್ ಡೊರ್ಫ್ (೧೯೪೩) ರವರು ಮಾಡಿರುವ ಒರಿಸ್ಸಾದ ಬುಡಕಟ್ಟು ಜನಾಂಗಗಳ ಸಾಂಸ್ಕೃತಿಕ ಅಧ್ಯಯನ ಒಂದು ಮಹತ್ವದ ಕೊಡುಗೆ. ಸುಮಾರು ಅರ್ಧ ಶತಮಾನದ ನಂತರ ಒರಿಸ್ಸಾದ ಸುಂದರಘರ್ ಜಿಲ್ಲೆಯ ಬ್ರಹ್ಮಣಿ ನದೀ ಕಣಿವೆಯಲ್ಲಿ ನಡೆದ ಸ್ಥಳ ಪರಿ-ಶೋಧನೆಗಳಲ್ಲಿ ಇನ್ನಷ್ಟು ಬೃಹತ್ ಶಿಲಾಯುಗದ ನಿವೇಶನಗಳು ದೊರಕಿವೆ. ಈ ಪ್ರದೇಶದಲ್ಲಿ ಕಲ್ಗುಪ್ಪೆ, ಶಿಲಾವೃತ್ತಗಳು ಪ್ರಧಾನ ಕಲ್ಗೋರಿಗಳಾಗಿವೆ (ಇಂ.ಆ.ರಿ.೧೯೮೩-೮೪:೭೬-೭೭). ಹಾಗಿದ್ದರೂ ಇದುವರೆಗೆ ಈ ಪ್ರದೇಶದ ಯಾವುದೇ ನಿವೇಶನದಲ್ಲಿ ಅಥವಾ ಕಲ್ಗೋರಿ ಮಾದರಿಗಳಲ್ಲಿ ಉತ್ಖನನ ನಡೆಯದಿರುವುದರಿಂದ ಹೆಚ್ಚಿನ ವಿವರಗಳು ಲಭ್ಯವಾಗಿಲ್ಲ.

ಪಶ್ಚಿಮ ಭಾರತದ ರಾಜಾಸ್ಥಾನ ಮತ್ತು ಗುಜರಾತ್ ರಾಜ್ಯಗಳಲ್ಲಿ ಸಿಂಧೂ ಸಂಸ್ಕೃತಿ ಹಾಗೂ ಅದರ ಸಮ-ಕಾಲೀನ ಸಂಸ್ಕೃತಿಗಳ ನೆಲೆಗಳ ಬಗೆಗೆ ಅತಿ ಹೆಚ್ಚಿನ ಸ್ಥಳ ಪರಿಶೋಧನೆ ಮತ್ತು ಉತ್ಖನನಗಳು ನಡೆದಿವೆ. ಆದರೆ ಬೃಹತ್ ಶಿಲಾಯುಗ ಸಂಸ್ಕೃತಿಯ ಬಗೆಗೆ ದೊರೆತಿರುವ ಮಾಹಿತಿ ತೀರಾ ಸೀಮಿತವಾಗಿದೆ. ಶಿಲಾವೃತ್ತಗಳುಳ್ಳ ಕೆಲವೇ ಕಲ್ಗೋರಿಗಳ ಶೋಧನೆ ಇದುವರೆಗೆ ಆಗಿದೆ (ದೇವ್.ಎಸ್.ಬಿ.:೧೯೮೫). ಹಾಗಿದ್ದರೂ ಕಚ್ ಪ್ರದೇಶದಲ್ಲಿರುವ ಪ್ರಸಿದ್ಧ ಹರಪ್ಪ ಸಂಸ್ಕೃ-ತಿಯ ಸೂರ್ ಕೊತಡನೆಲೆಯಲ್ಲಿ ವಸತಿ ನಿವೇಶನದ ವಾಯುವ್ಯಕ್ಕಿರುವ ರುದ್ರಭೂಮಿಯಲ್ಲಿ ನಡೆಸಿದ ಉತ್ಖನನದಲ್ಲಿ ಬೃಹತ್ ಗಾತ್ರದ ಮುಚ್ಚಳಕಲ್ಲುಳ್ಳ(cap stone) ಅಂಡಾಕಾರದ ಕುಳಿ ಬೆಳಕಿಗೆ ಬಂದಿದೆ. ಅದರೊಳಗೆ ಮಣ್ಣಿನ ಪಾತ್ರೆಗ-ಳನ್ನು ಇರಿಸಲಾಗಿತ್ತು. ಇವು ಸಿಂಧೂ ಸಂಸ್ಕೃತಿ(ತಾಮ್ರ-ಶಿಲಾಯುಗದ)ಯ ಕಾಲದ್ದಾಗಿರುವುದರಿಂದ ಕುತೂಹಲಕಾರಿಯಾಗಿ-ದೆ. ಇದು ಬೃಹತ್ ಶಿಲಾ ಸಂಸ್ಕೃತಿ ಸಮಾಧಿ ಮಾದರಿಗಳಲ್ಲಿ ಒಂದಾಗಿದ್ದು ಹರಪ್ಪಾ ಸಂಸ್ಕೃತಿಯ ನಿವೇಶನಗಳಲ್ಲಿ ಸಾಮಾ-ನ್ಯವಾಗಿ ಕಂಡು ಬರುವುದಿಲ್ಲ. (ಜೋಶಿ.ಜೆ.ಪಿ:೧೯೭೧-೭೨) ಇತ್ತೀಚೆಗೆ ದೊಲಾವೀರಾ ನಿವೇಶನದಲ್ಲಿ ನಡೆಸಿದ ಉತ್ಖನನ-ದಲ್ಲಿ ವಸತಿಯ ಹೊರವಲಯದಲ್ಲಿ ಅಂತರ್ಗತ ಶಿಲಾ ಪೆಟ್ಟಿಗೆ(pit circle with cist) ಮಾದರಿ ಹಾಗೂ ಮುಚ್ಚಳ ಕಲ್ಲುಳ್ಳ ಕುಳಿಗಳು ಕಂಡು ಬಂದಿವೆ. (ಲಾಲ್.ಬಿ.ಬಿ:೧೯೯೮:೧೦೭-೮).

ಆಸಕ್ತ ಸ್ಥಳೀಯ ಪುರಾತತ್ವಜ್ಞರು, ಶೈಕ್ಷಣಿಕ ಹಾಗೂ ಸಂಶೋಧನಾ ಸಂಘ ಸಂಸ್ಥೆಗಳ ಸತತ ಪರಿಶ್ರಮಗಳಿಂದಾಗಿ ಮಧ್ಯ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ಬಗ್ಗೆ ಸಾಕಷ್ಟು ಸಾಮಗ್ರಿ ಒದಗಿದೆ. ೧೮೭೩-೭೪ ರ ವೇಳೆಗೆ ಮಧ್ಯ ಭಾರತ ಪ್ರಾಂತ್ಯಗಳ ಶೋರಾರ ಗ್ರಾಮದ ಬಳಿ ಕನ್ನಿಂಗ್‌ಹ್ಯಾಂ ನ ಸಹಾಯಕನಾದ ಬರ್‌ಗ್ಲರ್ ಮೇಲ್ಮುಖವಾಗಿ ನಿಲ್ಲಿಸಿದ್ದ ಕಲ್ಲುಗಳು ಮತ್ತು ಚದುರಿ ಬಿದ್ದಿದ್ದ ಅಂತಹುದೇ ಭಗ್ನ ಭಾಗಗಳನ್ನು ವರದಿ ಮಾಡಿದ್ದರಾದರೂ ಅವು ಹೆಚ್ಚಿನ ಗಮನ ಸೆಳೆಯಲಿಲ್ಲ (ಕನ್ನಿಂಗ್‌ಹ್ಯಾಂ: ೧೮೭೩-೭೪). ಬರ್‌ಗ್ಲರ್ ನೀಡಿದ ವಿವರಣೆಗಳು ನಿಲಸುಗಲ್ಲು ಮತ್ತು ಕಲ್ಲುಪ್ಪೆಗಳಿಗೆ ಸಂಬಂಧಿಸಿವೆ. ಇದೇ ನಿವೇಶನಗಳನ್ನು ೧೯೩೩-೩೪ ರಲ್ಲಿ ಪುನರ್ ಪರಿಶೀಲನೆಗೊಳಪಡಿಸಿ ಅವು ವಿಸ್ತಾರವಾದ ಶಿಲಾಯುಗದ ರುದ್ರಭೂಮಿಗಳೆಂದು ಉಲ್ಲೇಖಿಸಲಾಯಿತು. ಇವು ಮತ್ತು ಇನ್ನಿತರ ಅನಂತರದ ಶೋಧನೆಗಳು ಮಧ್ಯ ಪ್ರದೇಶದ ದಕ್ಷಿಣ ಹಾಗೂ ಪೂರ್ವ ಭಾಗಗಳಲ್ಲಿ ಮುಖ್ಯವಾಗಿ ರಾಯಪುರ ಮತ್ತು ಬಸ್ತರ್ ಜಿಲ್ಲೆಗಳಲ್ಲಿ ಅನೇಕ ಬೃಹತ್ ಶಿಲಾಯುಗದ ನಿವೇಶನಗಳಿರುವುದನ್ನು ಸ್ಥಿರಪಡಿಸಿದವು. ಮಧ್ಯ ಭಾರತದಲ್ಲಿ ಹೆಚ್ಚಾಗಿ ಕಂಡು ಬರುವ ಕಲ್ಗೋರಿ ಮಾದರಿಗಳೆಂದರೆ (೧) ಕಲ್ಲುಪ್ಪೆ (೨) ಶಿಲಾವೃತ್ತ (೩) ನಿಲಸುಗಲ್ಲು ಮತ್ತು ಕಲ್ಮನೆಗಳು(dolmen) (ಗುಪ್ತ.ಸಿ.ಎಸ್:೧೯೮೨). ರಾಯಪುರ ಜಿಲ್ಲೆಯ ಧನೋರಾ ನಿವೇಶನದ ಉತ್ಖನನದಿಂದ ಕಲ್ಗೋರಿಗಳ ರಚನಾ ವಿಧಾನವೂ ಅವುಗಳಲ್ಲಿ ಮಾನವ ಅಸ್ಥಿ ಪಂಜರದ ಭಾಗಗಳು ಮತ್ತು ಗಾಜಿನ ಮಣಿ ಹಾಗೂ ಬಳೆಗಳಿರುವುದೂ ತಿಳಿಯಿತು. ಸಮೀಪದ ಇನ್ನೊಂದು ಸಮಾಧಿಯಲ್ಲಿ ದೊರೆತ ತಾಮ್ರದ ಪಾತ್ರೆ ಗಮನಾರ್ಹವಾದುದು (ದೀಕ್ಷಿತ್ ಎಂ.ಜಿ:೧೯೫೭-೫೮). ಅದರಂತೆಯೇ ಮಲ್ಹಾರ್‌ನಲ್ಲಿ ನಡೆದ ವಸತಿ ನೆಲೆ ಉತ್ಖನನದಿಂದ ತಾಮ್ರ-ಶಿಲಾಯುಗ ಸಂಸ್ಕೃತಿಯು ಕೆಳಸ್ತರಗಳಲ್ಲಿ ಬೆಳಕಿಗೆ ಬಂದವು (ಗುಪ್ತಾ.ಸಿ.ಎಸ್:೧೯೮೨). ಹಾಗಿದ್ದರೂ ಮಧ್ಯ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ವೈವಿಧ್ಯ ಮತ್ತು ಕಾಲಮಾನದ ಬಗೆಗೆ ಹೆಚ್ಚಿನ ಮಾಹಿತಿ ಇನ್ನೂ ಲಭ್ಯವಾಗಬೇಕಿದೆ. ಅಲ್ಲದೆ ಒರಿಸ್ಸಾದಂತೆ ಇಲ್ಲಿ ಕೂಡ ಬಸ್ತಾರ್ ಜಿಲ್ಲೆಯ ಮುರಿಯ, ಮಾರಿಯಾ ಮತ್ತು ಗೊಂಡಾ ಬುಡಕಟ್ಟು ಜನಾಂಗಗಳಲ್ಲಿ ಇಂತಹ ಸಮಾಧಿ ನಿರ್ಮಾಣ ಪರಂಪರೆ ಇಂದಿಗೂ ಪ್ರಚಲಿತವಾಗಿರುವುದು ಗಮನಾರ್ಹ (ಶರ್ಮಾ:೧೯೮೫).

ಈ ಮೇಲೆ ಹೇಳಿದ ಎಲ್ಲಾ ಭೌಗೋಳಿಕ ಪ್ರದೇಶಗಳಿಗಿಂತ ದಖನ್ ಪ್ರಸ್ಥಭೂಮಿ ಮತ್ತು ವಿದರ್ಭ ಪ್ರದೇಶಗಳಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಬಗೆಗೆ ಸಾಕಷ್ಟು ವಿವರಣೆಗಳು ದೊರಕಿವೆ. ಈ ಪ್ರದೇಶದ ತಾಕಲ್‌ಘಾಟ್ (ದೇನ್.ಎಸ್.ಬಿ:೧೯೭೦) ಮತ್ತು ನೈಕುಂಡ್ (ಇಂ.ಆ.ರಿ:೧೯೭೭-೭೮;೩೯) ನಿವೇಶನಗಳಲ್ಲಿ ಇರುವಂತೆ ಸಮಾಧಿ ಸ್ಥಳ ಮತ್ತು ವಸತಿ ಸ್ಥಳಗಳು ಪಕ್ಕಪಕ್ಕದಲ್ಲಿರುವುದು. ಈ ಪ್ರದೇಶದ ಪ್ರಮುಖ ಕಲ್ಗೋರಿ ಮಾದರಿಗಳು ವೈವಿಷ್ಟ್ಯವಾಗಿವೆ.

ಧೂಲಿಯಾ ಜಿಲ್ಲೆಯ ರಂಜಾಳ(ಇಂ.ಆ.ರಿ:೧೯೬೦-೬೧;೩೦-೩೨) ಮತ್ತು ಚಾಂದಾ ಜಿಲ್ಲೆಯ ನಿವೇಶನಗಳು, ನಾಗಪುರ ಜಿಲ್ಲೆಯ ಜೂನಾಪಾನಿ(ಇಂ.ಆ.ರಿ:೧೯೬೦-೬೧;೧೪೮-೫೦) ಅಮರಾವತಿ ಜಿಲ್ಲೆ ಕೌಂಡಿನ್ಯಪುರ (ದೀಕ್ಷಿತ್. ಎಂ.ಜಿ:೧೯೬೮) ತಾಕಲ್ ಘಾಟ್ ಮತ್ತು ಖಾಪ (ದೇವ್.ಎಸ್.ಬಿ:೧೯೭೦), ಮಹೋರ್‌ಜಹಾರಿ (ದೇವ್. ಎಸ್.ಬಿ:೧೯೭೩) ವಾರ್ಧಾ ಜಿಲ್ಲೆಯ ಪೌನಾರ್, ಖೈರ್‌ವಾಡ (ಇಂ.ಆ.ರಿ:೧೯೮-೮೨;೧೫೧-೫೨) ಭಾಗಿ ಮೊಹರಿ (ಇಂ.ಆ.ರಿ:೧೯೮೨-೮೩;೬೧-೬೨), ನಾಗಪುರ ಜಿಲ್ಲೆ, ರಾಯಪುರ್ (ಇಂ.ಆ.ರಿ:೧೯೮೪-೮೫;೫೩-೫೫) ಗಳಲ್ಲಿ ಪ್ರಮುಖ ಕಲ್ಗೋರಿಗಳಾದ ಶಿಲಾವೃತ್ತ, ಅಂತರ್ಗತ ಶಿಲಾ ಪೆಟ್ಟಿಗೆಯುಳ್ಳ ಕುಳಿ ಶಿಲಾವೃತ್ತ ಮತ್ತು ಕಲ್ಲುಗುಪ್ಪೆ ಮೊದಲಾದವು ಕಂಡುಬಂದಿವೆ. ಇವುಗಳಲ್ಲಿ ೧೮೭೯ ರ ವೇಳೆಗೆ ರಿವೆಟ್ ಕಾರ್ನೇಕ್‌ರವರು ಜೂನಾಪಾನಿಯ ನಿವೇಶನದಲ್ಲಿ ಅಲ್ಪ ಪ್ರಮಾಣದ ಉತ್ಖನನ ಕೈಗೊಂಡಿದ್ದರು.

ದಖನ್ ಕಲ್ಗೋರಿ ನಿವೇಶನಗಳ ಸ್ಥಳ ಪರಿಶೋಧನೆ, ಉತ್ಖನನಗಳಿಂದ ಕೆಲವು ಪ್ರಮುಖ ಅಂಶಗಳು ಬೆಳಕಿಗೆ ಬಂದಿವೆ. ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯು ಸಾಧಾರಣವಾಗಿ ನೂತನ ಶಿಲಾಯುಗದ ಅನಂತರ ಕಂಡು ಬರುತ್ತದೆ. ಆದರೆ ದಖನ್‌ನಲ್ಲಿ ಈ ಸಂಸ್ಕೃತಿಯು ತಾಮ್ರ ಶಿಲಾಯುಗದ ಅವಶೇಷಗಳಿಗೆ ಸಮಾನಾಂತರವಾದ ಸಮಕಾಲೀನ ಸ್ತರಗಳಲ್ಲಿಯೇ ಕಂಡು ಬಂದಿವೆ. ಮೃತ್ ಪಾತ್ರೆಯ ಸಂಪ್ರದಾಯಗಳ ಮುಂದುವರಿಕೆಯಿಂದ ಸೂಚಿತವಾಗುವ ಈ ರೀತಿಯ ಸಾಂಸ್ಕೃತಿಕ ವೈಶಿಷ್ಟ್ಯಗಳ ಸಮ್ಮಿಳನವನ್ನು ತೇಕ್‌ವಾಡ ಉತ್ಖನನದಲ್ಲಿ ಮೊದಲ ಬಾರಿಗೆ ಗುರುತಿಸಲಾಯಿತು. ತೇಕ್‌ವಾಡದ ಬೃಹತ್ ಶಿಲಾಯುಗ ಸಂಸ್ಕೃತಿಯ ಸ್ತರಗಳನ್ನು ಬಹಾಲ್ ೧ ಬಿ. ಸಂಸ್ಕೃತಿಗೆ ಸಮಕಾಲೀನವೆಂದು ಗುರುತಿಸಲಾಗಿದ್ದು ಈ ಎರಡೂ ಸಾಂಸ್ಕೃತಿಕ ಹಂತಗಳಲ್ಲಿ ಜೋರ್ವೆ ಮಾದರಿಯ ಮೃತ್ ಪಾತ್ರೆಗಳು ಉಳಿದ ಅವಶೇಷಗಳ ಜೊತೆಯಲ್ಲಿ ಹೆಚ್ಚೂ ಕಡಿಮೆ ಸಮತಲ ಪ್ರಮಾಣದಲ್ಲಿ ದೊರಕಿದವು. ಇದಕ್ಕೂ ಮುಂಚೆ ಕೌಂಡಿನ್ಯಪುರದಲ್ಲಿ ನಡೆದ ಉತ್ಖನನದಲ್ಲಿ ಅದುವರೆಗೆ ತಿಳಿದು ಬರದಿದ್ದ ಹೊಸ ಸಾಂಸ್ಕೃತಿಕ ಹಂತವೊಂದರ ಅವಶೇಷಗಳು ಬೆಳಕಿಗೆ ಬಂದಿದ್ದವು (ದೀಕ್ಷಿತ್.ಎಂ.ಜಿ :೧೯೬೮). ಅಬ್ರಕಯುಕ್ತ ಮೃತ್ ಪಾತ್ರೆ, ತಾಮ್ರ-ಶಿಲಾಯುಗದ ಸುಪರಿಚಿತ ಚಿತ್ರಾಲಂಕೃತ ಪಾತ್ರೆಗಳಿಗಿಂತ ಭಿನ್ನವಾದ ಚಿತ್ರಾಲಂಕೃತ ಕಪ್ಪು-ಕೆಂಪು ಮೃತ್ ಪಾತ್ರೆಗಳು, ಸಾಧಾರಣ ರೀತಿಯ ಕಪ್ಪು, ಕೆಂಪು ಮೃತ್ ಪಾತ್ರೆಗಳು ಮತ್ತು ಕೊರೆದ ಕಾರ್ನೀಲಿಯನ್ ಮಣಿಗಳು ಈ ಸಾಂಸ್ಕೃತಿಕ ಹಂತದ ವಿಶೇಷ ಲಕ್ಷಣಗಳಾಗಿವೆ. ಇವೇ ಲಕ್ಷಣಗಳು ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ವಿಶೇಷ ಅಂಶವಾಗಿರುವುದು ಗಮನಾರ್ಹ. ಇಂತಹ ವಿಶಿಷ್ಟ ಲಕ್ಷಣಗಳುಳ್ಳ ಸಾಂಸ್ಕೃತಿಕ ಹಂತವನ್ನು ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಆ ಸಂದರ್ಭದಲ್ಲಿ ಸಾಧ್ಯವಾಗಿರಲಿಲ್ಲ. ಮುಂದೆ ೧೯೬೧-೬೨ ರಲ್ಲಿ ನಡೆದ

ಜೂನಾಪಾನಿಯ ಶಿಲಾವೃತ್ತ ಮಾದರಿಯ ಕಲ್ಗೋರಿ ಉತ್ಖನನದಲ್ಲಿ ಕೌಂಡಿನ್ಯಪುರದಲ್ಲಿ ಬೆಳಕಿಗೆ ಬಂದ ಎಲ್ಲಾ ಅಂಶಗಳೂ ಬೃಹತ್ ಶಿಲಾಯುಗದ ಸಾಂಸ್ಕೃತಿಕ ಸಂದರ್ಭದಲ್ಲಿ ನಿರ್ದಿಷ್ಟವಾಗಿ ದೊರೆತವು. ಜೊತೆಗೆ ಜೂನಾಪಾನಿಯ ಅಸ್ಥಿಪಾತ್ರೆ ದಫ-ನದಲ್ಲಿ ಕಬ್ಬಿಣದ ಈಟಿ ಮೊನೆ ಮತ್ತು ಖಡ್ಗಗಳು ದೊರೆತವು. ೧೯೬೭ ರ ಪೌನಾರ್ ಉತ್ಖನನದಲ್ಲಿ (ದೇವ್.ಎಸ್..ಬಿ ಮತ್ತು ಧವಳೀಕರ್:೧೯೬೮ ) ಈ ಸಾಂಸ್ಕೃತಿಕ ಹಂತಗಳ ಸಂಬಂಧವನ್ನು ವಿಶದವಾಗಿಸುವ ಇನ್ನಷ್ಟು ಮಾಹಿತಿ ದೊರೆತಿದೆ. ವಿದರ್ಭ ಪ್ರದೇಶದ ಬೃಹತ್ ಶಿಲಾಯುಗ ಸಂಸ್ಕೃತಿಯ ವಸತಿ ಹಾಗೂ ಕಲ್ಗೋರಿಗಳೆರಡರ ಸಂಪೂರ್ಣ ಪರಿಚಯವನ್ನು ನೀಡಬಲ್ಲ ವಿವರಗಳು ಅನುಕ್ರಮವಾಗಿ ತೇಕಲ್‌ಘಾಟ್ ಮತ್ತು ಖಾಪ (ದೇವ್.ಎಸ್.ಬಿ:೧೯೭೦) ಗಳಲ್ಲಿ ನಡೆದ ಉತ್ಖನನ-ಗಳಲ್ಲಿ ಬೆಳಕಿಗೆ ಬಂದವು. ಈ ಉತ್ಖನನಗಳಲ್ಲಿ ದೊರೆತ ಮಾಹಿತಿಯಂತೆ ಆ ಯುಗದ ಮನೆಗಳಿಗೆ ಬಿದಿರು ಮತ್ತು ಮಣ್ಣಿನ ಗೋಡೆಗಳಿದ್ದವು. ನೆಲವನ್ನು ದಪ್ಪ ಮರಳಿನ ಕಣಗಳಿಂದ ಮಿಶ್ರಿತವಾದ ದಟ್ಟ ಕಂದು ಮಣ್ಣಿನ ಪದರಗಳನ್ನು ಹರಡಿ ಚೆನ್ನಾಗಿ ಬಡಿದು ಸಮತಟ್ಟುಗೊಳಿಸಿ ಮೇಲ್ಪದರದಲ್ಲಿ ಸುಣ್ಣ ಬಳಿದು ನಯಗೊಳಿಸಲಾಗಿತ್ತು. ತೇಕ್ವಾಡ, ಪೌನಾರ್‌ಗಳಲ್ಲಿ ಬಹಾಲ್ ೧ ಬಿ) ಸಂಸ್ಕೃತಿಯ ವಿಶಿಷ್ಟ ಮೃತ್ ಪಾತ್ರೆಗಳು, ದಕ್ಷಿಣ ಭಾರತದ ಬೃಹತ್ ಶಿಲಾಯುಗಸಂಸ್ಕೃತಿಯ ವಿಶೇಷ ಲಕ್ಷಣವಾದ ಕೊರೆದ ಕಾರ್ನೀಲಿಯನ್ ಮಣಿಗಳು ವಸತಿ ನಿವೇಶನಗಳಲ್ಲಿಯೇ ದೊರಕಿದವು. ಶಿಲಾವೃತ್ತ ಮಾದರಿಯ ಕಲ್ಗೋರಿಗಳಲ್ಲಿ ದಕ್ಷಿಣ ಭಾರತದ ಕಲ್ಗೋರಿಗಳಲ್ಲಿ ದೊರಕಿರುವ ಹೆಚ್ಚು ಕಡಿಮೆ ಎಲ್ಲಾ ರೀತಿಯ ಕಬ್ಬಿಣದ ವಸ್ತುಗಳು, ಆಯತಾಕಾರದ ಎರಡೂ ಪಾರ್ಶ್ವಗಳೂ ಹರಿತವಾಗಿದ್ದು ಮಧ್ಯದಲ್ಲಿ ಹಿಡಿಕೆಯ ನಳಿಕೆ ಇರುವ ಕೊಡಲಿಗಳು, ಕೊಡಲಿಯನ್ನು ಹಿಡಿಕೆಗೆ ಗಟ್ಟಿ-ಯಾಗಿ ಕೂರಿಸಲು ಉಪಯೋಗಿಸಲಾಗಿದ್ದ ಬಳೆಯಂತಹ ಕಬ್ಬಿಣದ ಅಡ್ಡಪಟ್ಟಿಗಳು ದೊರಕಿದವು. ಇವೆಲ್ಲಕ್ಕಿಂತ ಮುಖ್ಯ-ವಾದ ಪ್ರಾಚ್ಯ ವಸ್ತುವೆಂದರೆ ಕುದುರೆಯ ಅಸ್ಥಿಪಂಜರದ ಮೇಲೆ ಇದ್ದ ಮಣಿಗಳಿಂದ ಅಲಂಕೃತವಾದ ತಾಮ್ರದ ಮುಖ ಅಥವಾ ಹಣೆಪಟ್ಟಿ. ಅದರಂತೆಯೇ ಮಹೋರ್‌ಜಾರ್‌ಯಲ್ಲಿ ದೊರೆತ ಹಿಡಿಕೆಯುಳ್ಳ ಕಬ್ಬಿಣದ ಖಡ್ಗ, ತಾಮ್ರ-ಶಿಲಾಯುಗ ಸಂಸ್ಕೃತಿಯ ಮುಂದುವರಿಕೆಯನ್ನು ಸೂಚಿಸುತ್ತದೆ. ಈ ಎಲ್ಲಾ ಉತ್ಖನನಗಳಲ್ಲಿ ಬೆಳಕಿಗೆ ಬಂದಿರುವಂತೆ ವಿದರ್ಭ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರು ಸಾಧಾರಣವಾಗಿ ಚಿತ್ರಾಲಂಕಾರವಿರುವ ಕಪ್ಪು-ಕೆಂಪು, ಚಿತ್ರಣವಿರುವ ಅಥವಾ ಇಲ್ಲದ ಅಬ್ರಕಯುಕ್ತ ಕೆಂಪು ಮತ್ತು ಕೆಂಪು ಬಣ್ಣದ ಮೃತ್ ಪಾತ್ರೆಗಳನ್ನು ಉಪಯೋಗಿಸುತ್ತಿದ್ದರು. ವಸತಿ ಮತ್ತು ಸಮಾಧಿ ನಿವೇಶನ-ಗಳಲ್ಲಿ ಕಂಡು ಬಂದ ಒಂದು ಗಮನಾರ್ಹ ವೆತ್ಯಾಸವೆಂದರೆ ಸಾಧಾರಣವಾಗಿ ವಸತಿ ಪ್ರದೇಶದಲ್ಲಿ ಚಿತ್ರಾಲಂಕೃತ ಮೃತ್ ಪಾತ್ರೆಗಳು ದೊರೆತರೆ ಸಮಾಧಿಗಳಲ್ಲಿ ಅವುಗಳ ಅಭಾವ ಎದ್ದು ಕಾಣುತ್ತದೆ.

ದಕ್ಷಿಣ ಭಾರತ ಮತ್ತು ದಖನ್ ಪ್ರಸ್ಥಭೂಮಿಗಳಲ್ಲಿನ ಬೃಹತ್ ಶಿಲಾಯುಗ ಸಂಸ್ಕೃತಿಯ ಪರಸ್ಪರ ಸಂಪರ್ಕ ಸಂಬಂಧಗಳು ಆ ಪ್ರದೇಶಗಳಲ್ಲಿರುವ ಕಲ್ಗೋರಿ ನಿರ್ಮಾಣಗಳಲ್ಲಿರುವ ಸಾಮ್ಯತೆಯಿಂದಲೂ ಸ್ಪಷ್ಟವಾಗುತ್ತದೆ. ಉದಾಹರಣೆಗೆ ಬಾಗಿಮೊಹರಿ (ಇಂ.ಆ.ರಿ:೧೯೮೨-೮೩:೬೧-೬೨) ಉತ್ಖನನದಲ್ಲಿ ಶಿಲಾಪೆಟ್ಟಿಗೆಯುಳ್ಳ ಕುಳಿ ಶಿಲಾ ವೃತ್ತ, ರಾಯಪುರದಲ್ಲಿ ಶಿಲಾವೃತ್ತದಿಂದ ಆವೃತವಾದ ಶವ ಕುಳಿಗಳೂ ಕಂಡು ಬಂದಿವೆ. ಇವು ಆಂಧ್ರ-ಕರ್ನಾಟಕದಲ್ಲಿ ಸಾಕಷ್ಟು ಪ್ರಚಲಿತವಿದ್ದ ಮಾದರಿಗಳೆ, ಜೊತೆಗೆ ಎರಡೂ ಪ್ರದೇಶಗಳ ದಫನ ಸಾಮಗ್ರಿಗಳಲ್ಲಿ ಪಕ್ಷಿಗಳ ಕೆತ್ತನೆಯುಳ್ಳ ಹಿಡಿಕೆಗಳು, ತಾಮ್ರದ ಮುಚ್ಚಳಗಳು ಸಾಮಾನ್ಯ ಅಂಶ. ಉದಾಹರಣೆಗೆ ಆದಿಚನ್ನಲೂರಿನಲ್ಲಿ ದೊರಕಿರುವಂತಹುದೇ ವಸ್ತುಗಳು ಮಹೋರ್ ಜಾರಿ ಮತ್ತು ತೇಕಲ್ ಘಾಟ್‌ಗಳಲ್ಲಿಯೂ ದೊರೆತಿವೆ. ಇತ್ತೀಚೆಗೆ ರಾಯಪುರ (ಇಂ.ಆ.ರಿ:೧೯೮೪-೮೫:೫೩-೫೫)ದಲ್ಲಿ ನಡೆದ ಉತ್ಖನನದಲ್ಲಿ ಮೇಲೆ ಹೇಳಿದ ಎಲ್ಲಾ ಪ್ರಾಚ್ಯ ವಸ್ತುಗಳ ಜೊತೆಗೆ ದಕ್ಷಿಣ ಭಾರತದ ಕಲ್ಗೋರಿಗಳಲ್ಲಿ ಸರ್ವೇ ಸಾಮಾನ್ಯವಾಗಿ ದೊರಕುವ ಹೊಳಪುಳ್ಳ ಕಪ್ಪು ಬಣ್ಣದ ಶಂಖು ಆಕೃತಿಯ ಅಲಂಕೃತ ಹಿಡಿಕೆಗಳುಳ್ಳ ಮುಚ್ಚಳಗಳೂ ದೊರಕಿದವು. ಈ ಅಂಶಗಳು ದಖನ್‌ನ ಬೃಹತ್ ಶಿಲಾ ಸಂಸ್ಕೃತಿಗೂ ತಾಮ್ರ-ಶಿಲಾಯುಗದ ಮುಂದುವರಿಕೆ ಅಥವಾ ಸಮಕಾಲೀನತೆಯನ್ನು ಸ್ಪಷ್ಟಪಡಿಸಿದವು. ಸಾಧಾರಣವಾಗಿ ದಖನ್ ಬೃಹತ್ ಶಿಲಾ ಸಂಸ್ಕೃತಿಯನ್ನು ಕ್ರಿ.ಪೂ. ೭೦೦-೬೦೦ ರ ಕಾಲಮಾನದ್ದೆಂದು ಭಾವಿಸಲಾಗಿದೆ. ದಖನ್ ದಿಂದ ಮತ್ತಷ್ಟು ದಕ್ಷಿಣಕ್ಕೆ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಬೆಳಕಿಗೆ ಬಂದಿವೆ. ಹಾಗೆ ನೋಡಿದರೆ ದಕ್ಷಿಣ ಭಾರತದ ಬೃಹತ್ ಶಿಲಾಯುಗದ ಕಲ್ಗೋರಿ ನಿವೇಶನಗಳು ವೈವಿಧ್ಯ ಸಾಂಸ್ಕೃತಿಕ ಅವಶೇಷ ಮುಂತಾದವುಗಳ ದೃಷ್ಟಿಯಿಂದ ಅತಿ ಹೆಚ್ಚಿನ ಸಾಮಗ್ರಿಯನ್ನು ಒದಗಿಸಿರುವುದರ ಜೊತೆಗೆ ಅಷ್ಟೇ ವಿಪುಲವಾದ ಸಂದೇಹ ಭಿನ್ನಾಭಿಪ್ರಾಯಗಳಿಗೂ ಎಡೆ ಮಾಡಿಕೊಟ್ಟಿದೆ.

ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾಯುಗದ ಅಧ್ಯಯನದ ಇತಿಹಾಸ ಒಂದೂವರೆ ಶತಮಾನಕ್ಕೂ ಹೆಚ್ಚು ಹಿಂದಿನದು. ೧೮೨೩ ರಲ್ಲಿ ಬ್ಯಾಬಿಂಗ್‌ಟನ್ (೧೮೨೩) ಕೇರಳದ ಕರಾವಳಿ ಪ್ರದೇಶದಲ್ಲಿ ಶೋಧಿಸಿದ ಕಲ್ಗೋರಿ ಮಾದರಿಗಳು ಅತ್ಯಂತ ಹಳೆಯವು. ಅಂದಿನಿಂದ ಇಂದಿನವರೆಗೂ ದೇಶ ವಿದೇಶಗಳ ಸಂಶೋಧಕರು, ಶೈಕ್ಷಣಿಕ ಹಾಗೂ ಸಂಶೋಧನಾ ಸಂಸ್ಥೆಗಳು, ಆಸಕ್ತ ಸಾರ್ವಜನಿಕರು ಮಾಡಿರುವ ಕ್ಷೇತ್ರಕಾರ್ಯ ಹಾಗೂ ಉತ್ಖನನಗಳಿಂದ ಭಾರತದಲ್ಲಿಯೇ ಅತಿ ಹೆಚ್ಚು ಸಂಖ್ಯೆಯ ವಸತಿ ನೆಲೆ ಹಾಗೂ ಸಮಾಧಿ ನಿವೇಶನಗಳು ದೊರಕಿ ಬೃಹತ್ ಶಿಲಾಯುಗದ ಸಮಾಧಿಗಳ ಕರ್ತೃಗಳು, ಆ ಸಂಸ್ಕೃತಿಯ ಉಗಮ, ಪ್ರಸರಣ, ಅವರ ದೈನಂದಿನ ಜನಜೀವನ ಅವರ ಜನಾಂಗೀಯ ಬೇದಗಳು, ಅವರ ಧಾರ್ಮಿಕ

ಹಾಗೂ ಪಾರಾಲೌಕಿಕ ಪರಿಕಲ್ಪನೆಗಳು ಮುಂತಾದ ಅನೇಕ ಆಯಾಮಗಳನ್ನು ಕುರಿತಂತೆ ಅಪಾರ ಮಾಹಿತಿ ಬೆಳಕಿಗೆ ಬಂದಿದೆ. ಈ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುವ ಪ್ರಾರಂಭ ಹಂತದ ಪ್ರಯತ್ನಗಳಲ್ಲಿ ಮೆಡಾಸ್ ಟೇಲರ್ (೧೮೬೩), ಕೋಲ್ (೧೮೬೮) ಮತ್ತು ಫರ್ಗೂಸನ್ (೧೮೭೨) ಬ್ರೀಕ್ಸ (೧೮೭೩), ರವರುಗಳ ಅಧ್ಯಯನ ಅತ್ಯಂತ ಮಹತ್ವದವು. ಅದರಂತೆಯೇ ಪ್ರಾದೇಶಿಕ ಮಟ್ಟದಲ್ಲಿ ಈ ಸಂಸ್ಕೃತಿಯನ್ನು ವಿವರಿಸುವ ಪ್ರಯತ್ನಗಳಲ್ಲಿ ನ್ಯೂ ಬೋಲ್ಡ್ (೧೮೫೨) ಬೋಸ್ವೆಲ್(೧೮೭೨), ಮೆಕೆಂಜಿ, ಜೆ.ಎಸ್.ಎಪ್(೧೮೭೩), ಬರ್ಜಸ್ (೧೮೭೪), ಔಗಾರ್ (೧೮೭೬), ಕಾಲ್ಡ್‌ವೆಲ್ (೧೮೭೭) ಬ್ರಾನ್‌ಫಿಲ್ (೧೮೮೧) ಮೊದಲಾದವರ ಕೊಡುಗೆ ಗಣನೀಯ. ಮುಂದಿನ ಹಂತದಲ್ಲಿ ರಾಬರ್ಟ್ ಸಿವೆಲ್(೧೮೮೨), ಬ್ರೂಸ್‌ಫೂಟ್ (೧೯೧೬) ರವರು ಆಯಾ ಕಾಲದವರೆಗೆ ಸಂಶೋಧಿತವಾಗಿದ್ದ ನೆಲೆಗಳ ವಿವರ, ಪೂರ್ಣ ಯಾದಿಗಳು ಮತ್ತು ಅವುಗಳನ್ನಾಧರಿಸಿದ ವಿಶೇಷ ಅಧ್ಯಯನಗಳನ್ನು ಪ್ರಕಟಿಸಿದ್ದಾರೆ. ಈ ಶತಮಾನದ ಉತ್ತರಾರ್ಧದಲ್ಲಿ ಅತಿ ಮುಖ್ಯ ಮತ್ತು ಸಂಶೋಧನಾ ಮಹತ್ವದ ಸಂಗ್ರಹವನ್ನು ರಾಮಚಂದ್ರನ್ ಕೆ.ಎಸ್. (೧೯೭೧) ರವರು ಮಾಡಿಕೊಟ್ಟಿದ್ದಾರೆ.

ಈ ಶತಮಾನದ ಆರಂಭದಲ್ಲಿ ಅಲೆಕ್ಸಾಂಡರ್ ರಿ(೧೯೦೩-೦೪) ನಡೆಸಿದ ಉತ್ಖನನಗಳಲ್ಲಿ ದಕ್ಷಿಣ ಭಾರತದ ಬೃಹತ್ ಶಿಲಾಯುಗದ ಅಧ್ಯಯನದಲ್ಲಿ ಪ್ರಮುಖ ಮೈಲಿಗಲ್ಲುಗಳು. ಮೊದಲಿಗೆ ತಮಿಳುನಾಡಿನ ಆದಿಚನ್ನಲೂರ್ (೧೯೦೩-೪) ಮತ್ತು ಚಂಗಲ್ಪೇಟ್ ಜಿಲ್ಲೆಯ ಪೆರುಂಬಿಯಾರ್ (೧೯೦೭-೦೮)ನ ಕಲ್ಗೋರಿಗಳಲ್ಲಿ ಉತ್ಖನನ ನಡೆಸಿ ಅನಂತರ ೧೯೧೫ ರಲ್ಲಿ ಈ ಎರಡೂ ಉತ್ಖನನಗಳಲ್ಲಿ ದೊರೆತ ಎಲ್ಲಾ ಪ್ರಾಚ್ಯವಸ್ತುಗಳ ವಿವರವಾದ ಯಾದಿಯನ್ನು ಪ್ರಕಟಿಸಿದರು (೧೯೧೫). ಅದರಂತೆಯೇ ಲಾಂಗ್‌ಹರ್ಸ್ಟ (೧೯೧೨-೧೫), ಹಂಟ್ (೧೯೧೬-೨೪), ಕೃಷ್ಣ.ಎಂ.ಎಚ್. (೧೯೩೧ ಮತ್ತು ೪೩) ಯಜ್‌ದಾನಿ (೧೯೪೧), ಅಯ್ಯಪ್ಪನ್ (೧೯೪೧) ಅವರ ವಿದ್ವತ್ ಪೂರ್ಣ ಸಂಶೋಧನಾಕೃತಿಗಳು ದಕ್ಷಿಣ ಭಾರತದ ಅನೇಕ ಸ್ಥಳಗಳಲ್ಲಿ ನಡೆದ ಉತ್ಖನನಗಳ ಬಗೆಗೆ ವಿಸ್ತಾರವಾದ ಅಧ್ಯಯನ ಪೂರ್ಣ ಮಾಹಿತಿಯನ್ನು ಒದಗಿಸಿದವು.

ಸ್ವಾತಂತ್ರ್ಯೋತ್ತರ ಕಾಲದಲ್ಲಿ ವಿಶೇಷವಾಗಿ ವೀಲರ್ ಕೈಗೊಂಡ ಬ್ರಹ್ಮಗಿರಿ ಉತ್ಖನನ (೧೯೪೮; ೧೮೦-೩೧೦) ದಿಂದ ಆರಂಭವಾಗಿ ದಕ್ಷಿಣ ಭಾರತದ ಬೃಹತ್ ಶಿಲಾ ಸಂಸ್ಕೃತಿಯ ವೈಜ್ಞಾನಿಕ ಅಧ್ಯಯನ ಬಿರುಸಿನಿಂದ ಸಾಗಿದ್ದು ಬ್ರಹ್ಮಗಿರಿ ಉತ್ಖನನದಿಂದ ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕಗತಿಗೆ ನಿರ್ದಿಷ್ಟ ಕಾಲಮಾನದ ಚಾಕಟ್ಟು ದೊರೆತು ಅನೇಕ ಉತ್ತಮ ಉತ್ಖನನಗಳು ನಡೆದವು. ಥಾಪರ್ (೧೯೫೨;೩-೮) ಕೈಗೊಂಡ ಪೊರ್ಕಾಳಂ ಉತ್ಖನನ ಒಂದು

ಉತ್ತಮ ಉದಾಹರಣೆ. ಜೊತೆಗೆ ಆ ಕಾಲಕ್ಕಾಗಲೇ ವಿಫುಲವಾಗಿ ದೊರೆಯುತ್ತಿದ್ದ ಕಲ್ಗೋರಿಗಳ ಬಗೆಗಿನ ಮಾಹಿತಿಯನ್ನು ಕ್ರೋಢಿಕರಿಸಿ ವಿವಿಧ ಮಾದರಿಗಳ ಹೆಸರಿಸುವಿಕೆ, ವರ್ಗೀಕರಣ, ವಿಧಾನ ಮುಂತಾದವುಗಳ ಬಗೆಗೆ ಶಿಸ್ತಿನ ಪ್ರಯತ್ನಗಳಾದವು. ಈ ದಿಕ್ಕಿನಲ್ಲಿ ಕೃಷ್ಣಸ್ವಾಮಿ (೧೯೪೯) ಯವರ ಪ್ರಯತ್ನ ಮುಖ್ಯವಾದುದು. ಈ ಹೊಸ ವಿಧಾನಗಳನ್ನನುಸರಿಸಿ ಅನೇಕ ಅಧ್ಯಯನಗಳಾದವು. ದೇಶಿಕನ್ (೧೮೫೭ ರಿಂದ ೬೩), ರಾಮನ್ (೧೯೫೭ ರಿಂದ ೧೯೬೯), ಗುರುರಾಜರಾವ್ (೧೯೫೭-೬೦), ನರಸಿಂಹಯ್ಯ (೧೯೮೦) ಇವರುಗಳು ತಮಿಳುನಾಡಿನಲ್ಲೂ, ಸುಬ್ಬಾರಾವ್ (೧೯೫೦), ಸುಬ್ರಹ್ಮಣ್ಯಂ (೧೯೫೬)ಸರ್ಕಾರ್ (೧೯೬೬), ಸಂಪತ್ (೧೯೮೦) ಪುಲ್ಲರೆಡ್ಡಿ (೧೯೮೬) ಇವರುಗಳು ಆಂಧ್ರ ಪ್ರದೇಶದಲ್ಲೂ, ಜಾನ್ (೧೯೭೪ ರಿಂದ ೧೯೮೫) ರವರು ಕೇರಳದಲ್ಲೂ, ನಾಗರಾಜರಾವ್ (೧೯೬೪), ಸುಂದರ (೧೯೭೫) ಮೊದಲಾದವರು ಕರ್ನಾಟಕದಲ್ಲೂ ಮಾಡಿದ ಅಧ್ಯಯನಗಳು ಗಮನಾರ್ಹವಾದವು. ಈ ಅಧ್ಯಯನಗಳಲ್ಲಿ ಆದುವರೆಗೆ ಲಭ್ಯವಿದ್ದ ಕಲ್ಗೋರಿ ಮಾದರಿಗಳ ವರ್ಗೀಕರಣ, ವಿಶ್ಲೇಷಣೆ, ಪ್ರಾದೇಶಿಕ ಬದಲಾವಣೆಗಳು ಇದರಿಂದ ಉಂಟಾಗಿರಬಹುದಾದ ಹೊಸ ಮಾದರಿಗಳು ಅವುಗಳ ಉಗಮ, ವಿಕಾಸ, ಕರ್ತೃಗಳು ಮುಂತಾದ ಹಲವಾರು ವಿಷಯಗಳ ಬಗೆಗೆ ಚರ್ಚಿಸಲಾಗಿದೆ. ಕೃಷ್ಣಸ್ವಾಮಿಯವರು ಈ ಹಿಂದೆ ಮಾಡಿದ್ದ ವರ್ಗೀಕರಣವನ್ನು ಸುಂದರ (೧೯೭೫) ಅವರು ಪರಿಷ್ಕರಿಸಿ ಹೊಸ ಮಾದರಿಗಳನ್ನು ಸೇರಿಸಿರುವರು. ಈ ಹೊಸ ವರ್ಗೀಕರಣ ಪದ್ಧತಿಯ ಪ್ರಕಾರ ಬೃಹತ್ ಶಿಲಾಯುಗದ ಕಲ್ಗೋರಿ ಮಾದರಿಗಳನ್ನು ಮೂರು ಮುಖ್ಯ ಗುಂಪುಗಳಾಗಿ ವಿಂಗಡಿಸಬಹುದು. (೧) ಕೋಣೆಗೋರಿಗಳು(chamber tombs) (೨) ಕೋಣೆಗಳಿಲ್ಲದ ದಫನಗಳು(un-chamber tombs) ಮತ್ತು(೩) ಬೃಹತ್ ಸಾಲುಗಲ್ಲುಗಳು(dolmen)..

ಇವುಗಳಲ್ಲಿ ಮೊದಲೆರಡು ಮಾದರಿಗಳು ಸಮಾಧಿ ಪ್ರಕ್ರೀಯೆಗೆ ನೇರವಾಗಿ ಸಂಬಂಧ ಪಟ್ಟಿವೆ, ಮೂರನೆಯದು ಬೃಹತ್ ಶಿಲೆಗಳಿಂದಾಗಿದ್ದರೂ ಅವುಗಳ ಉದ್ದೇಶ್ಯ ಮತ್ತು ಉಪಯುಕ್ತತೆ ತಿಳಿದಿಲ್ಲ.

ಭಾರತದ ಉಳಿದ ಪ್ರದೇಶಗಳಿಗೆ ಹೋಲಿಸಿದರೆ ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ನಿವೇಶನ ಮತ್ತು ಕಲ್ಗೋರಿಗಳು ಸಂಖ್ಯೆಯಲ್ಲಿ ಹೆಚ್ಚು ವಿಫುಲವಾಗಿರುವುದಲ್ಲದೆ ವಿನ್ಯಾಸ, ಪ್ರಸರಣ, ಕಾಲಮಾನ ಮತ್ತು ದಫನ ಸಾಮಗ್ರಿಗಳಲ್ಲೂ ವೈವಿಧ್ಯಮಯವಾಗಿದ್ದು ಸಂಕೀರ್ಣ ಸ್ವರೂಪದ್ದಾಗಿದೆ. ಸ್ಥಳ ಪರಿಶೋಧನೆಯಿಂದ ಮಾತ್ರವೇ ಈ ಸಂಕೀರ್ಣ ಮಾದರಿಗಳ ಪೂರ್ಣ ಪರಿಚಯ ಸಾಧ್ಯವಾಗದು. ಆದುದರಿಂದ ಅನೇಕ ಕಲ್ಗೋರಿಗಳ ಹಾಗೂ ವಸತಿ ನಿವೇಶನಗಳ ಉತ್ಖನನ ನಡೆದಿದೆ. ಅಮೃತಮಂಗಳಂ(ಬ್ಯಾನರ್ಜಿ:೧೯೫೪-೫೫) ಕನ್ನತ್ತೂರ್(ಕೃಷ್ಣಸ್ವಾಮಿ ಮತ್ತು ಶರಣ್:೧೯೫೫-೫೬), ಮಸ್ಕಿ(ಥಾಪರ್:೧೯೫೭:೪-೧೪೨) ಜಡಗೇನಹಳ್ಳಿ(ಶೇಷಾದ್ರಿ:೧೯೬೦) ಯಲ್ಲೇಶ್ವರಂ

(ವಹೀದ್‌ಖಾನ್:೧೯೬೩), ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫), ತೇರದಾಳ ಮತ್ತು ಹಳಿಂಗಳಿ (ಸುಂದರ:೧೯೭೫) ಕೊಪ್ಪ (ನರಸಿಂಹಮೂರ್ತಿ:೧೯[illegible]), ಮಾಚಟ್ ಮತ್ತು ಘಜಯನೂರ್ (ಮೆಹತಾ ಮತ್ತು ಜಾರ್ಜ್:೧೯೭೮) ಜೌರೊವಿಲ್ಲೆ (ಇಂ.ಆ.ರಿ:೧೯೮೪-೮೫;೭೭) ತಿರುವೊಕ್ಕರೈ (ಇಂ.ಆ.ರಿ:೧೯೮೪-೮೫;೭೭) ತಡಕನ-ಹಳ್ಳಿ (ನಾಗರಾಜರಾವ್:೧೯೮೫) ಕೊಮಾರನಹಳ್ಳಿ (ನಾಗರಾಜರಾವ್:೧೯೯೦;೩೧೧-೩೨೦) ಹೆಗ್ಗಡೆಹಳ್ಳಿ (ದೇವರಾಜು:೧೯೯೬) ಮೊದಲಾದವು. ಉತ್ಖನನ ನಡೆದಿರುವ ಕಲ್ಗೋರಿ ನೆಲೆಗಳು. ಆದರಂತೆಯೇ ಚಂದ್ರವಳ್ಳಿ (ಕೃಷ್ಣ.ಎಂ.ಎಚ್:೧೯೩೧), ಪಿಕ್ಲಿಹಾಳ್ (ಅಲ್ಚಿನ್:೧೯೬೦), ಉರೆಯೂರ್ (ಇಂ.ಆ.ರಿ:೧೯೬೪-೬೫;೨೫-೨೬), ಪಯಂಪಳ್ಳಿ (ಇಂ.ಆ.ರಿ:೧೯೬೪-೬೫;೧೪೦-೧೪೧), ತೆಕ್ಕಲಕೋಟೆ (ನಾಗಾರಾಜರಾವ್:೧೯೬೫), ಕೆಲದಪಲ್ಲಿ (ಸರ್ಕಾರ್:೧೯೬೬), ಸಂಗನಕಲ್ಲು (ಅನ್ಸಾರಿ ಮತ್ತು ನಾಗರಾಜರಾವ್:೧೯೬೯), ಪೆರೂರ್ (ಸೌಂದರರಾಜನ್:೧೯೭೦), ಹಳ್ಳೂರು(ನಾಗರಾಜರಾವ್:೧೯೭೧), ಕೊಡೆಕಲ್(ಪದ್ದಯ್ಯ:೧೯೭೩), ತಿ.ನರಸೀಪುರ (ಶೇಷಾದ್ರಿ:೧೯೭೪), ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜರಾವ್:೧೯೭೪), ಟಿ.ಕಲ್ಪಟ್ಟಿ (ಇಂ.ಆ.ರಿ:೧೯೭೬-೧೯೭೭-೭೮;೪೬-೪೭), ಅಪ್ಪುಕಲ್ಲು (ರಾಮನ್:೧೯೭೭), ಮಲ್ಲಿಪಾಡಿ (ಇಂ.ಆ.ರಿ:೧೯೭೭-೭೮;೫೦), ಪೆದ್ದಮರೂರ್ (ಇಂ.ಆ.ರಿ:೧೯೭೭-೭೮; ೩೧೨-೧೩), ರಾಮಾಪುರಂ (ಇಂ.ಆ.ರಿ:೧೯೮೨-೮೩;೩-೬), ಭದ್ರಾಚಲಂ (ಇಂ.ಆ.ರಿ:೧೯೮೩-೮೪;೯), ಬನಹಳ್ಳಿ (ಇಂ.ಆ.ರಿ:೧೯೮೩-೮೪,೪೨,೪೬,೧೯೮೫-೮೬;೪೩-೪೪ ೧೯೮೬-೮೭ ;೪೨-೪೫) ಮೊದಲಾದವು. ಬೃಹತ್ ಶಿಲಾಯುಗ ಸಂಸ್ಕೃತಿಗೆ ಸಂಬಂಧಪಟ್ಟ ವಿಶಿಷ್ಟ ಹೊಳಪಿರುವ ಕಪ್ಪು-ಕೆಂಪು ಮೃತ್-ಪಾತ್ರೆ ಮತ್ತು ಅದರ ಜೊತೆಗೆ ಸಾಧಾರಣವಾಗಿ ದೊರಕುವ ಇತರ ಪ್ರಾಚ್ಯ ವಸ್ತುಗಳು ಲಭ್ಯವಾಗಿರುವ ವಸತಿ ನಿವೇಶನಗಳು.

ಈ ಮೊದಲೆ ಹೇಳಿರುವಂತೆ ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿ ಅತ್ಯಂತ ಸಂಕೀರ್ಣ ಸ್ವರೂ-ಪದ್ದು. ಇದುವರೆಗೆ ನಡೆದಿರುವ ಸ್ಥಳ ಪರಿಶೋಧನೆ ಮತ್ತು ಉತ್ಖನನಗಳಿಂದ ಈ ಸಂಕೀರ್ಣ ಸ್ವರೂಪದ ಸಂಸ್ಕೃತಿಯ ಬಗೆಗೆ ಇರುವ ಅನೇಕ ಸಮಸ್ಯೆಗಳಿಗೆ ಸಮಾಧಾನಕರವಾದ ಉತ್ತರಗಳು ದೊರಕದಿದ್ದರೂ ಇನ್ನೂ ಕೆಲವಕ್ಕೆ ಎಲ್ಲ ವಿದ್ವಾಂಸರಿಗೂ ಸಮ್ಮತವಾಗುವ ಉತ್ತರಗಳು ದೊರಕಿಲ್ಲ. ಹಾಗಿದ್ದರೂ ಈ ಮಾಹಿತಿಯಿಂದ ಕೆಲವು ಅಂಶಗಳನ್ನು ಖಚಿತವಾಗಿ ಹೇಳಬಹು-ದು. (೧) ದಕ್ಷಿಣ ಭಾರತದ ಪ್ರದೇಶದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯು ಸಾಂಸ್ಕೃತಿಕ ಅನುಪೂರ್ವಿಯ ದೃಷ್ಟಿಯಿಂದ ನವ ಶಿಲಾಯುಗ ಅಥವಾ ತಾಮ್ರ ಶಿಲಾಯುಗದ ಅನಂತರ ಬಂದದ್ದು (೨) ಭಾರತದಲ್ಲಿ ಈ ಸಂಸ್ಕೃತಿಯ ಕಾಲದಲ್ಲಿಯೇ ಮಾನವನು ಕಬ್ಬಿಣದ ತಂತ್ರಜ್ಞಾನವನ್ನು ರೂಪಿಸಿಕೊಂಡದ್ದು. (೩) ಸ್ಥಳೀಯ ಭೂ ವೈಜ್ಞಾನಿಕ ಹಾಗೂ ಸ್ವಾಭಾವಿಕ ಪರಿಸರಕ್ಕೆ

ಹೊಂದಿಕೊಂಡಂತೆ ಅಲ್ಪ ಸ್ವಲ್ಪ ಬದಲಾವಣೆಗಳಿಂದ ಕೂಡಿರುವ ಬೃಹತ್ ಶಿಲಾಯುಗ ದಕ್ಷಿಣ ಭಾರತದಲ್ಲಿಯೇ ಉಗಮಿ-ಸಿತು. (೪) ಪ್ರಾದೇಶಿಕ ಅವಶ್ಯಕತೆಗೆ ಅನುಗುಣವಾಗಿ ಹೊಸ ಹೊಸ ಮಾದರಿಯ ಕಲ್ಗೋರಿಗಳನ್ನು ನಿರ್ಮಿಸುತ್ತ ಈ ಸಂಸ್ಕೃತಿಯು ಇತಿಹಾಸ ಆರಂಭ ಕಾಲದವರೆಗೂ ಅಂದರೆ ಸು.ಕ್ರಿ.ಶ.೨-೩ ನೇ ಶತಮಾನದವರೆಗೂ ಪ್ರಚಲಿತವಾಗಿತ್ತು. (೫) ಸಂಗಂಯುಗೋತ್ತರ ಕಾಲದ ಸಾಹಿತ್ಯಿಕ ಕೃತಿಗಳು ಈ ಸಂಸ್ಕೃತಿಯ ಧಾರ್ಮಿಕ ಹಾಗೂ ನಿರ್ಮಾಣ ಪದ್ಧತಿಗಳ ಬಗೆಗೆ ದೊರಕುವ ಮೊದಲ ಉಲ್ಲೇಖಗಳಾಗಿವೆ. (ಶ್ರೀನಿವಾಸನ್ ಕೆ.ಆರ್. ೧೯೬೦) (೬). ಭಾರತದ ಉಳಿದೆಡೆಯಲ್ಲಿಯಂತೆ ದಕ್ಷಿಣ ಭಾರತದಲ್ಲಿಯೂ ಈ ಸಂಸ್ಕೃತಿಯ ಧಾರ್ಮಿಕ ಹಾಗೂ ಸಮಾಧಿ ಪರಿಕಲ್ಪನೆಗಳು ಕೆಲವಾದರೂ ಬುಡಕಟ್ಟು ಜನಾಂ-ಗಗಳಲ್ಲಿ ಇದುವರೆಗೂ ಪ್ರಚಲಿತವಿದ್ದು ಈ ಸಂಸ್ಕೃತಿಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಬುಡಕಟ್ಟು ಜನಾಂಗಗಳ ಅಧ್ಯಯನ ಹೆಚ್ಚು ಸಹಕಾರಿಯಾಗಿದೆ.

ಕಾಲಾನುಕ್ರಮದ ದೃಷ್ಟಿಯಿಂದ ದಕ್ಷಿಣ ಭಾರತದ ಕಬ್ಬಿಣಯುಗದ ಬೃಹತ್ ಶಿಲಾಯುಗ ಸಂಸ್ಕೃತಿಯು ಕ್ರಿ.ಪೂ. ೧೧೦೦ ರಿಂದಕ್ರಿ.ಪೂ.೧೫೦ ರವರೆಗಿನ ಕಾಲಾವಧಿಯಲ್ಲಿ ಪ್ರವರ್ಧಮಾನವಾಗಿತ್ತೆಂದು ತಿಳಿಯುತ್ತದೆ. (ಆಗರವಾಲ್.ಡಿ.ಪಿ:೧೯೮೨)

ಇದುವರೆಗೆ ಲಭ್ಯ ಮಾಹಿತಿಯ ಪರಿಶೀಲನೆಯಿಂದ ಕಲ್ಗೋರಿ ಮಾದರಿಗಳ ವರ್ಗೀಕರಣ, ಭೌಗೋಳಿಕ ಹಾಗೂ ಕಾಲಮಾನದ ದೃಷ್ಟಿಯಿಂದ ಈ ಸಂಸ್ಕೃತಿಯ ಉಗಮ, ವಿಕಾಸ ಮತ್ತು ಪ್ರಸರಣ, ಆ ಜನಾಂಗದ ಆರ್ಥಿಕ, ಸಾಂಸ್ಕೃತಿಕ, ಸಾಮಾಜಿಕ ಕಟ್ಟಳೆಗಳು, ಆಹಾರ ಪದ್ಧತಿ, ಆಭರಣಗಳು, ವಸತಿ, ವಿಶಿಷ್ಟ ಮೃತ್ ಪಾತ್ರೆಗಳ ವೈವಿಧ್ಯ, ಲೋಹ ತಂತ್ರಜ್ಞಾನ ಮುಂತಾದ ಅನೇಕ ವಿಷಯಗಳು ಸ್ಪಷ್ಟವಾಗಿವೆ. ಸ್ವಲ್ಪ ಮಟ್ಟಿಗೆ ಈ ಸಂಸ್ಕೃತಿಯ ಕರ್ತೃಗಳ ಜನಾಂಗೀಯ ಪ್ರಭೇಧಗಳನ್ನು ಗುರುತಿಸುವ ಪ್ರಯತ್ನಗಳೂ ಆಗಿವೆ. ಸಾಧಾರಣವಾಗಿ ಕಲ್ಗೋರಿಗಳಲ್ಲಿ ದೊರಕಿದ ಅಸ್ಥಿ ಅವಶೇಷಗಳು ಶಾಸ್ತ್ರೀಯ ಅಧ್ಯಯನದಿಂದ ಈ ಸಂಸ್ಕೃತಿಯ ಜನರು ಪ್ರೋಟೋ ಆಸ್ಟ್ರಲಾಯಿಡ್ ಮೆಡಿಟರೇನಿಯನ್ ಅಥವ ದ್ರವಿ-ಡಾಯಿಡ್ ಮತ್ತು ಸ್ಕೈತೋ ಇರಾನಿಯನ್ ಜನಾಸಗಿಯ ಲಕ್ಷಣಗಳನ್ನು ಹೊಂದಿರುವ ಸಮ್ಮಿಶ್ರ ಜನಾಂಗವೆಂದು ಅಭಿಪ್ರಾ-ಯಪಡಲಾಗಿದೆ. ಇತ್ತೀಚೆಗೆ ಕಲ್ಗೋರಿಗಳಲ್ಲಿ ದೊರಕಿರುವ ಅಸ್ತಿಗಳು ಮತ್ತು ತಲೆಬುರುಡೆಗಳ ಕಪಾಲಶಾಸ್ತ್ರೀಯ ಸೂಚ್ಯಂಕ ಮತ್ತು ಸಂಖ್ಯಾಶಾಸ್ತ್ರೀಯ ವಿಶ್ಲೇಷಣೆ (Morphometic and statistical analysis) ಯನ್ನು ಆಧರಿಸಿ ಕೆನಡಿ ಮತ್ತು ಲೆವನ್ಸ್ಕಿಯವರು " ಭಾರತದ ಕಬ್ಬಿಣಯುಗ ಜನ ಸಮುದಾಯಗಳು ಏಕರೂಪದ ಜನಾಂಗೀಯ ಲಕ್ಷಣಗಳನ್ನು ಪ್ರತಿನಿಧಿಸದೆ ಬಹುರೂಪೀಯ ಜನಾಂಗೀಯ ಲಕ್ಷಣಗಳನ್ನುಳ್ಳ ಸಮುದಾಯವನ್ನು ನಿರ್ದೇಶಿಸುತ್ತವೆ" ಎಂದು

ಅಭಿಪ್ರಾಯ ಪಟ್ಟಿರುವರು.

ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿಯೂ ಕಲ್ಗೋರಿಗಳು ಮತ್ತು ವಸತಿ ನೆಲೆಗಳು ಕಂಡು ಬಂದಿವೆ. ಅದೇ ರೀತಿ ವಸತಿ ನೆಲೆಗಳಾದ ಮಸ್ಕಿ (ಥಾಪರ್:೧೯೫೭), ಹಳ್ಳೂರು (ನಾಗಾರಾಜರಾವ್:೧೯೭೧) ಮತ್ತು ತಿ.ನರಸೀಪುರ (ಶೇಷಾದ್ರಿ:೧೯೭೪)ಗಳಲ್ಲಿ ನಡೆದಿರುವ ಉತ್ಖನನದಿಂದ ಈ ಪ್ರದೇಶದಲ್ಲಿ ಈ ಸಂಸ್ಕೃತಿಯ ಕಾಲಮಾನವನ್ನು ತಿಳಿಯಲು ಸಾಧ್ಯವಾಗಿದೆ.

ದಕ್ಷಿಣ ಕರ್ನಾಟಕದ ನೆಲೆಗಳಿಗೆ ಹೋಲಿಸಿದರೆ ಉತ್ತರ ಕರ್ನಾಟಕದ ನೆಲೆಗಳು ಹೆಚ್ಚು ಆಶಾದಾಯಕವಾಗಿವೆ. ಗುಲ್ಬರ್ಗ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆ ಮೆಡಾಸ್ ಟೈಲರ್ (೧೮೫೩) ರವರ ನಂತರ ಬಹಳಷ್ಟು ಶೋಧನೆಗಳಾಗಿದ್ದು ಸುಂದರ ಅವರ ಶೋಧನೆಗಳ (೧೯೭೫) ಉಲ್ಲೇಖನೀಯ ಉತ್ತರ ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ಸ್ಥಳ ಪರಿಶೋಧನೆ ನಡೆಸಿ ಕೆಲವು ಉತ್ಖನನಗಳನ್ನು ಕೈಗೊಂಡು ಹಲವಾರು ಹೊಸ ನೆಲೆಗಳನ್ನು ವರದಿ ಮಾಡುವುದರ ಜೊತೆಗೆ ಇಡೀ ಭಾರತದಲ್ಲಿಯೇ ವೈಶಿಷ್ಟ್ಯ ಪೂರ್ಣವೆನಿಸಿರುವ ಅಪೂರ್ವ ಶಿಲುಬೆಯಾಕಾರದ ಕಲ್ಗೋರಿಗಳನ್ನು ಅವರು ಬೆಳಕಿಗೆ ತಂದಿರುತ್ತಾರೆ. ಬೃಹತ್ ಶಿಲಾಯುಗ ಸಂಸ್ಕೃತಿಯನ್ನು ಅದರಲ್ಲಿಯೂ ಮುಖ್ಯವಾಗಿ ಕಲ್ಗೋರಿಗಳ ವಿನ್ಯಾಸವನ್ನು ಗುರುತಿಸುವಲ್ಲಿ ಪ್ರಾದೇಶಿಕ ಬೌಗೋಳಿಕ ಸನ್ನಿವೇಶ ಅಲ್ಲಿ ದೊರೆಯುವ ಶಿಲಾ ಮಾದರಿಗಳು ಹಾಗೂ ಲೋಹದ ನಿಕ್ಷೇಪಗಳು ಹೇಗೆ ಪ್ರಮುಖ ಪಾತ್ರ ವಹಿಸುತ್ತವೆಂಬುದನ್ನು ನಿರೂಪಿಸಿದ್ದಾರೆ.

ಕೋಣೆ ಕಲ್ಗೋರಿ ಗುಂಪಿನ ಕೊಣ್ಣೂರು, ಕಾಲಾದಗಿ ಮತ್ತು ತೇರದಾಳ ರೀತಿಯ ಹಾದಿಕೋಣೆ(passage chamber), ರಾಜನಕೊಲೂರು, ಹಿರೇಬೆನಕಲ್ ರೀತಿಯ ಕಂಡಿಕೋಣೆ(port-hole chamber), ಆಯತಾಕಾರದ ಅಂತರ್ಗತ ಶವಪೆಟ್ಟಿಗೆ(oblong pit circle with cist), ಕೋಣೆಯಾಕೃತಿಯಲ್ಲಿಲ್ಲದ ಕಲ್ಗೋರಿ ಗುಂಪಿನ ಕುಣಿ ದಫನಗಳು, ಶಿಲಾವೃತ್ತ, ಶವಕುಳಿ, ದಫನದಿನ್ನೆ(barrows) ಮತ್ತು ಸಮಾಧಿ ಪ್ರಕ್ರಿಯೆಗೆ ಸಂಬಂಧ ಪಡದ ನಿಲಸುಗಲ್ಲು ಮುಂತಾದವು (ಸುಂದರ:೧೯೭೫). ಉತ್ತರ ಕರ್ನಾಟಕದಲ್ಲಿ ಇದುವರೆಗೆ ಬೆಳಕಿಗೆ ಬಂದಿರುವ ಕಲ್ಗೋರಿ ಮಾದರಿಗಳು. ತಮ್ಮ ಸ್ಥಳ ಪರಿಶೋಧನೆ, ಆಯ್ದ ನೆಲೆಗಳ ಉತ್ಖನನಗಳಲ್ಲಿ ದೊರೆತಿರುವ ಮಾಹಿತಿಗಳನ್ನಾಧರಿಸಿ ಸುಂದರ ಅವರು ಉತ್ತರ ಕರ್ನಾಟಕದ ಬೃಹತ್ ಶಿಲಾಯುಗ ಸಂಸ್ಕೃತಿಯು ಕ್ರಿ.ಪೂ.೧೨೦೦-೧೧೦೦ ರ ಸುಮಾರಿಗೆ ಆರಂಭವಾಗಿ ಕ್ರಿ.ಪೂ.೩-೨ ನೇ ಶತಮಾನದವರೆಗೆ ಪ್ರವರ್ಧಮಾನದಲ್ಲಿತ್ತೆಂದು, ಕೆಲವು ಪ್ರದೇಶಗಳಲ್ಲಿ ಕ್ರಿ.ಪೂ.೧ ನೇ ಶತಮಾನದವರೆಗೂ ಉಳಿದಿತ್ತೆಂದು

ಅಭಿಪ್ರಾಯ ಪಟ್ಟಿದ್ದಾರೆ.

ಉತ್ತರ ಕರ್ನಾಟಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಬಗೆಗೆ ಶಾಸ್ತ್ರೀಯವಾಗಿ ಆಗಿರುವ ಅಧ್ಯಯನ-ಗಳಷ್ಟು ದಕ್ಷಿಣ ಕರ್ನಾಟಕದಲ್ಲಿ ಆಗಿಲ್ಲವೆಂದೇ ಹೇಳಬೇಕು. ಸಂಶೋಧಕರ ವೈಯಕ್ತಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳ ಪರಿಶ್ರಮದ ಫಲವಾಗಿ ಕೊಡಗು, ಕೋಲಾರ, ಬೆಂಗಳೂರು, ಮೈಸೂರು ಜಿಲ್ಲೆಗಳಲ್ಲಿ ಸಾಕಷ್ಟು ಸ್ಥಳ ಪರಿಶೋಧನೆ ನಡೆದಿದೆ. ಇಲ್ಲಿ ಅಧ್ಯ-ಯನಕ್ಕೊಳಪಡಿಸಲಾದ ಪ್ರದೇಶದ ಸುತ್ತಣ ಜಿಲ್ಲೆಗಳಲ್ಲಿ ಮತ್ತು ಸರ್ವ ಸಾಧಾರಣವಾಗಿ ಇಡೀ ದಕ್ಷಿಣ ಕರ್ನಾಟಕದಲ್ಲಿ ಕಂಡು ಬರುವ ಕಲ್ಗೋರಿ ಮಾದರಿಗಳ ವಿವರಣೆ ಹಿನ್ನೆಲೆಯಾಗಿ ಉಪಯುಕ್ತವಾಗುತ್ತದೆ.

ಸುಂದರ ಅವರು ಉತ್ತರ ಕರ್ನಾಟಕದಲ್ಲಿ ಸ್ಥೂಲವಾಗಿ ವರ್ಗೀಕರಿಸಿರುವಂತೆ ದಕ್ಷಿಣ ಕರ್ನಾಟಕದಲ್ಲಿಯೂ ಕಲ್ಗೋರಿ ಮಾದರಿಯ ಮೂರು ಗುಂಪುಗಳು ಅಂದರೆ, (೧). ಕೋಣೆ ಗೋರಿಗಳು (೨). ಕೋಣೆಗಳಿಲ್ಲದ ದಫನಗಳು ಮತ್ತು (೩). ಬೃಹತ್ ಸಾಲುಗಲ್ಲುಗಳು. ಪ್ರಾದೇಶಿಕ ವ್ಯತ್ಯಾಸಗಳಿಂದ ಕೂಡಿದ ಉಪಗುಂಪುಗಳೂ ಕಂಡು ಬರುತ್ತವೆ.

೧. ಕೋಣೆ ಗೋರಿಗಳು. ಇದರ ಉಪ ಮಾದರಿಗಳು ಕೆಳಗಿನಂತಿವೆ

೧ಅ. ಕಂಡಿ ಇರುವ ಕಲ್ಮನೆ. ಈ ಗುಂಪಿನ ಕೆಲವು ಗೋರಿಗಳು ಆಂಧ್ರ ಪ್ರದೇಶದ ಅನಂತಪುರ ಹಾಗೂ ಕೋಲಾರ, ಬೆಂಗಳೂರು ಜಿಲ್ಲೆಯಲ್ಲಿ ಕಂಡು ಬಂದಿವೆ. ಇದನ್ನು ರಾಜನ ಕೊಲೂರು ಮತ್ತು ಹಿರೇ ಬೆನಕಲ್ ಮಾದರಿಗಳೊಂದಿಗೆ ಹೋಲಿಸಲಾಗಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಮಾದರಿಯ ಕಲ್ಗೋರಿ ದೊರಕಿಲ್ಲ.

೧ಆ. ಹಾದಿ ಇರುವ ಅಂತರ್ ವಿಭಜಿತ ಶವಕುಳಿ. ಇದುವರೆಗೆ ಈ ಗುಂಪಿನ ಕಲ್ಗೋರಿಗಳು ಕರ್ನಾಟಕ - ತಮಿಳುನಾಡು ಹಾಗೂ ಕರ್ನಾಟಕ ಆಂಧ್ರ ಪ್ರದೇಶದ ಗಡಿ ಸೀಮೆಯಲ್ಲಿರುವ ಕೊಳ್ಳೇಗಾಲ ಮತ್ತು ಅನಂತಪುರ ಜಿಲ್ಲೆಯ ಒಂದೆರಡು ನೆಲೆಗಳಲ್ಲಿ ಮಾತ್ರ ಕಂಡು ಬಂದಿದ್ದು ಕರ್ನಾಟಕದ ಇತರೆಡೆಗಳಲ್ಲಿ ಮತ್ತು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡು ಬಂದಿಲ್ಲ.

೧ಇ. ಕಂಡಿ ಇರುವ ಅಥವಾ ಇಲ್ಲದ ಶವಕುಳಿ: ಈ ಮಾದರಿಯ ಕಲ್ಗೋರಿಗಳು ಪ್ರಸ್ತುತ ಅಧ್ಯಯವ ಪ್ರದೇಶದಲ್ಲಿ, ಬೆಂಗಳೂರು, ಕೊಡಗು, ಮಲೆನಾಡು ಪ್ರದೇಶಗಳಲ್ಲಿಯೂ(ಪೂಣಚ್ಚ.ಕೆ.ಪಿ:೧೯೯೦) ನೆರೆಯ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯಲ್ಲಿಯೂ ಕಂಡು ಬಂದಿವೆ(ಮುರಳಿ.ಎಂ:೧೯೯೩). ಬೆಂಗಳೂರು ಜಿಲ್ಲೆಯ ಇಟ್ಟಿಗೆ ಬಯಲು ನೆಲೆಯಲ್ಲಿ ಪೂರ್ವ-ಪಶ್ಚಿಮವಾಗಿ ದೀರ್ಘ ಬಾಹುಪಿರುವಂತೆ ವಿನ್ಯಾಸಗೊಂಡಿರುವ ಆಯತಾಕಾರದ ಶವಕುಳಿಯ

ಉತ್ಖನನವಾಗಿದೆ (ಗುರುರಾಜರಾವ್:೧೯೭೨). ಇದರ ಸುತ್ತಲೂ ಅರೆ ಹುದುಗಿದ್ದ ಗುಂಡುಗಲ್ಲುಗಳ ವೃತ್ತವಿದೆ. ತೆಳ್ಳನೆಯ ಗೋಡೆಗಲ್ಲುಗಳಿದ್ದು ಅವುಗಳಲ್ಲೊಂದಕ್ಕೆ ಕಂಡಿಯಿದೆ. ದಪ್ಪನೆಯ ಮುಚ್ಚಳಕಲ್ಲು(cap stone) ಇದೆ. ಕಂಡಿ ಇರುವ ಗೋಡೆಗಲ್ಲಿನ ಮುಂದೆ ಕಮಾನಾಕಾರದ ಕಲ್ಲುಗಳನ್ನು ನಿಲ್ಲಿಸಿರುವುದು ಒಂದು ವೈಶಿಷ್ಟ್ಯ. ಶೇಷಾದ್ರಿ(೧೯೫೬)ಯವರು ಗಮನಿಸಿರುವಂತೆ ಮತ್ತು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿಯೂ ಕಂಡು ಬಂದಿರುವಂತೆ ಅಧ್ಯಯನ ಪ್ರದೇಶದ ಶವಕುಳಿಗಳು ಬಹಳಷ್ಟು ಹಾಳಾಗಿವೆ. ಅಳಿದುಳಿದಿರುವ ಅವಶೇಷಗಳ ಮೇಲೆ ಹೇಳುವುದಾದರೆ ಈ ಶವಕುಣಿಗಳು ಸಾಧಾರಣವಾಗಿ ೨.೫ ಚ.ಮೀ. ವಿಸ್ತಾರವಾಗಿದೆ. ಶಿಲಾವೃತ್ತಗಳು ೩ ರಿಂದ ೯ ಮೀಟರುಗಳಲ್ಲಿವೆ. ಇಲ್ಲಿ ಶಿಲಾವೃತ್ತಗಳು ಗುಂಡುಗಲ್ಲು ವೃತ್ತ ಮತ್ತೆ ಫಲಕ ಶಿಲಾ ವೃತ್ತಗಳಲ್ಲಿವೆ. ಕಂಡಿಗಳು ಕಂಡು ಬಂದರೂ ಬೇರೆ ಬೇರೆ ದಿಕ್ಕಿನಲ್ಲಿವೆ. ಇವುಗಳಲ್ಲಿ ಅತಿ ದೊಡ್ಡದು ೮೦ ಸೆಂ.ಮೀ. ಇದ್ದು ಅತಿ ಚಿಕ್ಕದು ೫೫ ಸೆಂ.ಮೀ. ಇದೆ. ಕೆಲವು ಕಲ್ಗೋರಿಗಳಲ್ಲಿ ಕೆಂಪು-ಕಪ್ಪು ಬಣ್ಣದ ಮೃತ್ ಪಾತ್ರೆ ಮತ್ತು ಕಬ್ಬಿಣದ ವಸ್ತುಗಳು ದೊರೆಯುತ್ತಿವೆ.

೨. ಕೋಣೆಗಳಿಲ್ಲದ ದಫನಗಳು: ಇದರ ಉಪಗುಂಪುಗಳನ್ನು ಕೆಳಗೆ ಬಣ್ಣಿಸಿದೆ.

೨.೧. ಕಲ್ಲುಗುಪ್ಪೆ: ದಕ್ಷಿಣ ಕರ್ನಾಟಕದಲ್ಲಿ ಈ ಮಾದರಿಯ ಗೋರಿಗಳು ಮಲೆನಾಡಿನ ಪ್ರದೇಶ, ಕೋಲಾರ ಮತ್ತು ನೆರೆಯ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ ಹಾಗೂ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಂಡು ಬರುತ್ತವೆ. ಸಾಧಾರಣವಾಗಿ ತಳ ವಿನ್ಯಾಸದಲ್ಲಿ ಅಂಡ ಇಲ್ಲವೆ ವರ್ತುಲಾಕಾರದಲ್ಲಿದ್ದು ದೊಡ್ಡ ಇಲ್ಲವೇ ಮಧ್ಯಮ ಗಾತ್ರದ ಸ್ವಾಭಾವಿಕವಾಗಿ ಕೊರೆಯುವ ಗುಂಡುಗಲ್ಲು ಮತ್ತು ಚಕ್ಕೆ ಕಲ್ಲುಗಳನ್ನು ನೆಲದ ಮೇಲೆ ಒಟ್ಟುಗೂಡಿಸಿ ರೂಪಿಸಿದ್ದು ಇವುಗಳ ಎತ್ತರ ಭೂ ಮಟ್ಟದಿಂದ ಸುಮಾರು ೩೦ರಿಂದ ೭೦ ಸೆಂ.ಮಿ ಇರುತ್ತವೆ. ಗುಪ್ಪೆಯು ಚದುರಿರುವ ನೆಲೆಗಳಲ್ಲಿ ಮತ್ತು ಮುಚ್ಚಳಗಲ್ಲು ಹಾಳಾಗಿರುವ ನೆಲೆಗಳಲ್ಲಿ ಗುಪ್ಪೆಯ ಮಧ್ಯದಲ್ಲಿ ಸ್ವಸ್ತಿಕ ಹಾಗೂ ಆಯತಾಕಾರ ಶವಕುಳಿಗಳು ಕಂಡು ಬರುತ್ತವೆ. ಗೋಡೆಗಲ್ಲುಗಳಲ್ಲಿ ಕಂಡಿಗಳೂ ಇವೆ. ಬಹಳಷ್ಟು ಹಾಳಾಗಿರುವುದರಿಂದ ಇವುಗಳಲ್ಲಿ ಇದ್ದಿರಬಹುದಾದ ದಫನ ಸಾಮಗ್ರಿಗಳ ಬಗೆಗೆ ಏನನ್ನೂ ಹೇಳಲು ಸಾಧ್ಯವಿಲ್ಲ.

೨.೨ ಶವಕುಳಿ: ಕಲ್ಲುಗುಪ್ಪೆಗಳ ಒಂದು ಉಪಗುಂಪಿನದಾದ ಈ ಮಾದರಿಯ ಕಲ್ಗೋರಿಗಳನ್ನು ಸ್ಥಳ ಪರಿಶೀಲನೆಯಲ್ಲಿ ಗುರುತಿಸಲಾಗಿಲ್ಲ. ಹಾಗಿದ್ದರೂ ಶಿಲಾವೃತ್ತಗಳ ಕಲ್ಲಿನ ದಿಬ್ಬ ಮತ್ತು ಮುಚ್ಚಳಕಲ್ಲು ಹಾಳಾಗಿದ್ದಲ್ಲಿ ಸ್ಥಳ ಪರಿಶೀಲನೆಯಲ್ಲಿಯೂ ಗುರುತಿಸಬಹುದು. ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಬ್ರಹ್ಮಗಿರಿ, ಹಾಗೂ ಹಾಸನ , ಶಿವಮೊಗ್ಗ ಜಿಲ್ಲೆಯ ಕೆಲವು ನೆಲೆಗಳಲ್ಲಿ ಈ ಮಾದರಿ ಕಂಡು ಬಂದಿದೆ. ಬ್ರಹ್ಮಗಿರಿಯಲ್ಲಿ ವೀಲರ್ (೧೯೪೮) ಇಂತಹ ನಾಲ್ಕು ಶವಕುಳಿಗಳನ್ನು

ಉತ್ಖನನ ಮಾಡಿರುವರು. ಅದರಿಂದ ಶಿಲಾವರ್ತುಲದ ಮಧ್ಯದಲ್ಲಿ ೨-೪ ಮೀ. ಆಳವಾಗಿರುವ ೧-೧.೫ ಮೀ. ಅಗಲವಿರುವ ಕುಳಿಗಳನ್ನು ತೋಡಿ ಅಸ್ಥಿ ಪಂಜರ ಮತ್ತು ಉಳಿದ ದಫನ ಸಾಮಗ್ರಿಯನ್ನು ಜೋಡಿಸಿದ್ದುದು ಬೆಳಕಿಗೆ ಬಂದಿದೆ. ಒಂದೆರಡು ಕುಳಿಗಳಲ್ಲಿ ದಫನ ಸಾಮಗ್ರಿಯನ್ನು ಜೋಡಿಸುವ ಮೊದಲು ನೆಲ ಮತ್ತು ಗೋಡೆಗಳನ್ನು ತಟ್ಟಿ ಸಮ ಮಾಡಿ ಮರಳು ಮತ್ತು ಸುಣ್ಣದ ಪದರಗಳನ್ನು ನಯಗೊಳಿಸಿದ್ದುದು ಕಂಡು ಬಂದಿದೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇಂತಹ ಹಾಳಾಗಿರುವ ಶಿಲಾ ವರ್ತುಲಗಳು ಬೆಳಕಿಗೆ ಬಂದಿದ್ದರೂ ಅವುಗಳಲ್ಲಿ ಶವಕುಳಿ ಇದ್ದ ಉದಾಹರಣೆ ಕಂಡು ಬಂದಿಲ್ಲ.

೨.೩ ಶಿಲಾವೃತ್ತ: ಈ ಮಾದರಿಯ ಕಲ್ಗೋರಿಗಳು ದಕ್ಷಿಣ ಕರ್ನಾಟಕದಲ್ಲಿ ಹೆಚ್ಚು ಸಂಖ್ಯೆಯಲ್ಲಿ ಬೆಳಕಿಗೆ ಬಂದಿದ್ದು ಕೋಲಾರ, ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ, ಚಿತ್ರದುರ್ಗ ಮತ್ತು ನೆರೆಯ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ಕಂಡು ಬರುತ್ತವೆ. ಈ ಕಲ್ಗೋರಿಗಳಿರುವ ಒಂದು ದೊಡ್ಡ ಪಟ್ಟಿಯನ್ನೇ ಶೇಷಾದ್ರಿ (೧೯೫೬), ಗುರುರಾಜರಾವ್(೧೯೭೨) ಮತ್ತು ಮುರಳಿ (೧೯೯೩) ಯವರು ಕೊಟ್ಟಿದ್ದಾರೆ. ವ್ಯಾಪಕವಾದ ರೀತಿಯಲ್ಲಿ ಇವು ಹರಡಿದ್ದರೂ ಇವುಗಳ ರಚನಾ ವಿಧಾನ, ಶವ ಸಾಮಗ್ರಿಯನ್ನು ಇರಿಸಿರುವ ಕುಳಿ, ಶವಕುಳಿ ಮುಂತಾದವುಗಳ ಬಗ್ಗೆ ಸ್ಥಳ ಪರಿಶೋಧನೆಯಿಂದ ಯಾವುದೇ ಮಾಹಿತಿ ದೊರೆಯುವುದಿಲ್ಲ. ಈ ಹಿನ್ನೆಲೆಯಲ್ಲಿ ಬೆಂಗಳೂರು ಜಿಲ್ಲೆಯ ಜಡಗೇನಹಳ್ಳಿ (ಶೇಷಾದ್ರಿ:೧೯೬೦) ಯಲ್ಲಿ ಶಿಲಾವೃತ್ತದ ಮಧ್ಯದಲ್ಲಿರುವ ಕುಳಿಯಲ್ಲಿ ಮಣ್ಣಿನಿಂದ ಮಾಡಿದ ಶವಪೆಟ್ಟಿಗೆ ಕಂಡು ಬಂದಿದೆ. ತಮಿಳುನಾಡಿನಲ್ಲಿ ಹೆಚ್ಚಾಗಿ ಕಂಡು ಬರುವ ಈ ರೀತಿಯ ಶವಪೆಟ್ಟಿಗೆಗಳು ಕರ್ನಾಟಕದಲ್ಲಿ ಜಡಗೇನಹಳ್ಳಿಯಲ್ಲಿಯೂ ಇವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಗುಂಪಿನ ಕಲ್ಗೋರಿಗಳು ಬೆಳಕಿಗೆ ಬಂದಿದ್ದು ಇವುಗಳನ್ನು ದುಂಡುಗಲ್ಲುಗಳ ಶಿಲಾವೃತ್ತ ಮತ್ತು ಫಲಕ ಶಿಲಾವೃತ್ತ ಎಂದು ಎರಡು ಗುಂಪುಗಳಾಗಿ ವರ್ಗೀಕರಿಸಬಹುದು.

೨.೪ ಅಸ್ಥಿ ಪಾತ್ರೆ ದಫನ : ತಮಿಳುನಾಡಿನಲ್ಲಿ ಹೆಚ್ಚಾಗಿ ಕಂಡು ಬರುವ ಈ ಗುಂಪಿನ ಗೋರಿಗಳಿಗೆ ಯಾವುದೇ ರೀತಿಯ ಕಲ್ಲಿನ ಗುರುತು ಅಥವಾ ನಿರ್ಮಿತಿ ಇರದೆ, ನೆಲದೊಳಗೆ ಕುಳಿ ತೋಡಿ ಅಸ್ಥಿಪಂಜರ ಅವಶೇಷವನ್ನು ಹೆಚ್ಚು ಎತ್ತರವಿರುವ ಮಧ್ಯದಲ್ಲಿ ಗುಂಡಾಗಿದ್ದ ಮೇಲೆ ಮತ್ತು ಕೆಳಗೆ ಹೋದಂತೆ ಅಗಲ ಕಡಿಮೆಯಾಗುವ ವಿಶೇಷ ರೀತಿಯ ಮಡಕೆಗಳಲ್ಲಿ ಇಟ್ಟು ಇತರ ಶವ ಸಾಮಗ್ರಿಯೊಡನೆ ಕುಳಿಯ ನೆಲದ ಮೇಲೆ ಜೋಡಿಸಿರುತ್ತಾರೆ. ಭೂಮಿಯ ಮೇಲ್ಭಾಗದಲ್ಲಿ ಯಾವುದೇ ರೀತಿಯ ಗುರುತು ಇಲ್ಲದೆ ಇರುವುದರಿಂದ ಕೇವಲ ಸ್ಥಳ ಪರಿಶೋಧನೆಯಲ್ಲಿ ಸಾಮಾನ್ಯವಾಗಿ ಇವು ಕಂಡುಬರುವುದಿಲ್ಲ. ಹಾಗಿದ್ದರೂ ಆಕಸ್ಮಿಕ ಅಗೆತದಲ್ಲಿ ಮತ್ತು ವಸತಿ ನೆಲೆಗಳಲ್ಲಿ ಕೈಗೊಂಡ ಉತ್ಖನನದಲ್ಲಿ ಮಾತ್ರ ದೊರೆತಿವೆ. ಕೋಲಾರ ಜಿಲ್ಲೆಯ

ವಬ್ಬಸಂದ್ರದಲ್ಲಿ ಹಾಳಾಗಿದ್ದ ಇಂತಹ ಒಂದು ಸಮಾಧಿಯಲ್ಲಿ ಮೂಳೆ ಚೂರುಗಳು, ಕಪ್ಪು-ಕೆಂಪು ಮೃತ್ ಪಾತ್ರೆ ಮತ್ತು ಕಬ್ಬಿಣದ ವಸ್ತುಗಳು ದೊರೆತಿವೆ. ದಕ್ಷಿಣ ಕನ್ನಡದ ಪುತ್ತೂರಿನ ಬಳಿ ಸುಂದರ ಅವರು ದಪ್ಪ ಒರಟು ಕೆಂಪು ಬಣ್ಣದ ಮಡಕೆಗಳಲ್ಲಿ ಕಬ್ಬಿಣದ ವಸ್ತುಗಳು, ಚಿನ್ನದ ಆಭರಣಗಳು ಮತ್ತು ಹಿತ್ತಾಳೆ ಲೇಪನದ ಕಬ್ಬಿಣದ ವಸ್ತುಗಳನ್ನು ಬೆಳಕಿಗೆ ತಂದಿದ್ದಾರೆ (ಸುಂದರ:೧೯೭೪). ಗಾತ್ರ, ಆಭರಣ ರೂಪಣಾ ವಿಧಾನಗಳಲ್ಲಿ ಪುತ್ತೂರಿನ ಮಡಕೆಗಳು ತಮಿಳುನಾಡಿನ ಪೊರ್ಕಲಂ (ಥಾಪರ್:೧೯೫೨:೩-೮)ನಲ್ಲಿ ದೊರೆತ ಅವಶೇಷಗಳಿಗೆ ಇವು ಹೋಲುತ್ತವೆಂದು ಸುಂದರ ಅವರು ಅಭಿಪ್ರಾಯ ಪಟ್ಟಿದ್ದಾರೆ. ದಕ್ಷಿಣ ಕರ್ನಾಟಕದ ಇದುವರೆಗೆ ಈ ಗುಂಪಿನ ಸಮಾಧಿಗಳು ಬೆಳಕಿಗೆ ಬಂದಿಲ್ಲ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿಯೂ ಇಂತಹ ಗುಂಪಿನ ಸಮಾಧಿಗಳು ಕಂಡು ಬಂದಿಲ್ಲ.

೩.೧ ನಿಲಸುಗಲ್ಲು: ಸ್ವಾಭಾವಿಕವಾಗಿ ದೊರೆಯುವ ಅಥವಾ ಒರಟಾಗಿ ಎಬ್ಬಿಸಿದ ದಪ್ಪೆಯ ಕಲ್ಲು ಚಪ್ಪಡಿ ರೂಪದಲ್ಲಿರುವ ಯಾವುದೇ ನಿರ್ದಿಷ್ಟ ಆಕೃತಿಯಲ್ಲಿಲ್ಲದ, ಭೂಮಿಗೆ ಲಂಬವಾಗಿ ಇಲ್ಲವೇ ಸ್ವಲ್ಪ ವಾಲಿದಂತೆ ನಿಲ್ಲಿಸಿರುವ ಕಲ್ಲುಗಳು ಈ ಗುಂಪಿಗೆ ಸೇರುತ್ತವೆ. ವಿರಳವಾಗಿ ದೊರಕುವ ಈ ಕಲ್ಲುಗಳನ್ನು ನಿಲಸುಗಲ್ಲುಗಳೆಂದು ಕರೆಯಲಾಗುತ್ತದೆ. ಸಾಲುಸಾಲಾಗಿ ಚೌಕಾಕಾರ ಇಲ್ಲವೆ ಆಯತಾಕಾರದಲ್ಲಿ ನಿಲ್ಲಿಸಿರುವ ಇಂತಹ ಕಲ್ಲುಗಳನ್ನು ಬೃಹತ್ ಸಾಲುಗಲ್ಲು ಎಂದು ಕರೆಯುತ್ತಾರೆ. ಕೋಲಾರ ಜಿಲ್ಲೆಯ ಒಂದೆರಡು ನೆಲೆಗಳಲ್ಲಿ (ಗುರುರಾಜರಾವ್:೧೯೭೨), ಹಾಸನ, ಚಿಕ್ಕಮಗಳೂರು, ಮತ್ತು ಶಿವಮೊಗ್ಗ ಜಿಲ್ಲೆಯ ಮಲೆನಾಡು ಪ್ರದೇಶದಲ್ಲಿ (ಪೂಣಚ್ಚ:೧೯೯೦) ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ವಿರಳವಾಗಿ ನಿಲಸುಗಲ್ಲುಗಳು ಬೆಳಕಿಗೆ ಬಂದಿವೆ. ಇವು ಸಮಾಧಿ ಪ್ರಕ್ರಿಯೆಯ ಭಾಗವಾಗಿ ರೂಪತವಾಗಿರದೆ ಮೃತ ವ್ಯಕ್ತಿಯ ಸ್ಮಾರಕ ಅಥವಾ ಇನ್ನಾವುದೇ ಉದ್ದೇಶಕ್ಕಾಗಿ ನಿಲ್ಲಿಸಿರಬಹುದು. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ೧೦ ನಿಲಸುಗಲ್ಲುಗಳು ಕಂಡು ಬಂದಿವೆ.

೩.೨ ಕೊರೆದ ಗುಹೆ (Rock cut caves): ಕೇರಳದ ಕರಾವಳಿ ಪ್ರದೇಶದಲ್ಲಿ ಹೆಚ್ಚಾಗಿ ಕಂಡು ಬರುವ ಈ ಗುಂಪಿನ ಗೋರಿಗಳು ಕರ್ನಾಟಕದ ಕರಾವಳಿಯಲ್ಲಿಯೂ ಇವೆ. ಕರಾವಳಿ ಕರ್ನಾಟಕದಲ್ಲಿ ಸುಂದರ ಅವರು ಇಂತಹ ಗೋರಿಗಳನ್ನು ಶೋಧಿಸಿದ್ದಾರೆ (ಸುಂದರ:೧೯೭೫). ಸಾಧಾರಣವಾಗಿ ಜಂಬಿಟ್ಟಿಗೆಯ ನೆಲದಲ್ಲಿ ಅಥವಾ ಗುಡ್ಡಗಳಲ್ಲಿ ಕೊರೆಯಲಾಗುವ ಇವು ತಳವಿನ್ಯಾಸದಲ್ಲಿ ವೃತ್ತಾಕಾರ (೩.೭೫ ಮೀ. ವಿನ್ಯಾಸ), ಊರ್ಧ್ವ ವಿನ್ಯಾಸದಲ್ಲಿ ಅರ್ಧ ವೃತ್ತಾಕಾರದಲ್ಲಿದ್ದು ( ೨ ಮೀ ಎತ್ತರ) ಮೇಲ್ತುದಿಯು ದುಂಡಾಗಿದ್ದು ಕಣಶಿಲೆ ಅಥವಾ ಜಂಬಿಟ್ಟಿಗೆಯ ಫಲಕದಿಂದ ಮುಚ್ಚಿರುತ್ತದೆ. ಹೆಚ್ಚಿನವು ತೀರಾ ಹಾಳಾಗಿರುವುದರಿಂದ ಶವ ಸಾಮಗ್ರಿ ಮುಂತಾದವುಗಳ ಬಗ್ಗೆ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಪ್ರಸ್ತುತ ಅಧ್ಯಯನ ಪ್ರದೇಶವನ್ನೂ ಒಳಗೊಂಡಂತೆ ಕರ್ನಾಟಕದ ಒಳನಾಡಿನಲ್ಲಿ ಈ ಮಾದರಿಯ ಸಮಾಧಿ ಕಂಡು ಬಂದಿಲ್ಲ.

ಈ ಮೊದಲು ವಿವರಿಸಲಾದ ಶಿಲಾ ನಿರ್ಮಿತಿಗಳು ಪ್ರಾಥಮಿಕ ಅಥವಾ ದ್ವಿತೀಯ ಹಂತದ ಅಸ್ತಿ ಸಂಚಯನ ಮತ್ತು ಸಮಾಧಿಗೆ ನೇರವಾಗಿ ಸಂಬಂಧಪಟ್ಟ ಶಿಲಾ ನಿರ್ಮಿತಿಗಳು ಇದುವರೆಗೆ ತಿಳಿದು ಬಂದಿರುವಂತೆ ಸಮಾಧಿ ಪ್ರಕ್ರಿಯೆಗೆ ನೇರವಾಗಿ ಸಂಬಂಧ ಪಡದ ನಿಲಸುಗಲ್ಲುಗಳು, ಸಾಲುಗಲ್ಲುಗಳು ಮತ್ತು ಕೊರೆದ ಗುಹೆ ಮುಂತಾದ ಬೃಹತ್ ಶಿಲಾ ಸಂಸ್ಕೃತಿಗೆ ಸಂಬಂಧಿಸಿದ ನಿರ್ಮಾಣಗಳು ಸಾಕಷ್ಟು ಸಂಖ್ಯೆಯಲ್ಲಿ ಬೆಳಕಿಗೆ ಬಂದಿವೆ.

## ಪರಿಸರ ಮತ್ತು ಶಿಲಾಮಾದರಿ

ಪರಿಸರದಲ್ಲಿ ಸಾಕಷ್ಟು ಬದಾವಣೆ ಉಂಟಾಗಿದ್ದು ಮಾನವನು ನಿರ್ದಿಷ್ಟ ನೆಲೆ ನಿಂತಿರುವುದೂ ತಿಳಿಯತ್ತದೆ. ಭೂಮಿಯ ಬಹುಭಾಗವನ್ನು ತನ್ನವಶ್ಯಕತೆಗಳಿಗೆ ಬಳಸಿಕೊಂಡಿರುವುದು ತಿಳಿಯುತ್ತದೆ. ಪ್ರಾಣಿವರ್ಗವನ್ನು ತನ್ನ ಅವಶ್ಯಕತೆಯಂತೆ ಬಳಸಿ ಕೊಂಡಿರುವುದು. ಮತ್ತು ತನಗೆ ತಿಳಿದಿರುವ ಎಲ್ಲಾ ಜ್ಞಾನದ ಬಳಕೆಯನ್ನು ಉಪಯೋಗಿಸಿ ಅತಿ ಮುಂದುವರಿದ ಜೀವನ ಕ್ರಮವನ್ನು ನಡೆಸಿರುವುದು ತಿಳಿಯುತ್ತದೆ.

ಉಪಯುಕ್ತವಾದ ಶಿಲಾ ಪ್ರಬೇಧವನ್ನಷ್ಟೇ ಬಳಸಿ ತಾಂತ್ರಿಕ ವೈವಿಧ್ಯವನ್ನು ಪ್ರದರ್ಶಿಸಿರುವುದನ್ನು ಕಾಣಬಹುದು. ಪ್ರಮುಖವಾಗಿ ತಾನು ನಿರ್ಮಿಸಬೇಕಿರುವ ಬೃಹತ್ ಶಿಲಾಗೋರಿಗಳಿಗೆ ಅವಶ್ಯವಿರುವ ಶಿಲಾಚಪ್ಪಡಿಗಳನ್ನು ತೆಗೆದಿರುವುದು ಮತ್ತು ನಿರ್ದಿಷ್ಟ ರೀತಿಯಲ್ಲಿ ರೂಪಿಸಿರುವವುದು ಒಂದು ಗಣನೀಯ ಅಂಶವಾಗಿದೆ. ಲೋಹದ ಬಳಕೆಯಿಂದಾಗಿ ವೈವಿಧ್ಯತೆಯನ್ನು ಸಾಧಿಸಲು ಸಹಾಯಕವಾಗಿದೆ.

## ಬೃಹತ್ ಶಿಲಾಯುಗ ಸಂಸ್ಕೃತಿ ನೆಲೆ

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಒಟ್ಟು ೩೮ ನೆಲೆಗಳು ಶೋಧವಾಗಿದ್ದು ಅವುಗಳಲ್ಲಿ ೨ ನೆಲೆಯು ವಿವಿಧ ಮಾದರಿಯ ಶಿಲಾಗೋರಿಗಳನ್ನು ಒಳಗೊಂಡಿದ್ದರೆ ಉಳಿದ ೧೭ ವಸತಿ ನೆಲೆಗಳಾಗಿವೆ. ಈ ಒಟ್ಟು ನೆಲೆಗಳು ನೂತನ ಶಿಲಾಯುಗದ ಅವಶೇಷಗಳ ಜೊತೆಯಲ್ಲಿ ೧೮ ನೆಲೆಗಳೂ ಹಾಗೂ ಸ್ವತಂತ್ರ್ಯವಾಗಿ ಬೃಹತ್ ಶಿಲಾಯುಗ ಸಂಸ್ಕೃತಿಯ ಸಮಯದಲ್ಲಿಯೇ ವೃದ್ಧಿಗೊಂಡ ೨೦ ಸಂಖ್ಯೆಯ ನೆಲೆಗಳೂ ಇವೆ. ಒಟ್ಟು ನೆಲೆಗಳು ಅವುಗಳಿರುವ ಪರಿಸರ ಇವುಗಳನ್ನೊಳಗೊಂಡ ವಿವರಣೆಯನ್ನು ಕೋಷ್ಟಕ ಸಂಖ್ಯೆ ೯.೧ ರಲ್ಲಿ ನೀಡಿದೆ. ನೆಲೆಗಳಿರುವ ಭೂ ನಕ್ಷೆಯನ್ನು ಪುಟ ಸಂಖ್ಯೆ ೪೨೪ ರಲ್ಲಿ ನೀಡಿದೆ. ಗೋರಿ ನೆಲೆಗಳ ವಿವಿರಣೆಯನ್ನು ಸೂಚಿಯಲ್ಲಿ ತಿಳಿಸಲಾಗಿದೆ.


ಚಿತ್ರದುರ್ಗ ಜಿಲ್ಲೆ
ಪಾವಗಡ
ಅನಂತಪುರ ಜಿಲ್ಲೆ
ಶಿರಾ
ಮಧುಗಿರಿ
ಕೋಲಾರ ಜಿಲ್ಲೆ
ಕೊರಟಗೆರೆ
ಚಿಕ್ಕನಾಯಕನಹಳ್ಳಿ
ತುಮಕೂರು
ಗುಬ್ಬಿ
ತಿಪಟೂರು
ಬೆಂಗಳೂರು ಜಿಲ್ಲೆ
ತುರುವೇಕೆರೆ
ಹಾಸನ ಜಿಲ್ಲೆ
ಕುಣಿಗಲ್
ತೆಪ್ಪಸಂದ್ರ
ಮಂಡ್ಯ ಜಿಲ್ಲೆ

## ಬೃಹತ್ ಶಿಲಾಯುಗದ ನೆಲೆಗಳು

**ಕೋಷ್ಟಕ ಸಂಖ್ಯೆ ೯.೧**

| ಕ್ರಮ ಸಂಖ್ಯೆ | ನೆಲೆ | ವಸತಿ ನೆಲೆ | ಸಮಾಧಿಗಳಿರುವ ನೆಲೆ |
|---|---|---|---|
| ೧. | ಅಗ್ರಹಾರ | | ✓ |
| ೨. | ಇರಕಸಂದ್ರಕಾಲೋನಿ | | ✓ |
| ೩. | ಕತ್ತಿಕ್ಯಾತನಹಳ್ಳಿ | | ✓ |
| ೪. | ಕತ್ತಿರಾಜನಹಳ್ಳಿ | | ✓ |
| ೫. | ಕೈದಾಳ | ✓ | |
| ೬. | ಗುಟ್ಟೆ | ✓ | |
| ೭. | ಗುಲವ್ಯನಕಟ್ಟೆ | ✓ | |
| ೮. | ಗೌಡನಕಟ್ಟೆ | | ✓ |
| ೯. | ಚಿನಗ | | ✓ |
| ೧೦. | ಚಿನವಂಗ | | ✓ |
| ೧೧. | ಜಕ್ಕನಹಳ್ಳಿ | | ✓ |
| ೧೨. | ಧರ್ಮಾಪುರ | | ✓ |
| ೧೩. | ತಿಗ್ಗೇನಹಳ್ಳಿ | | ✓ |
| ೧೪. | ತಿಪ್ಪಸಂದ್ರ | ✓ | |
| ೧೫. | ಧರುಟಿ | | ✓ |
| ೧೬. | ನಿಡುಗಲ್ಲು | | ✓ |
| ೧೭. | ಪಾವಗಡ | ✓ | |
| ೧೮. | ಪಾಲ್ಯಹಳ್ಳಿ | | ✓ |
| ೧೯. | ಬಂಕ್ಯಾಪಟ್ಟ | ✓ | |
| ೨೦. | ಬೂದಿಬೆಟ್ಟ | | ✓ |
| ೨೧. | ಬೆಟ್ಟದಹಳ್ಳಿ | ✓ | |
| ೨೨. | ಬೆಳ್ಳಿಬಟ್ಲಹಳ್ಳಿ | | ✓ |
| ೨೩. | ಮಧುಗಿರಿ | ✓ | |
| ೨೪. | ಮರಿದಾಸನಹಳ್ಳಿ | | ✓ |
| ೨೫. | ಮಾಂಗನಾಯಕನಪಾಳ್ಯ | ✓ | |
| ೨೬. | ಮಿಡಿಗೇಶಿ | ✓ | |
| ೨೭. | ವೆಂಕಟಾಲಕುಪ್ಪೆ | ✓ | |
| ೨೮. | ರಾಚವಾರನಹಳ್ಳಿ | ✓ | |
| ೨೯. | ಯಲ್ಲಪ್ಪನಾಯಕನಹಳ್ಳಿ | ✓ | |
| ೩೦. | ಯಲ್ಲಪ್ಪನಾಯಕನಹೊಸಕೋಟೆ | ✓ | |
| ೩೧. | ಸಿದ್ಧಗಂಗಾಬೆಟ್ಟ | ✓ | |
| ೩೨. | ಸಿದ್ಧಾಪುರ | ✓ | |
| ೩೩. | ಸೀಗೆಪಾಳ್ಯ | | ✓ |
| ೩೪. | ಸೀಗೆಹಳ್ಳಿ | | ✓ |
| ೩೫. | ಹಿರೇಗುಂಡಗಲ್ಲು | ✓ | |
| ೩೬. | ಹುಳಿಯಾರು | | ✓ |
| ೩೭. | ಹೊನ್ನೇನಹಳ್ಳಿ | | ✓ |
| ೩೮. | ಹೊಸಕೋಟೆ | | ✓ |

**ಬೃಹತ್ ಶಿಲಾಯುಗದ ಗೋರಿನೆಲೆಗಳ ಸೂಚಿ**

೧.

I ನೆಲೆ- ಅಗ್ರಹಾರ

II ವಿಸ್ತೀರ್ಣ- ೧ ಎಕರೆ ಪ್ರದೇಶ

III ಮಾದರಿ- ನಿಲಸುಗಲ್ಲು ೩

IV ವಿವರಣೆ- ನಿಲಸುಗಲ್ಲುಗಳು ಗುಡ್ಡದ ಬುಡದಲ್ಲಿ ಎತ್ತರದ ಪ್ರದೇಶದಲ್ಲಿದೆ. ಒಂದರ ಮೇಲ್ಭಾಗ ಹಾಳಾಗಿದೆ. ಎಲ್ಲವನ್ನೂ ಒರಟು ಗ್ರನೈಟ್ ಶಿಲೆಯಲ್ಲಿರೂಪಿಸಲಾಗಿದೆ. ಮುರಿದಿರುವ ನಿಲಸುಗಲ್ಲಿನ ಕೆಳಭಾಗ ಅಗಲವಿದ್ದು ಮೇಲೆ ಹೋದಂತೆ ಕಿರಿದಾಗುತ್ತಾ ಹೋಗಿದೆ. ಮೂರೂ ಕಲ್ಲುಗಳು ಪೂರ್ವ- ಪಶ್ಚಿಮ ದಿಕ್ಕಿಗೆ ಮುಖಮಾಡಿವೆ. ಇವುಗಳಲ್ಲಿ ಒಂದು ಬಿದ್ದಿದೆ. ಇವುಗಳ ಅಳತೆ ಪರಿಮಾಣದಂತೆ.

೧)ಎತ್ತರ ೨೧೦ ಸೆಂ.ಮೀ. ಅಗಲ ೨೮ ಸೆಂ.ಮೀ. ದಪ್ಪ ೧೧ ಸೆಂ.ಮೀ.

೨)ಎತ್ತರ ೧೮೦ ಸೆಂ.ಮೀ. ಅಗಲ ೪೬ ಸೆಂ.ಮೀ. ದಪ್ಪ ೮ ಸೆಂ.ಮೀ.

೩)ಎತ್ತರ ೨೧೦ ಸೆಂ.ಮೀ. ಅಗಲ ೩೮ ಸೆಂ.ಮೀ. ದಪ್ಪ ೧೨ ಸೆಂ.ಮೀ.

V ದೊರೆತ ಅವಶೇಷ- ಯಾವುದೇ ಅವಶೇಷ ದೊರೆತಿಲ್ಲ.

೨.

I ನೆಲೆ- ಇರಕಸಂದ್ರಕಾಲೋನಿ.

II ವಿಸ್ತೀರ್ಣ- ೧.೫ ಹೆಕ್ಟೇರ್ ಪ್ರದೇಶ.

III ಮಾದರಿ- ಶಿಲಾವೃತ್ತ- ಕಲ್ಲುಪ್ಪೆ(೪೬), ಗುಂಡುಗಲ್ಲು(೧೬) ಕಲ್ಲು ಚಪ್ಪಡಿವೃತ್ತ(೧೪) ಮತ್ತು ನಿಲಸುಗಲ್ಲು(೧).

IV ವಿವರಣೆ- ನೆಲೆಯು ಗುಡ್ಡದ ಬುಡದಲ್ಲಿದ್ದು ಕೃಷಿ ಭೂಮಿಯಾಗಿದೆ. ಹಲವು ಕಲ್ಗೋರಿಗಳನ್ನು ಹಾಳು ಮಾಡಲಾಗಿದೆ. ನಿಲಸುಗಲ್ಲಿನ ಮೇಲ್ಭಾಗಕ್ಕೆ ಹೋದಂತೆ ಕಿರಿದಾಗಿದ್ದು ತುದಿ ಮುರಿದಿದೆ. ಉತ್ತರ-ದಕ್ಷಿಣವಾಗಿ ಮುಖ ಮಾಡಿದೆ. ಹೆಚ್ಚಿನ ಕಲ್ಲುವೃತ್ತಗಳು, ಕಲ್ಲು ಹಲಗೆಗಳನ್ನು ಹೊಂದಿವೆ. ಅತಿ ಹೆಚ್ಚು ೮ ಇದ್ದು ಅತಿ ಕಡಿಮೆ ೩ ಇವೆ. ಶಿಲಾವೃತ್ತದಲ್ಲಿರುವ ಮುಚ್ಚಳ ಕಲ್ಲುಗಳನ್ನು ಹಾಳುಮಾಡಲಾಗಿದ್ದು ಕೆಲವು ಗೋರಿಗಳಲ್ಲಿ ತೂತು ಕಲ್ಲಿನ ಕಲ್ಕುನೆಗಳನ್ನು ಕಾಣಬಹುದು. ಪೂರ್ವ ದಿಕ್ಕಿಗಿದೆ. (೧) ಒಂದು ತೂತು ಕಲ್ಲು ಪಶ್ಚಿಮಕ್ಕಿದ್ದು ೨೭೦ ಡಿಗ್ರಿಯಲ್ಲಿದೆ. (೨) ಎರಡನೇ ತೂತು ಕಲ್ಲು ವಾಯುವ್ಯಕ್ಕಿದ್ದು ೩೭೦ ಡಿಗ್ರಿಯಲ್ಲಿದೆ. ಮುಚ್ಚಳಕಲ್ಲಿನ ಅಳತೆ ಪರಿಮಾಣ

ಗರಿಷ್ಠ ಉದ್ದ ೩೭೭ ಸೆಂ.ಮೀ. ಅಗಲ ೩೦೦ ಸೆಂ.ಮೀ. ದಪ್ಪ ೪೮ ಸೆಂ.ಮೀ.

ಕನಿಷ್ಠ ಉದ್ದ ೩೬೫ ಸೆಂ.ಮೀ. ಅಗಲ ೧೮೦ ಸೆಂ.ಮೀ. ದಪ್ಪ ೧೨ ಸೆಂ.ಮೀ.

ಕಲ್ಲು ವೃತ್ತಗಳ ಅಳತೆ ಪರಿಮಾಣದಂತೆ ವ್ಯಾಸ ಗರಿಷ್ಠ ೧೦೦ ಸೆಂ.ಮೀ. ಕನಿಷ್ಠ ೬೭೫ ಸೆಂ.ಮೀ. ಗಳಾಗಿವೆ. ಎರಡು ಕಲ್ಲು ವೃತ್ತಗಳ ನಡುವಿನ ಅಂತರ ೭೫ ಸೆಂ.ಮೀ. ಆಗಿದೆ.

V ದೊರೆತ ಅವಶೇಷ- ಮೃತ್ ಪಾತ್ರೆ ಅವಶೇಷಗಳು.

೩.

I ನೆಲೆ- ಕತ್ತಿಕ್ಯಾತನಹಳ್ಳಿ

II ವಿಸ್ತೀರ್ಣ- ಸುಮಾರು ೦.೫ ಹೆಕ್ಟೇರ್ ಪ್ರದೇಶ.

III ಮಾದರಿ- ಗುಂಡುಗಲ್ಲು ವೃತ್ತ(೪).

IV ವಿವರಣೆ- ಗುಡ್ಡದ ಬುಡದಲ್ಲಿ ಕಲ್ಗೋರಿಗಳಿದ್ದು ಕೃಷಿ ಭೂಮಿಯಾಗಿ ಪರಿವರ್ತಿಸಲಾಗಿದೆ. ಗೋರಿಗಳು ಹಾಳಾಗಿದ್ದು ವೃತ್ತದ ಮಧ್ಯದಲ್ಲಿ ಗೋರಿ ಇರುವುದು ತಿಳಿಯುತ್ತದೆ. ಒಂದು ಆಯತಾಕಾರದಲ್ಲಿದ್ದು ಅಳತೆ ಪರಿಮಾಣದಂತೆ ಆಯತದ ಉದ್ದ ೮೦ ಅಗಲ ೫೫ ಸೆಂ.ಮೀ ಗಳಾಗಿವೆ. ಕಲ್ಲು ವೃತ್ತವನ್ನು ಗುಂಡುಗಲ್ಲುಗಳಿಂದ ರೂಪಿಸಿದೆ. ವೃತ್ತದ ಅಳತೆ ಪರಿಮಾಣ ಗರಿಷ್ಠ ೭೮೦ ಕನಿಷ್ಠ ೬೨೦ ಸೆಂ.ಮೀ ಗಳಾಗಿವೆ.

V ದೊರೆತ ಅವಶೇಷ- ಕಪ್ಪು, ಕೆಂಪು, ಕೆಂಪು-ಕಪ್ಪು ವರ್ಣದ ಮೃತ್ ಪಾತ್ರೆ ಭಾಗಗಳು.

೪.

I ನೆಲೆ- ಕತ್ತಿರಾಜನಹಳ್ಳಿ

II ವಿಸ್ತೀರ್ಣ- ಸುಮಾರು ೨.೫ ಹೆಕ್ಟೇರ್ ಪ್ರದೇಶ.

III ಮಾದರಿ- ಶಿಲಾವೃತ್ತ- ಕಲ್ಲುಪ್ಪೆ(೧೨), ಕಲ್ಲು ಚಪ್ಪಡಿ ವೃತ್ತ(೨೬) ಗುಂಡುಗಲ್ಲು(೧೨) ಮತ್ತು ನಿಲಸುಗಲ್ಲು (೨)

IV ವಿವರಣೆ- ನೆಲೆಯನ್ನು 'ಕೋತಿಗಲ್ ದಿಬ್ಬ' ವೆಂದು ಸ್ಥಳೀಯವಾಗಿ ಕರೆಯುತ್ತಾರೆ. ಕಲ್ಗೋರಿಗಳನ್ನು 'ಪಾಂಡವರ ಗುಡಿ' ಎಂದು ಹೇಳುತ್ತಾರೆ. ಎರಡು ನಿಲಸುಗಲ್ಲುಗಳಿದ್ದು ಮೊದಲನೆಯ ನಿಲಸುಗಲ್ಲು ಮೇಲ್ತುದಿ ದಕ್ಷಿಣ ದಿಕ್ಕಿಗೆ ಇದೆ. ಪೂರ್ವ-ಪಶ್ಚಿಮವಾಗಿ ಮುಖಮಾಡಿದೆ. ನಿಲಸುಗಲ್ಲಿನ ಕೆಳಗೆ ಕಲ್ಲು ಹಲಗೆಯ ವೃತ್ತಗಳಿವೆ. ಶಿಲಾವೃತ್ತವು ೧೨೭೦ ಸೆಂ.ಮೀ ವ್ಯಾಸವಿದ್ದು ಎರಡು ವೃತ್ತಗಳ ನಡುವೆ ೧೧೦ ಸೆಂ.ಮೀ ಅಂತರವಿದೆ. ಹಲವು ಶಿಲಾ ಗೋರಿಗಳ ಮುಚ್ಚಳಕಲ್ಲುಗಳನ್ನು ಒಡೆಯಲಾಗಿದೆ. ಅಂತಹ ಒಂದು ಗೋರಿಯು ಸ್ವಸ್ತಿಕ ಮಾದರಿಯಲ್ಲಿದ್ದು ಉದ್ದ ೨೩೦ ಅಗಲ ೧೮೫ ಸೆಂ.ಮೀ ಆಗಿದೆ. ಶಿಲಾವೃತ್ತ ಗರಿಷ್ಠ ವ್ಯಾಸ ೧೨೭೦ ಕನಿಷ್ಠ ೪೨೦ ಸೆಂ.ಮೀ. ಮುಚ್ಚಳಕಲ್ಲು ಗರಿಷ್ಠ ಉದ್ದ ೪೭೦ ಅಗಲ ೪೭೦ ದಪ್ಪ ೪೦ ಸೆಂ.ಮೀ. ಕನಿಷ್ಠ ಉದ್ದ ೨೮೨ ಅಗಲ ೩೧೪ ದಪ್ಪ ೨೭ ಸೆಂ.ಮೀಗಳಾಗಿವೆ.

(೧) ಎತ್ತರ ೫೨೦ ಅಗಲ ೧೨೫ ದಪ್ಪ ೨೦ ಸೆಂ.ಮೀ

(೨) ಎತ್ತರ ೨೩೮ ಅಗಲ ೧೨೦ ದಪ್ಪ ೨೦ ಸೆಂ.ಮೀ

(೩) ಎತ್ತರ ೫೮ ಅಗಲ ೨೩ ದಪ್ಪ ೧೦ ಸೆಂ.ಮೀ

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೫.

I ನೆಲೆ- ಗೌಡನಕಟ್ಟೆ.

II ವಿಸ್ತೀರ್ಣ- ೦.೫ ಎಕರೆ ಪ್ರದೇಶ

III ಮಾದರಿ- ಶಿಲಾವೃತ್ತ(೨) ನಿಲಸುಗಲ್ಲು(೧).

IV ವಿವರಣೆ- ಗುಡ್ಡದ ಬುಡುದಲ್ಲಿ ಒಂದು ನಿಲಸುಗಲ್ಲು ಇದ್ದು ನೇರವಾಗಿ ನಿಂತಿದೆ. ಇದರಿಂದ ಸುಮಾರು ೧೦ ಮೀ ಅಂತರದಲ್ಲಿ ೨ ಶಿಲಾವೃತ್ತಗಳಿವೆ ಮಧ್ಯಭಾಗದಲ್ಲಿ ಮುಚ್ಚಳಕಲ್ಲು ಕಾಣುತ್ತದೆ. ನಿಲಸುಗಲ್ಲಿನ ಅಳತೆ ಪರಿಮಾಣ ಎತ್ತರ ೧೫೦ ಅಗಲ ೧೧೫ ದಪ್ಪ ೧೬ ಸೆಂ.ಮೀ. ಶಿಲಾವೃತ್ತದ ವ್ಯಾಸ ೮೪೦ ಮತ್ತು ೭೨೦ ಸೆಂ.ಮೀ. ಮುಚ್ಚಳಕಲ್ಲಿನ ಅಳತೆ ಪರಿಮಾಣದಂತೆ
(೧)ಉದ್ದ ೩೮೦ ಅಗಲ ೪೧೫ ಸೆಂ.ಮೀ
(೨) ಉದ್ದ ೪೮೦ ಅಗಲ ೩೩೦ ಸೆಂ.ಮೀ

V ದೊರೆತ ಅವಶೇಷ- ಯಾವುದೇ ಅವಶೇಷ ದೊರೆತಿಲ್ಲ

೬

I ನೆಲೆ- ಚಿನಗ

II ವಿಸ್ತೀರ್ಣ- ೧ ಎಕರೆ ಪ್ರದೇಶ.

III ಮಾದರಿ- ಕಲ್ಲುಪ್ಪೆ(೨) ಕಲ್ಮನೆ(೨) ನಿಲಸುಗಲ್ಲು(೨).

IV ವಿವರಣೆ- ಗ್ರಾಮದ ಪ್ರವೇಶದಲ್ಲಿ ಎರಡು ನಿಲಸುಗಲ್ಲುಗಳಿದ್ದು ಉತ್ತರ ದಕ್ಷಿಣವಾಗಿ ಮುಖಮಾಡಿವೆ. ರಸ್ತೆಯ ಎಡದಲ್ಲಿರುವ ನಿಲಸುಗಲ್ಲು ನೇರವಾಗಿದ್ದು ರಸ್ತೆಯ ಬಲಕ್ಕಿರುವ ನಿಲಸುಗಲ್ಲು ಉತ್ತರಕ್ಕೆ ಭಾಗಿದೆ. ಇವುಗಳನ್ನು ಊರುಬಾಗಿಲು ಎಂದು ಕರೆಯುತ್ತಾರೆ. ಇದರ ಸಮೀಪದಲ್ಲಿ ಒಂದು ಕಲ್ಮನೆ ಇದೆ. ಮತ್ತೊಂದು ಕಲ್ಮನೆ ಪಶ್ಚಿಮಕ್ಕೆ ಗುಡ್ಡದಸಮೀಪದಲ್ಲಿದೆ. ಇದರ ಹತ್ತಿರ ಕಲ್ಲುಪ್ಪೆಗಳಿವೆ. ಯಾವುದೇ ಶಿಲಾವೃತ್ತವಿಲ್ಲ. ನಿಲಸುಗಲ್ಲುಗಳ ಅಳತೆ ಪರಿಮಾಣ ಎಡಕ್ಕಿರುವುದು ಎತ್ತರ ೪೧೦ ಅಗಲ ೨೫೬ ದಪ್ಪ ೨೯ ಸೆಂ.ಮೀ. ಬಲಕ್ಕಿರುವುದು ಎತ್ತರ ೫೦೨ ಅಗಲ ೨೩೫ ದಪ್ಪ ೫೮ ಸೆಂ.ಮೀ.

V ದೊರೆತ ಅವಶೇಷ- ನಿಲಸುಗಲ್ಲಿನ ಸಮೀಪದಲ್ಲಿ ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೭

I ನೆಲೆ- ಚಿನಿವಾರ

II ವಿಸ್ತೀರ್ಣ- ೧ ಹೆಕ್ಟೇರ್ ಪ್ರದೇಶ.

III ಮಾದರಿ- ಶಿಲಾವೃತ್ತ(೨೦)

IV ವಿವರಣೆ- ಕಲ್ಗೋರಿಗಳು ಎತ್ತರದ ಪ್ರದೇಶದಲ್ಲಿದ್ದು ಹಲವಾರು ಗೋರಿಗಳನ್ನು ಹಾಳುಮಾಡಲಾಗಿದೆ. ಕೆಲವು ಗೋರಿಗಳ ಮುಚ್ಚಳಕಲ್ಲನ್ನು ತೆಗೆಯಲಾಗಿದ್ದು ಅದರಂತೆ ಅವುಗಳ ಆಕೃತಿ ಮಾದರಿಯನ್ನು ತಿಳಿಯಲಾಗಿದೆ. ಶಿಲಾವೃತ್ತಗಳ ಅಳತೆಯ ಪರಿಮಾಣದಂತೆ ವ್ಯಾಸ ಗರಿಷ್ಠ ೮೮೦ ಕನಿಷ್ಠ ೪೮೦ ಸೆಂ.ಮೀ ಆಗಿದೆ. ಸ್ವಸ್ತಿಕ ಮಾದರಿಯ ಶಿಲಾಗೋರಿಯಲ್ಲಿ ಕಂಡಿಯ ವ್ಯಾಸ ೫೫ ಸೆಂ.ಮೀ ಇದೆ. ಮತ್ತೊಂದು ಕಲ್ಗೋರಿಯ ಅಳತೆ ಪ್ರಮಾಣ ಉತ್ತರ-ದಕ್ಷಿಣ ೧೦೦ ಪೂರ್ವ-ಪಶ್ಚಿಮ ೧೫೦ ಸೆಂ.ಮೀ ಗಳಾಗಿವೆ.

V ದೊರೆತ ಅವಶೇಷ- ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೮

I ನೆಲೆ- ಜಕ್ಕನಹಳ್ಳಿ.

II ವಿಸ್ತೀರ್ಣ- ೧ ಹೆಕ್ಟೇರ್ ಪ್ರದೇಶ.

III ಮಾದರಿ- ಕಲ್ಲುಪ್ಪೆ(೨) ಶಿಲಾವೃತ್ತ(೧೨)

IV ವಿವರಣೆ- ನೆಲೆಯು ಬಯಲು ಪ್ರದೇಶದಲ್ಲಿದ್ದು ಕೃಷಿಭೂಮಿಯನ್ನಾಗಿ ಪರಿವರ್ತಿಸಲಾಗಿದೆ. ಆಯತಾಕಾರದ ಶಿಲಾಗೋರಿಗಳು ದೊರೆತ್ತಿದ್ದು, ಅಳತೆ ಪರಿಮಾಣ ಉದ್ದ ೪೨ ಅಗಲ ೩೦ ಸೆಂ.ಮೀ ಗಳಾಗಿವೆ. ಶಿಲಾವೃತ್ತದ ವ್ಯಾಸ ಗರಿಷ್ಠ ೯೧೨ ಸೆಂ.ಮೀ ಕನಿಷ್ಠ ೩೯೦ ಸೆಂ.ಮೀ ಗಳಾಗಿವೆ

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೯

I ನೆಲೆ- ಢಣಾಪುರ

II ವಿಸ್ತೀರ್ಣ- ೦.೫ ಹೆಕ್ಟೇರ್ ಪ್ರದೇಶ.

III ಮಾದರಿ- ಶಿಲಾವೃತ್ತ(೪)

IV ವಿವರಣೆ- ಕೃಷಿ ಭೂಮಿಯಾಗಿದ್ದು ಈಗಾಗಲೇ ಹಲವಾರು ಶಿಲಾಗೋರಿಗಳನ್ನು ತೆಗೆಯಲಾಗಿದ್ದು ನಾಲ್ಕು ಮಾತ್ರ ಸುಸ್ಥಿತಿಯಲ್ಲಿವೆ. ಮಧ್ಯ ಭಾಗದಲ್ಲಿ ಮುಚ್ಚಳಕಲ್ಲು ಇದ್ದು ಅದರ ಅಳತೆ ಪರಿಮಾಣ ಉದ್ದ ಗರಿಷ್ಠ ೫೨೦ ಅಗಲ ೪೦೦ ದಪ್ಪ ೪೨ ಸೆಂ.ಮೀ ಕನಿಷ್ಠ ಉದ್ದ ೩೮೦ ಅಗಲ ೩೦೦ ದಪ್ಪ ೨೮ ಸೆಂ.ಮೀ ಗಳಾಗಿವೆ.

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೧೦

I ನೆಲೆ- ತಣ್ಣೇನಹಳ್ಳಿ

II ವಿಸ್ತೀರ್ಣ- ೧ ಎಕರೆ ಪ್ರದೇಶ.

III ಮಾದರಿ- ಶಿಲಾವೃತ್ತ(೨)

IV ವಿವರಣೆ- ಕೃಷಿಭೂಮಿಯಾನ್ನಗಿ ಪರಿವರ್ತಿಸಲಾಗಿದ್ದು ೨ ಶಿಲಾವೃತ್ತಗಳನ್ನು ಸಂಪರ್ಣವಾಗಿ ಹಾಳುಮಾಡಲಾಗಿದೆ. ಯಾವುದೇ ವಿವರಣೆ ದೊರೆಯುವುದಿಲ್ಲ.

V ದೊರೆತ ಅವಶೇಷ- ಕೆಂಪು ವರ್ಣದ ಮಡಕೆ ಭಾಗಗಳು.

೧೧

I ನೆಲೆ- ಥರಟಿ.

II ವಿಸ್ತೀರ್ಣ- ೧ ಎಕರೆ ಪ್ರದೇಶ.

III ಮಾದರಿ- ಶಿಲಾವೃತ್ತ(೫)

IV ವಿವರಣೆ- ಶಿಲಾವೃತ್ತಗಳು ಸುಸ್ಥಿತಿಯಲ್ಲಿದ್ದು ಗುಂಡುಕಲ್ಲುಗಳಿಂದ ವೃತ್ತವನ್ನು ರೂಪಿಸಲಾಗಿದೆ. ಮಧ್ಯ ಭಾಗವು ಎತ್ತರವಾಗಿದ್ದು ಯಾವುದೇ ವಿವರಣೆ ತಿಳಿದು ಬರುವುದಿಲ್ಲ. ಶಿಲಾವೃತ್ತಗಳ ಪರಿಮಾಣದ ವಿವರಣೆಯಂತೆ ಗರಿಷ್ಠ ವ್ಯಾಸ ೮೭೦ ಸೆಂ.ಮೀ ಕನಿಷ್ಠ ವ್ಯಾಸ ೪೮೦ ಸೆಂ.ಮೀ. ಗಳಾಗಿವೆ.

V ದೊರೆತ ಅವಶೇಷ- ಯಾವುದೇ ಅವಶೇಷ ದೊರೆತಿಲ್ಲ.

೧೨

I ನೆಲೆ- ನಿಡುಗಲ್ಲು.

II ವಿಸ್ತೀರ್ಣ- ೧ ಹೆಕ್ಟೇರ್ ಪ್ರದೇಶ.

III ಮಾದರಿ- ಶಿಲಾವೃತ್ತ(೨)

IV ವಿವರಣೆ- ಶಿಲಾಗೋರಿಗಳಿದ್ದ ಪ್ರದೇಶವನ್ನು ಕೃಷಿಭೂಮಿಯನ್ನಾಗಿ ಪರಿವರ್ತಿಸಲಾಗಿದೆ. ಹೆಚ್ಚಿನ ವಿವರಣೆಗಳೇನು ತಿಳಿದು ಬರುವುದಿಲ್ಲ.

V ದೊರೆತ ಅವಶೇಷ- ಕೆಂಪು, ಕಪ್ಪು ವರ್ಣದ ಮಡಕೆ ಭಾಗಗಳು.

೧೩

I ನೆಲೆ- ಪಾಲ್ಲಹಳ್ಳಿ

II ವಿಸ್ತೀರ್ಣ- ೧ಎಕರೆ ಪ್ರದೇಶ.

III ಮಾದರಿ- ಕಲ್ಲುಪ್ಪೆ(೩)

IV ವಿವರಣೆ- ನೆಲೆಯು ಬಯಲು ಪ್ರದೇಶದಲ್ಲಿದ್ದು ಕೃಷಿ ಭೂಮಿಯಾಗಿ ಪರಿವರ್ತಿಸಲಾಗಿದೆ. ಕಲ್ಲುಪ್ಪೆಗಳನ್ನು ಗುಂಡುಗಲ್ಲಿನಲ್ಲಿ ರೂಪಿಸಲಾಗಿದ್ದು ಮಧ್ಯ ಭಾಗ ಉಬ್ಬಾಗಿದೆ. ವಿವರಣೆ ತಿಳಿದು ಬರುವುದಿಲ್ಲ. ವ್ಯಾಸ ೯೧೦ ಮತ್ತು ೭೫೦ ಸೆಂ.ಮೀ ಗಳಿವೆ.

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೧೪.

I ನೆಲೆ- ಬೂದಿಬೆಟ್ಟ.

II ವಿಸ್ತೀರ್ಣ- ೧ ಹೆಕ್ಟೇರ್ ಪ್ರದೇಶ.

III ಮಾದರಿ- ಕಲ್ಮನೆ(೧) ಶಿಲಾವೃತ್ತ(೩)

IV ವಿವರಣೆ- ನೆಲೆ ಬಯಲು ಪ್ರದೇಶದಲ್ಲಿದ್ದು ಅಲ್ಲಲ್ಲಿ ಶಿಲಾಗೋಳಗಳಿವೆ. ಒಂದು ಕಲ್ಮನೆ ಬಾಗಶಃ ಹಾಳಾಗಿದ್ದು ಎರಡು ಗೋಡೆಗಲ್ಲು ಹಾಗೂ ಅವುಗಳ ಮೇಲಿರುವ ಮುಚ್ಚಳಕಲ್ಲಿನ ಭಾಗ ಮಾತ್ರ ಉಳಿದಿದೆ. ಸ್ಥಳೀಯವಾಗಿ ಇದನ್ನು ಕಲ್ಮನೆ ಎಂದು ಕರೆಯುತ್ತಾರೆ. ಮೂರು ಶಿಲಾವೃತ್ತವಿದ್ದು ಅದರಲ್ಲಿ ಎರಡನ್ನು ಹಾಳುಮಾಡಲಾಗಿದೆ. ಕಲ್ಮನೆಯ ಅಳತೆ ಪರಿಮಾಣದಂತೆ
ಉತ್ತರ-ದಕ್ಷಿಣ ಎತ್ತರ ೨೩೩ ಅಗಲ ೨೯೬ ಸೆಂ.ಮೀ ಪೂರ್ವ-ಪಶ್ಚಿಮ ಅಗಲ ೨೩೩ ಸೆಂ.ಮೀ ಉಳಿದೆರಡು ಕಲ್ಲು ಹಾಳಾಗಿವೆ. ಶಿಲಾವೃತ್ತಗಳ ಅಳತೆ ಪರಿಮಾಣದಂತೆ ವ್ಯಾಸ ೭೫೦, ೭೪೦ ಮತ್ತು ೬೨೦ ಸೆಂ.ಮೀ

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೧೫.

I ನೆಲೆ- ಬೆಳಿಬಟ್ಟಲಹಳ್ಳಿ

II ವಿಸ್ತೀರ್ಣ- ಸು ೦.೫ ಹೆಕ್ಟೇರ್ ಪ್ರದೇಶ.

III ಮಾದರಿ- ಶಿಲಾವೃತ್ತ ಗುಂಡುಗಲ್ಲು(೫).

IV ವಿವರಣೆ- ನೆಲೆಯು ಎತ್ತರದ ಭಾಗದಲ್ಲಿದ್ದು, ಕೆಲವು ಗೋರಿಗಳನ್ನು ಹಾಳು ಮಾಡಿರುವ ಬಗ್ಗೆ ಬಿ.ಎಲ್.ರೈಸ್‌ರವರು ವರದಿ ಮಾಡಿರುವರು ಇತ್ತೀಚೆಗೆ ಕೂಡ ಒಂದು ಗೋರಿಯನ್ನು ಹಾಳುಮಾಡಲಾಗಿದ್ದು ಅದು ಚೌಕಾಕಾರದಲ್ಲಿದೆ. ಇಲ್ಲಿ ಮಡಿಕೆ ಭಾಗಗಳು ದೊರೆತಿದ್ದು ಒಂದು ಮಡಿಕೆ ಭಾಗವು ಕೆಂಪು ವರ್ಣದಲ್ಲಿದ್ದು ಗೆರೆ ಮತ್ತು ಚುಕ್ಕಿಗಳಿಂದ ರೂಪಿಸಲಾಗಿದೆ. ಶಿಲಾವೃತ್ತಗಳನ್ನು ಗುಂಡುಗಲ್ಲಿನಲ್ಲಿ ರೂಪಿಸಲಾಗಿದೆ. ಚೌಕಾಕಾರದ ಗೋರಿಯ ಅಳತೆ ಪರಿಮಾಣದಂತೆ ಉತ್ತರ-ದಕ್ಷಿಣ ೧೧೫ ಸೆಂ.ಮೀ ಪೂರ್ವ-ಪಶ್ಚಿಮ ೧೧೨ ಸೆಂ.ಮೀ ಗಳಾಗಿವೆ. ಗುಂಡುಗಲ್ಲಿನ ಶಿಲಾವೃತ್ತಗಳ
ವ್ಯಾಸ ೯೬೦, ೮೮೦, ೮೧೦ ಮತ್ತು ೭೧೦ ಸೆಂ.ಮೀ ಗಳಾಗಿವೆ.

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು ದೊರೆತಿದ್ದು ಒಂದು ಮಡಕೆ ಭಾಗದಲ್ಲಿ ಬಿಳಿ ವರ್ಣದ ಚುಕ್ಕಿ ಮತ್ತು ಗೆರೆಗಳಿವೆ.

೧೬

I ನೆಲೆ- ಮರಿದಾಸನಹಳ್ಳಿ.

II ವಿಸ್ತೀರ್ಣ- ೧ ಎಕರೆ ಪ್ರದೇಶ.

III ಮಾದರಿ- ಗುಂಡುಗಲ್ಲು(೪)

IV ವಿವರಣೆ- ನೆಲೆಯು ಗುಡ್ಡದ ಬುಡದಲ್ಲಿದ್ದು ಕೃಷಿ ಭೂಮಿಯಾಗಿ ಪರಿವರ್ತಿಸಲಾಗಿದೆ. ಮುಚ್ಚಳಕಲ್ಲುಗಳಲ್ಲಿ ಎಲ್ಲಾ ಗೋರಿಗಳನ್ನೂ ಹಾಳುಮಾಡಲಾಗಿದೆ. ಗೋರಿಗಳು ಆಯತಕಾರದಲ್ಲಿವೆ. ಅವುಗಳ ಅಳತೆ ಪರಿಮಾಣದಂತೆ
(೧) ಉತ್ತರ-ದಕ್ಷಿಣ ೨೩೦ ಮತ್ತು ೨೧೦ ಸೆಂ.ಮೀ ಪೂರ್ವ-ಪಶ್ಚಿಮ ೩೫ ಮತ್ತು ೩೦ ಸೆಂ.ಮೀ
(೨) ಉತ್ತರ-ದಕ್ಷಿಣ ೧೯೦ ಮತ್ತು ೧೮೦ ಸೆಂ.ಮೀ ಪೂರ್ವ-ಪಶ್ಚಿಮ ೪೦ ಮತ್ತು ೪೦ ಸೆಂ.ಮೀ
(೩) ಉತ್ತರ-ದಕ್ಷಿಣ ೧೯೦ ಮತ್ತು ೧೬೦ ಸೆಂ.ಮೀ ಪೂರ್ವ-ಪಶ್ಚಿಮ ೬೦ ಮತ್ತು ೫೦ ಸೆಂ.ಮೀ
(೪) ಉತ್ತರ-ದಕ್ಷಿಣ ೨೧೦ ಮತ್ತು ೨೦೦ ಸೆಂ.ಮೀ ಪೂರ್ವ-ಪಶ್ಚಿಮ ೮೦ ಮತ್ತು ೬೦ ಸೆಂ.ಮೀ

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೧೭.

I ನೆಲೆ- ಸೀಗೆಪಾಳ್ಯ.

II ವಿಸ್ತೀರ್ಣ- ೧ ಎಕರೆ ಪ್ರದೇಶ.

III ಮಾದರಿ- ಶಿಲಾವೃತ್ತ- ಗುಂಡುಗಲ್ಲು(೬) ಕಲ್ಲು ಚಪ್ಪಡಿ ವೃತ್ತ(೪)

IV ವಿವರಣೆ- ನೆಲೆಯು ಗುಡ್ಡದ ಬುಡದಲ್ಲಿದ್ದು ಹಲವಾರು ಗೋರಿಗಳನ್ನು ಹಾಳು ಮಾಡಲಾಗಿದೆ. ಕಲ್ಲು ಚಪ್ಪಡಿಗಳು ಅತಿ ಹೆಚ್ಚು ೧೨ ಇದ್ದು ಅತಿ ಕಡಿಮೆ ೪ ಮಾತ್ರ ಇವೆ. ಮಧ್ಯ ಭಾಗದಲ್ಲಿ ಗೋರಿ ಅವಶೇಷ ಕಂಡು ಬಂದಿವೆ. ಇವುಗಳ ಅಳತೆ ಪರಿಮಾಣದಂತೆ ಗರಿಷ್ಠ ವ್ಯಾಸ ೯೧೦ ಸೆಂ.ಮೀ ಕನಿಷ್ಠ ವ್ಯಾಸ ೬೮೦ ಸೆಂ.ಮೀ ಗಳಾಗಿವೆ.

V ದೊರೆತ ಅವಶೇಷ- ಕೆಂಪು, ಕಪ್ಪು, ಕಪ್ಪು-ಕೆಂಪು ವರ್ಣದ ಮಡಕೆ ಭಾಗಗಳು.

೧೮

I ನೆಲೆ- ಸೀಗೇಹಳ್ಳ.

II ವಿಸ್ತೀರ್ಣ- ೦.೫ ಎಕರೆ ಪ್ರದೇಶ.

III ಮಾದರಿ- ನಿಲಸುಗಲ್ಲು(೧)

IV ವಿವರಣೆ- ನೆಲೆ ಗುಡ್ಡದ ಬುಡದಲ್ಲಿದ್ದು ಒಂದೇ ಒಂದು ನಿಲಸುಗಲ್ಲು ಇದ್ದುದನ್ನು ಹೊಡೆದು ಹಾಳುಮಾಡಲಾಗಿದೆ. ಹಾಗಾಗಿ ಹೆಚ್ಚಿನ ವಿವರಣೆ ತಿಳಿದು ಬರುವುದಿಲ್ಲ. ಮತ್ತಾವುದೇ ಅವಶೇಷ ಕಂಡು ಬಂದಿಲ್ಲ.

V ದೊರೆತ ಅವಶೇಷ- ಯಾವುದೇ ಅವಶೇಷ ದೊರೆತಿಲ್ಲ.

೧೯

I ನೆಲೆ- ಹುಳಿಯೂರು.

II ವಿಸ್ತೀರ್ಣ- ೦.೫ ಎಕರೆ ಪ್ರದೇಶ.

III ಮಾದರಿ- ಶಿಲಾವೃತ್ತ ಗುಂಡುಗಲ್ಲು(೧)

IV ವಿವರಣೆ- ನೆಲೆಯು ಸಮಕಟ್ಟು ಪ್ರದೇಶದಲ್ಲಿದ್ದು ಒಂದೇ ಒಂದು ಶಿಲಾವೃತ್ತ ಕಂಡು ಬಂದಿದೆ. ಶಿಲಾವೃತ್ತವನ್ನು ೧೬ ಗುಂಡುಗಲ್ಲುಗಳಿಂದ ರೂಪಿಸಲಾಗಿದೆ. ಇದರ ಅಳತೆ ಪರಿಮಾಣದಂತೆ ವ್ಯಾಸ ೧೦ ಮೀ. ೧೦ ಸೆಂ.ಮೀ ಗಳಾಗಿವೆ.

V ದೊರೆತ ಅವಶೇಷ- ಯಾವುದೇ ಅವಶೇಷ ದೊರೆತಿಲ್ಲ.

೨೦.

I ನೆಲೆ- ಹೊನ್ನೇನಹಳ್ಳಿ.

II ವಿಸ್ತೀರ್ಣ- ಸು. ೧ ಎಕರೆ ಪ್ರದೇಶ.

III ಮಾದರಿ- ಶಿಲಾವೃತ್ತ ಕಲ್ಲು ಚಪ್ಪಡಿವೃತ್ತ(೯) ಕಲ್ಮನೆ ೧

IV ವಿವರಣೆ- ನೆಲೆಯ ಗುಡ್ಡದ ಬುಡದಲ್ಲಿದ್ದು ಕೃಷಿ ಭೂಮಿಯನ್ನಾಗಿ ಪರಿವರ್ತಿಸಿದೆ. ಹೆಚ್ಚಿನ ಎಲ್ಲಾ ಗೋರಿಗಳು ಸುಸ್ಥಿತಿಯಲ್ಲಿವೆ. ಕಲ್ಲು ಚಪ್ಪಡಿ ಶಿಲಾವೃತ್ತವನ್ನುಹೊಂದಿದ್ದು ೨ ರಲ್ಲಿ ಮುಚ್ಚಳಕಲ್ಲು ಕಂಡು ಬಂದಿವೆ. ಕಲ್ಮನೆಯ ಉತ್ತರದ ಗೋಡೆಗಲ್ಲನ್ನು ತೆಗೆಯಲಾಗಿದ್ದು ಉಳಿದ ಮೂರು ಕಲ್ಲಗಳು ಸುಸ್ಥಿತಿಯಲ್ಲಿವೆ. ಇದನ್ನು ಸ್ವಸ್ತಿಕ ಮಾದರಿಯಲ್ಲಿ ರೂಪಿಸಲಾಗಿದೆ. ಅಳತೆ ಪರಿಮಾಣದಂತೆ

ಉತ್ತರ-ದಕ್ಷಿಣದ ಕಲ್ಲಿನ ಉದ್ದ ೬೪೦ ಎತ್ತರ ೧೭೦ ದಪ್ಪ೨೪ ಸೆಂ.ಮೀ

ಉದ್ದ ೬೬೦ ಎತ್ತರ ೧೬೮ ದಪ್ಪ ೨೬ ಸೆಂ.ಮೀ

ಪೂರ್ವ-ಪಶ್ಚಿಮದ ಉದ್ದ ೬೮೦ ಎತ್ತರ ೧೫೫ ದಪ್ಪ ೧೮ ಸೆಂ.ಮೀ

ಶಿಲಾವೃತ್ತದಲ್ಲಿನ ಎರಡು ಮುಚ್ಚಳಕಲ್ಲುಗಳ ಅಳತೆ ಪರಿಮಾಣ ೧) ಉದ್ದ ೧೧೫ ಅಗಲ ೬೦ ಸೆಂ.ಮೀ.

೨)ಉದ್ದ ೧೧೦ ಅಗಲ ೮೦ ಸೆಂ.ಮೀ.

ಶಿಲಾವೃತ್ತಗಳ ಅಳತೆ ಪರಿಮಾಣದಂತೆ ಗರಿಷ್ಠ ವ್ಯಾಸ ೧೩೧೦ ಸೆಂ.ಮೀ

ಕನಿಷ್ಠ ವ್ಯಾಸ ೮೮೦ ಸೆಂ.ಮೀ

V ದೊರೆತ ಅವಶೇಷ- ಯಾವುದೇ ಅವಶೇಷ ದೊರೆತಿಲ್ಲ.

೨೧
I ನೆಲೆ- ಹೊಸಕೋಟೆ.
II ವಿಸ್ತೀರ್ಣ- ೧ ಎಕರೆ ಪ್ರದೇಶ.
III ಮಾದರಿ- ಕಲ್ಗುಪ್ಪೆ(೪)
IV ವಿವರಣೆ- ನೆಲೆಯಲ್ಲಿ ದೊರೆತಿರುವ ನಾಲ್ಕು ಕಲ್ಗಪ್ಪೆಗಳ ಸುಸ್ಥಿತಿಯಲ್ಲಿದ್ದು ಗುಂಡುಗಲ್ಲುಗಳ ವೃತ್ತವನ್ನು ಹೊಂದಿವೆ. ೧೨ ರಿಂದ ೬ ಗುಂಡುಗಲ್ಲುಗಳನ್ನು ಉಪಯೋಗಿಸಲಾಗಿದೆ. ಇವುಗಳ ಆಳತೆ ಪರಿಮಾಣದಂತೆ
ವ್ಯಾಸ ಗರಿಷ್ಠ ೯೮೦ ಕನಿಷ್ಠ ೬೭೫ ಸೆಂ.ಮೀ ಗಳಾಗಿವೆ.
V ದೊರೆತ ಅವಶೇಷ- ಯಾವುದೇ ಅವಶೇಷ ದೋರೆತಿಲ್ಲ.

**ಶಿಲಾಗೋರಿಗಳು**

ಪ್ರಸ್ತುತ ಅಧ್ಯಯನ ಪ್ರದೇಶದ ಶಿಲಾಗೋರಿ ನೆಲೆಗಳು ಒಟ್ಟು ೨೧ ಇದ್ದು, ಇವುಗಳು ಜಿಲ್ಲೆಯ ಪೂರ್ವ ಭಾಗಕ್ಕೆ ಉತ್ತರ ದಕ್ಷಿಣವಾಗಿ ಕೇಂದ್ರೀಕೃತವಾಗಿರುವುದನ್ನು ಕಾಣಬಹುದು. ಇಂತಹ ನಿರ್ಮಿತಿಗಳನ್ನು ರಚಿಸಲು ಬೇಕಾಗುವ ಕಲ್ಲು ಚಪ್ಪಡಿಗಳು ಉತ್ತರ ದಕ್ಷಿಣವಾಗಿ ಹಬ್ಬಿರುವ ಶಿಲಾಖಂಡದಲ್ಲಿ ದೊರಕಿದ್ದು, ಆ ಪ್ರದೇಶದಲ್ಲಿಯೇ ಬೃಹತ್ ಶಿಲಾಗೋ-ರಿಗಳಿರುವುದು ಕಂಡು ಬಂದಿದೆ. ಇಂತಹ ಗೋರಿಗಳ ಸುತ್ತಮುತ್ತಲ ಪ್ರದೇಶದಲ್ಲಿಯೇ ವಸತಿ ನೆಲೆಗಳು ಕಂಡು ಬಂದಿವೆ.

ಅಧ್ಯಯನ ಪ್ರದೇಶದ ವ್ಯಾಪ್ತಿಯಲ್ಲಿ ಒಟ್ಟು ೨೨೩ ವಿವಿಧ ಪ್ರಕಾರದ ಕಲ್ಗೋರಿಗಳು ದೊರೆತಿವೆ. ಇವುಗಳ ರಚನಾ ವಿಧಾನ, ತಳವಿನ್ಯಾಸ ಮತ್ತು ಇತರ ಅಂಶಗಳನ್ನು ಅನುಸರಿಸಿ ಇವುಗಳನ್ನು ಒಟ್ಟು ೪ ಗುಂಪುಗಳಾಗಿ ವಿಂಗಡಿಸಬ-ಹುದು. ದೊರಕಿರುವ ನೆಲೆಗಳು ಪ್ರತಿ ನೆಲೆಯ ಪರಿಸರದಲ್ಲಿರುವ ಪ್ರತಿ ಗುಂಪಿನ ಒಟ್ಟು ಕಲ್ಗೋರಿಗಳನ್ನು ಕೋಷ್ಟಕ ಸಂಖ್ಯೆ ೯.೨ ರಲ್ಲಿ ವೃತ್ತ ನಕ್ಷೆ ೯.ಆ ನಲ್ಲಿ ನೀಡಿದೆ.

ವೃತ್ತ ನಕ್ಷೆ ಸಂಖ್ಯೆ ೯.ಆ



ಕೋಷ್ಟಕ ಸಂಖ್ಯೆ ೯.೨

| ಕ್ರಮ ಸಂಖ್ಯೆ | ನೆಲೆ | ಕಲ್ಲುಗುಪ್ಪೆ Cairn | ಕಲ್ಲುವೃತ್ತ Cist | | ಕಲ್ಮನೆ Dolmen | ನಿಲಸುಗಲ್ಲು Menhire |
|---|---|---|---|---|---|---|
| | | | ಗುಂಡುಗಲ್ಲು | ಕಲ್ಲು ಚಪ್ಪಡಿ | | |
| ೧ | ಅಗ್ರಹಾರ | | | | | ೩ |
| ೨ | ಇರಕಸಂದ್ರಕಾಲೋನಿ | ೪೬ | ೧೬ | ೧೪ | | ೧ |
| ೩ | ಕತ್ತಿಕ್ಯಾತನಹಳ್ಳಿ | | ೪ | | | |
| ೪ | ಕತ್ತಿರಾಜನಹಳ್ಳಿ | ೧೨ | ೧೨ | ೨೬ | | ೨ |
| ೫ | ಗೌಡನಕಟ್ಟೆ | | ೨ | | | ೧ |
| ೬ | ಚಿನಗ | ೨ | | | ೨ | ೨ |
| ೭ | ಚಿನವಾರ | | ೨೦ | | | |
| ೮ | ಜಕ್ಕನಹಳ್ಳಿ | ೨ | ೨ | | | |
| ೯ | ಧನಾಪುರ | | ೪ | | | |
| ೧೦ | ತಣ್ಣೇನಹಳ್ಳಿ | | ೨ | | | |
| ೧೧ | ಥರಟಿ | | ೫ | | | |
| ೧೨ | ನಿಡುಗಲ್ಲು | | ೨ | | | |
| ೧೩ | ಪಾಲ್ನಹಳ್ಳಿ | ೨ | | | | |
| ೧೪ | ಬೂದಿಬೆಟ್ಟ | | ೩ | | ೧ | |
| ೧೫ | ಬೆಳ್ಳಿಬಟ್ಟಲಹಳ್ಳಿ | | ೫ | | | |
| ೧೬ | ಮರಿದಾಸನಹಳ್ಳಿ | | ೪ | | | |
| ೧೭ | ಸೀಗೆಹಾಳ್ಯ | | ೬ | ೪ | | |
| ೧೮ | ಸೀಗೆಹಳ್ಳಿ | | | | | ೧ |
| ೧೯ | ಹುಲಿಯೂರು | ೧ | | | | |
| ೨೦ | ಹೊನ್ನೇನಹಳ್ಳಿ | | ೯ | | ೧ | |
| ೨೧ | ಹೊಸಕೋಟೆ | ೪ | | | | |
| | ಒಟ್ಟು | ೬೯ | ೬೬ | ೪೪ | ೪ | ೧೦ |

ಮೇಲಿನ ಕೋಷ್ಟಕದಲ್ಲಿ ಕಂಡು ಬರುವಂತೆ ಈ ಪ್ರದೇಶದಲ್ಲಿ ಶಿಲಾ ವೃತ್ತಗಳು ೧೪೦ (ಶೇ.೬೨.೭೮) ಇದ್ದು ಅತಿ ಹೆಚ್ಚು ಸಂಖ್ಯೆಯಲ್ಲಿವೆ. ಅದೇ ರೀತಿ ಕಲ್ಲುಗುಪ್ಪೆಗಳು ಎರಡನೆಯ ಸ್ಥಾನದಲ್ಲಿದ್ದು ಒಟ್ಟು ೬೯ (ಶೇ.೩೦.೯೪) ಇವೆ. ನಿಲ-ಸುಗಲ್ಲುಗಳು ೧೦ (ಶೇ.೪.೪೮) ದೊರಕಿದ್ದು, ಕಲ್ಮನೆ ಮಾದರಿಗಳು ಕೇವಲ ೪ ( ಶೇ.೧.೭೯) ಇವೆ.

## ಕಲ್ಲು ವೃತ್ತ

ದಕ್ಷಿಣ ಭಾರತದ ಬೃಹತ್ ಶಿಲಾ ಸಂಸ್ಕೃತಿಯ ಮಾದರಿಗಳಲ್ಲಿ ಶಿಲಾ ವೃತ್ತ ಮಾದರಿಯು ಅತಿ ಹೆಚ್ಚು ಇರುವುದು ಸರ್ವೇಸಾಮಾನ್ಯ. ಅದರಂತೆಯೇ ಕರ್ನಾಟಕದ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿಯೂ ಬೃಹತ್ ಶಿಲಾ ಸಂಸ್ಕೃ-ತಿಯ ಅವಶೇಷಗಳು ಹೆಚ್ಚಾಗಿ ಕಂಡು ಬಂದಿವೆ. ಇಂತಹ ಕಲ್ಲು ವೃತ್ತಗಳು ಅವುಗಳ ಉಪಗುಂಪುಗಳೊಂದಿಗೆ ಅತಿ ಹೆಚ್ಚು ಸಂಖ್ಯೆಯಲ್ಲಿ ದೊರೆಯುತ್ತವೆ. ಅತ್ಯಂತ ಪ್ರಮುಖ ನೆಲೆಗಳೆನಿಸಿರುವ ಕರ್ನಾಟಕದ ಬ್ರಹ್ಮಗಿರಿ (ವೀಲರ್ :೧೯೪೮;೧೮೦-೩೧೦) ಮಸ್ಕಿ(ಥಾಪರ್:೧೯೫೭;೪-೧೪೦) ರಾಜನಕೊಲ್ಲೂರು(ಸುಂದರ:೧೯೭೪) ಮಹಾರಾಷ್ಟ್ರದ ನಾಯ್ಕುಂದ (ಇಂ.ಆ.ರಿ:೧೯೭೭-೭೮:೩೯) ಮತ್ತು ತೇಕಲ್‌ಘಾಟ್(ದೇವ್.ಎಸ್.ಬಿ:೧೯೭೦) ಆಂಧ್ರ ಪ್ರದೇಶದ ನಾಗಾ

ರ್ಜುನಕೊಂಡ(ಸುಬ್ರಹ್ಮಣ್ಯ.ಆರ್:೧೯೭೫;೧೬೫-೨೧೧) ತಮಿಳು ನಾಡಿನ ಸತ್ಯ ಮಂಗಲಂ ಮೋಟೂರು (ನರಸಿಂಹಯ್ಯ :೧೯೮೦;೧೨೭) ಮುಂತಾದ ಸ್ಥಳಗಳಲ್ಲಿ ವಿಸ್ತ್ರತ ಉತ್ಖನನಗಳು ನೆಡೆದಿದ್ದು ಹೆಚ್ಚಿನ ಮಾಹಿತಿ ದೊರೆತಿದೆ. ಈ ಉತ್ಖನನಗಳಿಂದ ಶಿಲಾವೃತ್ತಗಳು ಪ್ರಾಥಮಿಕ ಪ್ರಕ್ರೀಯೆಯ ಅಂಗವಾಗಿ ನಿರ್ಮಿತವಾದ ಶಿಲಾಗೋರಿಗಳಾಗಿವೆ ಎಂದು ಅವುಗಳ ಜೊತೆ ದೊರಕುವ ದಫನ ಸಾಮಗ್ರಿ ವಸ್ತುಗಳಿಂದ ಆ ಸಂಸ್ಕೃತಿಯ ಹೆಚ್ಚಿನ ಮಾಹಿತಿಗಳು ಬೆಳಕಿಗೆ ಬಂದಿವೆ.

ಕಲ್ಲು ವೃತ್ತಗಳನ್ನು ರೂಪಿಸಿರುವ ವಿಧಾನ ಬಳಸಿರುವ ಕಲ್ಲಿನ ಸ್ವರೂಪ ಇವುಗಳನ್ನನುಸರಿಸಿ ಎರಡು ಗುಂಪುಗಳಾಗಿ ವಿಂಗಡಿಸಿಬಹುದ. ಅವುಗಳೆಂದರೆ (೧) ಗುಡ್ಡಗಲ್ಲು ವೃತ್ತ ಮತ್ತು (೨) ಚಪ್ಪಡಿಕಲ್ಲು ವೃತ್ತಗಳು.

೧. **ಕಲ್ಲುಗುಪ್ಪೆ**: ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಒಟ್ಟು ೬೯ ಕಲ್ಲುಗುಪ್ಪೆ ಮಾದರಿಯ ಗೋರಿಗಳು ದೊರೆತಿವೆ. ಇವು ೭ ನೆಲೆಗಳ್ಳಲ್ಲಿವೆ. ಇಂತಹ ಗುಪ್ಪೆಗಳು ಭೂ ಮಟ್ಟದಿಂದ ೧೦-೧೫ ಸೆಂ.ಮೀ ಎತ್ತರವಾಗಿ ಕಲ್ಲು ಚಕ್ಕೆಗಳ ರಾಶಿಯಿಂದ ಒಳಗೊಂಡಿದೆ.ಪ್ರಾಕೃತಿಕವಾಗಿ ಕಲ್ಲಿನ ರಾಶಿ ಕರಗಿದಾಗ ಕಲ್ಲುಗುಪ್ಪೆಗಳ ಮುಚ್ಚಳಗಳು ಕಂಡು ಬರುತ್ತವೆ. ಹೀಗೆ ಕಂಡು ಬರುವ ಮುಚ್ಚಳ ಕಲ್ಲುಗಳ ಅಳತೆ ಪ್ರಮಾಣದಂತೆ ಉದ್ದ ೨೮೨ ರಿಂದ ೭೮೯ ಸೆಂ.ಮೀ ಹಾಗೂ ಅಗಲ ೧೮೦ ರಿಂದ ೪೭೦ ಸೆಂ.ಮೀ ವ್ಯಾಪ್ತಿಯಲ್ಲಿವೆ. ಇರಕಸಂದ್ರಕಾಲೋನಿಯ ಒಂದು ಮುಚ್ಚಳಕಲ್ಲು ವೃತ್ತಾಕಾರವಾಗಿದ್ದು ಅದರ ವ್ಯಾಸ ೧೦ ಮೀಟರ್ ಗಳಾಗಿವೆ. ದಪ್ಪ ೪೮ ಸೆಂ.ಮೀ ಇದೆ. ಸೀಗೆಪಾಳ್ಯದಲ್ಲಿ ದೊರೆತ ಕಲ್‌ಗುಪ್ಪೆಯ ಅವಶೇಷವನ್ನು ಛಾಯ ಚಿತ್ರ ಸಂಖ್ಯೆ ೯.ಎ ನಲ್ಲಿ ಕೊಡಲಾಗಿದೆ



ಸೀಗೆಪಾಳ್ಯ (ಛಾಯ ಚಿತ್ರ ಸಂಖ್ಯೆ ೯.ಎ)

**ಗುಂಡುಗಲ್ಲು ವೃತ್ತಗಳು**: ಪ್ರಸ್ತುತ ಅಧ್ಯಯನ ಪ್ರದೇಶದ ೧೫ ನೆಲೆಗಳಲ್ಲಿ ಇಂತಹ ಗುಂಡುಗಲ್ಲು ವೃತ್ತಗಳು ದೊರೆತಿದ್ದು ಒಟ್ಟು ೮೯ ಇವೆ. ಇಂತಹ ವೃತ್ತಗಳ ವ್ಯಾಸ ಕನಿಷ್ಠ ೪೫೦ ಗರಿಷ್ಠ ೧೨೫೦ ಸೆಂ.ಮೀ ಗಳಾಗಿವೆ. ಈ ಕಲ್ಲು ವೃತ್ತಗಳುನ್ನು ನಿರ್ಮಿಸಲು ಅನಿರ್ದಿಷ್ಟ ಆಕಾರದ ಖಣಶಿಲೆಯ ಗುಂಡುಗಳನ್ನು ಬಳಸಲಾಗಿದೆ. ವೃತ್ತವನ್ನು ರೂಪಿಸಲು ೬ ರಿಂದ ೧೮ ಗುಂಡುಗಲ್ಲುಗಳನ್ನು ಉಪಯೋಗಿಸಿರುವುದನ್ನು ಕಾಣಬಹುದು. ಇಂತಹ ಶಿಲಾವೃತ್ತಗಳ ಮಧ್ಯದಲ್ಲಿ ಮುಚ್ಚಳ ಕಲ್ಲುಗಳ ಕಂಡು ಬಂದಿದ್ದು ಅವುಗಳ ಉದ್ದ ಕನಿಷ್ಠ ೨೧೦ ರಿಂದ ಗರಿಷ್ಠ ೬೮೦ ಸೆಂ.ಮೀ ಹಾಗೂ ಅಗಲ ಕನಿಷ್ಠ ೩೨೦ ರಿಂದ ಗರಿಷ್ಠ ೮೮೦ ಸೆಂ.ಮೀ ಗಳಾಗಿವೆ. ಕಲ್ಲುವೃತ್ತಗಳಲ್ಲಿ ಕೆಲವನ್ನು ಹಾಳು ಮಾಡಲಾಗಿದೆ. ಮುಚ್ಚಳ ಕಲ್ಲನ್ನು ತೆಗೆದಿರುವುದರಿಂದ ಶವ ಸಂಪುಟದ ಭಾಗಗಳು ಕಂಡು ಬಂದಿದ್ದು, ಇವುಗಳು ಚೌಕಾಕಾರ, ಆಯತಾಕಾರ ಇಲ್ಲವೆ ಸ್ವಸ್ತಿಕ ಮಾದರಿಯಲ್ಲಿವೆ. ಕೆಲವು ಗೋರಿಗಳಲ್ಲಿ ಕೆಳಹಾಸುಗಲ್ಲುಗಳೂ ಕಂಡು ಬಂದಿವೆ. ದಫನ ಸಾಮಗ್ರಿಗಳನ್ನು ಹಾಳುಮಾಡಲಾಗಿದ್ದು ವೃತ್ತದ ಸುತ್ತೆಲ್ಲ ಅವಶೇಷ ಬಿದ್ದಿದೆ. ಮೃತ್ ಪಾತ್ರೆಯ ಅವಶೇಷವಾದ ಕಪ್ಪು, ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆಯ ಭಾಗಗಳು ಕಂಡು ಬಂದಿವೆ. ಯಾವುದೇ ಗೋಡೆಗಲ್ಲಿನಲ್ಲಿಯೂ ತೂತುಗಳು ಕಂಡು ಬಂದಿಲ್ಲ.

**ಕಲ್ಲು ಚಪ್ಪಡಿ**: ಪ್ರಸ್ತುತ ಅಧ್ಯಯನ ಪ್ರದೇಶದ ಮೂರು ನೆಲೆಗಳಿಂದ ಒಟ್ಟು ೪೨ ಇಂತಹ ಕಲ್ಲು ವೃತ್ತಗಳು ದೊರೆತಿವೆ. ಇವುಗಳಲ್ಲಿ ಕತ್ತಿರಾಜನಹಳ್ಳಿಯಲ್ಲಿ(೨೬) ಸೀಗೆಪಾಳ್ಯದಲ್ಲಿ(೪)ಹಾಗು ಇರಕಸಂದ್ರಕಾಲೋನಿಯಲ್ಲಿ(೧೪)ಇವೆ. ಇಂತಹ ವೃತ್ತಗಳನ್ನು ರೂಪಿಸಲು ೬ ರಿಂದ ೧೬ ಕಲ್ಲು ಚಪ್ಪಡಿಗಳನ್ನು ಬಳಸಲಾಗಿದೆ. ಕಲ್ಲು ವೃತ್ತಗಳ ವ್ಯಾಸ ಕನಿಷ್ಠ ೪೨೫ ಸೆಂ.ಮೀ ಗರಿಷ್ಠ ೧೪೮೦ ಸೆಂ.ಮೀ ಗಳಲ್ಲಿದ್ದು, ಕತ್ತಿರಾಜನಹಳ್ಳಿ ಮತ್ತು ಇರಕಸಂದ್ರಕಾಲೋನಿ ನೆಲೆಗಳಲ್ಲಿ ತಲಾ ಒಂದೊಂದು ವೃತ್ತಗ-ಳಲ್ಲಿ ಎರಡು ವೃತ್ತಗಳನ್ನು ರೂಪಿಸಲಾಗಿದ್ದು ಈ ವೃತ್ತಗಳ ನಡುವಿನ ಅಂತರ ೧೧೦ ಸೆಂ.ಮೀ ಗಳಾಗಿವೆ. ಇವುಗಳಲ್ಲಿ ಹಲವು ಸುಸ್ಥಿತಿಯಲ್ಲಿದ್ದು ಮುಚ್ಚಳ ಕಲ್ಲುಗಳನ್ನು ಹೊಂದಿವೆ. ಇವುಗಳ ಉದ್ದ ಕನಿಷ್ಠ ೨೪೦ ಗರಿಷ್ಠ ೧೧೯೦ ಸೆಂ.ಮೀ ಗಳಾ-ಗಿದ್ದು ಅಗಲ ಕನಿಷ್ಠ ೩೮೦ ಗರಿಷ್ಠ ೯೮೦ ಸೆಂ.ಮೀ ಗಳಾಗಿವೆ. ಮತ್ತೆ ಕೆಲವು ಹಾಳಾಗಿದ್ದು ಅವುಗಳು ಹೆಚ್ಚು ಕಡಿಮೆ ಆಯತ ಇಲ್ಲವೆ ಚೌಕಾಕಾರವಾಗಿವೆ. ಇವುಗಳಲ್ಲಿ ದಫನ ಸಾಮಗ್ರಿ ಅವಶೇಷಗಳು ದೊರೆಕಿದ್ದು ಕಪ್ಪು, ಕೆಂಪು-ಕಪ್ಪು ದ್ವಿವರ್ಣದ ಮೃತ್‌ಪಾತ್ರೆ ಭಾಗಗಳಾಗಿವೆ.

ಪ್ರಸ್ತುತ ಇರಕಸಂದ್ರಕಾಲೋನಿ ಮತ್ತು ಢಣಾಪುರಗಳಲ್ಲಿ ದೊರೆತ ಶಿಲಾವೃತ್ತಗಳ ಚಿತ್ರವನ್ನು ಛಾಯ ಚಿತ್ರ ಸಂಖ್ಯೆ ೯.ಬಿ ಮತ್ತು ೯.ಸಿ ನಲ್ಲಿ ಕೊಡಲಾಗಿದೆ.



ಇರಕಸಂದ್ರಕಾಲೋನಿ(ಛಾಯ ಚಿತ್ರ ಸಂಖ್ಯೆ ೯.ಬಿ)



ಢಣಾಪುರ(ಛಾಯ ಚಿತ್ರ ಸಂಖ್ಯೆ ೯.ಸಿ)

**ಕಲ್ಮನೆ**

ಕರ್ನಾಟಕದ ಉತ್ತರ ಭಾಗಗಳಲ್ಲಿ ಹೆಚ್ಚಾಗಿ ಕಂಡು ಬರುವ ಬೃಹತ್ ಶಿಲಾಕಲ್ಗೋರಿ ಮಾದರಿಗಳಲ್ಲಿ ಕಲ್ಮನೆ-ಗಳು ಒಂದು ಪ್ರಮುಖ. ಉತ್ತರ ಕರ್ನಾಟಕದ ಹೂನಗುಂದ, ಕೊಣ್ಣೂರು, ಕಾಲದಗಿ, ಹಾಳಿಂಗಳಿ, ಐಹೊಳೆ, ಕೊಪ್ಪಳ, ಹಿರೇಬೆನಕಲ್(ಸುಂದರ;೧೯೭೫) ಮತ್ತು ದಕ್ಷಿಣ ಕರ್ನಾಟಕದ ಬ್ರಹ್ಮಗಿರಿ (ವೀಲರ್:೧೯೪೮;೮೧೦-೩೧೦)ಹಾಗೂ ಕೋಲಾರ ಜಿಲ್ಲೆಯ ಕೆಲವು ಸ್ಥಳಗಳುಲ್ಲಿ (ಗುರುರಾಜರಾವ್:೧೯೫೭-೬೦) ಮತ್ತು ನೆರೆಯ ಅಂಧ್ರ ಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ಈ ಮಾದರಿಯ ಕಲ್ಗೋರಿಗಳು ಹೆಚ್ಚಾಗಿ ಕಂಡು ಬಂದಿವೆ. ಅವುಗಳಲ್ಲಿ ಕೆಲವೊಂದು ಸಮಾಧಿ ನಿವೇಶನಗಳಲ್ಲಿ ಉತ್ಖನನಗಳೂ ನೆಡೆದಿವೆ. ಈ ಉತ್ಖನನಗಳ ಪರಿಣಾಮವಾಗಿ ಬೇರೆ ಬೇರೆ ರೀತಿಯ ತಳ ವಿನ್ಯಾಸ, ರಚನೆಯಲ್ಲಿನ ವೈಶಿಷ್ಟ್ಯ-ಗಳು ಮತ್ತು ಸಮಾಧಿ ಪ್ರಕ್ರೀಯೆಯ ಅಂಗವಾಗಿ ಗೋರಿಗಳಲ್ಲಿ ಇಡಲಾಗಿದ್ದ ದಫನ ಸಾಮಗ್ರಿ ಮುಂತಾದ ಅಂಶಗಳ ಬಗೆಗೆ ಹೆಚ್ಚಿನ ಮಾಹಿತಿ ದೊರೆತಿದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಲ್ಮನೆ ಮಾದರಿಯ ಒಟ್ಟು ೧೩ ಸಮಾಧಿಗಳು ದೊರೆತಿವೆ. ಕಲ್ಮನೆಗಳ ಜೊತೆಯಲ್ಲಿ ಕಲ್ಲುಪ್ಪೆ ಶವಕುಳಿ ಹಾಗು ನಿಲಸುಗಲ್ಲುದಲೂ ಇವೆ. ಕತ್ತಿರಾಜನಹಳ್ಳಿ ಮತ್ತು ಇರಕಸಂದ್ರಕಾಲೋನಿಗಳಲ್ಲಿ ಈ ಮೂರೂ ಮಾದರಿಗಳು ಕಂಡು ಬಂದಿವೆ. ಉಳಿದ ಸ್ಥಳಗಳಲ್ಲಿ ಕಲ್ಲುಪ್ಪೆ ಮತ್ತು ಶವಕುಳಿ ಮಾತ್ರ ದೊರೆತಿವೆ. ಈ ೧೩ ಕಲ್ಮನೆ ಮಾದರಿಗಳಲ್ಲಿ ೪ ಭೂಮಿಯ ಮೆಲ್ಭಾಗದಲ್ಲಿ ಕಂಡು ಬಂದರೆ ಉಳಿದವುಗಳು ಭೂಮಿಯ ಒಳ ಭಾಗದಲ್ಲಿವೆ.

ಭೌಗೋಳಿಕವಾಗಿ ಸಾಧಾರಣವಾಗಿ ಕಲ್ಮನೆಗಳು ಕಂಡು ಬರುವುಮ ಸುಲಭವಾಗಿ ಉದ್ದೇಶಿತ ಗಾತ್ರ ಹಾಗು ದಪ್ಪದ ಚಪ್ಪಡಿಗಳನ್ನೆಬ್ಬಿಸಬಹುದಾದ ಶಿಲಾಮಾದರಿಗಳು. ಸುಲಭವಾಗಿ ದೊರಕುವಂತಹ ಸ್ಥಳಗಳಲ್ಲಿಯೇ ಇರುತ್ತವೆ. ತುಮ-ಕೂರು ಜಿಲ್ಲೆಯ ಮಧುಗಿರಿ, ಪಾವಗಡ ಮತ್ತು ಕೊರಟಗೆರೆ ತಾಲ್ಲೂಕುಗಳಲ್ಲಿ ನೆರೆಯ ಆಂಧ್ರ ಪ್ರಧೇಶದ ಆನಂತಪುರ ಮತ್ತು

ಚಿತ್ರದುರ್ಗ ಮತ್ತು ಕೋಲಾರ ಜಿಲ್ಲೆಗಳಲ್ಲಿ ಇರುವಂತಹ ಕೃತಿಕ ಪ್ರಕೋಪಗಳಿಗೆ ಈಡಾಗಿ ಒಡೆದು ನುಣುಪಾದ ಕಣಶಿಲೆಯ ಬೃಹತ್ ಗಾತ್ರದ ಬಂಡೆಗಳಿಂದ ಕೂಡಿರುವ ಬೆಟ್ಟದ ಸಾಲುಗಳಾಗಿವೆ. ಬಹುಶಃ ಈ ಕಾರಣದಿಂದಲೇ ಮೇಲೆ ಹೇಳಿದ ಪ್ರದೇಶಗಳಲ್ಲಿ ಕಲ್ಮನೆ ಮಾದರಿಯ ಸಮಾಧಿಗಳು ಹೆಚ್ಚಾಗಿ ಕಂಡು ಬರುತ್ತವೆ.

೧. ನೆಲೆದ ಮೇಲಿನ ಕಲ್ಮನೆಗಳು: ಇಂತಹ ಕಲ್ಮನೆಗಳು ಒಟ್ಟು ನಾಲ್ಕು ದೊರೆತಿದ್ದು ಚಿನಗದಲ್ಲಿ ಎರಡು ಹಾಗೂ ಬೂದಿಬೆಟ್ಟ ಮತ್ತು ಹೊನ್ನೇನಹಳ್ಳಿಗಳಲ್ಲಿ ತಲಾ ಒಂದೊಂದು ಇವೆ. ಚನಗ ನೆಲೆಯ ಒಂದು ಮತ್ತು ಹೊನ್ನೇನಹಳ್ಳಿಯ ಕಲ್ಮನೆಗಳು ಗುಡ್ಡದ ಬುಡದಲ್ಲಿಯೂ ಹಾಗು ಬೂದಿಬೆಟ್ಟ ಮತ್ತು ಚಿನಗದ ಇನ್ನೊಂದು ಕಲ್ಮನೆಯು ಗುಡ್ಡದ ಬುಡದಿಂದ ಸುಮಾರು ೧ಕಿ.ಮೀ ಅಂತರದಲ್ಲಿವೆ. ಗುಡ್ಡದ ಬುಡದಲ್ಲಿರುವ ಭೂಮಿಯು ಫಲವತ್ತಾಗಿದ್ದು ನಿರಂತರ ವ್ಯವಸಾಯಕ್ಕೆ ಒಳಗಾಗಿರುವುದ-ರಿಂದ ಈ ಪ್ರದೇಶದಲ್ಲಿ ಇದ್ದಿರಬಹುದಾದ ಇನ್ನೂ ಅನೇಕ ಕಲ್ಮನೆಗಳು ನಾಶವಾಗಿರಬಹುದು.

ಬೂದಿಬೆಟ್ಟದ ಕಲ್ಮನೆ ಇರುವ ನೆಲೆಯಿಂದ ಪಶ್ಚಿಮಕ್ಕೆ ೩ ಕಿ.ಮೀ ಅಂತರದಲ್ಲಿ ರಾಚಮಾರನಹಳ್ಳಿ ವಸತಿ ನೆಲೆ ಇದೆ. ಚಿನಗೆ ಗೋರಿ ನೆಲೆಯಿಂದ ೧.೫ ಕಿ.ಮೀ ಪಶ್ಚಿಮಕ್ಕೆ ಹಿರೇಗುಂಡಗಲ್ ವಸತಿ ನೆಲೆ ಇದೆ. ಹೊನ್ನೇನಹಳ್ಳಿಯ ಗೋರಿ ನೆಲೆಗಳ ವಾಯುವ್ಯಕ್ಕೆ ೧೨ ಕಿ.ಮೀ ಅಂತರದಲ್ಲಿ ಹಿರೇಗುಂಡಗಲ್ ನೆಲೆ ಇದೆ.

ಚಿನಗದ ಒಂದು ಕಲ್ಮನೆ(ಗುಡ್ಡದಿಂದ ೧ ಕಿ.ಮೀ ಅಂತರದಲ್ಲಿರುವುದು)ಯ ನಾಲ್ಕೂಗೋಡೆಕಲ್ಲುಗಳನ್ನು ಹೊಂದಿದ್ದು ಸಾಕಷ್ಟು ಸುಸ್ಥಿತಿಯಲ್ಲಿದ್ದರೆ ಚಿನಗದ ಗುಡ್ಡದ ಬುಡದಲ್ಲಿರುವ ಕಲ್ಮನೆ ಮತ್ತು ಹೊನ್ನೇನಹಳ್ಳಿಯ ಕಲ್ಮನೆಗಳಲ್ಲಿ ಮೂರುಗೋಡೆಗಲ್ಲುಗಳು ಮಾತ್ರ ಉಳಿದಿದ್ದು ಕ್ರಮವಾಗಿ ಪಶ್ಚಿಮ ಮತ್ತು ಉತ್ತರದ ಗೋಡೆಕಲ್ಲು ಹಾಳಾಗಿದೆ. ಬೂದಿಬೆಟ್ಟದ ಕಲ್ಮನೆಯ ಉತ್ತರ ಮತ್ತು ಪೂರ್ವದ ಗೋಡೆಕಲ್ಲುಗಳು ಉಳಿದಿದ್ದು ದಕ್ಷಿಣ ಮತ್ತು ಪೂರ್ವ ಗೋಡೆಕಲ್ಲುಗಳು ಹಾಳಾಗಿವೆ. ಎಲ್ಲಾ ಕಲ್ಮನೆಗಳ ನೆಲಹಾಸುಗಲ್ಲು ಮತ್ತು ಮುಚ್ಚಳ ಕಲ್ಲುಗಳಿವೆ.

ತಳ ವಿನ್ಯಾಸದ ದೃಷ್ಟಿಯಿಂದ ಬೂದಿಬೆಟ್ಟ ಮತ್ತು ಹೊನ್ನೇನಹಳ್ಳಿಯ ಕಲ್ಮನೆಗಳು ಸ್ವಸ್ತಿಕಾಕಾರದಲ್ಲಿವೆ. ಇದ-ರಲ್ಲಿಯೂ ಬೂದಿಬೆಟ್ಟದ ಕಲ್ಮನೆ ಚೌಕಾಕಾರದ ಸ್ವಸ್ತಿಕದಲ್ಲಿದ್ದರೆ ಹೊನ್ನೇನಹಳ್ಳಿಯ ಮಾದರಿಯು ಆಯತಾಕಾರದಲ್ಲಿದೆ. ಅದರಂತೆಯೇ ಸಾಧಾರಣ ರೀತಿಯ ಅಂದರೆ ಸ್ವಸ್ತಿಕಾಕೃತಿ ಇಲ್ಲದ ಎರಡೂ ಮಾದರಿಗಳೂ ಚಿನಿಗದಲ್ಲಿದ್ದು ಗುಡ್ಡದ ಬುಡದ-ಲ್ಲಿರುವುದು ಚೌಕಾಕಾರವಾಗಿಯೂ ಗುಡ್ಡದಿಂದ ದೂರ ವಿರುವುದು ಆಯತಾಕಾರವಾಗಿಯೂ ಇದೆ. ಈ ನಾಲ್ಕೂ ಕಲ್ಮನೆಗ-ಳಲ್ಲಿ ನೆಲ ಹಾಸುಗಲ್ಲುಗಳಿದ್ದು ಚಿನಗದ ಗುಡ್ಡದ ಬುಡದ ಕಲ್ಮನೆಯ ಹಾಸುಗಲ್ಲಿಗೆ ಎರಡು ಚಪ್ಪಡಿ ಬಳಸಿದ್ದರೆ ಉಳಿದ ಕಲ್ಮ-

ನೆಗಳಿಗೆ ಒಂದೆದೇ ಕಲ್ಲು ಚಪ್ಪಡಿಯನ್ನು ಬಳಸಿ ರೂಪಿಸಲಾಗಿದೆ. ಗೋಡೆಗೆ ಉಪಯೋಗಿಸಿರವ ಕಲ್ಲುಗಳು ಸರಾಸರಿ ೧೦ ರಂದ೨೫ ಸೆಂ.ಮೀ ದಪ್ಪವಿದೆ. ಈ ಮುಚ್ಚಳ ಕಲ್ಲುಗಳ ದಪ್ಪ ೧೨ ರಿಂದ ೩೮ ಸೆಂ.ಮೀ ಇದ್ದು ಸಾಧಾರಣವಾಗಿ ಹೆಚ್ಚುಕ-ಡಿಮೆ ಆಯತಾಕಾರ ಮತ್ತು ಚೌಕಾಕಾರವಾಗಿವೆ. ಅತಿ ಚಿಕ್ಕ ಅಗಲ ೩೮೦ ಸೆಂ.ಮೀ ಇದ್ದು ಅತಿದೊಡ್ಡ ಅಗಲ ೧೨೮೦ ಸೆಂ.ಮೀ ಇದೆ.

ಚಿನಗದ ಗುಡ್ಡದ ಬುಡದಲ್ಲಿರುವ ಕಲ್ಮನೆಯನ್ನು ಹೊರೆತುಪಡಿಸಿ ಉಳಿದ ಮೂರು ಕಲ್ಮನೆಗೆ ಉಪಯೋಗಿ-ಸಿರವ ಚಪ್ಪಡಿಗಳನ್ನು ಕೊರೆದು ನಯಗೊಳಿಸಿಲ್ಲ. ಚಿನಿಗದ ಗುಡ್ಡದ ಕಲ್ಮನೆ ನಿರ್ಮಾಣಕ್ಕೆ ಉಪಯೋಗಿಸಿರವ ಚಪ್ಪಡಿಗಳ ಎರಡೂ ಬದಿಗಳನ್ನು ನಯಗೊಳಿಸಲಾಗಿರುವುದು ಮತ್ತು ಅಂಚುಗಳನ್ನು ನೇರವಾಗಿಸಿರುವುದು ಕಂಡು ಬರುತ್ತದೆ.

ಸಾಧಾರಣವಾಗಿ ಇಂಕಹ ಕಲ್ಮನೆಗಳಲ್ಲಿ ಯಾವುದಾದರೊಂದು ಗೋಡೆಕಲ್ಲು ಅಥವಾ ಮುಚ್ಚಳ ಕಲ್ಲಿನಲ್ಲಿ ವಿವಿಧ ಆಕಾರದ ತೂತುಗಳಿರುತ್ತವೆ. ಈ ರಂದ್ರಗಳು ದಫನ ಸಾಮಗ್ರಿಗಳನ್ನು ಇರಿಸಲು ಮತ್ತು ವಿಸೇಷ ಸಂದರ್ಭಗಳಲ್ಲಿ ಮೃತರಿಗೆ ಸಲ್ಲಿಸುವ ಎಡೆ ಮುಂತಾದವುಗಳಮ್ನ ಕಲ್ಮನೆಯೊಳಗೆ ಇರಿಸಲು ಉಪಯೋಗಿಸಲಾಗತ್ತಿತ್ತು. ಕರ್ನಾಟಕದ ಉಳಿ-ದೆಲ್ಲಾ ಕಡೆಗಳಲ್ಲಿ ಸಾಧಾರಣವಾಗಿ ಇಂತಹ ರಂದ್ರಗಳು ಉತ್ತರ ಇಲ್ಲವೆ ಪೂರ್ವದ ಗೋಡೆ ಕಲ್ಲಿನಲ್ಲಿ ಕಂಡು ಬಂದಿವೆ (ಸುಂ-ದರ:೧೯೭೪) ಆದರೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ನಾಲ್ಕು ಮಾದರಿಗಳಲ್ಲಿ ಒಂದರಲ್ಲಿಯೂ ಇಂತಹ ತೂತುಗಳಿಲ್ಲದಿರುವುಮ ಗಮನಾರ್ಹ ಅಂಶ.

ಕಲ್ಮನೆಗಳಲ್ಲಿ ಶವ ಸಂಸ್ಕಾರವಾದ ನಂತರ ಉಳಿದ ಅಸ್ತಿ ಅವಶೇಷಗಳು ಮತ್ತು ಕೆಲವು ವಿಶಿಷ್ಟ ಮಾದರಿಯ ಕಪ್ಪು-ಕೆಂಪು ಮತ್ತು ಕಪ್ಪು ವರ್ಣದ ಮಡಕೆಗಳು ದಫನ ಸಾಮಗ್ರಿಯಾಗಿ ಇರಿಸಲ್ಪಟ್ಟಿರುತ್ತವೆ. ಬಹುಶಃ ಈ ಕಲ್ಗೋರಿಗಳ-ಲ್ಲಿಯೂ ಅಂತಹ ದಫನ ಸಾಮಗ್ರಿಗಳನ್ನೇ ಇರಿಸಿರಬಹುದು. ಆದರೆ ಎಲ್ಲಾ ಕಲ್ಗೋರಿಗಳು ಭಗ್ನಾವಸ್ಥೆ ಯಲ್ಲಿರುವುದರಿಂದ ಅವುಗಳನ್ನು ಹಾಳು ಮಾಡಿರುವ ಸಾಧ್ಯತೆ ಇದೆ. ಚಿನಗದ ಗುಡ್ಡದ ಬುಡದಿಂದ ದೂರವಿರುವ ಕಲ್ಮನೆಯು ಸಾಕಷ್ಟು ಸುಸ್ಥಿ-ಯಲ್ಲಿದ್ದರೂ ಗೋಡೆಗಲ್ಲುಗಳ ಸಂದುಗಳು ಕಾಲ ಕ್ರಮೇಣ. ಅಗಲವಾಗಿರುವುದರಿಂದ ಸ್ಥಳೀಯ ಜನರು ಕುತೂಹಲದಿಂದಾಗಿ ಅವುಗಳನ್ನು ಕೆಗೆದು ಹಾಳು ಮಾಡಿರಲೂ ಬಹದು.

೨. ನೆಲದೊಳಗಿರುವ ಕಲ್ಮನೆಗಳು: ಪ್ರಸ್ತುತ ಇಂತಹ ಒಟ್ಟು ಒಂಬತ್ತು ಕಲ್ಮನೆಗಳು ದೊರೆತಿವೆ. ಇವುಗಳು ಇರಕಸಂದ್ರಕಾಲೋನಿ(೫), ಕತ್ತಿರಾಜನಹಳ್ಳಿ(೧), ಗೌಡನಕಟ್ಟೆ(೨) ಮತ್ತು ಚಿನವಾರ(೧)ಗಳಲ್ಲಿ ದೊರೆತಿವೆ. ಈ ಕಲ್ಮನೆಗಳು ಇರಕಸಂದ್ರಕಾಲೋನಿ, ಚಿನವಾರ ಮತ್ತು ಗೌಡನಕಟ್ಟೆಗಳಲ್ಲಿ ಗುಡ್ಡದ ಬುಡದಲ್ಲಿಯೇ ಇದ್ದು ಕತ್ತಿರಾಜನಹಳ್ಳಿಯ ಕಲ್ಮನೆಯು ಗುಡ್ಡದಿಂದ ಸುಮೂರು ೧.೫ ಕಿ.ಮೀ ಅಂತರದಲ್ಲಿದೆ. ಕತ್ತಿರಾಜನಹಳ್ಳಿ ಗೋರಿನೆಲೆಗೆ ೪ ಕಿ.ಮೀ ಈಶಾನ್ಯಕ್ಕೆ ಮಿಡಿಗೇಶಿ ವಸತಿ ನೆಲೆ ಇದೆ, ಆದರೆ ಉಳಿದ ಗೋರಿನೆಲೆಗಳಾದ ಇರಕಸಂದ್ರಕಾಲೋನಿ, ಗೌಡನಕಟ್ಟೆ ಮತ್ತು ಚಿನವಾರಗಳ ಸಮೀಪದಲ್ಲಿ ಯಾವುದೇ ವಸತಿ ನೆಲೆಗಳಲ್ಲಿದಿರುವುಮ ಗಮನಾರ್ಹ ಅಂಶ.

ಇಂತಹ ಕಲ್ಮನೆಗಳಿರುವ ಪ್ರದೇಶವನ್ನು ವ್ಯವಸಾಯಕ್ಕೋಸ್ಕರ ಬಳಸಿರುವುದು, ಕುತೂಹಲದಿಂದ ಅಗೆದಿರುವುದು ಮತ್ತು ನಿಧಿ ಶೋಧಕರು ನಾಶಮಾಡಿರುವ ಸಂಭವವಿದೆ. ಹೀಗೆ ಹಾಳಾಗಿರುವ ಕಲ್ಮನೆಗಳ ರಚನಾ ವಿಧಾನವನ್ನು ತಿಳಿಯಲು ಅನುಕೂಲವಾಗಿದೆ.

ಹೀಗೆ ಹಾಳಾಗಿರುವ ಕಲ್ಮನೆಗಳಿಂದ ಅವುಗಳ ತಳವಿನ್ಯಾಸ, ನಿರ್ದಿಷ್ಟ ಗೋಡೆಗಲ್ಲುಗಳಿರುವ ರಂದ್ರಗಳು ಹಾಗೂ ಇವುಗಳಲ್ಲಿ ಇಟ್ಟಿರುವ ದಫನ ಸಾಮಗ್ರಿಗಳ ಬಗೆಗೂ ಮಾಹಿತಿ ದೊರಕುತ್ತದೆ.

ಈ ಕಲ್ಮನೆಗಳ ತಳವಿನ್ಯಾಸವು ಹಚ್ಚು ಕಡಿಮೆ ಆಯತ ಇಲ್ಲವೆ ಚೌಕಾಕಾರವಾಗಿದ್ದು ಕೆಲವು ಸ್ವಸ್ತಿಕ ಮಾದರಿಯಲ್ಲಿವೆ. ಹೆಚ್ಚಿನ ಕಲ್ಮನೆಗಳ ತಳದಲ್ಲಿ ಹಾಸುಗಲ್ಲುಗಳು ಕಂಡು ಬರುತ್ತದೆ. ಚೌಕಾಕಾರದ ಕಲ್ಮನೆಗಳು ಗಾತ್ರದಲ್ಲಿ ಚಿಕ್ಕದು ೩೮೦ ಸೆಂ.ಮೀ ಇದ್ದು ದೊಡ್ಡದು ೧೧೦ ಸೆ.ಮೀ ಇದೆ.

ದೊರೆತಿರುವ ೯ ಕಲ್ಮನೆಗಳಲ್ಲಿ ೬ಕ್ಕೆ ಕಂಡಿಗಳಿವೆ. ಇವುಗಳು ಇರಕಸಂದ್ರಕಾಲೋನಿಯಲ್ಲಿ ೪ ಹಾಗು ಕತ್ತಿರಾಜನಹಳ್ಳಿ ಮತ್ತು ಚಿನವಾರಗಳಲ್ಲಿ ತಲಾ ಒಂದೊಂದು ಇವೆ. ಇಂತಹ ರಂದ್ರಗಳು ಪೂರ್ವ ಮತ್ತು ಉತ್ತರದ ಗೋಡೆಗಲ್ಲುಗಳಿವೆ. ಇರಕಸಂದ್ರಕಾಲೋನಿಯ ನಾಲ್ಕು ಹಾಗು ಚಿನಿವಾರದ ಒಂದು ರಂದ್ರವು ಪೂರ್ವ ದಿಕ್ಕಿನ ಗೋಡೆಗಲ್ಲಿನಲ್ಲಿದೆ. ಗೋಡೆಗಲ್ಲಿನ ಮಧ್ಯ ಭಾಗದಲ್ಲಿ ರಚಿಸಿರುವ ರಂಧ್ರದ ವ್ಯಾಸ ೧೫ ರಿಂದ ೩೦ ಸೆಂ.ಮೀ ಗಳಾಗಿವೆ.

ಇಂತಹ ಕಲ್ಮನೆಗಳಲ್ಲಿ ದಫನ ಸಾಮಗ್ರಿಗಳನ್ನಿಡುವುದು ಒಂದು ವಾಡಿಕೆಯಾಗಿದ್ದು ಉತ್ಖನನ ನಡೆದ ಬ್ರಹ್ಮಗಿರಿ(ವೀಲರ್:೧೯೪೮;೧೮೦-೩೧೦) ಮಸ್ಕಿ(ಥಾಪರ್:೧೯೫೭;೪-೧೪೨) ಹಳ್ಳೂರು(ನಾಗರಾಜರಾವ್:೧೯೭೧) ಹೆಗ್ಗಡೆ-

ಹಳ್ಳಿ(ದೇವರಾಜ್:೧೯೯೬) ಮೊದಲಾದ ಸ್ಥಳಗಳಲ್ಲಿ ಕಂಡು ಬಂದಿವೆ. ಪ್ರಸ್ತುತ ದೊರೆತಿರುವ ೯ ಕಲ್ಮನೆಗಳಲ್ಲಿದ್ದಿರ ಬಹು-ದಾದ ದಫನ ಸಾಮಗ್ರಿಗಳು ಗೌಡನಕಟ್ಟೆಯನ್ನು ಹೊರತುಪಡಿಸಿ ಇರಕಸಂದ್ರಕಾಲೋನಿ, ಕತ್ತಿರಾಜನಹಳ್ಳಿ ಮತ್ತು ಚಿನಿವಾರ ಈ ಮೂರುನೆಲೆಗಳಲ್ಲಿದ್ದು ಇಂತಹ ಅವಶೇಷಗಳಾದ ಕಪ್ಪು, ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆ ಅವಶೇಷಗಳು ದೊರೆತಿ-ವೆ. ಇವುಗಳು ವಿವಿಧ ಆಕೃತಿಗಳಲ್ಲಿದ್ದು ಈಗಾಗಲೇ ಉತ್ಖನನಗಳಲ್ಲಿ ಬೆಳಕಿಗೆ ಬಂದಿರುವ ಮೃತ್ ಪಾತ್ರೆಗಳನ್ನೇ ಹೋಲುತ್ತಿದ್ದು ಯಾವುದೇ ವಿಶೇಷತೆ ಕಂಡು ಬಂದಿಲ್ಲ. ಪ್ರಸ್ತುತ ಬೂದಿಬೆಟ್ಟ, ಹೊನ್ನೇಮಾರನಹಳ್ಳಿ ಮತ್ತು ಚಿನಗಗಳಲ್ಲಿ ಕಂಡು ಬಂದ ಕಲ್ಮನೆಗಳ ಚಿತ್ರಗಳನ್ನು ಛಾಯ ಚಿತ್ರ ಸಂಖ್ಯೆ ೯.ಡಿ, ೯.ಇ, ೯.ಎಫ್, ಮತ್ತು ೯.ಜಿ ನಲ್ಲಿ ಕೊಡಲಾಗಿದೆ.



ಬೂದಿಬೆಟ್ಟ (ಛಾಯ ಚಿತ್ರ ಸಂಖ್ಯೆ ೯.ಡಿ)



ಹೊನ್ನೇಮಾರನಹಳ್ಳಿ (ಛಾಯ ಚಿತ್ರ ಸಂಖ್ಯೆ ೯.ಇ)



ಚಿನಗ (ಛಾಯ ಚಿತ್ರ ಸಂಖ್ಯೆ ೯.ಎಫ್)



ಚಿನಗ (ಛಾಯ ಚಿತ್ರ ಸಂಖ್ಯೆ ೯.ಜಿ)

೪ ನಿಲಸುಗಲ್ಲು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿನ ಕೊರಟಗೆರೆ, ಮಧುಗಿರಿ ಮತ್ತು ತುಮಕೂರು ತಾಲ್ಲೂಕುಗಳಲ್ಲಿನ ಅಗ್ರ-ಹಾರ, ಇರಕಸಂದ್ರ ಕಾಲೋನಿ, ಕತ್ತಿರಾಜನಹಳ್ಳಿ, ಗೌಡನಕಟ್ಟೆ, ಚಿನಗ ಹಾಗೂ ಸೀಗೆಹಳ್ಳಗಳಲ್ಲಿ ಒಟ್ಟು ೧೦ ನಿಲಸುಗಲ್ಲುಗಳು ದೊರಕಿವೆ.ಈ ನಿಲಸುಗಲ್ಲುಗಳಲ್ಲಿ ಅಗ್ರಹಾರ ನೆಲೆಯ ೩ ನಿಲಸುಗಲ್ಲುಗಳು ಇತರ ಯಾವುದೇ ಸಮಾಧಿಗಳೊಂದಿಗೆ ಸೇರದೆ ಸ್ವತಂತ್ರವಾಗಿದ್ದರೆ ಉಳಿದ ಹೆಚ್ಚಿನ ಸ್ಥಳಗಳಲ್ಲಿ ಶಿಲಾವೃತ್ತಗಳೊಂದಿಗೆ ಇವೆ. ಹೆಚ್ಚೂ ಕಡಿಮೆ ಎಲ್ಲಾ ಸ್ಥಳಗಳಲ್ಲಿ ದಪ್ಪನೆಯ ಎತ್ತರದ ಕಣಶಿಲೆಯ ಫಲಕಗಳನ್ನು ಭೂಮಿಗೆ ಲಂಬವಾಗಿ ನಿಲ್ಲಿಸಲಾಗಿದ್ದು ಈಗ ೭ ನಿಲಸುಗಲ್ಲುಗಳು ನೇರವಾಗಿದ್ದು ೨ ವಾಲಿವೆ ಹಾಗೂ ಒಂದು ನಾಶವಾಗಿದೆ. ದೀರ್ಘಕಾಲದವರೆಗೆ ಹವಾಮಾನದ ವೈಪರೀತ್ಯದಿಂದಾಗಿ ವಿವಿಧ ವರ್ಣದ ನೈಸ-ರ್ಗಿಕ ಪೊರೆ ಈ ನಿಲಸುಗಲ್ಲುಗಳ ಮೇಲೆ ಉಂಟಾಗಿದೆ. ಈ ನಿಲಸುಗಲ್ಲುಗಳ ಎತ್ತರ ಕನಿಷ್ಠ ೧೫೦ ಸೆಂ.ಮೀ. ಇದ್ದು ಗರಿಷ್ಠ ೫೨೦ ಸೆಂ.ಮೀ. ಆಗಿದೆ. ಅಗಲ ಕನಿಷ್ಠ ೨೮ ಗರಿಷ್ಠ ೨೪೨ ಸೆಂ.ಮೀ.ಗಳಾಗಿವೆ. ಇವುಗಳಲ್ಲಿ ದಪ್ಪ ಕನಿಷ್ಠ ೮ ಸೆಂ.ಮೀ. ಗರಿಷ್ಠ ೫೮ ಸೆಂ.ಮೀ.ಗಳಾಗಿವೆ. ಸಾಧಾರಣವಾಗಿ ಈ ನಿಲಸುಗಲ್ಲುಗಳನ್ನು ೨೫ ರಿಂದ ೫೦ ಸೆಂ.ಮೀ. ಆಳದ ಕುಳಿ ತೋಡಿ ಕಲ್ಲಿನ ಚಕ್ಕೆ, ಗುಂಡುಗಲ್ಲುಗಳನ್ನು ಹಾಕಿ ನಿಲಸುಗಲ್ಲು ಓರೆಯಾಗದಂತೆ ಅಥವಾ ಕೆಳಗೆ ಬೀಳದಂತೆ ನಿಲ್ಲಿಸಿರುತ್ತಾರೆ. ಪ್ರಸ್ತುತ ಅಧ್ಯ-ಯನ ಪ್ರದೇಶದಲ್ಲಿ ಈ ವಿವರಗಳನ್ನು ಖಚಿತವಾಗಿ ತಿಳಿಯಲು ಸಾಧ್ಯವಾಗಿಲ್ಲ. ನಿಲಸುಗಲ್ಲುಗಳು ಸಮಾಧಿ ಪ್ರಕ್ರಿಯೆಯ ಭಾಗವಾಗಿ ನಿಲ್ಲಿಸಿದ್ದಾಗಿರದೆ ಸ್ಮಾರಕ ಶಿಲೆಯಾಗಿದ್ದಿರ ಬಹುದೆಂದು ಊಹಿಸಲಾಗಿದೆ. ಮಸ್ಕಿ ಉತ್ಖನನ (ಥಾಪರ್:೧೯೫೭;೪-೧೪೨) ದಲ್ಲಿ ಈ ಅಂಶ ಸ್ಥಿರಪಟ್ಟಿದೆ. ಆದರೆ ಕೇರಳದ ಒಂದೆರಡು ಕಡೆ ಇವು ಸಮಾಧಿ ಪ್ರಕ್ರಿ-ಯೆಯ ಭಾಗವಾಗಿ ನಿಲ್ಲಿಸಲಾಗಿದ್ದ ಕುರುಹು ಬೆಳಕಿಗೆ ಬಂದಿದೆ. ಪ್ರಸ್ತುತ ಪ್ರದೇಶದ ಚಿನಗ ನೆಲೆಯ ಒಂದು ನಿಲಸುಗಲ್ಲಿನ ಬಳಿಯಲ್ಲಿ ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆ ಭಾಗಗಳು ಕಂಡು ಬಂದವು. ಜೊತೆಗೆ ಚಿನಗ ಮತ್ತು ಇರಕಸಂದ್ರ

ಕಾಲೋನಿ ನೆಲೆಗಳಲ್ಲಿ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಸಾಕಷ್ಟು ಪ್ರಮಾಣದಲ್ಲಿ ದೊರಕಿವೆ. ಅಧ್ಯಯನ ಪ್ರದೇಶದಲ್ಲಿ ದೊರಕಿರುವ ನಿಲಸುಗಲ್ಲುಗಳಿಗೆ ಸಂಬಂಧಪಟ್ಟ ವಿವರಣೆಗಳನ್ನು ಕೋಷ್ಟಕ ಸಂಖ್ಯೆ ೯.೩ ನಲ್ಲಿ ನೀಡಿದೆ. ಪ್ರಸ್ತುತ ಚಿನಗ ಮತ್ತು ಕತ್ತಿರಾಜನಹಳ್ಳಿಗಳಲ್ಲಿ ದೊರೆತ ನಿಲಿಸುಗಲ್ಲುಗಳ ಚಿತ್ರಗಳನ್ನು ಛಾಯ ಚಿತ್ರ ಸಂಖ್ಯೆ ೯.ಎಚ್.೧, ೯.ಎಚ್.೨ ಮತ್ತು ೯.ಎ ನಲ್ಲಿ ಕೊಡಲಾಗಿದೆ.

ಕೋಷ್ಟಕ ಸಂಖ್ಯೆ ೯.೩

| ಕ್ರಮ ಸಂಖ್ಯೆ | ನೆಲೆ | ನಿಲಸುಗಲ್ಲು ಇರುವ ಸ್ಥಳ | ಗೋರಿ ಅವಶೇಷ | ವಾಲಿಕೆ | ಮುಖ ಮಾಡಿರುವ ದಿಕ್ಕು | ಅಳತೆ | | |
|---|---|---|---|---|---|---|---|---|
| | | | | | | ಎತ್ತರ | ಅಗಲ | ದಪ್ಪ |
| ೧ | ಅಗ್ರಹಾರ | ಗ್ರಾಮದ ಪಶ್ಚಿಮಕ್ಕೆ ಗುಡ್ಡದ ಬುಡದಲ್ಲಿದೆ. | ಯಾವುದೇ ಗೋರಿ ಅವಶೇಷವಿಲ್ಲ. | ನೇರವಾಗಿದೆ | ಪೂರ್ವ-ಪಶ್ಚಿಮ | ೨೧೦ | ೨೮ | ೧೧ |
| ೨ | ಅಗ್ರಹಾರ | ಗ್ರಾಮದ ಪಶ್ಚಿಮಕ್ಕೆ ಗುಡ್ಡದ ಬುಡದಲ್ಲಿದೆ. | ಯಾವುದೇ ಗೋರಿ ಅವಶೇಷವಿಲ್ಲ. | ೨೦' ಉತ್ತರಕ್ಕೆವಾಲಿದೆ | ಪೂರ್ವ-ಪಶ್ಚಿಮ | ೧೮೦ | ೪೬ | ೮ |
| ೩ | ಅಗ್ರಹಾರ | ಗ್ರಾಮದ ಪಶ್ಚಿಮಕ್ಕೆ ಗುಡ್ಡದ ಬುಡದಲ್ಲಿದೆ. | ಯಾವುದೇ ಗೋರಿ ಅವಶೇಷವಿಲ್ಲ. | ನೆಲದ ಮೇಲೆ ಬಿದ್ದಿದೆ | ಪೂರ್ವ-ಪಶ್ಚಿಮ | ೨೧೦ | ೩೮ | ೧೨ |
| ೪ | ಇರಕಸಂದ್ರಕಾಲೋನಿ | ಗ್ರಾಮದ ನೈಋತ್ಯಕ್ಕೆ ಹೈಸ್ಕೂಲ್‌ನ ದಕ್ಷಿಣಕ್ಕಿರುವ ಗೋರಿನೆಲೆಗಳ ಮಧ್ಯದಲ್ಲಿದೆ | ಸುತ್ತಲು ಗೋರಿಗಳಿವೆ ೩ ಮೀ ಅಂತರದಲ್ಲಿ. | ನೇರವಾಗಿದೆ | ಪೂರ್ವ-ಪಶ್ಚಿಮ | ೪೦೦ | ೨೦೦ | ೨೮ |
| ೫ | ಕತ್ತಿರಾಜನಹಳ್ಳಿ | ಗ್ರಾಮದಿಂದ ೧.೫ ಕಿ.ಮೀ ಅಂತರದಲ್ಲಿ ಗೋರಿ ನೆಲೆ (ಕೋತಗಲ್‌ದಿಬ್ಬ) ಇರುವ ಪೂರ್ವದ ನಿಲಸುಗಲ್ಲು. | ಸುತ್ತಲು ಗೋರಿಗಳಿವೆ ೨ ಮೀ ಅಂತರದಲ್ಲಿ. | ನೇರವಾಗಿದ್ದು ಮೆಲ್ಭಾಗ ಉತ್ತರಕ್ಕೆ ಬಾಗಿದೆ | ಉತ್ತರ-ದಕ್ಷಿಣ | ೫೨೦ | ೧೨೫ | ೨೦ |
| ೬ | ಕತ್ತಿರಾಜನಹಳ್ಳಿ | ಗ್ರಾಮದಿಂದ ೧.೫ ಕಿ.ಮೀ ಅಂತರದಲ್ಲಿ ಗೋರಿ ನೆಲೆ (ಕೋತಗಲ್‌ದಿಬ್ಬ) ಇರುವ ಪಶ್ಚಿಮದ ನಿಲಸುಗಲ್ಲು.. | ಸುತ್ತಲು ಗೋರಿಗಳಿವೆ ೫ ಮೀ ಅಂತರದಲ್ಲಿ. | ನೇರವಾಗಿದೆ | ಉತ್ತರ-ದಕ್ಷಿಣ | ೨೩೮ | ೧೨೦ | ೨೦ |
| ೭ | ಗೌಡನಕಟ್ಟೆ | ಗ್ರಾಮದಿಂದ ೧ ಕಿ.ಮೀ ಅಂತರದಲ್ಲಿ ಗುಡ್ಡದ ಬುಡದಲ್ಲಿದೆ. | ಪೂರ್ವಕ್ಕೆ ೫ ಮೀ ಅಂತರದಲ್ಲಿದೆ. | ನೇರವಾಗಿದೆ | ಉತ್ತರ-ದಕ್ಷಿಣ | ೧೫೦ | ೧೧೫ | ೧೬ |
| ೮ | ಚಿನಗ | ರಸ್ತೆಯ ಉತ್ತರಕ್ಕಿರುವ ನಿಲಸುಗಲ್ಲು (ಊರಬಾಗಿಲಕಲ್ಲು). | ಈಶಾನ್ಯಕ್ಕೆ ೧೦ ಮೀ ಅಂತರದಲ್ಲಿ ಕಲ್ಮನೆ ಇದೆ. | ನೇರವಾಗಿದೆ | ಉತ್ತರ-ದಕ್ಷಿಣ | ೫೧೦ | ೨೪೨ | ೨೯ |
| ೯ | ಚಿನಗ | ರಸ್ತೆಯ ದಕ್ಷಿಣಕ್ಕಿರುವ ನಿಲಸುಗಲ್ಲು (ಊರಬಾಗಿಲಕಲ್ಲು). | ಈಶಾನ್ಯಕ್ಕೆ ೧೫ ಮೀ ಅಂತರದಲ್ಲಿ ಕಲ್ಮನೆ ಇದೆ. | ೩೦° ಉತ್ತರಕ್ಕೆವಾಲಿದೆ | ನೈಋತ್ಯ-ಈಶಾನ್ಯ | ೫೦೨ | ೨೩೫ | ೫೮ |
| ೧೦ | ಸಿಗೇಹಳ್ಳ | ಗ್ರಾಮದ ದಕ್ಷಿಣಕ್ಕೆ ಗುಡ್ಡದ ಬುಡದಲ್ಲಿದೆ. | ಯಾವುದೇ ಗೋರಿ ಇಲ್ಲ. | ಪೂರ್ಣ ಹಾಳಾಗಿದ್ದು ವಿವರ ತಿಳಿದಿಲ್ಲ | | | | |



ಚಿನಗ (ಛಾಯ ಚಿತ್ರ ಸಂಖ್ಯೆ ೯.ಎಚ್.೧)



ಚಿನಗ (ಛಾಯ ಚಿತ್ರ ಸಂಖ್ಯೆ ೯.ಎಚ್.೨)



ಕತ್ತಿರಾಜನಹಳ್ಳಿ (ಛಾಯ ಚಿತ್ರ ಸಂಖ್ಯೆ ೯.ಐ)

ವಸತಿ ನೆಲೆ

ದಕ್ಷಿಣ ಭಾರತದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯ ಬಗೆಗೆ ಅತಿ ಹೆಚ್ಚಿನ ಮಾಹಿತಿ ಸಂಗ್ರಹವಾಗಿದ್ದರೂ ಕೆಲವೊಂದು ವಿಶಿಷ್ಟ ಅಂಶಗಳು ಇನ್ನೂ ಖಚಿತವಾಗಿ ನಿರ್ಧಾರವಾಗಬೇಕಾಗಿದೆ. ಇಂತಹ ಅಂಶಗಳನ್ನು ಮುಖ್ಯವಾಗಿ ಈ ಸಂಸ್ಕೃತಿಯ ಜನರ ವಸತಿ ನಿವೇಶನಗಳಿಗೆ ಸಂಬಂಧಪಟ್ಟದ್ದು. ೧೯೪೭ ರಲ್ಲಿ ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ (ವೀಲರ್:೧೯೪೭:೧೮೦-೩೧೦) ಗಳಲ್ಲಿ ಉತ್ಖನನಗಳಾದ ನಂತರ ಕರ್ನಾಟಕದ ಅನೇಕ ನಿವೇಶನಗಳಲ್ಲಿ ಉತ್ಖನನ ನಡೆ- ದಿದ್ದು ನೂತನ ಶಿಲಾಯುಗದಿಂದ ಇತಿಹಾಸ ಆರಂಭ ಯುಗದವರೆಗಿನ ಅನುಪೂರ್ವಿ ದೊರಕಿದೆ. ಇಂತಹ ಉತ್ಖನನಗಳಲ್ಲಿ ಹೆಚ್ಚಿನವು ಉತ್ತರ ಕರ್ನಾಟಕದ ನಿವೇಶನಗಳಲ್ಲಿ ಆಗಿವೆ. ಉದಾಹರಣೆಗೆ ಮಸ್ಕಿ (ಥಾಪರ್:೧೯೫೭:೪-೧೪೩), ಪಿಕ್ಲಿಹಾಳ (ಆಲ್ಚಿನ್:೧೯೬೦), ತೆಕ್ಕಲಕೋಟ (ನಾಗರಾಜರಾವ್ ಮತ್ತು ಮಲ್ಹೋತ್ರಾ:೧೯೬೫), ಸಂಗನಕಲ್ಲು (ನಾಗರಾಜರಾವ್ ಮತ್ತು ಅನ್ಸಾರಿ:೧೯೬೯) ಹಳ್ಳೂರು (ನಾಗರಾಜರಾವ್:೧೯೭೧), ದಕ್ಷಿಣ ಕರ್ನಾಟಕದಲ್ಲಿ ತಿ.ನರಸೀಪುರ (ಶೇಷಾದ್ರಿ:೧೯೭೧), ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪) ಮತ್ತು ಇತ್ತೀಚೆಗೆ ಕೋಲಾರ ಜಿಲ್ಲೆಯ

ಬನಹಳ್ಳಿ (ಇಂ.ಆ.ರಿ:೧೯೮೩-೮೪;೪೨-೪೬;೧೯೮೫-೮೬;೪೩-೪೪, ಮತ್ತು ೧೯೮೬-೮೭;೪೨-೪೫). ಈ ಮೂರು ನಿವೇಶನಗಳಲ್ಲಿ ಮಾತ್ರ ಉತ್ಖನನ ನಡೆದಿದೆ. ಈ ಉತ್ಖನನಗಳಿಂದ ಬೃಹತ್ ಶಿಲಾಯುಗ ಸಂಸ್ಕೃತಿಯ ಜನರ ವಸತಿ ಗೃಹಗ-ಳು. ಅವರ ಸಾಂಸ್ಕೃತಿಕ ಜೀವನಕ್ಕೆ ಸಂಬಂಧಪಟ್ಟ ಲೋಹದ ವಸ್ತುಗಳು (ಕಬ್ಬಿಣ ಮತ್ತು ಚಿನ್ನ) ಆಭರಣಗಳು ಮತ್ತು ಅಸಂಖ್ಯಾತ ವೈವಿಧ್ಯಮಯ ಮೃತ್ ಪಾತ್ರೆಗಳು ವಿಜ್ಞಾನದ ಬೆಳವಣಿಗೆಗೆ ಸಂಬಂಧಿಸಿದ ಕುರುಹಗಳು ಬೆಳಕಿಗೆ ಬಂದಿವೆ. ಎಲ್ಲಕ್ಕಿಂತ ಮುಖ್ಯವಾಗಿ ಈ ಸಂಸ್ಕೃತಿಯು ನೂತನ ಶಿಲಾಯುಗ ಅಥವಾ ತಾಮ್ರ ಶಿಲಾಯುಗ ಮತ್ತು ಇತಿಹಾಸ ಆರಂಭ ಯುಗದ ನಡುವಣ ಕಾಲಾವಧಿಯಲ್ಲಿ ಇದ್ದಿತೆಂದು ತಿಳಿದು ಬಂದಿದೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಈ ಯುಗಕ್ಕೆ ಸಂಬಂಧಿಸಿದ ಒಟ್ಟು ೧೭ ನಿವೇಶನಗಳು ಬೆಳಕಿಗೆ ಬಂದಿವೆ. ಸಾಧಾರಣವಾಗಿ ನೆಲೆ ನಿವೇಶನಗಳು ಬೆಟ್ಟದ ತಪ್ಪಲು ಪ್ರದೇಶಗಳಲ್ಲಿ ಮತ್ತು ಮೈದಾನ ಪ್ರದೇಶಗಳಲ್ಲಿವೆ. ಹೆಚ್ಚಿನ ನಿವೇಶನ-ಗಳು ಕೃಷಿ ಭೂಮಿಗಳಾಗಿದ್ದು ಸಾಕಷ್ಟು ಹಾಳಾಗಿವೆ. ಉಳಿದಿರುವ ಅವಶೇಷಗಳ ಆಧಾರದ ಮೇಲೆ ಇವು ಸಾಧಾರಣವಾಗಿ ೦.೫ ಎಕರೆ ಇಂದ ೨.೫ ಹೆಕ್ಟೇರ್ ಪ್ರದೇಶದಲ್ಲಿ ನೆಲೆಗೊಂಡಿವೆ. ಅಲ್ಲದೆ ಹೆಚ್ಚಿನ ನಿವೇಶನಗಳು ಜಿಲ್ಲೆಯ ಪೂರ್ವ ಭಾಗವಾ-ಗಿರುವ ಕೊರಟಗೆರೆ, ಮಧುಗಿರಿ, ಪಾವಗಡ ತಾಲ್ಲೂಕುಗಳಲ್ಲಿ ಹೆಚ್ಚೂ ಕಡಿಮೆ ದಕ್ಷಿಣೋತ್ತರವಾಗಿ ಹರಡಿದ್ದು ಸಿಸ್ಟ್ ಶಿಲಾಪ-ದರದ ಪ್ರಸರಣಕ್ಕೆ ಹೊಂದಿಕೊಂಡಂತಿವೆ.

ಸಾಂಸ್ಕೃತಿಕ ಅನುಪೂರ್ವಿಯ ದೃಷ್ಟಿಯಿಂದ ಈ ೧೭ ನಿವೇಶನಗಳಲ್ಲಿ ೧೨ ನಿವೇಶನಗಳು ನೂತನ ಶಿಲಾ-ಯುಗದ ಅವಶೇಷಗಳು ದೊರೆತಿರುವ ನೆಲೆಗಳಲ್ಲಿಯೂ, ೩ ನೆಲೆಗಳು ಇತಿಹಾಸ ಆರಂಭ ಕಾಲದ ಅವಶೇಷಗಳು ದೊರೆ-ಯುವ ನೆಲೆಯಲ್ಲಿಯೂ ಇದ್ದರೆ, ೨ ನೆಲೆಗಳು ಕೇವಲ ಬೃಹತ್ ಶಿಲಾಯುಗದ ನೆಲೆಗಳಾಗಿವೆ. ೩ ನೆಲೆಗಳು ಹೆಚ್ಚಿನ ಪ್ರಮಾ-ಣದಲ್ಲಿ ಪ್ರಾಚ್ಯ ವಸ್ತುಗಳನ್ನು ಹೊಂದಿದ್ದು ಈ ನೆಲೆಗಳ ಸುತ್ತಲಿನ ಸು. ೫ ಕಿ.ಮೀ. ಪರಿಧಿಯಲ್ಲಿ ಸಮಾಧಿ ನಿವೇಶನಗಳೂ ಕಂಡು ಬರುತ್ತವೆ. ಉಳಿದಂತೆ ವಸತಿ ನಿವೇಶನಗಳಿಗೂ ಸಮಾಧಿ ನಿವೇಶನಗಳಿಗೂ ನೇರ ಸಂಬಂಧ ಇರುವಂತೆ ಕಂಡು ಬರುವುದಿಲ್ಲ. ಜೊತೆಗೆ ಯಾವುದೇ ವಸತಿ ನಿವೇಶನದ ಹತ್ತಿರದ ಪರಿಸರದಲ್ಲಿ ಸಮಾಧಿ ನಿವೇಶನಗಳು ಕಂಡು ಬಂದಿಲ್ಲ.

ಖನಿಜಗಳ ದೃಷ್ಟಿಯಿಂದ ಈ ವಸತಿ ನಿವೇಶನಗಳಲ್ಲಿ ಕೇವಲ ೨ ರಲ್ಲಿ ಮಾತ್ರ ಕಬ್ಬಿಣವನ್ನು ಬೇರ್ಪಡಿಸಿ ಉಳಿದ ಕಿಟ್ಟದ ಅವಶೇಷಗಳು ಬೆಳಕಿಗೆ ಬಂದಿವೆ. ಈ ಕುರುಹುಗಳು ಕಂಡು ಬಂದಿರುವ ರಾಜಮಾರನಹಳ್ಳಿ ಮತ್ತು ವೈ.ಎ-ನ್. ಹೊಸಕೋಟೆ ನಿವೇಶನಗಳು ಬಹುಶಃ ದೀರ್ಘ ಕಾಲೀನ ಗಣಿಗಾರಿಕೆಗೆ ಉಪಯುಕ್ತವಾಗುವಂತಹ ಪ್ರಮಾಣದಲ್ಲಿ ಖನಿ-

ಜವನ್ನು ಹೊಂದಿರದೆ ಕೇವಲ ಭೂಮಿಯ ಮೇಲ್ಪದರಗಳಲ್ಲಿ ಖನಿಜಾಂಶವನ್ನು ಹೊಂದಿದ್ದು ಬೃಹತ್ ಶಿಲಾಯುಗದಲ್ಲಿ ಮಾತ್ರ. ಅಲ್ಪ ಪ್ರಮಾಣದಲ್ಲಿ ಖನಿಜವನ್ನು ಒದಗಿಸುತ್ತಿತ್ತೆಂದು ಕಂಡು ಬರುತ್ತದೆ. ಹಾಗಿದ್ದರೂ ಈಗ ಹೆಚ್ಚಿನ ಪ್ರಮಾಣದ ಕಬ್ಬಿಣದ ಅದಿರನ್ನು ಹೊಂದಿರುವ ಜಿಲ್ಲೆಯ ಪಶ್ಚಿಮ ಭಾಗದ ಚಿಕ್ಕನಾಯಕನಹಳ್ಳಿ ತಾಲ್ಲೂಕು ಪ್ರದೇಶದಲ್ಲಿ ಒಂದೂ ವಸತಿ ನಿವೇಶನಗಳು ಕಂಡು ಬಂದಿಲ್ಲದಿರುವುದು ಕುತೂಹಲಕರವಾಗಿದೆ.

ಕರ್ನಾಟಕದ ಬೃಹತ್ ಶಿಲಾ ಸಂಸ್ಕೃತಿಯ ವಸತಿ ನಿವೇಶನಗಳಲ್ಲಿ ಕಪ್ಪು, ಕೆಂಪು, ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆ, ಉಪಕರಣ, ಕಬ್ಬಿಣದ ಅರೆಪ್ರಶಸ್ತ ಶಿಲೆಯ ಮಣಿಗಳು, ಶಂಖದ ಬಳೆ ಚೂರು, ಮಣ್ಣಿನ ಗೊಂಬೆಗಳು ಮೊದಲಾದವು ಕಂಡು ಬರುತ್ತವೆ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಪ್ಪು, ಕೆಂಪು, ಕಪ್ಪು-ಕೆಂಪು ಮಡಿಕೆಯ ಭಾಗಗಳು ಕಿಟ್ಟದ ಅವಶೇಷಗಳು ಮಾತ್ರ ಕಂಡು ಬಂದಿವೆ.

ಈ ಅವಶೇಷಗಳಲ್ಲಿ ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ವಿಶಿಷ್ಟ ಲಕ್ಷಣವಾಗಿದ್ದು ಪ್ರಸ್ತುತ ಅಧ್ಯಯನ ಪ್ರದೇಶದ ನೆಲೆಗಳಲ್ಲಿಯೂ ಹೆಚ್ಚಿನ ಪ್ರಮಾಣದಲ್ಲಿ ದೊರಕಿವೆ. ಮುಖ್ಯ ವಸತಿ ನಿವೇಶ-ನಗಳೆನ್ನಬಹುದಾದ ಕೈದಾಳ, ಬುಕ್ಕಾಪಟ್ಟ, ಮಧುಗಿರಿ, ಮಿಡಿಗೇಶಿ, ರಾಚಮಾರನಹಳ್ಳಿ, ಯಲ್ಲಪ್ಪನಾಯಕನಹಳ್ಳಿ, ಯಲ್ಲಪ್ಪ-ನಾಯಕನಹೊಸಕೋಟೆ, ಸಿದ್ಧಗಂಗಾಬೆಟ್ಟ ಮತ್ತು ಹಿರೇಗುಂಡಗಲ್ಲು ನೆಲೆಗಳಲ್ಲಿ ಹೆಚ್ಚು ಪ್ರಮಾಣದಲ್ಲಿ ಪ್ರಾಚ್ಯ ವಸ್ತು ಅವಶೇ-ಷಗಳು ದೊರೆತಿವೆ. ಉಳಿದ ನೆಲೆಗಳಾದ ಗುಟ್ಟೆ, ಗುರಮ್ಮನಕಟ್ಟೆ, ತೆಪ್ಪಸಂದ್ರ, ಪಾವಗಡ, ಬೆಟ್ಟದಹಳ್ಳಿ, ಮಾರನಾಯಕನಪಾ-ಳ್ಯ, ಮಂಚಕಲ್‌ಕುಪ್ಪೆ ಹಾಗೂ ಸಿದ್ಧಾಪುರ ನೆಲೆಗಳಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಕಂಡು ಬಂದಿದೆ. ಕಪ್ಪು ಕೆಂಪು ವರ್ಣದ ಕಿರು ಹಾಗೂ ಮಧ್ಯಮ ಗಾತ್ರದ ನಿತ್ಯೋಪಯೋಗಿ ಪಾತ್ರೆಗಳಾದ ತಟ್ಟೆ, ಬಟ್ಟಲು, ಲೋಟ ಮತ್ತು ಕುಡಿಕೆಗಳನ್ನು ಚಕ್ರದ ಮೇಲೆ ಮಾಡಿದ್ದರೆ ಸಂಗ್ರಹಣಾ ಪಾತ್ರೆಗಳಾದ ಜಾಡಿ, ದೊಡ್ಡ ಮಡಕೆ ಮತ್ತು ಗುಡಾಣದಂತಹ ದಪ್ಪನೆಯ ಪಾತ್ರೆಗಳನ್ನು ಕೈಯಿಂದ ಹಂತ ಹಂತವಾಗಿ ಮಾಡಿರುತ್ತಾರೆ. ಈ ಪಾತ್ರೆಗಳು ಕಪ್ಪು-ಕೆಂಪು ದ್ವಿವರ್ಣದ ಪಾತ್ರೆಗಳಲ್ಲಿ ಒಳಮೈ ಮತ್ತು ಹೊರಮೈನ ಮೇಲ್ಭಾಗ ಕಪ್ಪಾಗಿದ್ದು ಕೆಳಭಾಗವು ನಸುಗೆಂಪಿನಿಂದ ಕಡುಗೆಂಪಿನವರೆಗಿನ ಬಣ್ಣಗಳನ್ನು ಹೊಂದಿವೆ. ಈ ಪ್ರದೇಶದಲ್ಲಿ ದೊರೆ-ಯುವ ಸಣ್ಣ ಪಾತ್ರೆಗಳು ತೆಳುವಾಗಿದ್ದು ನೀಳವಾಗಿರುತ್ತವೆ. ಉತ್ತಮ ರೀತಿಯ ನದೀ ಬಯಲಿನ ಇಲ್ಲವೇ ಜರಡಿ ಮಾಡಿ-ದಂತೆ ನುಣುಪಾದ ಜಿಗುಟು ಮಣ್ಣನ್ನು ಚೆನ್ನಾಗಿ ನಾದಿ ಕೆಲವೊಮ್ಮೆ ಧಾನ್ಯಗಳ ಹೊಟ್ಟಿನ ಪುಡಿಯನ್ನು ಸೇರಿಸಿ ಸಮ ರೀತಿಯ ಮಿಶ್ರಣ ಮಾಡಿ ಪಾತ್ರೆಗಳನ್ನು ತಯಾರಿಸುತ್ತಾರೆ. ಪಾತ್ರೆಗಳನ್ನು ಬೋರಲು ಹಾಕಿ ನಿಯಮಿತವಾಗಿ ಗಾಳಿಯಾಡುವಂತೆ ಸುಟ್ಟಿರುವುದರಿಂದ ಒಳಮೈನ ಪೂರ್ಣ ಭಾಗ ಮತ್ತು ಹೊರಮೈನ ಮೇಲ್ಭಾಗವು ಪೂರ್ಣ ಕಪ್ಪಾಗಿದ್ದು ಉಳಿದಂತೆ ಕೆಂಪು

ಬಣ್ಣವನ್ನು ಹೊಂದಿವೆ. ಕೆಲವೊಮ್ಮೆ ಸುಟ್ಟ ಪಾತ್ರೆಗಳಿಗೆ ಉಪ್ಪು ಹೊಳಪು ನೀಡಿರುವುದೂ ಉಂಟು. ಈ ವೈಶಿಷ್ಟ್ಯಗಳುಳ್ಳ ಬೃಹತ್ ಶಿಲಾಯುಗದ ಮೃತ್ ಪಾತ್ರೆಗಳು ಬ್ರಹ್ಮಗಿರಿ (ವೀಲರ್:೧೯೪೮:೧೮೦-೨೭೦) ಸಂಗನಕಲ್ಲು (ನಾಗರಾಜರಾವ್ ಮತ್ತು ಅನ್ಸಾರಿ:೧೯೬೯) ಹಳ್ಳೂರು (ನಾಗರಾಜರಾವ್:೧೯೭೧) ತಿ.ನರಸೀಪುರ (ಶೇಷಾದ್ರಿ:೧೯೭೧) ಹೆಮ್ಮಿಗೆ (ಹನುಮಂತರಾವ್ ಮತ್ತು ನಾಗರಾಜು:೧೯೭೪) ಮತ್ತು ಬನಹಳ್ಳಿ(ಇಂ.ಆ.ರಿ:೧೯೮೩-೮೪,;೧೪೨-೪೬೧೯೮೫-೮೬ ;೪೩-೪೪, ೧೯೮೬-೮೭;೪೨-೪೫) ಉತ್ಖನನಗಳಲ್ಲಿ ಗಣನೀಯ ಪ್ರಣಾಣದಲ್ಲಿ ದೊರಕಿದ್ದು ಪ್ರಸ್ತುತ ಅಧ್ಯಯನ ಪ್ರದೇಶ-ದಲ್ಲಿ ದೊರಕಿರುವ ಪಾತ್ರೆಗಳು ಅಂತಹ ಪಾತ್ರೆಗಳನ್ನೇ ಹೆಚ್ಚಾಗಿ ಹೋಲುತ್ತವೆ. ನಿತ್ಯೋಪಯೋಗಿ ಪಾತ್ರೆಗಳಾದ ವಿವಿಧಾಕಾ-ರದ ಬಟ್ಟಲುಗಳು, ತಪ್ಪಲೆಯಾಕಾರದವು, ಕೊಡ, ಗುಡಾಣ, ಬಾನಿ, ಮುಚ್ಚಳ ಮುಂತಾದ ಆಕೃತಿಗಳು ಸಾಧಾರಣವಾಗಿ ದೊರೆತಿವೆ.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸಂಗ್ರಹಿಸಿದ ಮೃತ್ ಪಾತ್ರೆಗಳ ವಿವರಣೆ ಮತ್ತು ರೇಖಾಚಿತ್ರಗಳನ್ನು ಈ ಅಧ್ಯಾಯುದ ಕೊನೆಯಲ್ಲಿ ಕೊಡಲಾಗಿದೆ.

ಪ್ರಸ್ತುತ ಅಧ್ಯಯನ ಪ್ರದೇಶಕ್ಕೆ ಸಂಬಂಧ ಪಟ್ಟಂತೆ ಬೃಹತ್ ಶಿಲಾಯುಗದ ಸಮಾಧಿ ನೆಲೆ ಮತ್ತು ವಸತಿ ನೆಲೆಗಳು ತೀರಾ ಹೆಚ್ಚಿನ ಪ್ರಮಾಣದಲ್ಲಿ ಪ್ರವರ್ಧಮಾನವಾಗಿತ್ತೆಂದು ಹೇಳಲು ಸಾಧ್ಯವಾಗದು. ನೆರೆಯ ಆಂಧ್ರ ಪ್ರದೇಶದ ಅನಂತಪುರ ಜಿಲ್ಲಾ ಮತ್ತು ಕೋಲಾರ ಜಿಲ್ಲೆ ಪ್ರದೇಶಗಳಿಗೆ ಹೋಲಿಸಿದರೆ ಈ ಪ್ರದೇಶದಲ್ಲಿ ನೆಲೆಗಳ ಪ್ರಮಾಣ ಕಡಿಮೆ. ಅದೇ ರೀತಿ ಮಲೆನಾಡಿನ ಜಿಲ್ಲೆಗಳಿಗೆ ಹೋಲಿಸಿದರೆ ಅಧ್ಯಯನ ಪ್ರದೇಶದಲ್ಲಿ ಕಲ್ಗೋರಿ ಮತ್ತು ನೆಲೆಗಳು ಸಂಖ್ಯೆ ಹಾಗೂ ವಿಸ್ತೀರ್ಣ ಹೆಚ್ಚೂ ಕಡಿಮೆ ಸಮನಾಗಿಯೇ ಇರುವಂತೆ ಕಂಡುಬರುತ್ತದೆ. ಸ್ಥಳ ಪರಿಶೋಧನೆಯಿಂದ ದೊರೆತಿರುವ ಮಾಹಿ-ತಿಯು ಅತ್ಯಲ್ಪ ಪ್ರಮಾಣದ್ದಾಗಿದ್ದು ಇವುಗಳಲ್ಲಿ ಒಂದಾದರೂ ನೆಲೆಯಲ್ಲಿ ವೈಜ್ಞಾನಿಕ ಉತ್ಖನನವನ್ನು ಕೈಗೊಂಡರೆ ಇನ್ನಷ್ಟು ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆ ಇದೆ.

**ಪರಿಶೀಲನೆ**

ಅಧ್ಯಯನ ಪ್ರದೇಶದಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಒಟ್ಟು ೩೮ ನೆಲೆಗಳಿವೆ(ಕೋಷ್ಟಕ ಸಂಖ್ಯೆ ೯.೧ ಮತ್ತು ೯.೨ ಹಾಗು ಭೂ ನಕ್ಷೆ ಪುಟ ಸಂಖ್ಯೆ ೪೨೪). ಇವುಗಳಲ್ಲಿ ಕೇವಲ ಈ ಸಂಸ್ಕೃತಿಯ ಕಲ್ಗೋರಿಯ ನೆಲೆಗಳು ೨೧ ಹಾಗೂ ಜನವಾಸ್ತವ್ಯ ನೆಲೆಗಳು ೧೭ ಇವೆ. ಈ ಜನ ವಸತಿ ನೆಲೆಗಳ ೫ ರಲ್ಲಿ ಮಾತ್ರ ಬೃಹತ್ ಶಿಲಾ ಸಂಸ್ಕೃತಿಯ ಅವಶೇ-

ಷಗಳು ಇವೆ. ಇನ್ನುಳಿದವು ನೂತನ ಶಿಲಾ ಸಂಸ್ಕೃತಿಯ ನೆಲೆಗಳಲ್ಲಿವೆ. ಕೇವಲ ಈ ಸಂಸ್ಕೃತಿಯ ಅವಶೇಷಗಳುಳ್ಳ ವಾಸ್ತ-ವ್ಯದ ನೆಲೆಗಳ. ಅಷ್ಟೇನೂ ದೊಡ್ಡ ಪ್ರಮಾಣದವುಗಳಲ್ಲ. ಒಂದು ಹೆಕ್ಟೇರ್‌ನಿಂದ ಮೂರು ಹೆಕ್ಟೇರ್‌ವರೆಗೆ ವಿಸ್ತಾರವಾಗಿದೆ. ಯಲ್ಲಪ್ಪನಾಯಕನಹೊಸಕೋಟೆಯಲ್ಲಿ ಕಂಡುಬರುವ ಒಂದು ಮಳೆ ನೀರಿನ ತೋಡಿನಲ್ಲಿ ಸುಮಾರು ೨ ಮೀ. ನಷ್ಟು ಆಳದ ತನಕ ನೂತನ ಶಿಲಾ ಮತ್ತು ಬೃಹತ್ ಶಿಲಾ ಸಂಸ್ಕೃತಿಯ ಜನರ ವಾಸ್ತವ್ಯದ ನೆಲೆ ಇದ್ದುದು ಕಂಡು ಬಂದಿದೆ. ಅಂದರೆ ಹಲ-ವಾರು ಶತಮಾನಗಳವರೆಗೆ ಈ ಸಂಸ್ಕೃತಿಯ ಜನರು ಇದ್ದಿರಬಹುದೆಂದು ಕಂಡು ಬರುತ್ತದೆ.

ಈ ನೆಲೆಗಳ ಪ್ರಸರಣವನ್ನು ಪರಿಶೀಲಿಸಲಾಗಿ ತುಮಕೂರು ಜಿಲ್ಲಾ ಪ್ರದೇಶದ ಮಧ್ಯ ಪೂರ್ವ ಹಾಗೂ ಉತ್ತರ ಭಾಗ (ತುಮಕೂರು, ಕೊರಟಗೆರೆ, ಮಧುಗಿರಿ ಮತ್ತು ಪಾವಗಡ ತಾಲ್ಲೂಕು) ಗಳಲ್ಲಿ ಇವು ಬಹಳಷ್ಟು ಇವೆ. ಹಳೆ ಶಿಲಾಯುಗದ ನೆಲೆಗಳುಳ್ಳ ತಿಪಟೂರು, ಗುಬ್ಬಿ ಮತ್ತು ತುಮಕೂರು ತಾಲ್ಲೂಕು ಪ್ರದೇಶದಲ್ಲಿ ಒಂದೂ ನೆಲೆಯೂ ಕಂಡುಬರ-ದಿರುವುದು ಗಮನಾರ್ಹ. ಈ ಬೃಹತ್ ಶಿಲಾಯುಗದ ಜನರ ವಾಸ್ತವ್ಯ ಪ್ರಸರಣವನ್ನು ಪರಿಶೀಲಿಸಿದಾಗ ಜಿಲ್ಲೆಯ ಪೂರ್ವದ ಭಾಗಕ್ಕೆ ಬಂದಿರುವುದೂ ತಿಳಿಯುತ್ತದೆ. ಯಾವುದೇ ಕಲ್ಗೋರಿ ನಿರ್ಮಿಸಲು ಬೇಕಾದ ಸೂಕ್ತವಾದ ಕಲ್ಲು ಚಪ್ಪಡಿ, ಕಲ್ಲುಗುಂಡು ಇವುಗಳುಳ್ಳ ಬೆಟ್ಟದ ಸಾಲುಗಳು, ಕಣಿವೆಗಳು ಪಶ್ಚಿಮ ಭಾಗದಲ್ಲಿಲ್ಲ; ಆದರೆ ಪೂರ್ವಭಾಗದಲ್ಲಿ ಉತ್ತರ-ದಕ್ಷಿಣ-ವಾಗಿ ಬೆಟ್ಟದ ಸಾಲು ಇದೆ. ಆದರೆ ಪಶ್ಚಿಮ ಭಾಗದಲ್ಲಿ ಕಬ್ಬಿಣ ಅದಿರು ನಿಕ್ಷೇಪಗಳಿರುವ ನೆಲೆಗಳಿವೆ. ಪೂರ್ವ ಭಾಗದಲ್ಲಿ ಅಷ್ಟಾಗಿ ಇಲ್ಲ. ಬೃಹತ್ ಶಿಲಾಯುಗದ ಸಂಸ್ಕೃತಿ ಜನರು ಕಬ್ಬಿಣದ ಅದಿರನ್ನು ಸಂಗ್ರಹಿಸಿ ಲೋಹವನ್ನು ತಯಾರು ಮಾಡುವ ತಂತ್ರಗಾರಿಕೆಯನ್ನು ನಡೆಸುತ್ತಿದ್ದರು ಎಂಬುದು ಸ್ಪಷ್ಟವಾಗಿದೆ. ಆದ್ದರಿಂದ ಪಶ್ಚಿಮ ಭಾಗದಲ್ಲಿಯೂ ಇಂತಹ ಕಲ್ಗೋರಿ ಅಥವಾ ವಾಸ್ತವ್ಯದ ನೆಲೆಗಳನ್ನು ನಿರೀಕ್ಷಿಸಬಹುದಾಗಿದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕು ಹುಳಿಯಾರಿನಲ್ಲಿ ಒಂದು ಕಲ್ಲು ವೃತ್ತವನ್ನು ಪರಿಶೀಲಿಸಲಾಗಿದೆ. ಪ್ರಾಯಶಃ ಇಂತಹ ಕಲ್ಲು ವೃತ್ತಗಳು ಹಲವಾರು ಇದ್ದಿರಬಹುದು. ಆದರೆ ಈ ಪ್ರದೇಶ-ವನ್ನು ವ್ಯವಸಾಯಕ್ಕೆ ಒಳಪಡಿಸಿರುವುದರಿಂದ ಇಂತಹ ಕಲ್ಲು ವೃತ್ತಗಳನ್ನು ತೆಗೆದು ಹಾಕಿರಬೇಕು. ಆದ್ದರಿಂದ ಈ ಭಾಗದ-ಲ್ಲಿಯೂ ಅಲ್ಲಲ್ಲಿ ವೃತ್ತ ಪ್ರಕಾರದ ಕಲ್ಗೋರಿಗಳುಳ್ಳ ಕೆಲವು ನೆಲೆಗಳಾದರೂ ಇದ್ದಿರಬಹುದು. ಇನ್ನು ಕಲ್ಮನೆ ಮತ್ತು ನಿಲಸುಗ-ಲ್ಲುಗಳಿಗೆ ಬೇಕಾದ ದೊಡ್ಡದಾದ ಚಪ್ಪಡಿಗಳನ್ನು ಒದಗಿಸಬಹುದಾದ ಕಲ್ಲು ಬೆಟ್ಟಗಳು ಈ ಪ್ರದೇಶದಲ್ಲಿ ಇಲ್ಲದಿರುವುದರಿಂದ ಈ ಪ್ರಕಾರದ ಕಲ್ಗೋರಿಗಳು ಇಲ್ಲದಿರುವುದು ಸಹಜ. ಬದಲಾಗಿ ಪೂರ್ವ ಭಾಗದಲ್ಲಿ ಸುಲಭವಾಗಿ ಚಪ್ಪಡಿ, ಗುಂಡುಗಲ್ಲು-ಗಳು ದೊರೆಯುವುದರಿಂದ ಈ ಭಾಗದಲ್ಲಿ ಕಲ್ಗೋರಿಗಳು ಹೆಚ್ಚಾಗಿ ಕಾಣಸಿಗುತ್ತಿರುವುದು ಸಹಜವೆ.

ಅಧ್ಯಯನ ಪ್ರದೇಶದಲ್ಲಿಯ ಬೃಹತ್ ಶಿಲಾಗೋರಿಗಳನ್ನು ಸ್ಥಳೀಯರು 'ಮೊರಿಯರ ಗುಡಿ', 'ಮೊರಿಯರ ಮನೆ', 'ಪಾಂಡವರ ಮನೆ' ಎಂಬ ಹೆಸರುಗಳಿಂದ ಅವನ್ನು ಗುರುತಿಸಿದ್ದಾರೆ. ಈ ಒಂದು ಕ್ರಮ ಈ ಪ್ರದೇಶದಲ್ಲಿ ಮಾತ್ರವಲ್ಲ. ಇಡೀ ದಕ್ಷಿಣ ಭಾರತದಲ್ಲಿಯ ಬಹಳಷ್ಟು ನೆಲೆಗಳನ್ನು ಈ ಹೆಸರುಗಳಿಂದಲೂ ಹಾಗೂ 'ಭಸ್ಮದ ಕಟ್ಟೆ', 'ಮುನಿವಾಸದ ಗುಹೆ', 'ಪಾಂಡವರ ಕಲ್ಲು' ಅಥವಾ 'ಪಾಂಡವರ ಮನೆ' ಎಂಬುದಾಗಿ ಕರೆಯಲಾಗುತ್ತದೆ. ಮೊರಿಯರ ಮನೆ ಎಂದು ರಾಯಚೂರು ಜಿಲ್ಲೆಯ ಹಿರೇಬೇನಕಲ್, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ ಹಾಗೂ ಇನ್ನೂ ಹಲವಾರು ಸ್ಥಳಗಳಲ್ಲಿಯೂ, ಕೊಡಗು ಮತ್ತು ಘಟ್ಟ ಪ್ರದೇಶದಲ್ಲಿ 'ಭಸ್ಮದ ಕಟ್ಟೆ' ಎಂದೂ 'ವಾಲಿ ಕುಡಿ ಇರುಪ್ಪು', 'ಕುರಂಗು ಪಟ್ಟಡೈ', ಎಂಬ ಹೆಸರಿನಿಂದ ತಮಿಳುನಾಡು ಮತ್ತು ಕೇರಳಗಳಲ್ಲಿ ಆಯಾಯ ಬೃಹತ್ ಶಿಲಾ ಗೋರಿಗಳನ್ನು ಹೆಸರಿಸಲಾಗಿದೆ. ಈ ಹೆಸರುಗಳು ಮಧ್ಯಯುಗೀನ ಕಾಲದಲ್ಲಿ ಜನರು ತಾವೇ ಕಲ್ಪಿಸಿಕೊಂಡು ಈ ರೀತಿ ಹೆಸರುಗಳನ್ನಿಟ್ಟಿರುವುದಾಗಿ ತೋರುವುದಿಲ್ಲ. ಏಕೆಂದರೆ ಇಂತಹ ಹೆಸರುಗಳು ಪ್ರಾಚೀನ ಶಾಸನಗಳಲ್ಲಿಯೂ ಉಲ್ಲೇಖವಾಗಿದೆ. ಉದಾ ಬೆದಿರೂರು (ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ. ರಮೇಶ್.ಕೆ.ವಿ:೧೯೮೪;೧೧೧-೧೧೮) ಗ್ರಾಮದಲ್ಲಿ ದೊರೆತ ಗಂಗ ಅರಸು ಭೂ ವಿಕ್ರಮನ ಶಕವರ್ಷ ೫೫೬(ಕ್ರಿ.ಶ ೬೩೪)ರ ಶಾಸನದಲ್ಲಿ ದಾನ ಮಾಡಿದ ಭೂಮಿಯ ಮೇರೆಗಳನ್ನು ಹೇಳುವಾಗ 'ಮೊರ್ಯರ ಮ್ಮಾಳ ಸಮೂಹಂ ' ಎಂಬ ಉಲ್ಲೇಖವಿದೆ. ಆದ್ದರಿಂದ ಇಲ್ಲಿ ಕಲ್ಗೋರಿಗಳಿದ್ದಿರಲೇಬೇಕು. ಇದರಂತೆಯೇ ಆನೆಕನ್ನಂಬಾಡಿಯ (ನಾಗರಾಜರಾವ್.ಎಂ.ಎಸ್. ಮತ್ತು ರಮೇಶ್.ಕೆ.ವಿ:೧೯೮೫;೭೦-೭೮) ಹೊಯ್ಸಳ ವೀರನರಸಿಂಹದೇವನ ಶಕವರ್ಷ ೧೧೪೧ (ಕ್ರಿ.ಶ.೧೨೧೯) ಶಾಸನದಲ್ಲಿಯೂ ದಾನಕೊಟ್ಟ ಭೂಮಿಯ ಗಡಿಯನ್ನು ಹೇಳುವಾಗ ದಕ್ಷಿಣಕ್ಕೆ 'ಮೊರ್ಯರ ಮಾಳ ಸಮುಚ್ಚಂ' ಎಂದು ಉಲ್ಲೇಖಿಸಲಾಗಿದೆ. ಆದ್ದರಿಂದ ಮೊರ್ಯರ ಮನೆ ಎಂಬುದು ಕನಿಷ್ಠ ಪಕ್ಷ ಕ್ರಿಸ್ತ ಶಕ ಆರಂಭದಿಂದಲಾದರೂ ಜನರು ಮಾತಿನಲ್ಲಿ ಬಳಸುತ್ತಿದ್ದರೆಂದು ಹೇಳಬಹುದು. ಇತ್ತೀಚೆಗೆ ಸುಂದರ (೧೯೯೬) ಅವರು ಈ ಮೊರ್ಯರು, ಮೌರ್ಯರ ಕಾಲದ ಇಂತಹ ಕಲ್ಗೋರಿಗಳನ್ನು ಸೂಚಿಸದೆ ಒಂದು ಪ್ರತ್ಯೇಕ ಜನವರ್ಗವನ್ನು ನಿರ್ದೇಶಿಸುತ್ತದೆ ಎಂದು ಚರ್ಚಿಸಿದ್ದಾರೆ.

**ಕಲ್ಗೋರಿಗಳು**

ಅಧ್ಯಯನ ಪ್ರದೇಶದಲ್ಲಿ ಕನಿಷ್ಠ ಪಕ್ಷ ನಾಲ್ಕು ಪ್ರಕಾರಗಳ ಕಲ್ಗೋರಿ ನೆಲೆಗಳಿವೆ. ಅವುಗಳೆಂದರೆ

೧. ನೆಲದ ಮೇಲಿರುವ ಕಲ್ಮನೆ ಮತ್ತು ನೆಲದೊಳಗಿನ ಕಲ್ಮನೆ

೨. ನಿಲಸುಗಲ್ಲುಗಳೊಂದಿಗಿರುವ ಕಲ್ಮನೆಗಳು

೩. ಪ್ರತ್ಯೇಕ ನಿಲಸುಗಲ್ಲುಗಳು ಮತ್ತು

೪. ಕಲ್ಲು ವೃತ್ತಗಳು

### ೧. ನೆಲದ ಮೇಲಿರುವ ಕಲ್ಮನೆ ಮತ್ತು ನೆಲದೊಳಗಿನ ಕಲ್ಮನೆ

೧.೧ ನೆಲದ ಮೇಲಿರುವ ಕಲ್ಮನೆ. ಇಂತಹ ಕಲ್ಮನೆಗಳು ೩ ನೆಲೆಗಳಲ್ಲಿ ಅಂದರೆ ಚಿನಗ ಹೊನ್ನೇನಹಳ್ಳಿ ಮತ್ತು ಬೂದಿಬೆಟ್ಟದಲ್ಲಿ ಕಂಡು ಬಂದಿವೆ. ಚಿನಗ ನೆಲೆಯಲ್ಲಿ ೨ ಕಲ್ಮನೆಗಳಿದ್ದು ಒಂದು ಗುಡ್ಡದ ಬುಡದಲ್ಲಿಯೂ ಮತ್ತೊಂದು ಒಂದು ಕಿ.ಮೀ. ದೂರದಲ್ಲಿ ನಿಲಸುಗಲ್ಲುಗಳ ಸಮೀಪದಲ್ಲಿಯೂ ಇದೆ. ಹೊನ್ನೇನಹಳ್ಳಿಯ ಕಲ್ಮನೆಯು ಗುಡ್ಡದ ಸಮೀಪದಲ್ಲಿಯೇ ಇದೆ. ಬೂದಿ ಬೆಟ್ಟದ ಕಲ್ಮನೆಯು ಗುಡ್ಡದಿಂದ ಸುಮಾರು ಒಂದು ಕಿ.ಮೀ. ಅಂತರದಲ್ಲಿದೆ. ಈಗ ಈ ಎಲ್ಲಾ ನೆಲೆಗಳಲ್ಲಿ ದೂರವಿರುವ ಕಲ್ಮನೆಗಳಿರುವತನಕ ಹಲವಾರು ಕಲ್ಮನೆಗಳಿದ್ದಿರಬೇಕು. ಮತ್ತು ಈ ಮೂರೂ ನೆಲೆಗಳ ಪರಸ್ಪರ ದೂರ ಸುಮಾರು. ೧೦ ರಿಂದ ೫೦ ಕಿ.ಮೀ. ವರೆಗೆ ಇದೆ. ಆದ್ದರಿಂದ ಈ ನೆಲೆಗಳಲ್ಲದೆ ಇನ್ನೂ ಹಲವು ನೆಲೆಗಳಲ್ಲಿ ಇಂತಹ ಕಲ್ಮನೆಗಳಿದ್ದಿರಬಹುದು. ಆದ್ದರಿಂದ ಈ ಭಾಗವು ಇಂತಹ ಕಲ್ಮನೆಗಳ ಒಂದು ಕೇಂದ್ರವಾಗಿದ್ದಿರುವ ಸಾಧ್ಯತೆ ಇದೆ. ಚಿನಗದಲ್ಲಿಯ ಒಂದು ಕಲ್ಮನೆಯು ಸ್ವಲ್ಪ ಸುಸ್ಥಿತಿಯಲ್ಲಿದೆ. ಒಂದೊಂದು ಬದಿಯಲ್ಲಿಯೂ ಎರಡೆರಡೂ ಕಲ್ಲು ಚಪ್ಪಡಿ ಇದೆ. ಆದರೆ ಯಾವ ಬದಿಯ ಕಲ್ಲಿನಲ್ಲಿಯೂ ಪ್ರವೇಶವಿಲ್ಲದಿರುವುದು ಕುತೂಹಲಕಾರಿ. ಸಾಮಾನ್ಯವಾಗಿ ಇಂತಹ ಕಲ್ಮನೆಗಳಲ್ಲಿ ಯಾವುದಾದರೂ ಒಂದು ಬದಿಯ ಕಲ್ಲಿನಲ್ಲಿ ಪ್ರವೇಶ ತೂತು ಇರುತ್ತದೆ. ಕಲ್ಲು ಹಲಗೆಯ ಮೇಲ್ಬದಿ ಅಥವಾ ಮಧ್ಯದಲ್ಲಾಗಲೀ ಸಣ್ಣ ಅಥವಾ ದೊಡ್ಡ ತೂತು ಇರುತ್ತದೆ. ಆದ್ದರಿಂದ ಇದೊಂದು ಸ್ವಲ್ಪ ಮಟ್ಟಿಗೆ ಅಪರೂಪದ ಮಾದರಿ ಎಂದೇ ಹೇಳಬಹುದು. ಆದರೆ ಇದರ ಗೋಡೆಕಲ್ಲುಗಳು ಸಡಿಲವಾಗಿ ದೊಡ್ಡ ದೊಡ್ಡ ಬಿರುಕುಗಳನ್ನು ಬಿಟ್ಟಿರುವುದರಿಂದ ಮೊದಲು ಏನಾದರೂ ವಸ್ತುಗಳನ್ನು ಇಟ್ಟಿದ್ದರೆ ಅವುಗಳನ್ನು ಕುತೂಹಲದಿಂದ ಸಾಮಾನ್ಯ ಜನರು ಬಿರುಕಿನ ಮೂಲಕ ತೆಗೆದುಕೊಂಡಿರಬೇಕು. ಆದ್ದರಿಂದ ಇದೂ ಕೂಡ ಖಾಲಿಯಾಗಿದೆ. ಇದರ ಸಮೀಪದಲ್ಲಿ ಎತ್ತರದ ನಿಲಸುಗಲ್ಲುಗಳಿವೆ. ಈ ನಿಲುಸುಗಲ್ಲಿನಲ್ಲೊಂದು ಒಂದು ಕಡೆಗೆ ಬಾಗಿದಂತೆ ರೂಪಿಸಲಾಗಿದೆ. ಸ್ವಲ್ಪ ಹೆಚ್ಚು ಕಡಿಮೆ ಇದೇ ಪ್ರಕಾರದ ಒಂದು ನಿಲಸುಗಲ್ಲು ಸಹಿತ ಕಲ್ಮನೆಯೊಂದು ಪ್ರಮುಖ ನೆಲೆಯಾದ ಹಿರೇಬೆನಕಲ್ (ಸುಂದರ:೧೯೭೫)ನಲ್ಲಿದೆ. ಅಲ್ಲಿನ ನಿಲಸುಗಲ್ಲನ್ನು ಕಲ್ಮನೆಗೆ ಆನಿಸಿ ನಿಲ್ಲಿಸಿದೆ. ಚಿನಗದಲ್ಲಿ ಸು. ೧೦ ಮೀಟರು ದಲ್ಲಿ ನಿಲಸುಗಲ್ಲು ಇದೆ. ಪ್ರಾಯಶಃ ಇದರ ಸಮೀಪದಲ್ಲಿಯೇ ಮೊದಲು ಒಂದು ಕಲ್ಮನೆ ಇದ್ದಿರಬಹುದೇನೋ? ಕೊಡಗಿನ ಮೊರಿ ಬೆಟ್ಟದಲ್ಲಿ ಕೂಡ ಇದೇ ರೀತಿ ಒಂದು ಕಲ್ಮನೆ ಮುಂದೆ ಎರಡು ಪ್ರತ್ಯೇಕ ಕಲ್ಲನ್ನು ಹತ್ತಿರ ನಿಲ್ಲಿಸಿರುವುದನ್ನು ನೋಡಿದರೆ ಒಬ್ಬ ಪ್ರತಿಷ್ಠಿತ ವ್ಯಕ್ತಿಯದಾಗಿರಬಹುದೆಂದು ಹೋಳಬಹುದೇನೋ?

೧.೨ ನೆಲದೊಳಗಿನ ಕಲ್ಮನೆಗಳು

ಅಧ್ಯಯನ ಪ್ರದೇಶದ ೪ ನೆಲೆಗಳಲ್ಲಿ ಇಂತಹ ಕಲ್ಮನೆಗಳಿರುವುದನ್ನು ಮೇಲೆ ಹೇಳಲಾಗಿದೆಯಷ್ಟೆ. ಇವು ಪ್ರತ್ಯೇಕ ಪ್ರತ್ಯೇಕವಾಗಿ ಎರಡು ಸ್ಥಳಗಳಲ್ಲಿವೆ. ಒಂದು ನೆಲೆಯು ಮೇಲಿರುವ ಕಲ್ಮನೆಯ ನೆಲೆಯಾದ ಹೊನ್ನೇನಹಳ್ಳಿಗೆ ಸಮೀಪವಾಗಿದೆ. ಮತ್ತೊಂದು ನಿವೇಶನ ೪೦ ಕಿ.ಮೀ. ದೂರದಲ್ಲಿದ್ದು ಯಾವುದೇ ಕಲ್ಮನೆ ಇಲ್ಲ. ಆದ್ದರಿಂದ ಇವೆರಡೂ ಪ್ರಕಾರಗಳು ಬಹಮಟ್ಟಿಗೆ ಭಿನ್ನ ಭಿನ್ನ ಸಂಪ್ರದಾಯವನ್ನು ಸೂಚಿಸುತ್ತವೆ ಎಂದು ಕಾಣುತ್ತದೆ. ಇದೇ ರೀತಿ ಸುಂದರ ಅವರು ಹಿರೇಬೆನಕಲ್ (೧೯೭೫) ನಲ್ಲಿ ಇಂತಹ ೨ ಪ್ರಕಾರದ ಕಲ್ಮನೆಗಳು ಒಂದರ ಹತ್ತಿರ ಒಂದಿರುವುದನ್ನು ಗುರುತಿಸಿದ್ದಾರೆ. ಆದ್ದರಿಂದ ಈ ಬೃಹತ್ ಶಿಲಾಯುಗ ವರ್ಗದ ಜನರಲ್ಲಿ ಭಿನ್ನ ಭಿನ್ನ ವರ್ಗವಿದ್ದುದು ಸ್ಪಷ್ಟವಾಗುತ್ತದೆ. ಇರಕಸಂದ್ರ ಕಾಲೋನಿ ಮತ್ತು ಕತ್ತಿರಾಜನಹಳ್ಳಿಯಲ್ಲಿಯ ಕಲ್ಮನೆಗಳನ್ನು ಹಿಂದೆ ಅಗೆಯಲಾಗಿದ್ದು ಅವುಗಳ ಸುತ್ತಮುತ್ತ ಈಗಲೂ ಕೂಡ ಮೃತ್ ಪಾತ್ರೆ ಅವಶೇಷಗಳಿವೆ. ಇವೆಲ್ಲವೂ ಈಗಾಗಲೇ ದೊರೆತಿರುವ ಬ್ರಹ್ಮಗಿರಿ (ವೀಲರ್:೧೯೪೮;೧೮೦-೩೧೦) ಮತ್ತು ಬನ-ಹಳ್ಳಿ (ಇಂ.ಆ.ರಿ:೧೯೮೩-೮೪;೪೨-೪೬, ೧೯೮೫-೮೬;೪೩-೪೪ ಮತ್ತು ೧೯೮೬-೮೭;೪೨-೪೫) ಉತ್ಖನನಗಳಲ್ಲಿ ದೊರೆತ ಮಣ್ಣಿನ ಪಾತ್ರೆಗಳಂತಿವೆ. ಇವುಗಳಲ್ಲಿ ಹೆಚ್ಚಿನ ವೈಶಿಷ್ಟ್ಯವೇನೂ ಕಂಡು ಬರುವುದಿಲ್ಲ.

ನಿಲಸುಗಲ್ಲುಗಳು

ಈಗಾಗಲೇ ತಿಳಿದಂತೆ ಕರ್ನಾಟಕದಲ್ಲಿ ಎರಡು ಪ್ರಕಾರದ ನಿಲಸುಗಲ್ಲುಗಳಿವೆ. ವಿಭೂತಿಹಳ್ಳಿ, ಗೋಗಿ, ಹನು-ಮಸಾಗರ (ಸುರಪುರ ತಾಲ್ಲೂಕು, ಗುಲ್ಬರ್ಗ ಜಿಲ್ಲೆ), ಮಸ್ಕಿ, (ಥಾಪರ್:೧೯೫೭;೪-೧೪೨), ಪಿಕ್ಲಿಹಾಳ (ಅಲ್ಚಿನ್:೧೯೬೦) (ರಾಯಚೂರು ಜಿಲ್ಲೆ)ಮತ್ತು ಇವುಗಳ ಪೂರ್ವ ನೆಲೆಯ ಆಂಧ್ರ ಪ್ರದೇಶದ ಕೆಲವೆಡೆ ಸು.೨೦ ರಿಂದ ೧೦೦೦ ದವರೆಗೂ ನಿಲಸುಗಲ್ಲುಗಳಿರುವ ನೆಲೆಗಳಿವೆ. ಈ ನೆಲೆಗಳಲ್ಲಿ ನಿಲಸುಗಲ್ಲುಗಳು ಒಂದು ಕ್ರಮದಲ್ಲಿ ಸಾಲುಸಾಲಾಗಿವೆ. ಈ ಸಾಲುಗಳಲ್ಲಿ ನಿಲಸುಗಲ್ಲುಗಳನ್ನು ಎರಡು ಕ್ರಮದಲ್ಲಿ ನಿಲ್ಲಿಸಲಾಗಿದೆ. ಒಂದು ಪ್ರಕಾರದಲ್ಲಿ ಯಾವ ಬದಿಯಿಂದ ನೋಡಿದರೂ ಕಲ್ಲುಗಳು ಸಮಾನಾಂತರ ಸಾಲುಗಳಲ್ಲಿ ಇರುತ್ತವೆ. ಇನ್ನೊಂದು ಪ್ರಕಾರದಲ್ಲಿ ಬದಿಗಳಿಂದ ಮಾತ್ರ ಮೂಲೆಗಳಿಂದ ನೋಡಿದಾಗ್ಯೂ ಸಾಲುಸಾಲಾಗಿ ಇರುವುದನ್ನು ಕಾಣಬಹುದು. ಮಸ್ಕಿ (ಥಾಪರ್:೧೯೫೭;೪-೧೪), ಪಿಕ್ಲಿಹಾಳ (ಅಲ್ಚಿನ್.ಬಿ:೧೯೬೦) ಗಳ ಉತ್ಖನನದಿಂದ ಇವು ಸಮಾಧಿ ಕಲ್ಲುಗಳಲ್ಲವೆಂದು ಗೊತ್ತಾಗಿದೆ. ಮೃತರ ನೆನಪಿನಲ್ಲಿ ನೆಡಿಸಿದ ಕಲ್ಲುಗಳೆಂಬ ಅಭಿಪ್ರಾಯವಿದೆ. ಈ ಸಾಲುಗಲ್ಲುಗಳಲ್ಲಿ ಕಲ್ಲುಗಳು ಬೃಹದಾಕಾರದ ಬಂಡೆಗಳು. ಈ ಪ್ರಕಾರದ ನಿಲಸುಗಲ್ಲುಗಳು ಅಧ್ಯಯನ ಪ್ರದೇಶದಲ್ಲಿ ಕಂಡು ಬರುವುದಿಲ್ಲ. ಶಿವಮೊಗ್ಗ ಜಿಲ್ಲೆಯ ನೈಋತ್ಯ ಭಾಗದ ಹೊಸನಗರ ತಾಲ್ಲೂಕಿನ ನಿಲಸುಗಲ್ಲು ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಕಡಿಮೆ ಸಂಖ್ಯೆಯಲ್ಲಿ ನಿಲಸುಗಲ್ಲುಗಳಿವೆ. ಸಾಮಾನ್ಯವಾಗಿ ೪-೧೦ರಿಂದ ೨೦-೪೦ರವರೆಗೆ ಇಂತಹ ನಿಲಸುಗಲ್ಲು-

ಗಳು ಒಂದೊಂದು ನೆಲೆಯಲ್ಲಿರುತ್ತವೆ. ಇವು ಇಡೀ ನೆಲೆಯಲ್ಲೆಲ್ಲಾ ಚೆಲ್ಲಾಪಿಲ್ಲಿಯಾಗಿ ಹರಡಿದಂತಿರುತ್ತದೆ. ಸಾಮಾನ್ಯವಾಗಿ ಇವೆಲ್ಲವೂ ದಪ್ಪ ಹಲಗೆ ಕಲ್ಲುಗಳು ಇಂತಹ ನಿಲಸುಗಲ್ಲುಗಳು. ಕೇರಳದಲ್ಲಿಯೂ ಕೂಡ ಇವೆ. ಅದರಲ್ಲಿ ಒಂದನ್ನು ಅನಜನ್ ಆಚೆನ್‌ರವರು ಉತ್ಖನನ ಮಾಡಿದ್ದಾರೆ. ಇವುಗಳ ಬುಡದಲ್ಲಿ ಸಾಮಾನ್ಯವಾಗಿ ಅಸ್ಥಿ ಅವಶೇಷ, ಮೃತ್‌ಪಾತ್ರೆ ಹಾಗೂ ಕಬ್ಬಿಣದ ಸಾಮಾನುಗಳು ದೊರೆತಿವೆ. ಮನಗೊಂಡನಹಳ್ಳಿ (ಬೆಂಗಳೂರು ಜಿಲ್ಲೆ)ಯಲ್ಲಿ ಇಂತಹ ನಿಲಸುಗಲ್ಲುಗಳಿವೆ. ಈ ನಿಲಸುಗಲ್ಲುಗಳು ಸಾಮಾನ್ಯವಾಗಿ ಕಲ್ಲು ಪೆಟ್ಟಿಗೆಗೆ ಆನಿಸಿ ಇಡಲಾಗಿದೆ. ಆದರೆ ಹೊಸನಗರ ಪ್ರದೇಶದಲ್ಲಿ ನಿಲಸುಗಲ್ಲು ಸ್ವತಂತ್ರ್ಯವಾಗಿದ್ದು ಬೇರೆ ಪ್ರಕಾರದ ಬೃಹತ್ ಶಿಲಾ ಗೋರಿಯ ಭಾಗವಾಗಿರುವುದಿಲ್ಲ. ಅಧ್ಯಯನ ಪ್ರದೇಶದ ನಿಲಸುಗಲ್ಲುಗಳು ಈ ಪ್ರಕಾರದವು. ಆದರೆ ಇವುಗಳಲ್ಲಿ ಒಂದು ವೈಶಿಷ್ಟ್ಯವಿದೆ. ಇವು ಅಗಲ ಕಡಿಮೆ ಇದ್ದು ಅತಿ ಹೆಚ್ಚು ಎತ್ತರ (೫.೨೦ ಮೀ.) ಇದೆ. ಚಿನಗದಲ್ಲಿ ಇಂತಹ ನಿಲಸುಗಲ್ಲುಗಳು ನೆಲದ ಮೇಲಿನ ಕಲ್ಮನೆಗೆ ಸಮೀಪದಲ್ಲಿ ಇರುವುದನ್ನು ಈಗಾಗಲೇ ಗಮನಿಸಲಾಗಿದೆ. ಆದ್ದರಿಂದ ಪ್ರಾಯಶಃ ಈ ಭಾಗವು ಇವೆರಡು ಭಿನ್ನ ಪ್ರಕಾರದ ಕಲ್ಗೋರಿಗಳ ಸಂಗಮ ನೆಲೆಯೆಂದು ಕಂಡು ಬರುತ್ತದೆ.

**ಕಲ್ಲು ವೃತ್ತಗಳು**

ಇವು ಸು. ೪.೫ ಮೀ. ನಿಂದ ೧೨.೫ ಮೀ. ವರೆಗೆ ವ್ಯಾಸ ಉಳ್ಳದ್ದಾಗಿವೆ. ೬ ರಿಂದ ೧೮ ರವರೆಗೆ ವೃತ್ತದಲ್ಲಿ ಕಲ್ಲು ಗುಂಡುಗಳಿರುತ್ತವೆ. ವೃತ್ತದೊಳಗೆ ಕಲ್ಲು ಚಕ್ಕೆಗಳ ರಾಶಿ ಇರುತ್ತದೆ. ಈ ಪ್ರಕಾರದ ಕಲ್ಗೋರಿಗಲು ಸಾಮಾನ್ಯವಾಗಿ ದಕ್ಷಿಣ ಭಾರತದ ಎಲ್ಲಾ ನೆಲೆಗಳಲ್ಲಿಯೂ ಇವೆ. ಬ್ರಹ್ಮಗಿರಿ(ವೀಲರ್:೧೯೪೮:೧೮೦-೩೧೦), ಮಸ್ಕಿ (ಥಾಪರ್:೧೯೫೭:೪-೧೪೨), ಚಾಪ (ದೇವ್.ಎಸ್.ಬಿ:೧೯೭೦), ಘಾಟ್ (ದೇವ್.ಎಸ್.ಬಿ:೧೯೭೦), ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ:೧೯೭೫), ನಾಯ್ಕುಂದ (ಇಂ.ಆ.ರಿ:೧೯೭೭-೭೮:೩೯), ತಾಕಲ್ ಮೊದಲಾದೆಡೆಗಳಲ್ಲಿ ಇಂತಹ ಕಲ್ಲು ವೃತ್ತಗಳನ್ನು ಉತ್ಖನನ ಮಾಡಲಾಗಿದೆ. ಇವೆಲ್ಲವೂ ಕೂಡ ಶವಸಂಸ್ಕಾರದ ಕುರುಹುಗಳು. ಈ ಶಿಲಾವೃತ್ತಗಳಿರುವ ೭ ನೆಲೆಗಳ ಪೈಕಿ ೪ ನೆಲೆಗಳಲ್ಲಿ ಇದೊಂದೇ ಪ್ರಕಾರದ ಶಿಲಾ ವೃತ್ತಗಳಿವೆ. ಇದೂ ಕೂಡ ಒಂದು ಪ್ರತ್ಯೇಕ ಬೃಹತ್ ಶಿಲಾ ಸಂಸ್ಕೃತಿಯ ಜನರ ಶವಸಂಸ್ಕಾರದ ಒಂದು ಪ್ರಕಾರವೆಂದು ಹೇಳಬಹುದು.

ಮೇಲೆ ಹೇಳಿದ ಎಲ್ಲಾ ಪ್ರಕಾರಗಳ ಬೃಹತ್ ಶಿಲಾ ಗೋರಿಗಳು ಈ ಅಧ್ಯಯನ ಪ್ರದೇಶದ ನೆಲೆಹೊರೆಯ ಪ್ರದೇಶಗಳಲ್ಲಿಯೂ ಹಾಗೂ ದಕ್ಷಿಣ ಭಾರತದ ಇತರೆಡೆಗಳಲ್ಲಿಯೂ ಇವೆ. ಇವುಗಳಲ್ಲಿ ನಿಲಸುಗಲ್ಲು ಮಾತ್ರ ಕೆಲವೇ ಪ್ರದೇಶಗಳಲ್ಲಿವೆ. ಅಧ್ಯಯನ ಪ್ರದೇಶದ ಸುತ್ತಲಿನ ಕೋಲಾರ, ಬೆಂಗಳೂರು, ಮಂಡ್ಯ, ಹಾಸನ, ಚಿಕ್ಕಮಗಳೂರು, ಚಿತ್ರದುರ್ಗ ಹಾಗೂ ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ ಅಲ್ಲದೆ ಕೇರಳ ಪ್ರದೇಶದಲ್ಲಿಯೂ ಇವೆ. ಹೀಗೆ ಈ ಪ್ರಕಾರದ ನಿಲಸುಗಲ್ಲು-

ಗಳಿದ್ದು, ಇವುಗಳ ಉತ್ಖನನ ಮೇಲೆ ಹೇಳಿದ ಒಂದನ್ನು ಬಿಟ್ಟರೆ ಎಲ್ಲಿಯೂ ಆಗಿಲ್ಲ. ತುಮಕೂರು ಜಿಲ್ಲೆಯ ನಿಲಸುಗಲ್ಲು ಮೇಲೆ ಹೇಳಿದಂತೆ ವಿಶಿಷ್ಟ ಪ್ರಕಾರದವಾಗಿರುವುದರಿಂದ ಇಂತಹ ಒಂದೆರಡು ನಿಲಸುಗಲ್ಲುಗಳ ಉತ್ಖನನ ಅವಶ್ಯ.

**ಮೃತ್ ಪಾತ್ರೆ**

ದಕ್ಷಿಣ ಭಾರತದ ಇತರ ಪ್ರದೇಶಗಳಲ್ಲಿ ನಡೆದಿರುವ ಸ್ಥಳ ಪರಿಶೋಧನೆ ಹಾಗೂ ಉತ್ಖನನಗಳಿಂದ ಕಲ್ಗೋರಿ ಸಮಾಧಿಗಳಲ್ಲಿ ಅಸ್ಥಿ ಪಂಜರ ಅವಶೇಷಗಳು, ಅದರೊಡನೆ ಇಟ್ಟಿರುವ ವಿಶಿಷ್ಟ ಮೃತ್ ಪಾತ್ರೆಗಳು, ಕಬ್ಬಿಣದ ಉಪಕರಣಗ-ಳು, ಮಣಿ, ಶಂಖು ಮುಂತಾದ ಅಲಂಕಾರದ ವಸ್ತುಗಳು ಈಗಾಗಲೇ ತಿಳಿದುಬಂದಿದೆ. ಪ್ರಸ್ತುತ ಅಧ್ಯಯನ ಪ್ರದೇಶದ ಪರಿಮಿತಿಯಲ್ಲಿ ಇಂತಹ ಯಾವುದೇ ಪ್ರಾಯೋಗಿಕ ಉತ್ಖನನ ನಡೆಸಲು ಸಾಧ್ಯವಾಗಿಲ್ಲ. ಸ್ಥಳ ಪರಿಶೋದನೆಯಲ್ಲಿ ಕೇವಲ ಬಹಳಷ್ಟು ತುಕ್ಕು ಹಿಡಿದಿರುವ ಒಂದೆರಡು ಕಬ್ಬಿಣದ ಉಪಕರಣಭಾಗಗಳು ಮತ್ತು ಮೃತ್ ಪಾತ್ರೆಗಳು ಮಾತ್ರವೇ ದೊರಕಿವೆ.

ದೊರೆತಿರುವ ಕಬ್ಬಿಣದ ಉಪಕರಣಗಳು ಮುರಿದುಹೋಗಿದ್ದು ಬಹಳಷ್ಟು ತುಕ್ಕು ಹಿಡಿದಿರುವುದರಿಂದ ನಿರ್ದಿಷ್ಟವಾಗಿ ಅವುಗಳ ಮೂಲ ಆಕೃತಿ, ಉಪಯೋಗ ಇತ್ಯಾದಿಗಳ ಬಗೆಗೆ ಹೆಚ್ಚಿನ ವಿವರ ನೀಡಲು ಸಾಧ್ಯವಾಗಿಲ್ಲ.

ದೊರೆತಿರುವ ಮೃತ್ ಪಾತ್ರೆ ಅವಶೇಷಗಳು ಸಾಕಷ್ಟು ಉತ್ತಮ ಸ್ಥಿತಿಯಲ್ಲಿವೆ. ಬೃಹತ್ ಶಿಲಾಯುಗ ಸಮಾಧಿ ಮತ್ತು ವಸತಿ ನಿವೇಶನಗಳಲ್ಲಿ ಸಾಧಾರಣವಾಗಿ ದೊರೆತಿರುವ ಕಪ್ಪು- ಕೆಂಪು ಮತ್ತು ಕಪ್ಪು ಬಣ್ಣದ ಮೃತ್ ಪಾತ್ರೆಗಳು ಹೆಚ್ಚಾಗಿವೆ. ಆಕೃತಿ, ಉಪಯೋಗ ಮತ್ತು ತಯಾರಿಕೆಯ ತಂತ್ರ ಮುಂತಾದ ಅಂಶಗಳಲ್ಲಿ ಇವು ಈಗಾಗಲೇ ಬ್ರಹ್ಮಗಿರಿ(ವೀಲರ್:೧೯೪೮;೧೮೦-೩೧೦) ಮಸ್ಕಿ(ಥಾಪರ್:೧೯೫೭;೪-೧೪೦) ಹಳ್ಳೂರು (ನಾಗರಾಜರಾವ್:೧೯೭೧) ತಡಕನಹಳ್ಳಿ(ನಾಗರಾಜರಾವ್:೧೯೮೫) ಕೋಮಾರನಹಳ್ಳಿ (ನಾಗರಾಜರಾವ್:೧೯೬೦;೩೧೧-೩೨೦) ಬನಹಳ್ಳಿ(ಇಂ.ಆ.ರಿ:೧೯೮೩-೮೪;೪೨-೪೬,೧೯೮೫-೮೬;೪೩-೪೪ ಮತ್ತು ೧೯೮೬-೮೭;೪೨-೪೫) ಹೆಗ್ಗಡೆಹಳ್ಳಿ(ದೇವರಾಜ್:೧೯೯೬) ಮುಂತಾದ ಉತ್ಖನನಗಳಲ್ಲಿ ದೊರೆತಿರುವ ಮೃತ್ ಪಾತ್ರೆಗಳನ್ನೆ ಹೋಲುತ್ತದೆ. ದೊರೆತಿರುವ ಕೆಲವು ಮಾದರಿಗಳನ್ನು ಅಧ್ಯಾ-ಯದ ಕೊನೆಯಲ್ಲಿ ವಿವರಿಸಿದೆ.

ಈಗಾಗಲೇ ತಿಳಿದಿರುವಂತೆ ಬೃಹತ್ ಶಿಲಾಯುಗದ ಅಥವಾ ಕಬ್ಬಿಣ ಯುಗದ ಪ್ರಮುಖ ಸಾಂಸ್ಕೃತಿಕ ಲಕ್ಷಣ ಕಬ್ಬಿಣದ ಉಪಯೋಗದ ಜೊತೆಗೆ ಅತಿ ಹೆಚ್ಚು ಪ್ರಮಾಣದಲ್ಲಿ ಕಪ್ಪು, ಕೆಂಪು ಎರಡೂ ಬಣ್ಣದ ಗೃಹೋಪಯೋಗಿ ಮೃತ್‌ಪಾತ್ರೆಗಳು. ಈ ಪ್ರಮುಖ ಲಕ್ಷಣದ ಜೊತೆಗೆ ಸಾಧಾರಣವಾಗಿ ದೊರಕುವ ಇನ್ನೆರಡು ಪೂರ್ಣ ಕಪ್ಪು ಮತ್ತು ಪೂರ್ಣ

ಕೆಂಪು ಬಣ್ಣದ ಮೃತ್ ಪಾತ್ರೆಗಳು ಪ್ರಸ್ತುತ ಸ್ಥಳ ಪರಿಶೋದನೆಯ ವ್ಯಾಪ್ತಿಯಲ್ಲಿಯೂ ಈ ಮೂರು ರೀತಿಯ ಮೃತ್ ಪಾತ್ರೆಯ ಅವಶೇಷಗಳು ಗಣನೀಯ ಪ್ರಮಾಣದಲ್ಲಿ ದೊರಕಿದ್ದರೂ ಈಗಾಗಲೇ ತಿಳಿದು ಬಂದಿರುವ ಅಂಶಗಳಿಗಿಂತ ಹೆಚ್ಚಿನ ಯಾವುದೇ ಮಾದರಿಯನ್ನು ಇವು ನೀಡುವುದಿಲ್ಲ.

**ಕಪ್ಪು-ಕೆಂಪು ಮೃತ್ ಪಾತ್ರೆಗಳು**

ತಾಮ್ರ-ಶಿಲಾಯುಗದಿಂದ ಮುಂದುವರೆಯುವ ಈ ರೀತಿಯ ಮೃತ್ ಪಾತ್ರೆಗಳು ಬೃಹತ್ ಶಿಲಾಯುಗದಲ್ಲಿ ಅತ್ಯಂತ ಜನಪ್ರಿಯವಾಗಿದ್ದರೂ ಸುಡುವಾಗ ಪಾತ್ರೆಗಳನ್ನು ತಲೆಕೆಳಗಾಗಿ ಇಟ್ಟು ನಿಯಮಿತ ಪ್ರಮಾಣದಲ್ಲಿ ಗಾಳಿಯಾಡು-ವಂತೆ ಸುಟ್ಟಿರುವುದರಿಂದ ಕಪ್ಪು-ಕೆಂಪು ಬಣ್ಣಗಳ ಹದವಾದ ಬೆರಕೆ ಈ ಪಾತ್ರೆಗಳಲ್ಲಿ ಕಾಣುತ್ತದೆ. ಕೆಲವೊಮ್ಮೆ ಸುಡುವುದಕ್ಕೆ ಮೊದಲು ತೆಳ್ಳನೆಯ ಲೇಪನವನ್ನು ನೀಡಿದ್ದು ಹೊಳಪು ಬರುವಂತೆ ಉಜ್ಜಿರಲಾಗುತ್ತದೆ. ವಿಶೇಷವಾಗಿ ಈ ಪಾತ್ರೆಗಳನ್ನು ತಿರುಗು ಚಕ್ರದ ಮೇಲೆಯೇ ರಚಿಸಿದೆ.

ಗೃಹೋಪಯೋಗಿ ಪಾತ್ರೆಗಳಾದ ಸಣ್ಣ ಮತ್ತು ಮಧ್ಯಮ ಗಾತ್ರದ ವಿವಿಧಾಕಾರದ ಬಟ್ಟಲುಗಳು, ಬೋಗುಣಿ-ಗಳು, ಎತ್ತರವಾದ ಲೋಟದಂತಹ ಪಾತ್ರೆಗಳು, ಮುಚ್ಚಳಗಳು, ತಟ್ಟೆಯಂತಹ ಅಗಲವಾದ ಪಾತ್ರೆ, ಪೀಠವಿರುವ ಬಟ್ಟಲು-ಗಳು ಪ್ರಧಾನವಾಗಿ ಕಾಣುವ ಆಕೃತಿಗಳು. ತೆಳ್ಳಗಿನ ಈ ಪಾತ್ರೆಗಳ ಹೊರಮೈ ಮತ್ತು ಒಳಮೈಗಳಲ್ಲಿ ಯಾವುದೇ ರೀತಿಯ ಅಲಂಕರಣ ಕಂಡು ಬರುವುದಿಲ್ಲ. ಕೆಲವು ನೆಲೆಗಳಲ್ಲಿ ಹೊರಮೈ ಮೇಲೆ ಚೂಪಾದ ಮೊಳೆಯಂತಹ ಉಪಕರಣದಿಂದ ಗೀಚಿ ಮೂಡಿಸಿರುವ ಅಶೋಕನ ಕಾಲದ ಬ್ರಾಹ್ಮೀಲಿಪಿಯನ್ನು ಹೋಲುವ ಅಕ್ಷರಗಳು ಕಂಡು ಬರುತ್ತವಾದರೂ ಪ್ರಸ್ತುತ ಅಧ್ಯ-ಯನ ಪ್ರದೇಶದಲ್ಲಿ ಅಂತಹ ಉದಾಹರಣೆಗಳು ಕಂಡುಬಂದಿಲ್ಲ. ದೊರೆತಿರುವ ಕೆಲವು ಉತ್ತಮ ಮಾದರಿಗಳನ್ನು ಅಧ್ಯಯ-ನದ ಕೊನೆಯಲ್ಲಿ ವಿವರಿಸಲಾಗಿದೆ.

**ಪೂರ್ಣ ಕಪ್ಪು ವರ್ಣದ ಮೃತ್ ಪಾತ್ರೆಗಳು**

ಇಂತಹ ಮೃತ್ ಪಾತ್ರೆಗಳು ಬೃಹತ್ ಶಿಲಾಯುಗದ, ವಿಶೇಷವಾಗಿ ಸಮಾಧಿ ನಿವೇಶನಗಳ ವೈಶಿಷ್ಟ್ಯವೆಂದು ಪರಿಗಣಿಸಲಾಗಿದೆ. ಇವುಗಳನ್ನು ತಿರುಗು ಚಕ್ರದ ಮೇಲೆ ರೂಪಿಸಿದ್ದು ಸುಡುವ ಮೊದಲು ತೆಳುವಾದ ಲೇಪನವನ್ನು ಹಚ್ಚಿ ಬಹಳಷ್ಟು ನಿಯಂತ್ರಿತ ಗಾಳಿಯಾಡುವಿಕೆಯಿಂದ ಸುಟ್ಟು ಪಾತ್ರೆಗಳ ಒಳ ಮತ್ತು ಹೊರ ಬದಿಗಳನ್ನು ಸಂಪೂರ್ಣ ಕಪ್ಪಾಗು-ವಂತೆ ಸುಟ್ಟಿರಲಾಗುತ್ತದೆ.

ಈ ಪಾತ್ರೆಗಳು ಕಪ್ಪು-ಕೆಂಪು ದ್ವಿವರ್ಣದ ಪಾತ್ರೆಗಳಷ್ಟು ಹೆಚ್ಚಿನ ವೈವಿಧ್ಯವನ್ನು ಹೊಂದಿರದೆ ಕೆಲವು ವಿಶಿಷ್ಟ ಆಕೃತಿಗಳಿಗೇ ಸೀಮಿತವಾಗಿವೆ. ಇಂತಹ ಆಕೃತಿಗಳಲ್ಲಿ ಬೋಗುಣಿ, ಬಟ್ಟಲು, ಲೋಟ ಮತ್ತು ಬಟ್ಟಲುಗಳ ಮೇಲೆ ಮುಚ್ಚಲು ಉಪಯೋಗಿಸುವ ವಿಶೇಷ ರೀತಿಯ ಹಿಡಿಕೆಯುಳ್ಳ ಎತ್ತರವಾದ ಶಂಖುವಿನಾಕಾರದ ಮುಚ್ಚಳಗಳು ಮುಖ್ಯವಾದವುಗಳು. ಸಾಧಾರಣವಾಗಿ ಈ ಪೂರ್ಣ ಕಪ್ಪುಪಾತ್ರೆಗಳು ದಫನ ಸಾಮಗ್ರಿಯ ಭಾಗವಾಗಿ ಕಲ್ಗೋರಿಗಳಲ್ಲಿ ಮಾತ್ರ ಕಂಡು ಬರುತ್ತವೆ. ಕೆಲವು ಆಯ್ದ ಮೃತ್ ಪಾತ್ರೆ ಮಾದರಿಗಳನ್ನು ಅಧ್ಯಾಯದ ಕೊನೆಯಲ್ಲಿ ವಿವರಿಸಿದೆ.

**ಪೂರ್ಣ ಕೆಂಪು ವರ್ಣದ ಮೃತ್ ಪಾತ್ರೆಗಳು**

ಪೂರ್ಣ ಕೆಂಪು ವರ್ಣದ ಮೃತ್ ಪಾತ್ರೆಗಳನ್ನು ಎರಡು ಮುಖ್ಯ ಗುಂಪುಗಳಾಗಿ ವಿಂಗಡಿಸಬಹುದು. ಮಧ್ಯಮ ಗಾತ್ರದ ಹೊಳಪುಳ್ಳ ಮೃತ್ ಪಾತ್ರೆಗಳು ಮೊದಲನೆ ಗುಂಪಿಗೆ ಸೇರಿದರೆ ದೊಡ್ಡ ಗಾತ್ರದ ಹೊಳಪಿಲ್ಲದ ಪಾತ್ರೆಗಳು ಎರಡನೆಯ ಗುಂಪಿಗೆ ಸೇರುತ್ತದೆ. ಸುಡುವ ಮೊದಲು ತೀರ ತೆಳುವಾದ ಲೇಪನ ಕೊಟ್ಟು ಹೆಚ್ಚಿನ ಉಷ್ಣತೆಯಲ್ಲಿ ಸುಟ್ಟಿರುವುದರಿಂದ, ತೆಳು ಕೆಂಪಿನಿಂದ ಕಡು ಕೆಂಪಿನವರೆಗೆ ವಿವಿಧ ವರ್ಣಗಳನ್ನು ಪಡೆದಿರುವ ಈ ಗುಂಪಿನ ಪಾತ್ರೆಗಳು ದಖನ್ ನ ತಾಮ್ರಶಿಲಾಯುಗ ಸಂಸ್ಕೃತಿಯ ಮುಂದುವರಿಕೆಯಾಗಿ ಕಾಣುತ್ತದೆ. ಕಪ್ಪು-ಕೆಂಪು ವರ್ಣದ ಹೆಚ್ಚೂ ಕಡಿಮೆ ಎಲ್ಲಾ ಆಕೃತಿಗಳನ್ನೂ ಪೂರ್ಣ ಕೆಂಪು ಬಣ್ಣದ ಮಾದರಿಯಲ್ಲೂ ಕಾಣಬಹುದು. ಜೊತೆಗೆ ಮಧ್ಯಮ ಗಾತ್ರದ ಕೊಡಗಳಂತಹ ಆಕೃತಿಗಳು ಹೆಚ್ಚಾಗಿ ದೊರೆಯುತ್ತವೆ. ಆಯ್ದ ಮಾದರಿಗಳನ್ನು ಅಧ್ಯಾಯದ ಕೊನೆಯಲ್ಲಿ ವಿವರಿಸಲಾಗಿದೆ.

ಹೊಳಪಿಲ್ಲದ ಕೆಂಪು ವರ್ಣದ ಮೃತ್ ಪಾತ್ರೆಗಳು ಗಾತ್ರದಲ್ಲಿ ದೊಡ್ಡದಾಗಿದ್ದು ಲೇಪನದ ಬಣ್ಣವನ್ನನುಸರಿಸಿ ಬೂದು ಗೆಂಪಿನಿಂದ ತೆಳುಗೆಂಪು ವರ್ಣದವರೆಗೆ ದೊರೆಯುತ್ತವೆ.ಈ ಪಾತ್ರೆಗಳನ್ನು ಸಾಧಾರಣವಾಗಿ ಚಕ್ರದ ಮೇಲೆ ರೂಪಿಸದೆ ಕೈಯಲ್ಲಿಯೇ ಮೂಡಿಸಿರುವುದರಿಂದ ದಪ್ಪವಾಗಿದ್ದು ಸ್ವಲ್ಪ ಒರಟಾಗಿವೆ. ಉಪಯೋಗಿಸಿರುವ ಮಣ್ಣು ಸಹಾ ಸಾಮಾನ್ಯ ದರ್ಜೆಯಾಗಿದ್ದು ಬೇಗ ಮುರಿದು ಹೋಗುವ ಲಕ್ಷಣವನ್ನು ಹೊಂದಿರುತ್ತವೆ. ಹೆಚ್ಚಾಗಿ ಸಂಗ್ರಹಣೆಗೆ ಉಪಯೋಗಿಸುವ ಇಂತಹ ಪಾತ್ರೆಗಳು ನೀರಿನ ಬಾಣಿ, ಧಾನ್ಯ ಸಂಗ್ರಹಣಾ ಪಾತ್ರೆ, ದಪ್ಪ ಕೊಡ, ಎತ್ತರವಾದ ಜಾಡಿ ಮುಂತಾದ ವಿವಿಧ ಆಕೃತಿಗಳಲ್ಲಿರುತ್ತವೆ. ಸಂಗ್ರಹಣೆ ಮತ್ತು ಸಾಗಾಣಿಕೆಯ ಅನುಕೂಲಕ್ಕಾಗಿ ಬುಡದಲ್ಲಿ ಬೇರೆಯಾಗಿ ಸೇರಿಸಿ ಮೂಡಿಸಿರುವ ಕಾಲುಗಳು ಹಾಗೂ ಹಿಡಿಕೆಯ ಭಾಗಗಳನ್ನೂ ಒಳಗೊಂಡಿರುತ್ತವೆ. ಕೆಲವೊಮ್ಮೆ ಪಾತ್ರೆಯ ಆಕಾರಕ್ಕೆ ಹೊಂದಿಕೊಳ್ಳುವಂತಹ ಪೀಠವನ್ನು ಬೆಸದಿರುವುದುಂಟು. ಹೊರಮೈಯಲ್ಲಿ ಬೆರಳಿನಿಂದ ಒತ್ತಿ ಮೂಡಿಸಿರುವ ಕಚ್ಚುಗಳುಳ್ಳ, ಕೊರೆದಿರುವ ಅಲಂಕರಣಗಳನ್ನು ಕಾಣಬಹುದು. ಕೆಲವೊಮ್ಮೆ ತೊಟ್ಟಿಲಿನಾಕಾರದ ಕಾಲುಗಳುಳ್ಳ ಉದ್ದವಾದ ಇಂತಹ ಪಾತ್ರೆಗಳನ್ನು

ಶವಪೆಟ್ಟಿಗೆಯಾಗಿಯೂ ಬಳಸಿರುವ ಉದಾಹರಣೆಗಳಿವೆ. ಅಯ್ದಮೃತ್ ಪಾತ್ರೆಗಳ ವಿವರಣೆಯನ್ನು ಅಧ್ಯಾಯದ ಕೊನೆ-ಯಲ್ಲಿ ವಿವರಿಸಲಾಗಿದೆ.

**ಅಯ್ದ ಮೃತ್ ಪಾತ್ರೆಗಳ ವಿವರಣೆ**

(ಕಪ್ಪು-ಕೆಂಪು, ಕಪ್ಪುಮತ್ತು ಕೆಂಪು ವರ್ಣ)

೧. ಮಧುಗಿರಿ:- ಕಪ್ಪು-ಕೆಂಪು ವರ್ಣದ ನೇರ ಪಾರ್ಶ್ವದ ಅಂಚು ತುಸು ಬಾಗಿದ ಲವಣ ಉಜ್ಜಿ ಹೊಳಪಿಸಿದ ಬೋಗುಣಿಯ ಭಾಗ.

೨. ಮಧುಗಿರಿ:- ಕಪ್ಪು-ಕೆಂಪು ವರ್ಣದ ಹೆಚ್ಚು ಆಳವಿಲ್ಲದ ಸಮತಲದ ಅಂಚು ಹೊರಬಾಗಿದ ಸಣ್ಣ ಗಾತ್ರದ ಬೋಗುಣಿ.

೩. ಮಧುಗಿರಿ:- ಕಪ್ಪು-ಕೆಂಪು ವರ್ಣದ ಹೆಚ್ಚು ಆಳವಿಲ್ಲದ ಸಮತಲದ ಅಂಚು ಹೊರಬಾಗಿದ ಸಣ್ಣ ಗಾತ್ರದ ಬೋಗುಣಿ. ತಳ ಸ್ವಲ್ಪ ಒಳಬಾಗಿದೆ.

೪. ಮಧುಗಿರಿ:- ಕಪ್ಪು-ಕೆಂಪು ವರ್ಣದ ಕೋನಾಕೃತಿಯ ತುಸು ಹೊರ ಬಾಗಿದ ದೃಡ ಅಂಚಿನ ಬೋಗುಣಿಯ ಭಾಗ.

೫. ಮಧುಗಿರಿ:- ಕಪ್ಪು-ಕೆಂಪು ವರ್ಣದ ಬೃಹತ್ ಗಾತ್ರದ ನೀಳ ಕುತ್ತಿಗೆಯ ಅಂಚು ಹೊರಬಾಗಿದ ಕೊಡದ ಭಾಗ.

೬. ಮಧುಗಿರಿ:- ಕಪ್ಪು ಬಣ್ಣದ ಲವಣ ಉಜ್ಜಿ ಹೊಳಪಿನ ಅಂಚು ಹೊರಚಾಚಿದೆ ಕಪ್ಪು-ಕೆಂಪು ವರ್ಣದ ಅಗಲ ಬಾಯಿಯ ತುಸು ಹೊರಚಾಚಿದ ಅಂಚುಳ್ಳ ನಸು ಭುಜಯುಕ್ತ ಆಳವಿಲ್ಲದ ತಟ್ಟೆಯಭಾಗ.

೭. ಜಕ್ಕನಹಳ್ಳಿ:- ಕಪ್ಪು ವರ್ಣದ ಲವಣ ಉಜ್ಜಿ ಹೊಳಪಿಸಿದ ನೇರ ಪಾರ್ಶ್ವದ ಸ್ವಲ್ಪ ಹೊರಚಾಚಿದ ಅಂಚುಳ್ಳ ಸಮತಳದ ಬೋಗುಣಿಯ ಭಾಗ.

೮. ಜಕ್ಕನಹಳ್ಳಿ:- ಕಪ್ಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಭುಜದ ಬಳಿ ಆಳವಿಲ್ಲದ ಗೆರೆಗಳ ವರ್ತುಲದ ಅಂಚು ಬಾಗಿದ ದುಂಡು ಶರೀರದ ಮಡಕೆಯ ಭಾಗ.

೯. ಜಕ್ಕನಹಳ್ಳಿ:- ಕಪ್ಪು-ಕೆಂಪು ವರ್ಣದ ಕಿರು ಗಾತ್ರದ ಕುಡಿಕೆಯ ಭಾಗ.

೧೦. ಯಲ್ಲಪ್ಪನಾಯಕನಹೊಸಕೋಟೆ:- ಭುಜಯುಕ್ತ(Carinated) ಅಗಲ ಬಾಯಿಯ ಹೊರ ಚಾಚಿದ ಅಂಚುಳ್ಳ ಬೋಗುಣಿ.

೧೧. ಯಲ್ಲಪ್ಪನಾಯಕನಹೊಸಕೋಟೆ:- ಕಪ್ಪು-ಕೆಂಪು ವರ್ಣದ ಅಗಲ ಬಯಿಯ ಸಣ್ಣ ಗಾತ್ರದ ಬೋಗುಣಿ. ಲವಣ ಉಜ್ಜಿ ಹೊಳಪು ಮಾಡಿರುವುದನ್ನು ಕಾಣಬಹುದು.

೧೨. ಯಲ್ಲಪ್ಪನಾಯಕನಹೊಸಕೋಟೆ:- ಲವಣ ಉಜ್ಜಿ ಹೊಳಪಿಸಿದ ಅಗಲ ಬಾಯಿಯ ಕಪ್ಪು ಮತ್ತು ಕೆಂಪು ಬಣ್ಣದ ಅಂಚು ಚೂಪಾದ ಹಾಗು ಸಮತಲ ತಳವಿರುವ ಬೋಗುಣಿ.

೧೩. ಯಲ್ಲಪ್ಪನಾಯಕನಹೊಸಕೋಟೆ:- ಕಪ್ಪು-ಕೆಂಪು ವರ್ಣದ ಅಗಲ ಬಾಯಿಯ ತುಸು ಹೊರಚಾಚಿದ ಅಂಚುಳ್ಳ ತುಸು ಭುಜಯುಕ್ತ ಆಳವಿಲ್ಲದ ಬೋಗುಣಿಯ ಭಾಗ.

೧೪. ಯಲ್ಲಪ್ಪನಾಯಕನಹೊಸಕೋಟೆ:- ಕಪ್ಪು-ಕೆಂಪು ವರ್ಣದ ಹೊಳಪಿನ ತುಸು ಅಂಚು ಹೊರಚಾಚಿದ ಸಾಮಾನ್ಯವಾಗಿ ದೊರೆಯುವ ಬೋಗಣಿಯ ಭಾಗ. ಕೆಂಪು ವರ್ಣದ ಹೊರಮೈಮೇಲೆ ಗೀರು ಚಿತ್ರಣವಿದೆ.

೧೫. ಯಲ್ಲಪ್ಪನಾಯಕನಹೊಸಕೋಟೆ:- ಹೊಳಪಿಸಿದ ಕಪ್ಪು-ಕೆಂಪು ವರ್ಣದ ಅಗಲ ಬಾಯಿಯ ಬೋಗುಣಿ ಭಾಗ. ಶರೀರದ ಮುಕ್ಕಾಲುಬಾಗ ಹೊರ ಭಾಗ ಕೆಂಪು ಬಣ್ಣವಾಗಿದ್ದು ಕಾಲು ಭಾಗ ಕಪ್ಪು ವರ್ಣದ್ದಾಗಿದೆ. ಹಾಗು ಕಂಠದ ಒಳಭಾಗದ ಅಂಚು ಕೆಂಪು ವರ್ಣದ್ದಾಗಿದ್ದು ಉಳಿದ ಭಾಗ ಕಪ್ಪು ವರ್ಣದ್ದಾಗಿದೆ.

೧೬. ಯಲ್ಲಪ್ಪನಾಯಕನಹೊಸಕೋಟೆ:- ಹೊಳಪಿಸಿದ ಕೆಂಪು-ಕಪ್ಪು ವರ್ಣದ ಸಣ್ಣ ಗಾತ್ರದ ಬೋಗುಣಿಯ ಭಾಗ

೧೭. ಯಲ್ಲಪ್ಪನಾಯಕನಹೊಸಕೋಟೆ:- ಕಪ್ಪು-ಕೆಂಪು ವರ್ಣದ ಅಂಚು ಸ್ವಲ್ಪ ಒಳಬಾಗಿದ ತಟ್ಟೆಯ ಭಾಗ.

೧೮. ಯಲ್ಲಪ್ಪನಾಯಕನಹೊಸಕೋಟೆ:- ಕಪ್ಪು-ಕೆಂಪು ವರ್ಣದ ಮುಚ್ಚಳ ಅಥವಾ ತಟ್ಟೆ. ಒಳಬಾಗಿದ ಹಂಚು ತುಸು ಚೂಪಾಗಿದೆ.




ಗಾತ್ರ ೧:೦೨೫

ಅಧ್ಯಾಯ ಹತ್ತು

# ಇತಿಹಾಸ ಆರಂಭ ಕಾಲದ ಸಂಸ್ಕೃತಿ

ಕರ್ನಾಟಕದಲ್ಲಿ ಹಾಗು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಇತಿಹಾಸ ಆರಂಭ ಯುಗದ ಪರಿಶೀಲನೆಯ ಹಿನ್ನಲೆಯಲ್ಲಿ ಭಾರತ ಮತ್ತು ದಕ್ಷಿಣ ಭಾರತದಲ್ಲಿ ಪ್ರಥಮ ಹಾಗು ದ್ವಿತೀಯ ನಗರೀಕರಣ ಪ್ರವೃತ್ತಿಯ ಪರಿಶೀಲನೆ ಅಗತ್ಯ-ವಾಗುತ್ತದೆ. ಉತ್ತರ ಭಾರತದಲ್ಲಿ ಸಿಂಧೂನದಿ ಸಂಸ್ಕೃತಿಯ ಅಂದರೆ ತಾಮ್ರ-ಶಿಲಾಯುಗದ ಹಂತದಲ್ಲಿಯೇ ಉತ್ಕೃಷ್ಟ ಸ್ಥಿತಿ-ಯಲ್ಲಿದ್ದ ಪ್ರಥಮ ನಗರೀಕರಣವು ದಕ್ಷಿಣ ಭಾರತದಲ್ಲಿ ಸ್ವಲ್ಪ ತಡವಾಗಿ ನವ ಶಿಲಾಯುಗ ಮತ್ತು ಕಬ್ಬಿಣದ ತಂತ್ರಜ್ಞಾನದ ಆವಿಷ್ಕಾರದೊಂದಿಗೆ ಆರಂಭವಾದಂತೆ ಕಂಡು ಬರುತ್ತದೆ. ಬ್ರಾಹ್ಮೀ ಲಿಪಿಯ ಬಳಕೆಯ ಆರಂಭ ಬೌದ್ಧ ಧರ್ಮದ ಉಗಮ ಮತ್ತು ವಿಕಾಸ, ಶೋಡಷ ಮಹಾ ಜನಪದಗಳ ಉಗಮ ಇವು ಉತ್ತರ ಹಾಗೂ ಮಧ್ಯ ಭಾರತದಲ್ಲಿ ವಿಶೇಷವಾಗಿ ಸಿಂಧೂ-ಯಮುನಾ-ನರ್ಮದಾ ತೀರಗಳಲ್ಲಿ ದ್ವಿತೀಯ ಪ್ರಗತೀಕರಣದ ಪ್ರಭಾವವನ್ನು ಸ್ಪಷ್ಟ ಪಡಿಸಿದರೆ ದಕ್ಷಿಣ ಭಾರತದಲ್ಲಿ ಇನ್ನೂ ತಡವಾಗಿ ಕೃಷ್ಣ-ತುಂಗಭದ್ರಾ ಮತ್ತು ಕಾವೇರಿ ನದೀ ಪಾತ್ರಗಳಲ್ಲಿ ಕಾಣಸಿಕೊಳ್ಳುತ್ತವೆ.

ರಾಮಾಯಣ ಮಹಾಭಾರತ ಮುಂತಾದ ಕಾವ್ಯಗಳಲ್ಲಿ ಪಾಲೀ ಗ್ರಂಥಗಳಲ್ಲಿ ಉಲ್ಲೇಖವಾದ ಕುಂತಲ ಪ್ರದೇಶ, ಮಹಿಷ ಮಂಡಲವನವಾಸಕ ಪ್ರಾಂತ್ಯ ಇವು ಹಲವಾರು ಕಾರಣಗಳಿಂದ ಕರ್ನಾಟಕದ ಕೆಲವಾದರೂ ಭಾಗಗಳು, ಉತ್ತರ ಭಾರತದ ಗ್ರಂಥಕರ್ತರಿಗ ಪರಿಚಿತವಾಗುವಷ್ಟು ನಗರೀಕರಣಗೊಂಡಿದ್ದವೆಂದು ತಿಳಿಸಿಕೊಡುತ್ತವೆ. ಜೊತೆಗೆ ಸಂಪ್ರತಿ ಚಂದ್ರಗುಪ್ತನು ಶ್ರವಣಬೆಳಗೊಳಕ್ಕೆ ಆಗಮಿಸಿದ ಉಲ್ಲೇಖ ಈ ಪ್ರವೃತ್ತಿಯ ಒಂದು ಮುಖ್ಯ ಘಟ್ಟವನ್ನು ಸೂಚಿಸುತ್ತದೆ. ಹಾಗಿದ್ದರು ಮೌರ್ಯ ಸಾಮ್ರಾಟ ಅಶೋಕನ ಕಿರು ಬಂಡೆ ಶಾಸನಗಳು ಅತಿಹೆಚ್ಚು ಸಂಖ್ಯೆಯಲ್ಲಿ ಕರ್ನಾಟಕದ ಹಲವು ಭಾಗಗಳಲ್ಲಿ ಮುಖ್ಯವಾಗಿ ತುಂಗಭದ್ರಾ ನದಿಯ ಉಪನದಿಗಳ ಪಾತ್ರಗಳಲ್ಲಿ ದೊರಕಿರುವುದು ಆ ಶಾಸನಗಳಲ್ಲಿ ಹೆಚ್ಚಿನವುಗ-ಳಲ್ಲಿ ಮೊದಲಬಾರಿಗೆ ಅಶೋಕನ ಹೆಸರನ್ನೂ ಅವನ ಪ್ರಸಿದ್ಧ ಉಪನಾಮವಾದ ಪ್ರೀಯದರ್ಶಿಯೊಂದಿಗೆ ಸಮೀಕರಿಸುವುದು ಒಂದು ಮಹತ್ವದ ಘಟ್ಟವನ್ನು ಸೂಚಿಸುತ್ತವೆ. ಜೊತೆಗೆ ಮೌರ್ಯ ಸಾಮ್ರಾಜ್ಯದ ದಕ್ಷಿಣ ಭಾಗದ ಅಧಿಕಾರ ಕೇಂದ್ರಗಳಾದ ಸುವರ್ಣಗಿರಿ ಮತ್ತು ಇಸಿಲಾ ಸ್ಥಳಗಳ ಉಲ್ಲೇಖವು ಮೊದಲಬಾರಿಗೆ ಕಾಣುತ್ತದೆ. ಸುವರ್ಣಗಿರಿಯನ್ನು ಅಧಿಕೃತವಾಗಿ ಇನ್ನೂ ಗುರುತಿಸಲಾಗದಿದ್ದರೂ ಇಸಿಲಾ ಹೆಸರು ಉಲ್ಲೇಖವಾಗಿರುವ ಶಾಸನವಿರುವ ಬ್ರಹ್ಮಗಿರಿಯೇ ಎಂದು ಗುರುತಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಮೊದಲ ಬಾರಿಗೆ ಅಶೋಕನ ೧೨ ಮತ್ತು ೧೩ನೇ ಮುಖ್ಯ ಶಾಸನಗಳು (ರಮೇಶ್.ಕೆ.ವಿ :೧೯೮೮:೩೭-೪೨)ಮತ್ತು ಸ್ವಲ್ಪ ಅಪರೂಪವೆನಿಸುವ ಪ್ರತ್ಯೇಕ ಶಿಲಾ ಶಾಸನದ ಭಾಗವು ಗುಲ್ಬರ್ಗ ಜಿಲ್ಲೆಯ ಸನ್ನತಿಯಲ್ಲಿ ದೊರತಿರುವುದರಿಂದ ಸನ್ನತಿಯೇ ಸುವರ್ಣಗಿರಿಯಾಗಿರುಬಹುದು ಎಂಬ ಅಭಿಪ್ರಾಯವೂ ಇದೆ.

ಹೀಗಿದ್ದರೂ ಕರ್ನಾಟಕದಲ್ಲಿ ಇದುವರೆಗೆ ನಡೆದಿರುವ ಸ್ಥಳ ಪರಿಶೋಧನೆ ಹಾಗೂ ಸೀಮಿತ ಉತ್ಖನನಗಳಲ್ಲಿ ಮೌರ್ಯ ಸಾಮ್ರಾಜ್ಯದ ಮುಖ್ಯ ಪಟ್ಟಣಗಳಲ್ಲಿ ದೊರೆತಿರುವ ವಿಶಿಷ್ಟ ಸಾಮಗ್ರಿಗಳು ಕರ್ನಾಟಕದಲ್ಲಿ ಅಪರೂಪ. ಈ ದೃಷ್ಟಿಯಿಂದ ಸನ್ನತಿಯಲ್ಲಿ (ದೇವರಾಜು.ಡಿ.ವಿ ಮತ್ತು ತಳವಾರ್.ಎಚ್.ಟಿ:೧೯೯೭) ದೊರಕಿರುವ ಹೊಳಪುಳ್ಳ ಔತ್ತರೆಯ ಕಪ್ಪು ಬಣ್ಣದ ಮೃತ್ ಪಾತ್ರೆ, ಮಾತೃ ದೇವತೆಯ ಶಿಲ್ಪವಿರುವ ಫಲಕ ತಾಮ್ರ ಮತ್ತು ಸೀಸದ ಮೌರ್ಯಕಾಲೀನ ನಾಣ್ಯಗಳು, ಇವು ಕೃಷ್ಣೆಯ ಉಪನದಿಯಾದ ಭೀಮಾ ನದೀ ವರೆಗೂ ಮೌರ್ಯ ಸಾಮ್ರಾಜ್ಯದ ವ್ಯಾಪ್ತಿಯನ್ನು ನಿಸ್ಸಂದೇಹವಾಗಿ ಖಚಿತ ಪಡಿಸುತ್ತವೆ. ಈ ದೃಷ್ಟಿಯಿಂದ ಅಶೋಕನ ಕಿರು ಶಿಲಾಶಾಸನಗಳು ದೊರಕಿರುವ ಸ್ಥಳಗಳ ಪುನರ್ ಅನ್ವೇಷಣೆ ಹೆಚ್ಚಿನ ಮಾಹಿತಿಯನ್ನು ಒದಗಿಸಬಹುದು.

ಕ್ರಿ.ಶ. ಆರಂಭದವರೆಗೆ ಮತ್ತು ನಂತರದ ಒಂದೆರಡು ಶತಮಾನಗಳಲ್ಲಿ ಕರ್ನಾಟಕದ ಇನ್ನಷ್ಟು ಭಾಗಗಳು ಶಾತವಾಹನ ಮತ್ತು ಅವರ ನಂತರದ ಚುಟು, ಮಹಾರಥಿ ದೊರೆಗಳ ಆಳ್ವಿಕೆಗೆ ಸಂಬಂಧಪಟ್ಟಂತೆ ಹೆಚ್ಚಿನ ಮಾಹಿತಿ ಬೆಳಕಿಗೆ ಬಂದಿದೆ. ಇದುವರೆಗೆ ನೆಡೆದಿರುವ ಸ್ಥಳ ಪರಿಶೋಧನೆ ಮತ್ತು ಮುಖ್ಯ ಸ್ಥಳಗಳೆನಿಸಿದ ಬ್ರಹ್ಮಗಿರಿ, ಚಂದ್ರವಳ್ಳಿ (ವೀಲರ್:೧೯೪೮;೧೮೦-೩೧೦) ಮಸ್ಕಿ(ಥಾಪರ್:೧೯೫೭;೪-೧೪೨) ಪಿಕ್ಲಿಹಾಳ್(ಅಲ್ಚಿನ್:೧೯೬೦) ಸಂಗನಕಲ್ಲು (ನಾಗರಾಜರಾವ್ ಮತ್ತು ಅನ್ಸಾರಿ:೧೯೬೯) ಬನವಾಸಿ (ಶೇಷಾದ್ರಿ.ಎಂ:೧೯೭೦-೭೧) ಹಳ್ಳೂರು (ನಾಗರಾಜರಾವ್ :೧೯೭೧) ತಿ.ನರಸೀಪುರ(ಶೇಷಾದ್ರಿ.ಎಂ:೧೯೭೪) ವಡಗಾಂವ್ ಮಾದವಪುರ (ಸುಂದರ.ಎ:೧೯೭೮); ಬನಹಳ್ಳಿ (ಇಂ.ಆ.ರಿ:೧೯೮೩-೮೪;೪೨-೪೬,೧೯೮೫-೮೬;೪೩-೪೪ ಮತ್ತು ೧೯೮೬-೮೭;೪೨-೪೫) ಮತ್ತು ಸನ್ನತಿ (ದೇವರಾಜು.ಡಿ.ವಿ ಮತ್ತು ತಳವಾರ.ಎಚ್.ಟಿ:೧೯೯೭)ಗಳಲ್ಲಿ ನಡೆದಿರುವ ಉತ್ಖನನಗಳಿಂದ ಬಹಳಷ್ಟು ಅಮೂಲ್ಯ ಆಕರ ಸಾಮಗ್ರಿ ದೊರೆತಿದೆ. ಸಂಗ್ರಹವಾಗಿ ಹೇಳುವುದಾದರೆ ಸನ್ನತಿ,(ಗುಲ್ಬರ್ಗ ಜಿಲ್ಲೆ) ಬನವಾಸಿ(ಉತ್ತರ ಕನ್ನಡ ಜಿಲ್ಲೆ) ಮ್ಯಾಕಡೋನಿ(ಬಳ್ಳಾರಿ ಜಿಲ್ಲೆ) ಮತ್ತು ವಾಸನ್(ಧಾರವಾಡ ಜಿಲ್ಲೆ)ಗಳಲ್ಲಿ ದೊರೆತಿರುವ ಶಾತವಾಹನ ಅರಸರ ಹೆಸರಿನ ಶಾಸನಗಳು, ಸೀಸ ಮತ್ತು ಬೆಳ್ಳಿಯ ನಾಣ್ಯ (ಚಂದ್ರವಳ್ಳಿ, ಯಶವಂತಪುರ, ಎಚ್.ಎ.ಎಲ್.ಬೆಂಗಳೂರು, ಅಕ್ಕಿಆಲೂರು) ಇವುಗಳ ಜೊತೆಜೊತೆಗೆ ಬೆಳಕಿಗೆ ಬಂದಿರುವ ರೋಮನ್ ದೊರೆಗಳಾದ ಅಗಸ್ಟಸ್(ಕ್ರಿ.ಪೂ ೨೩ ಕ್ರಿ.ಶ ೧೪)ಟೈಬೀರಿಯಸ್(ಕ್ರಿ.ಶ ೧೪-೩೭) ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳು ಆಕಾಲದ ವಿದೇಶಿ ಪ್ರಭಾವವನ್ನು ಸೂಚಿಸುವ ಕೆಂಪು ಹೊಳಪುಳ್ಳ ಮೃತ್ ಪಾತ್ರೆಗಳು, ಅರೆಟೈನ್ ಮಾದರಿಯ ಮದ್ಯದ ಜಾಡಿಗಳು, ನಕ್ಷಾಂಕಿತ ಪಾತ್ರೆಗಳು (Roulated Ware) ಇಟ್ಟಿಗೆಯ ಧಾರ್ಮಿಕ, ರಕ್ಷಣಾತ್ಮಕ ಹಾಗು ವಸತಿ ಕಟ್ಟಡಗಳ ಸಮೂಹ ಮತ್ತು ಇವುಗಳೆಲ್ಲದರ ಜೊತೆಗೆ ವಿವಿಧ ಪ್ರಮಾಣೇಗಳಲ್ಲಿ ಸಾಧಾರಣವಾಗಿ ದೊರಕುವ

ಕೆಂಪು ಲೇಪನದಡಿಯಲ್ಲಿ ಬಿಳಿವರ್ಣ ಚಿತ್ರಗಳುಳ್ಳ (Russet Coated Painted Ware) ಮೃತ್ ಪಾತ್ರೆಗಳು ಬೆಳಕಿಗೆ ಬಂದಿರುವ ಪ್ರಮಾಣವನ್ನು ಪರಿಶೀಲಿಸಿ ಒಂದು ನಿವೇಶನ ಪಟ್ಟಣವಾಗಿ ಬೆಳೆದಿತ್ತೇ ಅಥವಾ ಗ್ರಾಮೀಣ ಸಂಸ್ಕೃತಿಯ ನೆಲೆಯಲ್ಲಿಯೇ ಉಳಿದಿತ್ತೇ ಎನ್ನುವುದನ್ನು ಹೆಚ್ಚು ಕಡಿಮೆ ನಿರ್ಧರಿಸಬಹುದು.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಇತಿಹಾಸ ಆರಂಭ ಕಾಲದ ನಿವೇಶನ ಮತ್ತು ಅದರಲ್ಲಿ ದೊರಕುವ ಪ್ರಾಚ್ಯವಸ್ತುಗಳನ್ನು ಅವಲೋಕಿಸ ಬೇಕಾಗುತ್ತದೆ. ಈ ಪ್ರದೇಶವು ಕೃಷ್ಣ-ತುಂಗಾಭದ್ರಾ ನದಿಗಳ ಮತ್ತು ಕಾವೇರಿ ನದಿಯ ಉಪನದಿಗಳ ವ್ಯಾಪ್ತಿಯಿಂದ ಬಹಳ ದೂರದಲ್ಲಿದು ಅಲ್ಪ ಪ್ರಮಾಣದಲ್ಲಿ ಭೌಗೋಳಿಕ ಖನಿಜ ಮತ್ತು ವನ್ಯ ಉತ್ಪಾದನೆಗಳ ಸಂಪತ್ತನ್ನೂ ಹೊಂದಿರುವುದರಿಂದ ಸಹಜವಾಗಿ ತೀರಾ ಉನ್ನತ ಮಟ್ಟದ ಸಾಂಸ್ಕೃತಿಕ ಬೆಳವಣಿಗೆಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಅಧ್ಯಯನ ಪ್ರದೇಶದಲ್ಲಿ ದೊರೆತಿರುವ ನಿವೇಶನಗಳು, ಸ್ಥಳ ಪರಿಶೋಧನೆಯಲ್ಲಿ ಈ ನಿವೇಶನಗಳಿಂದ ಆಯ್ದ ಪ್ರಾಚ್ಯ ವಸ್ತುಗಳು, ಈ ಅಂಶವನ್ನು ಇನ್ನಷ್ಟು ಸ್ಪಷ್ಟಗೊಳಿಸುತ್ತವೆ. ಹಾಗಿದ್ದರೂ ತುಮಕೂರು ಜಿಲ್ಲೆಯ ವಾಯುವ್ಯಕ್ಕಿರುವ ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ ಪಶ್ಚಿಮಕ್ಕಿರುವ ಬನವಾಸಿ, ದಕ್ಷಿಣಕ್ಕಿರುವ ತಿ.ನರಸೀಪುರ ಪೂರ್ವಕ್ಕಿರುವ ಬನಹಳ್ಳಿ ನಿವೇಶನಗಳು ಸಾಕಷ್ಟು ಉತ್ತಮ ಸ್ಥಿತಿಯ ಸಂಸ್ಕೃತಿಕ ಹಂತವನ್ನು ಪ್ರತಿನಿಧಿಸುತ್ತಿದ್ದು ಈ ಪ್ರದೇಶದಲ್ಲಿ ಇನ್ನಷ್ಟು ತೀವ್ರ ಸ್ಥಳ ಪರಿಶೋಧನೆ ಮತ್ತು ಕೆಲವಾದರೂ ಆಯ್ದ ಸ್ಥಳಗಳಲ್ಲಿ ಉತ್ಖನನ ಕೈಗೊಂಡರೆ ಸ್ವಲ್ಪ ಹೆಚ್ಚಿನ ಮಾಹಿತಿಯನ್ನು ಪಡೆಯಬಹುದು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಒಟ್ಟು ೧೯ ನೆಲೆಗಳು ದೊರಕಿದ್ದು ಅವುಗಳಿರುವ ನೆಲೆ, ಆನುಪೂರ್ವಿ, ಪರಿಸರ ಇವುಗಳನ್ನು ಕೋಷ್ಟಕ ಸಂಖ್ಯೆ ೧೦.೧ ರಲ್ಲಿ ಮತ್ತು ಭೂ ನಕ್ಷೆ ಪುಟ ಸಂಖ್ಯೆ ೪೬೦ ರಲ್ಲಿ ಕೊಡಲಾಗಿದೆ.

ಕೋಷ್ಟಕ ಸಂಖ್ಯೆ ೧೦.೧

| ಕ್ರಮ ಸಂಖ್ಯೆ | ನೆಲೆ | ಸೂಕ್ಷ್ಮ ಶಿಲಾಯುಗ | ನೂತನ ಶಿಲಾಯುಗ | ಬೃಹತ್ ಶಿಲಾಯುಗ |
|---|---|---|---|---|
| ೧ | ಕತ್ತಿರಾಜನಹಳ್ಳಿ | ✓ | ✓ | ✓ |
| ೨ | ಕೈದಾಳ | | ✓ | ✓ |
| ೩ | ಕೊಡಗೇನಹಳ್ಳಿ | | | |
| ೪ | ಗುಟ್ಟೆ | ✓ | | ✓ |
| ೫ | ಗುರಮ್ಮನಕಟ್ಟೆ | ✓ | ✓ | ✓ |
| ೬ | ತಿಪ್ಪಸಂದ್ರ | | | ✓ |
| ೭ | ತ್ಯಾಗಟೂರು | | | ✓ |
| ೮ | ದಬ್ಬೇಗಟ್ಟ | ✓ | | |
| ೯ | ಪಾವಗಡ | | ✓ | ✓ |
| ೧೦ | ಬುಕ್ಕಾಪಟ್ನ | | ✓ | ✓ |
| ೧೧ | ಬೂದಿಬೆಟ್ಟ | | ✓ | ✓ |
| ೧೨ | ಬೆಟ್ಟದಹಳ್ಳಿ | ✓ | | |
| ೧೩ | ಮರಿದಾಸನಹಳ್ಳಿ | | ✓ | ✓ |
| ೧೪ | ಮಾರನಾಯಕನಪಾಳ್ಯ | ✓ | ✓ | ✓ |
| ೧೫ | ಮಿಡಿಗೇಶಿ | ✓ | ✓ | ✓ |
| ೧೬ | ರಾಚಮಾರನಹಳ್ಳಿ | | ✓ | ✓ |
| ೧೭ | ಯಲ್ಲಪ್ಪನಾಯಕನಹಳ್ಳಿ | | ✓ | ✓ |
| ೧೮ | ಯಲ್ಲಪ್ಪನಾಯಕನಹೊಸಕೋಟೆ | | ✓ | ✓ |
| ೧೯ | ಸಿದ್ದಾಪುರ | ✓ | ✓ | ✓ |

ಮೇಲೆ ನೀಡಿರುವ ಕೋಷ್ಟಕದಿಂದ ಕಂಡು ಬರುವಂತೆ ೧೯ ನೆಲೆಗಳಲ್ಲಿ ಇತಿಹಾಸ ಆರಂಭಯುಗ ಹಂತವು ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಗಳ ನೆಲೆಯೊಂದಿಗೆ ಇರುವುದು ಕಂಡು ಬರುತ್ತದೆ. ಈ ನೆಲೆಗಳಲ್ಲಿ ೩ ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳೊಂದಿಗೂ, ೧೭ ನೆಲೆಗಳು ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳೊಂದಿಗೂ, ಹಾಗು ೨ನೆಲೆಗಳು ಸ್ವತಂತ್ರ್ಯವಾಗಿ ಈ ಸಮಯದಲ್ಲಿಯೇ ಆರಂಭವಾಗಿರುವುದು ತಿಳಿಯುತ್ತದೆ. ಅದರಂತೆಯೇ ರಾಚಮಾರನಹಳ್ಳಿ, ಯಲ್ಲಪ್ಪನಾಯಕನಹೊಸಕೋಟೆ ಮತ್ತು ಯಲ್ಲಪ್ಪನಾಯಕನಹಳ್ಳಿ ನೆಲೆಗಳು ಸಮೃದ್ಧ ನೆಲೆಗಳಾಗಿದ್ದುದು ತಿಳಿಯುತ್ತದೆ.

**ಇತಿಹಾಸ ಆರಂಭ ಕಾಲದಲ್ಲಿ ದೊರೆತ ಅವಶೇಷಗಳು**

ಈ ಪ್ರದೇಶದಲ್ಲಿ ಬೆಳಕಿಗೆ ಬಂದಿರುವ ಇತಿಹಾಸ ಆರಂಭ ಯುಗದ ಸಾಮಗ್ರಿಗಳೆಂದರೆ ವಿವಿಧ ವರ್ಣಗಳ ಚಿತ್ರಿತ ಹಾಗೂ ಚಿತ್ರವಿಲ್ಲದ ಮೃತ್ ಪಾತ್ರೆ ಅವಶೇಷಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆತಿವೆ. ಅದರಂತೆಯೇ ಅಲ್ಪ ಪ್ರಮಾಣದಲ್ಲಿ ಶಂಖುವಿನ ಬಳೆಯ ಚೂರುಗಳು, ಸುಟ್ಟ ಮಣ್ಣಿನ ಮಣಿ ಹಾಗೂ ಗಾಜಿನ ಮಣಿಗಳು ದೊರೆತಿವೆ. ದೊರೆತ ಅವಶೇಷಗಳನ್ನು ಪ್ರತ್ಯೇಕವಾಗಿ ವಿವರಿಸಿದೆ.

ಮೃತ್ ಪಾತ್ರೆಗಳು

ದೊರೆತಿರುವ ಮೃತ್ ಪಾತ್ರೆಗಳನ್ನು ಮುಖ್ಯವಾಗಿ ಮೂರು ಗುಂಪುಗಳಾಗಿ ವಿಂಗಡಿಸಬಹುದು.

೧. ಕೆಂಪು ಲೇಪನದಡಿಯಲ್ಲಿ ಬಿಳೀ ವರ್ಣದ ಚಿತ್ರಗಳುಳ್ಳ ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆಗಳು.

೨. ಕೆಂಪು ವರ್ಣದ ಮೃತ್ ಪಾತ್ರೆಗಳು.

೩. ನಕ್ಷಾಂಕಿತ ಮೃತ್ ಪಾತ್ರೆ.

**(೧) ಕೆಂಪು ಲೇಪನದಡಿಯಲ್ಲಿ ಬಿಳೀ ವರ್ಣ ಚಿತ್ರಗಳುಳ್ಳ ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆಗಳು.**

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಹೆಚ್ಚಿನ ಎಲ್ಲಾ ನೆಲೆಗಳಲ್ಲಿಯೂ ಇಂತಹ ಮೃತ್ ಪಾತ್ರೆಗಳು ವಿವಿಧ ಪ್ರಮಾಣದಲ್ಲಿ ದೊರಕುತ್ತವೆ. ಮೂಲತಃ ತಾವು ಶಿಲಾಯುಗದಿಂದ ಮುಂದುವರೆದು ಬೃಹತ್ ಶಿಲಾಯುಗದಲ್ಲಿ ಅತ್ಯಂತ ಹೆಚ್ಚಿನ ವೈವಿಧ್ಯವನ್ನು ಹೊಂದಿರುವ ಕಪ್ಪು-ಕೆಂಪು ದ್ವಿವರ್ಣದ ಮೃತ್ ಪಾತ್ರೆಗಳು ವಿಶಿಷ್ಟ ಅಲಂಕಾರದೊಡನೆ ಇತಿಹಾಸ ಆರಂಭಯುಗದಲ್ಲಿಯೂ ಮುಂದುವರಿಯುತ್ತವೆ. ಇಂತಹ ಮೃತ್ ಪಾತ್ರೆಗಳನ್ನು ಸುಡುವಾಗ ಪಾತ್ರೆಗಳನ್ನು ತಲೆಕೆಳಗಾಗಿ ಜೋಡಿಸಿ ನಿಯಮಿತ ಪ್ರಮಾಣದಲ್ಲಿ ಗಾಳಿಯಾಡುವಂತೆ ಇಟ್ಟು ಸುಟ್ಟಿರುವುದರಿಂದ ದ್ವಿವರ್ಣವಾಗಿ ರೂಪುಗೊಂಡಿರುವುದು ಕಂಡು ಬರುತ್ತದೆ. ಇವುಗಳು ಗೃಹೋಪಯೋಗಿ ಪಾತ್ರೆಗಳಾಗಿದ್ದು ಕಿರು ಮತ್ತು ಮಧ್ಯಮ ಗಾತ್ರದಲ್ಲಿ ವಿವಿಧ ವರ್ಣಗಳಲ್ಲಿದ್ದು, ಪ್ರಮುಖ ಮಾದರಿಗಳಾದ ಎತ್ತರವಾದ ಲೋಟದಂತಹ ಪಾತ್ರೆ, ತಟ್ಟೆಯಂತಹ ಅಗಲವಾದ ಪಾತ್ರೆ, ಬಟ್ಟಲುಗಳು, ಪೀಠವನ್ನು ಹೊಂದಿರುವ ಬಟ್ಟಲು ಕಂಡುಬಂದಿವೆ. ಇವುಗಳನ್ನು ಸುಡುವ ಮೊದಲು ವಿವಿಧ ಅಲಂಕಾರಿಕ ಚಿತ್ರಗಳನ್ನು ಬಿಡಿಸಿ ತೆಳ್ಳನೆಯ ಲೇಪನವನ್ನು ನೀಡಿ ಹೊಳಪು ಬರುವಂತೆ ರೂಪಿಸಲಾಗಿರುತ್ತದೆ. ಸಮಾನಾಂತರ, ಓರೆ, ನೇರ, ಅಡ್ಡವಾಗಿರುವ ಸಣ್ಣ ಗೆರೆಗಳು ಪರಸ್ಪರ ಕತ್ತರಿಸುವ ಗೆರೆಗಳು, ಅಲೆಯಾಕಾರದ ಗೆರೆಗಳು, ಸಣ್ಣ ಚುಕ್ಕೆಗಳಿಂದ ಮಾಡಿದ ತ್ರಿಭುಜ ಮುಂತಾದ ಹೊರ ಮೈಯಲ್ಲಿ ಕಪ್ಪು-ಕೆಂಪು ಬಣ್ಣಗಳ ಮಿಶ್ರಣ ಮತ್ತು ಒಳಮೈ ಸಂಪೂರ್ಣ ಕಪ್ಪಾಗಿರುತ್ತದೆ. ಹೊರ ಮೈನಲ್ಲಿರುವ ಕೆಂಪು ಬಣ್ಣವು ತಿಳಿ ಗೆಂಪಿನಿಂದ ಕಡುಗೆಂಪಿನ ವರೆಗೆ ಕಪ್ಪು ಮಿಶ್ರಿತ ಕೆಂಪು ಮೊದಲಾದ ಹಲವಾರು ವರ್ಣಗಳಲ್ಲಿರುತ್ತವೆ. ಈ ಬಣ್ಣಗಳು ಉಷ್ಣತೆಯ ವ್ಯತ್ಯಾಸದಲ್ಲಿ ಆದಂತಹ ಬದಲಾವಣೆಯಿಂದ ಮೂಡಿ ಬಂದವುಗಳಾಗಿವೆ. ಹೆಚ್ಚಾಗಿ ಆಕೃತಿಗಳು ಚಿತ್ರಿತವಾಗಿವೆ. ಅಪರೂಪದ ಇಂತಹ ಮೃತ್ ಪಾತ್ರೆಗಳನ್ನು ವೇಗವಾಗಿ ತಿರುಗುವ ಚಕ್ರಗಳಿಂದ ರಚಿಸಲಾಗಿದೆ. ಆಯ್ದ ಇಂತಹ ಮೃತ್ ಪಾತ್ರೆಗಳನ್ನು ಅಧ್ಯಾಯದ ಕೊನೆಯಲ್ಲಿ ವಿವರಿಸಲಾಗಿದೆ.

೨ ಕೆಂಪು ವರ್ಣದ ಮೃತ್ ಪಾತ್ರೆಗಳು

ಪೂರ್ಣ ಕೆಂಪು ವರ್ಣದ ಹೊಳಪುಳ್ಳ ಮೃತ್ ಪಾತ್ರೆಗಳನ್ನು ಸುಡುವ ಮೊದಲು ತೆಳು ಲೇಪನ ಕೊಟ್ಟು ಹೆಚ್ಚಿನ ಉಷ್ಣತೆಯಿಂದ ಸುಡಲಾಗಿರುವುದರಿಂದ ಇಂತಹ ಮೃತ್ ಪಾತ್ರೆಗಳು ಕಡು ಗೆಂಪಿನಿಂದ ತೆಳು ಗೆಂಪಿನವರೆಗೆ ವಿವಿಧ ವರ್ಣವಾಗಿ ರೂಪಗೊಂಡಿರುವುದು ಕಂಡು ಬರುತ್ತದೆ. ಇವು ಕಿರು ಹಾಗು ಮಧ್ಯಮ ಗಾತ್ರದಲ್ಲಿದ್ದು ಗೃಹೋಪಯೋಗಿ ಹಾಗೂ ಸಂಗ್ರಹಣಾ ಪಾತ್ರೆಗಳಾಗಿ ಉಪಯೋಗವಾಗಿರುವಂತೆ ಕಂಡು ಬರುತ್ತವೆ. ಇವು ಬೃಹತ್ ಶಿಲಾಯುಗ ಸಂಸ್ಕೃತಿಯ ಕಾಲದಲ್ಲಿ ಬರುವ ಎಲ್ಲಾ ಆಕೃತಿಗಳ ಮುಂದುವರಿಕೆಯಾಗಿದೆ. ಪ್ರಮುಖವಾದವುಗಳೆಂದರೆ, ಮಧ್ಯಮ ಗಾತ್ರದ ಕೊಡ, ಎತ್ತ-ರದ ಜಾಡಿ, ನೀರಿನ ಬಾಣಿ, ಧಾನ್ಯ ಸಂಗ್ರಹಣಾ ಪಾತ್ರೆ ಮುಂತಾದವು. ಆಯ್ದ ಮಾದರಿಗಳನ್ನು ಅಧ್ಯಾಯದ ಕೊನೆಯಲ್ಲಿ ವಿವರಿಸಲಾಗಿದೆ.

೩. ನಕ್ಷಾಂಕಿತ ಮೃತ್ ಪಾತ್ರೆ

ಅಧ್ಯಯನ ಪ್ರದೇಶದ ರಾಚಮಾರನಹಳ್ಳಿ ನೆಲೆಯಲ್ಲಿ ಒಂದೇ ಒಂದು ಮೃತ್ ಪಾತ್ರೆ ದೊರೆತಿದೆ. ರೋಮ್ ದೇಶದ ವಾಣಿಜ್ಯ ಸಂಪರ್ಕ ಹೊಂದಿರುವ ನೆಲೆಗಳಲ್ಲಿ ತಟ್ಟೆಯಂತೆ ಹೆಚ್ಚು ಅಗಲವಿದ್ದು ಕಡಿಮೆ ಎತ್ತರವಿರುವ ಈ ರೀತಿಯ ಮೃತ್ ಪಾತ್ರೆಗಳು ಹೆಚ್ಚಾಗಿ ಕಂಡು ಬರುತ್ತವೆ. ಮೊದಲು ರೋಮ್‌ನಿಂದ ಆಮದುಗೊಂಡ ಈ ಮೃತ್ ಪಾತ್ರೆಗಳು ಬಣ್ಣ-ದಲ್ಲಿ ಬೂದು ಮತ್ತು ಕಪ್ಪು ಮಿಶ್ರಿತ ಬೂದು ಬಣ್ಣದಲ್ಲಿದ್ದು ಅಂಚುಗಳು ತೆಳ್ಳಗಿದ್ದು ನಯವಾಗಿ ಶೋಧಿಸಿದ ಕಶ್ಮಲರಹಿತ ಅವೆ ಮಣ್ಣಿನಿಂದ ಚಕ್ರದ ಮೇಲೆ ರೂಪಿಸಿದ ಇಂತಹ ಮೃತ್ ಪಾತ್ರೆಗಳನ್ನು ಸುಡುವ ಮೊದಲು ತಳದ ಮಧ್ಯದ ಒಳ ಭಾಗ-ದಲ್ಲಿ ಕಾಲೆಟ್‌ನ ಸಹಾಯದಿಂದ ಒತ್ತಿ ರೂಪಿಸಿದ ವರ್ತುಲಾಕಾರದ ಕಚ್ಚುಗಳ ಅಲಂಕಾರವನ್ನು ಮೂಡಿಸಿರುತ್ತದೆ. ತುಂಬಾ ಆಕರ್ಷಿತವಾಗಿರುವ ಈ ತಟ್ಟೆಯಂತಹ ಪಾತ್ರೆಯನ್ನು ಕ್ರಮೇಣ ಸ್ಥಳೀಯವಾಗಿ ತಯಾರಿಸುವ ಪದ್ಧತಿ ಬೆಳೆದು ಕರ್ನಾಟಕದ ಒಳನಾಡಿನ ಹೆಚ್ಚಿನ ನೆಲೆಗಳಲ್ಲಿ ಇವು ದೊರಕುತ್ತವೆ. ಹೀಗೆ ಸ್ಥಳೀಯವಾಗಿಯೇ ತಯಾರಾದ ಮಾದರಿಯು ರಾಚಮಾರನ-ಹಳ್ಳಿ ನೆಲೆಯಲ್ಲಿ ದೊರೆತಿದೆ. ಇದರ ಒಳಭಾಗ ಕಪ್ಪು ಇದ್ದು ಹೊರಭಾಗ ಕಂದು ಕೆಂಪು ವರ್ಣವನ್ನು ಹೊಂದಿದೆ.

ದೊರೆತ ಇತರ ಅವಶೇಷಗಳು

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಅಲ್ಪಪ್ರಮಾಣದಲ್ಲಿ ಶಂಖುವಿನ ಬಳೆಚೂರುಗಳು ರಾಚಮಾರನಹಳ್ಳಿ, ಯಲ್ಲಪ್ಪನಾಯಕನಹೊಸಕೋಟೆ ಮತ್ತು ಯಲ್ಲಪ್ಪನಾಯಕನ ಹಳ್ಳಿಗಳಲ್ಲಿ ದೊರೆತಿದ್ದು ಯಾವುದೇ ಅಲಂಕರಣವನ್ನು ರೂಪಿಸಿಲ್ಲ.

ಸುಟ್ಟ ಮಣ್ಣಿನ ಮಣಿಯು ರಾಚಮಾರನಹಳ್ಳಿಯಲ್ಲಿ ದೊರೆತಿದ್ದು ಕಿರುಗಾತ್ರವನ್ನು ಹೊಂದಿದೆ. ಹೊರಮೈಗೆ ಕಪ್ಪು ಲೇಪನ ಹಚ್ಚಿ ನಯಗೊಳಿಸಲಾಗಿದೆ.

ಗಾಜಿನ ಮಣಿಗಳು ಯಲ್ಲಪ್ಪನಾಯಕನಹಳ್ಳಿ ಮತ್ತು ರಾಚಮಾರನಹಳ್ಳಿಗಳಲ್ಲಿ ದೊರೆತಿದ್ದು ಹಸಿರು ಮತ್ತು ತಿಳಿಗೆಂಪು ವರ್ಣವನ್ನು ಹೊಂದಿವೆ.

ಒಟ್ಟಿನಲ್ಲಿ ದೊರೆತ ವಿವಿಧ ಅವಶೇಷಗಳ ಹಿನ್ನಲೆಯಲ್ಲಿ ಇತಿಹಾಸ ಆರಂಭಯುಗದಲ್ಲಿ ಅಧ್ಯಯನ ಪ್ರದೇಶವೂ ಒಂದು ಭಾಗವಾಗಿದ್ದುದು ಸ್ಪಷ್ಟವಾಗಿ ತಿಳಿದು ಬರುತ್ತದೆ

**ಪರಿಶೀಲನೆ**

ನೂತನ ಹಾಗೂ ಬೃಹತ್ ಶಿಲಾ ಸಂಸ್ಕೃತಿಗಳ ನೆಲೆಗಳಲ್ಲಿಯೇ ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಅವಶೇಷಗಳು ಇರುವುದು ಗಮನಾರ್ಹ(ಕೋಷ್ಟಕ ಸಂಖ್ಯೆ ೧೦.೧ ಮತ್ತು ಭೂ ನಕ್ಷೆ ಪುಟ ಸಂಖ್ಯೆ ೪೬೦). ಇವುಗಳಲ್ಲಿ ನೂತನ ಶಿಲಾಯುಗದ ಹಂತದಿಂದಲೂ ನಿರಂತರವಾಗಿ ಇತಿಹಾಸ ಆರಂಭ ಕಾಲದ ಕೊನೆಯವರೆಗೆ ಜನವಾಸ್ತವ್ಯವಿದ್ದ ನೆಲೆಗಳೇ ಹೆಚ್ಚು. ಕೇವಲ ಇತಿಹಾಸ ಆರಂಭ ಕಾಲದ ಜನ ವಸತಿ ಇದ್ದ ನೆಲೆಗಳು ತೀರಾ ಕಡಿಮೆ. ಇವುಗಳಲ್ಲಿ ನೂತನ ಶಿಲಾಯುಗ ಹಂತದಿಂದ ಆದಿ ಇತಿಹಾಸ ಕಾಲದ ಕೊನೆವರೆಗೆ ಜನಸಾಂದ್ರತೆಯು ಮತ್ತು ನೆಲೆಗಳು ಹೆಚ್ಚುತ್ತಿರುವುದು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಈ ಸಂಸ್ಕೃತಿಯ ವಿಶಿಷ್ಟ ವಸ್ತುಗಳಾದ ಕೆಂಪು ಲೇಪನದಡಿಯಲ್ಲಿ ಬಿಳಿ ರೇಖಾ ಚಿತ್ರಗಳಿಂದ ಅಲಂಕೃತವಾದ ಮಣ್ಣಿನ ಪಾತ್ರೆ (Russet Coated Painted Ware) ಅವಶೇಷಗಳು, ಅಡಕೆ ಆಕಾರದ ಸುಡಾವೆ ಮಣ್ಣಿನ ಮಣಿಗಳು, ಶಂಖದ ಬಳೆಗಳು, ಅತಿ ಅಪರೂಪವಾಗಿ ರೋಮ್ ಪ್ರದೇಶದಿಂದ ಬಂದ ಒಂದು ವಿಶಿಷ್ಟ ತಂತ್ರದಿಂದ ಚಿತ್ರ ಮೂಡಿಸಿದ ಮಣ್ಣಿನ ಪಾತ್ರೆ ಅವಶೇಷ ಈ ನೆಲೆಗಳಲ್ಲಿ ದೊರೆತಿದೆ. ಆದರೆ ತಕ್ಕ ಮಟ್ಟಿಗೆ ಈ ಸಂಸ್ಕೃತಿಯ ನೆಲೆಗಳಲ್ಲಿ ಇಟ್ಟಿಗೆ ಕಟ್ಟಡದ ಅವಶೇಷಗಳು ಇರುತ್ತವೆ. ಉದಾಹರಣೆಗೆ ಅಧ್ಯಯನ ಪ್ರದೇಶದ ಉತ್ತರಕ್ಕಿರುವ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿ, ವಾಯುವ್ಯಕ್ಕಿರುವ ವಡಗಾವ್ ಮಾಧವಪುರ, ಪಶ್ಚಿಮಕ್ಕಿರುವ ಬನವಾಸಿ, ಈಶಾನ್ಯಕ್ಕಿರುವ ನಾಗಾರ್ಜುನಕೊಂಡ(ಆಂಧ್ರಪ್ರದೇಶ) ಮೊದಲಾದೆಡೆಗಳಲ್ಲಿ ಈ ಸಂಸ್ಕೃತಿಯ ವಿವಿಧ ಕಟ್ಟಡಗಳೂ ಇವೆ. ಅಷ್ಟೇ ಅಲ್ಲದೆ ಅಪರೂಪವಾಗಿ ರೋಮ್ ದೇಶದ ಚಕ್ರವರ್ತಿಗಳಾಗಿದ್ದ ಅಗಸ್ಟಸ್(ಕ್ರಿ.ಪೂ ೨೩ ಕ್ರಿ.ಶ ೧೪) ಟೈಬೀರಿಯಸ್(ಕ್ರಿ.ಶ ೧೪-೩೭) ಮೊದಲಾದವರ ಚಿನ್ನ ಇಲ್ಲವೇ ಬೆಳ್ಳಿನಾಣ್ಯಗಳು ಹಾಗೂ ಬ್ರಾಹ್ಮೀ ಲಿಪಿ ಮತ್ತು ಪ್ರಾಕೃತ ಭಾಷೆಯಲ್ಲಿರುವ ಶಾತವಾಹನ ಅರಸುಗಳಾದ

ಗೌತಮೀಪುತ್ರ ಶಾತಕರ್ಣಿ (ಕ್ರಿ.ಶ ೧೨೮-೧೫೭) ಮೊದಲಾದವರ ತಾಮ್ರ ಇಲ್ಲವೆ ಸತುವಿನ ನಾಣ್ಯ, ಮಣ್ಣಿನ ಗೊಂಬೆಗಳು, ನಾನಾ ಪ್ರಕಾರದ ಉತ್ತಮ ಜಾತಿಯ ಚರ್ಟ್, ಕಾರ್ನೀಲಿಯನ್, ಅಗೇಟ್, ಜಾಸ್ಪರ್ ಮೊದಲಾದ ಉತ್ತಮ ಜಾತಿಯ ಕಲ್ಲುಗಳು, ದಂತದ, ಲೋಹದ ಮಣಿಗಳು ದೊರೆತಿವೆ. ಒಟ್ಟಾರೆ ಒಂದು ನಾಗರೀಕ ಸಂಸ್ಕೃತಿಯ ಕುರುಹುಗಳು ಇರುತ್ತವೆ. ಆದರೆ ಅಧ್ಯಯನ ಪ್ರದೇಶದಲ್ಲಿ ಇಂತಹ ನಗರ ಸಂಸ್ಕೃತಿಯ ಕುರುಹುಗಳು ಇದುವರೆಗೆ ಶೋಧಿಸಿದ ಯಾವುದೇ ನೆಲೆಗಳಲ್ಲಿ ಕಾಣಬರದಿರುವುದು ಕುತೂಹಲಕಾರಿಯಾಗಿದೆ. ಪ್ರಾಯಶಃ ಕೃಷ್ಣಾ, ತುಂಗಭದ್ರಾ, ಕಾವೇರಿ ನದಿಯಂತಹ ನೀರಿನ ಆಸರೆ ಇಲ್ಲದಿರುವುದು ಒಂದು ಮುಖ್ಯ ಕಾರಣವಾಗಿರ ಬಹುದೇನೋ? ಕೇವಲ ಇತಿಹಾಸ ಆರಂಭ, ಕಾಲ ಸಂಸ್ಕೃತಿಯ ಅವಶೇಷಗಳು ಮಾತ್ರ ಇರುವ ನೆಲೆಗಳು ವಿಸ್ತಾರ ಮತ್ತು ಅಳಿದುಳಿದ ಅವಶೇಷಗಳು ಕಡಿಮೆ ಎಂದೇ ಹೇಳಬಹುದು. ಒಟ್ಟಿನಲ್ಲಿ ಹಿಂದಿನ ಹಂತಗಳಲ್ಲಿದ್ದಂತೆ ಈ ನೆಲೆಗಳು ಸುಧಾರಿಸಿದ ಒಂದು ಗ್ರಾಮೀಣ ಸಂಸ್ಕೃತಿಯನ್ನೇ ಸೂಚಿಸುತ್ತವೆ.

ಆಯ್ದ ಮೃತ್ ಪಾತ್ರೆಗಳ ವಿವರಣೆ

೧. ಯಲ್ಲಪ್ಪನಾಯಕನಹೊಸಕೋಟೆ:- ಕಪ್ಪು-ಕೆಂಪು ವರ್ಣದ ಸ್ವಲ್ಪ ಆಳವಾದ ಲವಣ ಹೊಳಪು ನೀಡಿದ ತಟ್ಟೆಯ ಭಾಗ. ಅಂಚು ಸ್ವಲ್ಪ ಒಳಬಾಗಿದ್ದು ಹೊರ ಆವರಣದಲ್ಲಿ ಚಿತ್ರದಲ್ಲಿ ತೋರಿಸುವಂತೆ ಹಳದಿ ವರ್ಣದ ರೇಖಾ ಚಿತ್ರಗಳನ್ನು ಮೂಡಿಸಲಾಗಿದೆ.

೨. ಯಲ್ಲಪ್ಪನಾಯಕನಹೊಸಕೋಟೆ:- (ರಾಚಮಾರನಹಳ್ಳಿ ೨) ಲವಣ ಉಜ್ಜಿ ಹೊಳಪಿಸಿದ(Salt glaze) ಕಪ್ಪು-ಕೆಂಪು ವರ್ಣದ ಅಗಲ ಬಾಯಿಯ ಸ್ವಲ್ಪ ಮಟ್ಟಿಗೆ ನೇರ ಗೋಡೆಯಿರುವ ವೃತ್ತ ತಳದ ಬೋಗುಣಿಯ ಭಾಗ. ಹೊರ ಮೇಲ್ಮೈಯಲ್ಲಿ ಹಳದಿ ವರ್ಣದ ಒಂದನ್ನೊಂದು ಅಡ್ಡ ಹಾಯುವ ರೇಖಾ ಚಿತ್ರಗಳಿವೆ.

೩. ಯಲ್ಲಪ್ಪನಾಯಕನಹೊಸಕೋಟೆ:- ಮಧ್ಯಮ ಗಾತ್ರದ ಕಂಠವಿಲ್ಲದ ದಪ್ಪ ಅಂಚಿನ ಹೊಳಪಿಸಿದ(Polished) ಕೆಂಪು ವರ್ಣದ ಮಡಕೆಯ ಭಾಗ. ಬಾಯಿಯ ಅಂಚು ಸ್ವಲ್ಪ ಭಾಗ ಒಳಬಾಗಿದ್ದು ಹಾಗು ಸಮಾನಾಂತರವಾಗಿ ಹೊರ ಭಾಗದಲ್ಲಿ ಮಡಕೆಯ ಅಂಚು ವರ್ತುಲಾಕಾರವನ್ನು ಹೊಂದಿದೆ(Concentric groves).

೪. ಯಲ್ಲಪ್ಪನಾಯಕನಹೊಸಕೋಟೆ:- ಹೊಳಪಿಸಿದ ಕೆಂಪು ಬಣ್ಣದ ಸಣ್ಣ ಗಾತ್ರದ ಬೋಗುಣಿಯ ಭಾಗ. ಬೋಗುಣಿಯ ಅಂಚಿನ ಹೊರ ಭಾಗದಲ್ಲಿ ಚಿತ್ರದಲ್ಲಿ ತೋರಿಸಿರುವಂತೆ ಆಳವಿಲ್ಲದ ಮಡಿಕೆಗಳನ್ನು ಅಥವಾ ಗೀರುಗಳನ್ನು ಮೂಡಿಸಿದ್ದಾರೆ.

೫. ಯಲ್ಲಪ್ಪನಾಯಕನಹೊಸಕೋಟೆ:- ಕೆಂಪು ಬಣ್ಣದ ಕೆಂಪು ವರ್ಣದ ಲೇಪನ ಹೊಂದಿರುವ ಸಣ್ಣ ಕಂಠದ ಅಗಲ ಬಾಯಿಯ ತುಸು ಹೊರಬಾಗಿದ ಅಂಚಿನ ಲೋಟದ ಭಾಗ. ಇದರ ಹೊರ ಬಾಗದಲ್ಲಿ ಭುಜದ ಬಳಿ ಹಾಗು ಬಾಯಿಯ ಒಳ ಭಾಗದಲ್ಲಿ ಆಳವಿಲ್ಲದ ಗೀರಿದ ಕುಳಿಗಳನ್ನು ಮೂಡಿಸಲಾಗಿದೆ.

೬. ಯಲ್ಲಪ್ಪನಾಯಕನಹೊಸಕೋಟೆ:- ಕೆಂಪು ವರ್ಣದ ಲೇಪನ ಹೊಂದಿರುವ ಸಣ್ಣ ಕಂಠದ ತುಸು ಹೊರಬಾಗಿದ ಅಂಚಿನ ಲೋಟದ ಭಾಗ ಆದರೆ ಕಂಠ ಹಾಗು ಬಾಯಿ ಸ್ವಲ್ಪ ಒಳಬಾಗಿದಂತಿದೆ. ಒಳಭಾಗದಲ್ಲಿ ನಾಲೆ ಕುಳಿಗಳನ್ನು ಮಾಡಿ(Channel groves) ಅದಕ್ಕೆ ಸಮಾನಾಂತರವಾಗಿ ಹೊರ ಭಾಗದಲ್ಲಿ ಒಂದೇ ದಪ್ಪ ಅಂಚನ್ನು(Collar) ಕೊಡಲಾಗಿದೆ. ಭುಜದ ಹೊರ ಭಾಗದಲ್ಲಿ ವರ್ತುಲಾಕಾರದಲ್ಲಿ ಆಳವಿಲ್ಲದ ಗೀರು ಕುಳಿಗಳನ್ನು ಮೂಡಿಸಲಾಗಿದೆ.

೭. ಯಲ್ಲಪ್ಪನಾಯಕನಹಳ್ಳಿ:- ಕಪ್ಪು-ಕೆಂಪು ವರ್ಣದ ನೇರ ಗೋಡೆಯ ಹೊಳಪಿಸಿದ ಸಮ ವೃತ್ತ ತಳದ ಬೋಗುಣಿಯಭಾಗ. ಬೋಗುಣಿಯ ಹೊರಮೈ ಒಂದನ್ನೊಂದು ಕತ್ತರಿಸುವ ಹಳದಿ ಬಣ್ಣದ ರೇಖೆಗಳಿಂದ ಅಲಂಕೃತವಾಗಿದೆ.

೮. ಯಲ್ಲಪ್ಪನಾಯಕನಹಳ್ಳಿ:- ಕಪ್ಪು-ಕೆಂಪು ವರ್ಣದ, ಲವಣ ಉಜ್ಜಿ ಹೊಳಪಿಸಿದ. ತುಸು ಒಲಬಾಗಿದ ಅಂಚುಳ್ಳ ತಟ್ಟೆಯ ಭಾಗ. ಹೊರ ಭಾಗದಲ್ಲಿ ಚಿತ್ರದಲ್ಲಿ ತೋರಿಸಿದಂತೆ ಹಳದಿ ವರ್ಣದ ರೇಖಾ ಚಿತ್ರಗಳಿವೆ.

೯. ಯಲ್ಲಪ್ಪನಾಯಕನಹಳ್ಳಿ:- ಕಪ್ಪು-ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಚೂಪು ಅಂಚಿನ ನೇರ ಪಾರ್ಶ್ವದ ಸಮ ವೃತ್ತ ತಳದ ಬೋಗುಣಿಯ ಭಾಗ.

೧೦. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ, ಅಂಚು ಒಳಬಾಗಿದ ಸಮತಲದ ಲವಣ ಉಜ್ಜಿ ಹೊಳಪಿಸಿದ ತಟ್ಟೆ(Dish) ಯಭಾಗ. ಹೊರ ಭಾಗದಲ್ಲಿ ಸ್ವಲ್ಪ ವಾಲಿಕೊಂಡಂತೆ ನೀಳ ಹಳದಿ ವರ್ಣದ ರೇಖೆಗಳಿಂದ ಅಲಂಕೃತವಾಗಿದೆ.

೧೧. ಯಲ್ಲಪ್ಪನಾಯಕನಹಳ್ಳಿ:- ಕಪ್ಪು-ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ನೇರ ಗೋಡೆಯ ಚೂಪಾದ ಅಂಚುಳ್ಳ ಸಮ ವೃತ್ತ ತಳದ ಬೋಗುಣಿಯ ಭಾಗ. ಒಂದನ್ನೊಂದು ಕತ್ತರಿಸುವ ಹಳದಿ ವರ್ಣದ ರೇಖೆಗಳಿಂದ ಅಲಂಕೃತವಾಗಿದೆ.

೧೨. ಯಲ್ಲಪ್ಪನಾಯಕನಹಳ್ಳಿ:- ಕೆಂಪು ಬಣ್ಣದ ಕೆಂಪು ಲೇಪನವುಳ್ಳ ಅಗಲ ಬಾಯಿಯ ಅಂಚು ಒಳಬಾಗಿದ ಬೋಗುಣಿಯ ಭಾಗ. ಹೊರಭಾಗದಲ್ಲಿ ಬೋಗುಣಿಯ ಬುಡದ ಬಳಿ ಆಳವಿಲ್ಲದ ಕುಳಿಗಳ ವರ್ತುಲವಿದೆ.

೧೩. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ತುಸುವೆ ಭುಜಬಾಗಿದ ತಟ್ಟೆಯಾಕಾರದ ಮುಚ್ಚಳ. ಅಂಚಿನಲ್ಲಿ ಆಳವಿಲ್ಲದ ಕುಳಿಗಳ ವರ್ತುಲವಿದೆ.

೧೪. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ಒಳಬಾಗಿದ ದಪ್ಪ ಅಂಚಿನ ಅಗಲವಾದ ಬೋಗುಣಿಯ ಭಾಗ.

೧೫. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ಮಧ್ಯಮ ಗಾತ್ರದ ಕಂಠವುಳ್ಳ ಅಂಚು ಒಳಬಾಗಿದ ಅಂಚಿನ ಹೊರ ಭಾಗದಲ್ಲಿ ದಪ್ಪ ಮಡಿಕೆಯುಳ್ಳ(Flanged) ಮುಚ್ಚುಳದ ಭಾಗ.

೧೬. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ಪಾರ್ಶ್ವ ತುಸು ಹೊರ ಚಾಚಿದ ಅಂಚುಳ್ಳ ಮುಚ್ಚಳದ ಭಾಗ.

೧೭. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಹೊಳಪಿನ(Polished) ತಟ್ಟೆಯ ಭಾಗ. ಅಂಚು ಸ್ವಲ್ಪ ಒಳಬಾಗಿದೆ.

೧೮ ಯಲ್ಲಪ್ಪನಾಯಕನಹಳ್ಳಿ:- ಕಪ್ಪು-ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಸ್ವಲ್ಪ ಅಂಚು
ಹೊರಚಾಚಿದ. ಸಮತಲ ವರ್ತುಲ ತಳದ ಬೀಕರ್ ಅಥವಾ ಲೋಟದ ಭಾಗ. ಹೊರ ಭಾಗದ ಅಂಚಿನಲ್ಲಿ ಮಡಿಕೆ ಮಾಡಿದ ತದನಂತರದ ಗೀರು ವರ್ತುಲವಿದೆ.

೧೯. ಯಲ್ಲಪ್ಪನಾಯಕನಹಳ್ಳಿ:- ಕಪ್ಪು-ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಸ್ವಲ್ಪ ಅಂಚು ಹೊರಚಾಚಿದ. ಸಮತಲ ವರ್ತುಲ ತಳದ ಹೊರ ಭಾಗದ ಅಂಚಿನಲ್ಲಿ ಮಡಿಕೆ ಮಾಡಿದ ತದನಂತರದ ಗೀರು ವರ್ತುಲವಿದೆ ಬಾಯಿ ಸ್ವಲ್ಪ ಅಗಲವಾಗಿದ್ದು ಮಧ್ಯಮ ಗಾತ್ರದ ಪಾತ್ರೆ.

೨೦. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಹೊಳಪಿನ(Polished) ತಟ್ಟೆಯ ಭಾಗ. ಅಂಚು ಸ್ವಲ್ಪ ಒಳಬಾಗಿದೆ. ತಳಭಾಗದಲ್ಲಿ ವರ್ತುಲ ಸಮ ತಳವಿದೆ.

೨೧. ಯಲ್ಲಪ್ಪನಾಯಕನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ಭಾರಿ ಗಾತ್ರದ ಅಂಚುಳ್ಳ ಭುಜಬಾಗಿದ ಬೋಗುಣಿಯ ಭಾಗ.

೨೨. ರಾಚಮಾರನಹಳ್ಳಿ:- ಸಮತಳದ ಕಪ್ಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಅಗಲ ಬಾಯಿಯ ಸ್ವಲ್ಪ ಹೊರಬಾಗಿದ ಕಂಠದ ಬಳಿ ಹೊರಚಾಚಿದ ಅಂಚಿನ ಮಧ್ಯಮ ಗಾತ್ರದ ಬೋಗಣಿ.

೨೩. ರಾಚಮಾರನಹಳ್ಳಿ:- ಕಪ್ಪು-ಕೆಂಪು ವರ್ಣದ ಹಳದಿ ರೇಖಾಚಿತ್ರವಿದ್ದು ಸಾಮಾನ್ಯವಾಗಿ ದೊರಕುವ ಬೋಗುಣಿ.

೨೪. ರಾಚಮಾರನಹಳ್ಳಿ:- ಕಪ್ಪು-ಕೆಂಪು ವರ್ಣದ ಲವಣ ಹೊಳಪುಳ್ಳ ಅಂಚು ಒಳಬಾಗಿದ ಹಳದಿ ವರ್ಣದ ರೇಖೆಗಳಿಂದ ಅಲಂಕೃತವಾದ ತಟ್ಟೆಯ ಭಾಗ.

೨೫. ರಾಚಮಾರನಹಳ್ಳಿ:- ಕಪ್ಪು-ಕೆಂಪು ವರ್ಣದ ಸ್ವಲ್ಪ ಆಳವಾದ ಲವಣ ಹೊಳಪು ನೀಡಿದ ತಟ್ಟೆಯ ಭಾಗ. ಅಂಚು ಸ್ವಲ್ಪ ಒಳಬಾಗಿದ್ದು ಹೊರ ಆವರಣದಲ್ಲಿ ಚಿತ್ರದಲ್ಲಿ ತೋರಿಸುವಂತೆ ಹಳದಿ ವರ್ಣದ ರೇಖಾ ಚಿತ್ರಗಳನ್ನು ಮೂಡಿಸಲಾಗಿದೆ.

೨೬. ರಾಚಮಾರನಹಳ್ಳಿ:- ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಅಂಚು ಒಳಬಾಗಿದ ಹೊರಭಾಗದಲ್ಲಿ ಹಳದಿ ವರ್ಣದ ಅಡ್ಡ ಹಾಯ್ದ ರೇಖೆಗಳಿಂದ ಅಲಂಕೃತವಾದ ತಟ್ಟೆಯ ಭಾಗ.

೨೭. ರಾಚಮಾರನಹಳ್ಳಿ:- ಕೆಂಪು ಬಣ್ಣ ಲೇಪಿಸಿದ ಸಾಧಾರಣ ರೀತಿಯ ತಟ್ಟೆಯ ಭಾಗ.

೨೮ ರಾಚಮಾರನಹಳ್ಳಿ:- ಕೆಂಪು ಬಣ್ಣ ಲೇಪಿಸಿದ ಸಾಧಾರಣ ರೀತಿಯ ತಟ್ಟೆಯ ಭಾಗ.

೨೯. ರಾಚಮಾರನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನದ ಒಳಬಾಗಿದ ತುಸುವೇ ಅಂಚುಕಟ್ಟಿದ ನೇರ ಪಾರ್ಶ್ವದ ಸಣ್ಣ ಗಾತ್ರದ ಬೋಗಣಿ.

೩೦. ರಾಚಮಾರನಹಳ್ಳಿ:- ಸಾಮಾನ್ಯವಾಗಿ ದೊರೆಯುವ ಕೆಂಪು ಲೇಪನದ ನೇರ ಪಾರ್ಶ್ವದ ಚೂಪು ಮಾಡಿದ ಅಂಚುಳ್ಳ ಬೋಗಣಿಯ ಭಾಗ.

೩೧. ರಾಚಮಾರನಹಳ್ಳಿ:- ಕೆಂಪು ಬಣ್ಣದ ಕೆಂಪು ಲೇಪನವುಳ್ಳ ಅಗಲ ಬಾಯಿಯ ಅಂಚು ಒಳಬಾಗಿದ
ಬೋಗುಣಿಯ ಭಾಗ.ಹೊರಭಾಗದಲ್ಲಿ ಬೋಗುಣಿಯ ಬುಡದ ಬಳಿ ಆಳವಿಲ್ಲದ ಕುಳಿಗಳ ವರ್ತುಲವಿದೆ.

೩೨. ರಾಚಮಾರನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನದ ಮಧ್ಯಮ ಗಾತ್ರದ ಅಂಚು ಹೊರಬಾಗಿದ ಮಡಕೆಯ ಭಾಗ.

೩೩. ರಾಚಮಾರನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನದ ಸಣ್ಣ ಗಾತ್ರದ ಅಂಚು ಒಳಬಾಗಿದ ಸಮ ತಳದ ಸಣ್ಣ ಗಾತ್ರದ ಬೋಗಣಿಯ ಭಾಗ.

೩೪. ರಾಚಮಾರನಹಳ್ಳಿ:-ಕಪ್ಪು-ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಸ್ವಲ್ಪ ಅಂಚು ಹೊರಚಾಚಿದ. ಸಮತಲ ವರ್ತುಲ ತಳದ ಬೀಕರ್ ಅಥವಾ ಲೋಟದ ಭಾಗ. ಹೊರ ಭಾಗದ ಅಂಚಿನಲ್ಲಿ ಮಡಿಕೆ ಮಾಡಿದ ತದನಂತರದ ಗೀರು ವರ್ತುಲವಿದೆ.

೩೫. ರಾಚಮಾರನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನದ ಸ್ವಲ್ಪ ದಪ್ಪ ಅಂಚಿನ ವಿಷೇಶವಾಗಿ ವೃತ್ತ ತಳದ ಸಣ್ಣ ಮುಚ್ಚಳದ ಪಾತ್ರೆ.

೩೬. ರಾಚಮಾರನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನದ ಸಾಮಾನ್ಯವಾಗಿ ಕಂಡು ಬರುವ ಹಿಡಿಯಲು ಅನುಕೂಲವಾಗಿಸುವಂತೆ ಅಂಚುಳ್ಳ ಮುಚ್ಚಳದ ಭಾಗ.

೩೭. ರಾಚಮಾರನಹಳ್ಳಿ:- ಕಪ್ಪು-ಕೆಂಪು ವರ್ಣದ ಬೋಗುಣಿ. ನೇರ ಗೋಡೆಯ ಹೊಳಪಿಸಿದ ಸಮ ವೃತ್ತ ತಳದ ಬೋಗುಣಿಯ ಹೊರಮೈ ಒಂದನ್ನೊಂದು ಕತ್ತರಿಸುವ ಹಳದಿ ಬಣ್ಣದ ರೇಖೆಗಳಿಂದ ಅಲಂಕೃತವಾಗಿದೆ.

೩೮. ರಾಚಮಾರನಹಳ್ಳಿ:- ಕೆಂಪು ವರ್ಣದ, ಅಂಚು ಒಳಬಾಗಿದ ಸಮಮಲದ ಲವಣ ಉಜ್ಜಿ ಹೊಳಪಿಸಿದ ತಟ್ಟೆ(Dish) ಯಭಾಗ. ಹೊರ ಭಾಗದಲ್ಲಿ ಸ್ವಲ್ಪ ವಾಲಿಕೊಂಡಂತೆ ನೀಳ ಹಳದಿ ವರ್ಣದ ರೇಖೆಗಳಿಂದ ಅಲಂಕೃತವಾಗಿದೆ.

೩೯. ರಾಚಮಾರನಹಳ್ಳಿ:- ಕಪ್ಪು-ಕೆಂಪು ಹಳದಿ ವರ್ಣದ ರೇಖಾಚಿತ್ರ ಅಲಂಕೃತ ಮಧ್ಯಮ ಗಾತ್ರದ ಬೋಗುಣಿಯ ಭಾಗ.

೪೦. ರಾಚಮಾರನಹಳ್ಳಿ:- ಕಪ್ಪು-ಕೆಂಪು ವರ್ಣದ ಲವಣ ಉಜ್ಜಿ ಹೊಳಪಿಸಿದ ಅಗಲ ಬಾಯಿನ ಅಂಚು ಹೊರಬಾಗಿದ ಮಧ್ಯಮ ಗಾತ್ರದ ಹಳದಿ ವರ್ಣದ ರೇಖಾ ಚಿತ್ರದಿಂದ ಅಲಂಕೃತವಾದ ಬೋಗುಣಿ.

೪೧. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನದ ಸಾಮಾನ್ಯವಾಗಿ ಕಂಡು ಬರುವ ಹಿಡಿಯಲು ಅನುಕೂಲವಾಗಿಸುವಂತೆ ಅಂಚುಳ್ಳ ಮುಚ್ಚಳ.

೪೨. ಕೈದಾಳ:- ಕೆಂಪು ವರ್ಣದ ಹೊಳಪಿಸಿದ(Polished) ಸಾಮಾನ್ಯವಾಗಿ ದೊರೆಯುವ ಅಗಲ ಬಾಯಿನ ದೃಡವಾದ ತಳ ಕತ್ತರಿಸಿದ ಅಂಚಿರುವ ಆಳವಲ್ಲದ ಬೋಗಣಿ. ಇದರಲ್ಲಿ ಅಂಚಿನ ಒಳ ಭಾಗದಲ್ಲಿ ಮತ್ತು ಮೇಲ್ಮೈಯಲ್ಲಿ ವರ್ತುಲಾಕಾರದ ಕುಳಿ ಗೆರೆಗಳಿವೆ.

೪೩. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ಪಾರ್ಶ್ವ ತುಸು ಹೊರ ಚಾಚಿದ ಅಂಚುಳ್ಳ ಮುಚ್ಚಳದ ಭಾಗ.

೪೪. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನದ ಧೃಡವಾದ ವರ್ತುಲ ತಳದ ಸಣ್ಣ ಗಾತ್ರದ ಮುಚ್ಚಳ.

೪೫. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನದ ಸಮತಲವಾದ ಹೂಜಿಯಾಕಾರದ ಪಾತ್ರೆಯ ಭಾಗ.

೪೬. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನದ ಸಣ್ಣ ಗಾತ್ರದ ಅಂಚು ಹೊರಬಾಗಿದ ಭುಜದ ಬಳಿ ವರ್ತುಲ ಕುಳಿಗಳಿರುವ ಮಡಕೆಯ ಭಾಗ.

೪೭. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನದ ಕಿರು ಗಾತ್ರದ ಕುಡಿಕೆ(Miniature pot).

೪೮. ಕೈದಾಳ:- ಕೆಂಪು ವರ್ಣದ ಕೆಂಪು ಲೇಪನದ ಕಂಠ ಮತ್ತು ಬಾಯಿಯ ಅಂಚು ತುಸು ಹೊರ ಬಾಗಿದ ಕೊಡದ ಭಾಗ.

೪೯. ಕೈದಾಳ:- ಕೆಂಪು ವರ್ಣ ಲೇಪನದ ಸಣ್ಣ ಗಾತ್ರದ ಅಂಚು ಹೊರಬಾಗಿದ(Rim everted) ಮಧ್ಯಮ ಗಾತ್ರದ ಗೋಲಾಕಾರದ ಪಾತ್ರೆಯ ಭಾಗ.

೫೦. ಸಿದ್ಧಗಂಗಾಬೆಟ್ಟ:- ಕೆಂಪು ಬಣ್ಣ ಲೇಪಿಸಿದ ಸಾಧಾರಣ ರೀತಿಯ ತಟ್ಟೆಯ ಭಾಗ.

೫೧. ಸಿದ್ಧಗಂಗಾಬೆಟ್ಟ:- ಕೆಂಪು ಬಣ್ಣದ ಕೆಂಪು ಲೇಪನವುಳ್ಳ ಅಗಲ ಬಾಯಿಯ ಅಂಚು ಒಳಬಾಗಿದ ಬೋಗುಣಿಯ ಭಾಗ. ಹೊರಭಾಗದಲ್ಲಿ ಬೋಗುಣಿಯ ಬುಡದ ಬಳಿ ಆಳವಿಲ್ಲದ ಕುಳಿಗಳ ವರ್ತುಲವಿದೆ.

೫೨. ಸಿದ್ಧಗಂಗಾಬೆಟ್ಟ:- ಕೆಂಪು ವರ್ಣದ ಕೆಂಪು ಲೇಪನದ ದಪ್ಪ ಗಾತ್ರದ ತುಸುವೇ ಒಳಬಾಗಿದ ನೇರ ದಪ್ಪ ಅಂಚಿನ ಶೇಖರಣಾ ಪಾತ್ರೆ.

೫೩. ಸಿದ್ಧಗಂಗಾಬೆಟ್ಟ:- ಕೆಂಪು ವರ್ಣದ ಪಾರ್ಶ್ವ ಸ್ವಲ್ಪ ಉಬ್ಬಿದ ವೃತ್ತ ಸಮತಲದ ಮಧ್ಯಮ ಗಾತ್ರದ ಬೋಗುಣಿಯ ಭಾಗ.

೫೪. ತೆಪ್ಪಸಂದ್ರ:- ಕೆಂಪು ವರ್ಣದ ಕೆಂಪು ಲೇಪನವುಳ್ಳ ಒಳಬಾಗಿದ ದಪ್ಪ ಅಂಚಿನ ಅಗಲವಾದ ಬೋಗುಣಿಯ ಭಾಗ.ಆಳವಿಲ್ಲದ ಬೋಗುಣಿಯ ಅಂಚಿನಲ್ಲಿ ಸುಂದರವಾಗಿ ಕೊರೆದು ಮಾಡಿದ್ದು ಬಳ್ಳಿಯ ಸಾಲಿನ ಚಿತ್ರವಿದೆ.

೫೫. ತೆಪ್ಪಸಂದ್ರ:- ಕಪ್ಪು-ಕೆಂಪು ವರ್ಣದ ಕೆಂಪು ಬಣ್ಣ ಲೇಪಿಸಿದ ಸಾಧಾರಣ ರೀತಿಯ ತಟ್ಟೆಯ ಭಾಗ.

೫೬. ಮರಿದಾಸನಹಳ್ಳಿ:- ಕೆಂಪು ವರ್ಣದ ಕೆಂಪು ಲೇಪನದ ಮಧ್ಯಮ ಗಾತ್ರದ ಅಂಚಿನ ಒಳ ಭಾಗದಲ್ಲಿ ಮುಚ್ಚಳ ಕೂರುವಂತೆ ಮಾಡಿರುವ ಮಡಕೆಯ ಭಾಗ.



೧ ೨



೩



೪



೬

ಅಧ್ಯಾಯ ಹನ್ನೊಂದು

# ಕಾಲಮಾನ

ಪ್ರಸ್ತುತ ಅಧ್ಯಯನ ಪ್ರದೇಶಕ್ಕೆ ಸಂಬಂಧ ಪಟ್ಟಂತೆ ಸಾಂಸ್ಕೃತಿಕ ಅನುಪೂರ್ವಿ ಮತ್ತು ಕಾಲಮಾನಗಳ ಖಚಿತ ನಿರ್ಧಾರಕ್ಕೆ ಎರಡು ವಿಧವಾದ ಸಮಸ್ಯೆಗಳು. ಮೊದಲನೆಯದಾಗಿ ಈ ಹಿಂದೆ ಈ ಪ್ರದೇಶದಲ್ಲಿ ಯಾವುದೇ ರೀತಿಯ ವೈಜ್ಞಾನಿಕ ಉತ್ಖನನ ನಡೆಯದಿರುವುದು. ಜೊತೆಗೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿಯೂ ಅಲ್ಪ ಪ್ರಮಾಣದ ಉತ್ಖನನವನ್ನೂ ಅಥವಾ ಪರೀಕ್ಷಾ ಅಗೆತವನ್ನೂ ಮಾಡಲು ಸಾಧ್ಯವಾಗದಿರುವುದು. ಇದರಿಂದ ಸಾಂಸ್ಕೃತಿಕ ಅನುಪೂರ್ವಿ ಹಾಗು ಕಾಲ ನಿರ್ಣಯಕ್ಕೆ ಸ್ಥಳ ಪರಿಶೋಧನೆಯಲ್ಲಿ ದೊರಕಿದ ಮಾಹಿತಿಯನ್ನಷ್ಟೇ ಅವಲಂಬಿಸಬೇಕಾಗಿದೆ. ಎರಡನೆಯದಾಗಿ ನಿರ್ದಿಷ್ಟ ಕಾಲ ನಿರ್ಣಯಕ್ಕೆ ಸಹಾಯಕವಾಗುವ ಯಾವುದೇ ರೀತಿಯ ವಿಶಿಷ್ಟ ಪ್ರಾಚ್ಯವಸ್ತು ಅಥವಾ ಇಂಗಾಲ-೧೪ ರ ಪರೀಕ್ಷೆಗೊಳಪಡಬಹುದಾದ ಸಾವಯವ ವಸ್ತುಗಳು ಸ್ಥಳ ಪರಿಶೋಧನೆಯಲ್ಲಿ ದೊರಕಿಲ್ಲ. ಆದ ಕಾರಣ ಈ ಪ್ರದೇಶದ ಸಂಸ್ಕೃತಿಗಳ ಕಾಲಮಾನಕ್ಕೆ ಸಂಬಂಧಿಸಿದಂತೆ ಕೇವಲ ಶಿಲೋಪಕರಣ ಮತ್ತಿತರ ವಸ್ತುಗಳು ಮೂಲ ಸಾಮಗ್ರಿ, ತಾಂತ್ರಿಕತೆ, ಉಪಕರಣ ವೈವಿಧ್ಯ ಮುಂತಾದವುಗಳನ್ನು ನೆರೆಯ ಪ್ರದೇಶಗಳಲ್ಲಿ ನೆಡೆದಿರುವ ಶಾಸ್ತ್ರೀಯ ಅಧ್ಯಯನಗಳಲ್ಲಿ ದೊರೆತಿರುವ ವಸ್ತುಗಳೊಂದಿಗೆ ಹೋಲಿಸಿ ಸಾಮ್ಯತೆಯ ಆಧಾರದ ಮೇಲೆ ಅಂದಾಜು ಮಾಡಬೇಕಾಗಿದೆ.

ಆದಿ ಹಳೆಶಿಲಾಯುಗದ ಉಪಕರಣಗಳ ಶಾಸ್ತ್ರೀಯ ವರ್ಗೀಕರಣದ ವಿಶೇಷ ಅಧ್ಯಯನದ ಆಧಾರದ ಮೇಲೆ ಆರ್.ವಿ.ಜೋಶಿಯವರು(೧೯೫೫) ಮಲಪ್ರಭಾ ನದೀ ಕಣಿವೆಯ ಉಪಕರಣಗಳನ್ನು ಅಶ್ಯೂಲಿಯನ್ ತಂತ್ರವನ್ನು ಉಪಯೋಗಿಸಿ ರೂಪಿಸಲಾಗಿದ್ದು ಹೆಚ್ಚು ಕಡಿಮೆ ಮಧ್ಯ ಪ್ಲಿಸ್ಟೋಸಿನ್ ಯುಗಕ್ಕೆ ಸೇರುತ್ತವೆಂದು ನಿರ್ಧರಿಸಿದ್ದಾರೆ. ಅದರಂತೆಯೇ ಆರ್.ಎಸ್.ಪಪ್ಪುರವರು(೧೯೭೪) ಕೃಷ್ಣಾ ಮೇಲ್ದಂಡೆಯಲ್ಲಿರುವ ಆದಿ ಹಳೆಶಿಲಾಯುಗದ ನಿವೇಶನಗಳಲ್ಲಿ ದೊರೆತಿರುವ ಉಪಕರಣಗಳನ್ನು ಮಧ್ಯ ಪ್ಲಿಸ್ಟೋಸಿನ್ ಯುಗದ ಕೊನೆ ಕೊನೆಯ ಕಾಲದಲ್ಲಿ ರೂಪಿಸಲಾಗಿದ್ದು, ಕರ್ನಾಟಕದಲ್ಲಿ ಆದಿ ಹಳೆಶಿಲಾಯುಗದ ಕಾಲವು ಮಧ್ಯ ಪ್ಲಿಸ್ಟೋಸಿನ್‌ನ ಆರಂಭಿಕ ಹಂತದ್ದೆಂದು ನಿರೂಪಿಸಿದ್ದಾರೆ.

ಅದರಂತೆಯೆ ಕೃಷ್ಣಾ ಮೇಲ್ದಂಡೆಯ ಪ್ರಾಗೈತಿಹಾಸಿಕ ನಿವೇಶನಗಳಲ್ಲಿ ಮಧ್ಯ ಹಳೆಶಿಲಾಯುಗದ ಉಪಕರಣಗಳು ದೊರಕಿರುವ ಪ್ರಾಚೀನ ಅಲ್ಲ್ಯೂವಿಯಂ ಸ್ತರಗಳು ಇಂಗಾಲ-೧೪ ಎಂಬ ವೈಜ್ಞಾನಿಕ ತಂತ್ರದಿಂದ ೩೦ ರಿಂದ ೩೯ ಸಾವಿರ ಪೂರ್ವಕ್ಕೆ ಸೇರುತ್ತವೆ ಎಂದು ನಿರ್ಧರಿಸಲಾಗಿದೆ (ಪಪ್ಪು.ಆರ್.ಎಸ್:೧೯೭೪). ಆದ್ದರಿಂದ ಇವು ಖಚಿತವಾಗಿ ಅಂತಿಮ ಪ್ಲಿಸ್ಟೋಸಿನ್ ಯುಗದವು. ಇದೇ ವಾದ ಸರಣಿಯನ್ನನುಸರಿಸಿ ಹುಣಸಗಿ ಕಣಿವೆಯ ವಜ್ಜಾಲ

ನೆಲೆಯಲ್ಲಿ ಮಧ್ಯ ಹಳೆಶಿಲಾಯುಗದ ಉಪಕರಣಗಳು ದೊರೆಯುವ ಸ್ತರಗಳನ್ನು ಬದಾಮ್ ರವರು ತಾತ್ಕಲಿಕವಾಗಿ ಅಂತ್ಯ ಪ್ಲಿಸ್ಟೋಸಿನ್ ಯುಗಕ್ಕೆ ಸೇರಿಸಿದ್ದಾರೆ (ಬದಾಮ್.ಜಿ.ಎಲ್:೧೯೭೯).

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಆದಿ ಮತ್ತು ಮಧ್ಯ ಹಳೆಶಿಲಾಯುಗದ ಉಪಕರಣಗಳು ಯಾವುದೇ ನಿರ್ದಿಷ್ಟವಾಗಿ ಪ್ರತ್ಯೇಕಿಸ ಬಹುದಾದ ಸ್ತರಗಳಲ್ಲಿ ದೊರೆತಿಲ್ಲ. ಜೊತೆಗೆ ಈ ಉಪಕರಣಗಳು ನಿರ್ದಿಷ್ಟ ಕಾಲಮಾನಕ್ಕೆ ಹೊಂದಿಸಬಹುದಾದ ಪ್ರಾಣಿಗಳ ಅಸ್ತಿ ಅವಶೇಷ ಅಥವಾ ಪಳೆಯುಳಿಕೆಗಳ ಸಂಬಂಧವನ್ನೂ ಹೊಂದಿಲ್ಲ. ಅಲ್ಲದೆ ಉಪಕರಣಗಳು ಭೂಮಿಯ ಮೇಲ್ಪದರದಲ್ಲಿಯೇ ಕಂಡು ಬಂದಿದ್ದು ನಿರ್ದಿಷ್ಟ ಉಪಕರಣಯುಕ್ತ ಸ್ತರಗಳಿರುವ ಕಣಿವೆ ಭಾಗಗಳಲ್ಲಿ ದೊರೆತಿಲ್ಲ. ಈ ಕಾರಣಗಳಿಂದ ಆದಿ ಹಳೆಶಿಲಾಯುಗದ ಉಪಕರಣಗಳನ್ನು ಮಧ್ಯ ಹಳೆಶಿಲಾಯುಗದ ಉಪಕರಣಗಳಿಂದ ಕಾಲಮಾನ ದೃಷ್ಟಿಯಿಂದ ಬೇರ್ಪಡಿಸಿ ಆಯಾಯುಗಗಳನ್ನು ಪ್ರತ್ಯೇಕಿಸಿ, ಅವುಗಳ ನಿರ್ಧಿಷ್ಟ ಕಾಲಮಾನವನ್ನು ತಿಳಿಯಲಾಗಿದೆ. ಆದುದರಿಂದ ಒಟ್ಟಾರೆ ಈ ಪ್ರದೇಶದಲ್ಲಿನ ಉಪಕರಣಗಳ ಮೂಲ ಶಿಲಾಮಾದರಿ, ಗಾತ್ರ, ಆಕೃತಿ, ಉಪಯೋಗ ಮುಂತಾದುವುಗಳನ್ನು ಈಗಾಗಲೇ ಸಾಕಷ್ಟು ಶಾಸ್ತ್ರೀಯವಾಗಿ ಅಧ್ಯಯನ ಮಾಡಲಾಗಿರುವ ಮಲಪ್ರಭಾ ಮತ್ತು ಕೃಷ್ಣಾ ಮೇಲ್ದಂಡೆ ಕಣಿವೆಗಳಲ್ಲಿ ಪ್ರತ್ಯೇಕ ಸ್ತರಗಳಲ್ಲಿ ದೊರೆತಿರುವ ಅಂತಹುದೇ ಉಪಕರಣಗಳೊಂದಿಗೆ ತುಲನಾತ್ಮಕವಾಗಿ ಪರಿಶೀಲಿಸಿ ಕಾಲಮಾನ ಮಾಡಬೇಕಾಗುತ್ತದೆ. ಇಂತಹ ಹೋಲಿಕೆಯ ಆಧಾರದ ಮೇಲೆ ಜೋಷಿ(೧೯೫೬) ಅನ್ಸಾರಿ(೧೯೭೦) ಪಪ್ಪು(೧೯೭೪) ಹಾಗೂ ಬದಾಮ್(೧೯೭೯) ರವರುಗಳು ಸೂಚಿಸಿರುವ ಕಾಲಮಾನಗಳಾದ ಆದಿ ಹಳೆಶಿಲಾಯುಗ ೪ ರಿಂದ ೧ ಲಕ್ಷ, ಮಧ್ಯ ಹಳೆಶಿಲಾಯುಗ ೧.೫ ಲಕ್ಷದಿಂದ ೧ ಲಕ್ಷವರ್ಷಗಳು. ತುಮಕೂರು ಜಿಲ್ಲೆಯ ಪ್ರದೇಶಕ್ಕೂ ಇದೇ ಕಾಲಮಾನ ಹೆಚ್ಚು ಕಡಿಮೆ ಹೊಂದಿಕೊಳ್ಳುತ್ತದೆ ಎಂದು ಹೇಳಬಹುದು.

ಆದಿ ಮತ್ತು ಮಧ್ಯ ಹಳೆಶಿಲಾಯುಗದ ನೆಲೆಗಳಿಗೆ ಹೋಲಿಸಿದರೆ ಅಂತ್ಯ ಹಳೆಶಿಲಾಯುಗದ ನೆಲೆಗಳು ಗಣನೀಯವಾಗಿ ಹೆಚ್ಚು ಇರುವುದು ಪ್ರಸ್ತುತ ಅಧ್ಯಯನ ಪ್ರದೇಶದ ಒಂದು ಗಮನಾರ್ಹ ಅಂಶ. ಉತ್ತರ ಕರ್ನಾಟಕದ ಪ್ರಸಿದ್ಧ ಅಂತ್ಯ ಹಳೆಶಿಲಾಯುಗದ ನೆಲೆಗಳಲ್ಲಿ ದೊರೆಯುವ ಉತ್ಕೃಷ್ಟ ಜಾತಿಯ ಅರೆಪ್ರಶಸ್ತ ಶಿಲೆಗಳ ಅಭಾವವಿದ್ದರೂ ಕ್ವಾರ್ಟ್ಜ್, ಜಾಸ್ಪರ್ ಮತ್ತು ಫೆಲ್ಸಪರ್ ಅಷ್ಟೇನೂ ಉತ್ತಮವಲ್ಲದ ಆದರೆ ಸುಲಭವಾಗಿ ದೊರೆಯುವ ಶಿಲಾ ಸಾಮಗ್ರಿಗಳನ್ನೇ ಉಪಯೋಗಿಸಿಕೊಂಡು ಸುಮಾರು ೧೬ ರೀತಿಯ ಉಪಕರಣಗಳನ್ನು ರೂಪಿಸಿಕೊಂಡಿರುವುದು ಇನ್ನೊಂದು ಗಮನಾರ್ಹ ಅಂಶ. ಈ ಉಪಕರಣಗಳು ವೈವಿಧ್ಯ, ತಂತ್ರಗಾರಿಕೆ ಮುಂತಾದವುಗಳಲ್ಲಿ ಕರ್ನಾಟಕ-ಮಹಾರಾಷ್ಟ್ರ ಗಡಿ ಪ್ರದೇಶದ ಸುರಪುರ ಕಣಿವೆ (ಪದ್ದಯ್ಯ:೧೯೭೦;೧೬೫-೧೯೦), ನೆರೆಯ ಆಂಧ್ರ ಪ್ರದೇಶದ ಚಿತ್ತೂರು ಜಿಲ್ಲೆಯ ರಾಳ್ಳಕಾಲ್ವ

(ಮೂರ್ತಿ.ಎಂ.ಎಲ್.ಕೆ:೧೯೬೬) ಮತ್ತು ಕೃಷ್ಣಾ ಕಣಿವೆಯ ನಾಗಾರ್ಜುನಕೊಂಡ (ಸುಬ್ರಹ್ಮಣ್ಯಂ.ಆರ್:೧೯೭೫) ಬೇಲಾನ್ ಕಣಿವೆ (ಶರ್ಮಾ:೧೯೮೦)ಗಳಲ್ಲಿ ದೊರೆಯುವ ಅಂತ್ಯ ಹಳೆಶಿಲಾಯುಗದ ಉಪಕರಣಗಳೊಂದಿಗೆ ಹೆಚ್ಚು ಸಾಮ್ಯ ಹೊಂದಿವೆ. ಸುರುಪುರ ಮತ್ತು ರಾಳ್ವಕಾಲ್ವ ಕಣಿವೆ ಪ್ರದೇಶಗಳಲ್ಲಿನ ನೀಳಚಕ್ಕೆ ಗುಂಪಿನ ಉಪಕರಣಗಳನ್ನು ಪರಸ್ಪರ ಹೋಲಿಸುವ ಸಂದರ್ಭದಲ್ಲಿ ಎರಡೂ ಪ್ರದೇಶಗಳ ಸಾಂಸ್ಕೃತಿಕ ನೀಳಚಕ್ಕೆ ಪ್ರಧಾನ ಸಂಸ್ಕೃತಿಗಳಾಗಿದ್ದು ಅವು ಅಂತ್ಯ ಪ್ಲಿಸ್ಟೋಸಿನ್ ಯುಗದ ಕೊನೆ ಕೊನೆಯ ಹಂತವಾಗಿದ್ದು ಸುಮಾರು ೧೦ ರಿಂದ ೨೫ ಸಾವಿರ ವರ್ಷಗಳ ಪೂರ್ವದಲ್ಲಿದ್ದಿರಬಹುದೆಂದು ನಿರ್ಧರಿಸಲಾಗಿದೆ.

ಅಂತ್ಯ ಹಳೆಶಿಲಾಯುಗಕ್ಕೆ ಹೋಲಿಸಿದರೆ ಸೂಕ್ಷ್ಮ ಶಿಲಾಯುಗದ ನೆಲೆಗಳು ಮತ್ತು ಉಪಕರಣಗಳ ವೈವಿಧ್ಯತೆ ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಗಣನೀಯ ಪ್ರಮಾಣದಲ್ಲಿ ವೃದ್ಧಿಸಿರುವುದು ಕಂಡು ಬರುತ್ತದೆ. ಈ ಮೊದಲು ಅಧ್ಯಾಯ ಏಳರ ಸಮೀಕ್ಷೆಯ ಸಂದರ್ಭದಲ್ಲಿ ವಿವರಿಸಿದಂತೆ ಸೂಕ್ಷ್ಮ ಶಿಲಾಯುಗದ ಮೂರು ನಿರ್ದಿಷ್ಟ ಉಪಹಂತಗಳನ್ನು ಗುರುತಿಸಬಹುದು. ಹೀಗಿದ್ದರೂ ಈ ಉಪ ಹಂತಗಳ ಪರಸ್ಪರ ಸಂಬಂಧ ಹಾಗೂ ಬೆಳವಣಿಗೆಗಳನ್ನು ಖಚಿತ ಕಾಲಮಾನದ ಚೌಕಟ್ಟಿನಲ್ಲಿ ಸೇರಿಸುವುದು ಕಷ್ಟ. ಯಾವುದಾದರೊಂದು ನೆಲೆಯಲ್ಲಿ ವೈಜ್ಞಾನಿಕ ಉತ್ಖನನ ಕೈಗೊಂಡರೆ ಮಾತ್ರ ಈ ಅಂಶ ಸ್ಪಷ್ಟವಾಗುತ್ತದೆ. ಹೀಗಿದ್ದರೂ ಬಳ್ಳಾರಿ ಜಿಲ್ಲೆಯ ಸಂಗನಕಲ್ಲು ಉತ್ಖನನ (ಸಾಂಕಳಿಯ:೧೯೬೯.) ದಲ್ಲಿ ಬೆಳಕಿಗೆ ಬಂದಿರುವ ಸೂಕ್ಷ್ಮ ಶಿಲಾ ಸಂಸ್ಕೃತಿಯ ಉಪಕರಣಗಳೊಂದಿಗೆ ಇಲ್ಲಿಯ ಉಪಕರಣಗಳು ಬಹುತೇಕ ಹೋಲುವುದರಿಂದ ಎರಡರ ಕಾಲಮಾನವು ಒಂದೇ ಎಂದು ತಾತ್ಕಾಲಿಕವಾಗಿ ತಿಳಿಯ ಬಹುದಾಗಿದೆ. ಜೊತೆಗೆ ಭಾರತದ ಇತರ ಪ್ರದೇಶಗಳಲ್ಲಿ ಇಂಗಾಲ-೧೪ರ ಕಾಲ ನಿರ್ಣಯದ ಆಧಾರದ ಮೇಲೆ ಸೂಕ್ಷ್ಮ ಶಿಲಾಯುಗವು ಅಂತಿಮ ಪ್ಲಿಸ್ಟೋಸಿನ್ ಯುಗದಲ್ಲಿ ಕ್ರಿ.ಪೂ. ೧೨,೦೦೦ ರಿಂದ ೨೦೦೦ ವರ್ಷದೊಳಗಿನ ಕಾಲಾವಧಿಯಲ್ಲಿ ಪ್ರವರ್ಧಮಾನವಾಗಿತ್ತೆಂದು ಸಾಧಾರಣವಾಗಿ ನಿರ್ಧರಿಸಲಾಗಿದೆ. ಈ ಹಂತಗಳ ಹಿನ್ನೆಲೆಯಲ್ಲಿ ಮತ್ತು ಮುಖ್ಯವಾಗಿ ಕೇರಳದ ತೇನ್ಮಲೈ (ರಾಜೇಂದ್ರನ್.ಪಿ :೧೯೮೯;೪೬-೪೭) ಕರ್ನಾಟಕದ ಸಂಗನಕಲ್ಲು(ಸಾಂಕಳಿಯ:೧೯೬೯), ಉತ್ತರ ಪ್ರದೇಶದ ಬೆಲಾನ್ ಕಣಿವೆ (ಶರ್ಮಾ :೧೯೮೦) ಉತ್ಖನನಗಳ ಆಧಾರದ ಮೇಲೆ ಪ್ರಸ್ತುತ ಅಧ್ಯಯನ ಪ್ರದೇಶದ ಸೂಕ್ಷ್ಮಶಿಲಾಯುಗದ ಮೂರೂ ಹಂತಗಳ ಕಾಲಮಾನವನ್ನು ಕ್ರಿ.ಪೂ ೬೦೦೦-೫೦೦೦ ದಿಂದ ೨೦೦೦-೧೫೦೦ ವರೆಗಿನದು ಎಂದು ತಾತ್ಕಾಲಿಕವಾಗಿ ಹೇಳಬಹುದು.

ಈ ಪ್ರದೇಶದಲ್ಲಿ ನೂತನ ಶಿಲಾಯುಗದ ಒಟ್ಟು ೩೧ ನೆಲೆಗಳಿದ್ದು ಅವುಗಳಲ್ಲಿ ೫ ನೆಲೆಗಳು ಸಮೃದ್ಧ ಹಂತವನ್ನು ಸೂಚಿಸುತ್ತವೆ. ಇಲ್ಲಿದೊರೆತಿರುವ ಪ್ರಾಚ್ಯವಸ್ತುಗಳು ಹೆಚ್ಚುಕಡಿಮೆ ತುಂಗಾ-ಭದ್ರಾ ಕಣಿವೆಯ ಹಳ್ಳೂರು (ನಾಗರಾಜರಾವ್:೧೯೭೧)ಮತ್ತು ದಕ್ಷಿಣದಲ್ಲಿ ಕಾವೇರಿ ಕಣಿವೆ ತಿ ನರಸೀಪುರ (ಶೇಷಾದ್ರಿ:೧೯೭೧) ಮತ್ತು ಬನಹಳ್ಳಿ (ಇಂ.ಆ.ರಿ:೧೯೮೩;೮೪,;೪೨-೪೬:೧೯೮೫-೮೬;೪೧-೪೪,೧೯೮೬-೮೭ ೪೨-೪೮) ಉತ್ಖನನಗಳಲ್ಲಿ ದೊರೆತಿರುವ ಪ್ರಾಚ್ಯ ವಸ್ತುಗಳೊಡನೆ ಸಾಮ್ಯ ಹೊಂದಿರುವುದು ಕಂಡು ಬರುತ್ತವೆ. ಮೇಲೆ ಹೇಳಿದ ಎರಡು ನೆಲೆಗಳಲ್ಲಿ ಈ ಸಂಸ್ಕೃತಿಯ ಸ್ತರವಿಂಗಡನೆ ಮತ್ತು ಇಂಗಾಲ-೧೪ ಕಾಲ ನಿರ್ಣಯವನ್ನಾಧರಿಸಿ ಕ್ರಿ. ಪೂ. ೧೮೦೦ರಿಂದ ೧೦೦೦ ಎಂದು ನಿರ್ಧರಿಸಿದ್ದಾರೆ. ಇದೇ ಕಾಲಮಾನವು ಹೆಚ್ಚು ಕಡಿಮೆ ಮಲೆನಾಡು ಪ್ರದೇಶದ ನೂತನ ಶಿಲಾಯುಗ ಸಂಸ್ಕೃತಿಗೂ ನೀಡಲಾಗಿದೆ. ಹಳ್ಳೂರಿನ ಕೆಳಪದರಗಳಿಂದ ಸೂಚಿತವಾಗಿರುವ ನವಶಿಲಾಯುಗದ ಆರಂಭವನ್ನು ಕಿ. ಪೂ. ೧೫೦೦-೧೧೦೦ ಎಂದು ನಿರ್ಧರಿಸಿದ್ದಾರೆ (ಡಿ.ಪಿ.ಅಗರವಾಲ್:೧೯೭೪;೬೬) ಇದಕ್ಕೆ ಕಾರಣವೇನೆಂದರೆ ಸಮಾನಾಂತರ ನೀಳಚಕ್ಕೆಗಳು ಮತ್ತು ಉತ್ತಮ ಮಾದರಿಯ ಜಾಮಿತೀಯ ಸೂಕ್ಷ್ಮ ಶಿಲಾಯುಧಗಳಿಂದ ಸೂಚಿತವಾಗುವ ತಾಮ್ರ-ಶಿಲಾಯುಗದ ಪ್ರಭಾವ. ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ನೂತನ ಶಿಲಾಯುಗದ ಅವಶೇಷಗಳ ಆಧಾರದ ಮೇಲೆ ಮೂರು ಮುಖ್ಯ ವರ್ಗಗಳನ್ನಾಗಿ ವಿಂಗಡಿಸಲಾಗಿದೆ. (೧) ಮೃತ್ ಪಾತ್ರೆ ಪೂರ್ವ ಅಥವಾ ಮೃತ್ಪಾತ್ರೆರಹಿತ ನೂತನ ಶಿಲಾಯುಗ ಸಂಸ್ಕೃತಿ. (೨) ಸುಧಾರಿತ ಉಪಕರಣಗಳಿಲ್ಲದ ಆದರೆ ಮೃತ್ಪಾತ್ರೆಯ ಬಳಕೆಯುಳ್ಳ ಸಂಸ್ಕೃತಿ ಮತ್ತು(೩) ಶಿಲಾ-ತಾಮ್ರ ಹಂತದಲ್ಲಿರುವ ಪ್ರೌಢ ಸಂಸ್ಕೃತಿ. ಇವುಗಳಲ್ಲಿ ಕೊನೆಯ ಎರಡು ಹಂತಗಳನ್ನು ಸು.ಕ್ರಿ.ಪೂ ೧೭೦೦-೧೪೦೦ ಮತ್ತು ೧೪೦೦-೧೦೦೦ದವರೆಗೆ ನಿರ್ಧರಿಸಿದೆ. ಮೊದಲನೆಯ ಹಂತದ ಕಾಲಮಾನವನ್ನು ನಿರ್ದಿಷ್ಟವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಹಾಗಿದ್ದರೂ ಇದೇ ಹಂತವನ್ನು ಪ್ರತಿನಿಧಿಸುವ ನವಶಿಲಾಯುಗ ಸಂಸ್ಕೃತಿಗೆ ಬನಹಳ್ಳಿ ಉತ್ಖನನ(ಇಂ.ಆ.ರಿ:೧೯೮೩-೮೪;೪೨-೪೬,೧೯೮೫-೮೬;೪೩-೪೪ ಮತ್ತು ೧೯೮೬-೮೭;೪೨-೪೫)ದಲ್ಲಿ ಕ್ರಿ.ಪೂ. ೧೯೩೫ ರ ಕಾಲಮಾನವನ್ನು ನೀಡಿದೆ. ಆ ಕಾರಣ ಮೊದಲನೆ ಹಂತಕ್ಕೆ ತಾತ್ಕಾಲಿಕವಾಗಿ ಕ್ರಿ. ಪೂ. ೨೦೦೦ದಿಂದ ೧೭೦೦ರ ಕಾಲಮಾನದಲ್ಲಿ ಇದ್ದಿರಬಹುದೆಂದು ತರ್ಕಿಸಬಹುದಾಗಿದೆ.

ಅಧ್ಯಯನ ಪ್ರದೇಶದ ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳಾದ ಕಲ್ಗೋರಿಗಳು ಕಪ್ಪು, ಕೆಂಪು ಹಾಗೂ ಕಪ್ಪು-ಕೆಂಪು ಬಣ್ಣದ ಮೃತ್ ಪಾತ್ರೆಗಳು ಅದೇ ಸಮಕಾಲದ ಕರ್ನಾಟಕದ ಇತರ ಸುಪರಿಚಿತ ನೆಲೆಗಳ ಪ್ರಾಚ್ಯಾವಶೇಷಗಳೊಂದಿಗೆ ಹೆಚ್ಚಿನ ಸಾಮ್ಯ ಹೊಂದಿದ್ದು ಯಾವುದೇ ರೀತಿಯ ವೈಪರೀತ್ಯ ಕಂಡು ಬರುವುದಿಲ್ಲ. ಮೃತ್

ಪಾತ್ರೆಗಳ ವೈವಿಧ್ಯ, ಗಾತ್ರ, ಆಕೃತಿ ಮತ್ತು ಉಪಯೋಗಗಳು ವಿಶೇಷವಾಗಿ ಬ್ರಹ್ಮಗಿರಿ(ವೀಲರ್:೧೯೪೮;೧೮೦-೩೧೦) ಹಳ್ಳೂರು (ನಾಗರಾಜರವ್:೧೯೭೧;೧೪೧-೪೨), ಬನಹಳ್ಳಿ (ಇಂ.ಆ.ರಿ:೧೯೮೩-೮೪೪೨-೪೬;೧೯೮೫-೮೬; ೪೩-೪೪;೧೯೮೬-೮೭;೪೨-೪೫) ತಡಕನಹಳ್ಳಿ (ನಾಗರಾಜರಾವ್:೧೯೮೫) ಮತ್ತು ಕೊಮಾರನಹಳ್ಳಿ (ನಾಗರಾಜರಾವ್ :೧೯೯೦;೩೧೧-೩೨೦)ಯ ಮೃತ್ ಪಾತ್ರೆಗಳನ್ನೇ ಹೋಲುತ್ತವೆ. ಕೊಮಾರನಹಳ್ಳಿಯ ಕ್ರಿ.ಪೂ. ೧೨೦೦-೧೦೦೦, ತಡಕನಹಳ್ಳಿಯ ಕ್ರಿ.ಪೂ. ೧೦೦೦, ಹಳ್ಳೂರಿನ ಕ್ರಿ.ಪೂ. ೧೧೦೫-೧೦೫ ಇಂಗಾಲ-೧೪ ಕಾಲ ನಿರ್ಣಯಕ್ಕೂ ಉಪಯುಕ್ತವಾಗುತ್ತದೆ. ವಸತಿ ನಿವೇಶನ ಹಾಗೂ ಕಲ್ಗೋರಿಗಳಿಗೆ ಹೆಚ್ಚು ಕಡಿಮೆ ಇದೇ ಕಾಲದ ಚೌಕಟ್ಟು ಅನ್ವಯಿಸುತ್ತದೆ.

ಕರ್ನಾಟಕದ ವಿವಿಧ ರೀತಿಯ ವಿನ್ಯಾಸವುಳ್ಳ ಕಲ್ಗೋರಿಗಳ ಉಗಮ, ವಿಕಾಸ ಮತ್ತು ಪ್ರಸರಣದ ಹಿನ್ನೆಲೆಯಲ್ಲಿ ಕಾಲಾನುಕ್ರಮಣಕ್ಕೆ ಪ್ರಾದೇಶಿಕವಾಗಿ ಹೆಚ್ಚು ಕಡಿಮೆಯಾಗುತ್ತದೆ. ಈ ದೃಷ್ಟಿಯಿಂದ ತುಮಕೂರು ಜಿಲ್ಲೆಯ ಕಲ್ಗೋರಿಗಳು ಉತ್ತರ ಕರ್ನಾಟಕದ ರಾಜನಕೊಲೂರು ಮಾದರಿಯನ್ನು ಹೋಲುತ್ತಿದ್ದು ಕ್ರಿ.ಪೂ ೮೫೦ ರಿಂದ ೬೫೦ ರ ಒಳಗೆ ನಿರ್ಮಿತವಾದುದೆನ್ನಬಹುದು. ಆದರಂತೆಯೇ ಶಿಲಾವೃತ್ತಗಳು ಕನಿಷ್ಠ ಕ್ರಿ.ಪೂ ೬೫೦ ರಿಂದ ೨೫೦ ರವರೆಗಿನ ಕಾಲಮಾನಕ್ಕೆ ಸೇರಿವೆ ಎಂದು ಹೇಳಬಹುದು ಒಟ್ಟಾರೆ ಕರ್ನಾಟಕದಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಯು ಸಾಧಾರಣ ಕಾಲಮಾನವಾದ ಕ್ರಿ.ಪೂ ೧೨೦೦ ರಿಂದ ೨೫೦ ರವರೆಗಿನ ಕಾಲಮಾನ ಪರಿಮಿತಿಯೊಳಗೆ ತುಮಕೂರು ಜಿಲ್ಲೆಯ ಬೃಹತ್ ಶಿಲಾಯುಗ ಸಂಸ್ಕೃತಿಯ ಪ್ರವರ್ಧಮಾನದಲ್ಲಿತ್ತೆಂದು ಸಧ್ಯಕ್ಕೆ ಭಾವಿಸಬಹುದು. ಪ್ರತಿಯೊಂದು ಮಾದರಿಯ ವಿಶಿಷ್ಟ ಹಾಗೂ ಖಚಿತ ಕಾಲ ನಿರ್ಣಯಕ್ಕೆ ಇನ್ನಷ್ಟು ಸ್ಥಳ ಪರಿಶೀಲನೆ ಮತ್ತು ಕನಿಷ್ಠ ಒಂದೆರಡು ನಿವೇಶನಗಳಲ್ಲಿ ಉತ್ಖನನ ಅವಶ್ಯಕ.

ಬೃಹತ್ ಶಿಲಾ ಸಂಸ್ಕೃತಿಯ ಮುಂದಿನ ಸಾಂಸ್ಕೃತಿಕ ಹಂತವಾಗಿ ಆದಿ ಇತಿಹಾಸ ಆರಂಭ ಯುಗವನ್ನು ಗಮನಿಸಬಹುದಾದರೆ ಅದರ ಪ್ರಾಚ್ಯಾವಶೇಷಗಳು ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಸ್ವಲ್ಪ ವಿರಳವೆಂದೆ ಹೇಳಬಹುದು. ದೊರೆತಿರುವ ನೆಲೆಗಳು ಜಿಲ್ಲೆಯ ಪೂರ್ವ ಭಾಗಕ್ಕೆ ಸೀಮಿತವಾಗಿದ್ದು ಅವುಗಳ ಪ್ರಸರಣ ಉತ್ತರ-ದಕ್ಷಿಣವಾಗಿವೆ. ಅಲ್ಲದೆ ಯಾವುದೇ ಒಂದು ನಿವೇಶನದಲ್ಲಿ ಕೇಂದ್ರ ನೆಲೆಗಳಲ್ಲಿ ದೊರೆಯುವ ಶಾಸನ, ನಾಣ್ಯ, ಮಣ್ಣಿನಗೊಂಬೆ, ಇಟ್ಟಿಗೆ, ಕಟ್ಟಡಾವಶೇಷ, ಆಮದಾದ ಮೃತ್ ಪಾತ್ರೆ ಮುಂತಾದ ಹೆಚ್ಚಿನ ಸಮೃದ್ಧ ಸೂಚಕವಾದ ಪ್ರಾಚ್ಯಾವಶೇಷಗಳು ದೊರೆತಿಲ್ಲ. ಸಾಧಾರಣವಾಗಿ ದೊರಕುವ ಕೆಂಪು ಲೇಪನದಡಿಯಲ್ಲಿ ಬಿಳಿ ರೇಖಾ ಚಿತ್ರಗಳಿಂದ ಅಲಂಕೃತವಾದ ಮಣ್ಣಿನ ಪಾತ್ರೆ, (Russet Coated Painted Ware) ಕೆಂಪು ವರ್ಣದ ಮತ್ತು ಕಪ್ಪು-ಕೆಂಪು ವರ್ಣದ ಮೃತ್ ಪಾತ್ರೆ, ಗಾಜಿನ ಮಣಿ, ಶಂಖದ ಬಳೆ ಚೂರುಗಳು ಅಂತಹ ಪ್ರಾಚ್ಯಾವಶೇಷಗಳೇ ದೊರೆತಿದ್ದು ಅವು ಈಗಾಗಲೇ ಉತ್ಖನನಗಳಿಂದ

ಪರಿಚಿತವಾದ ಪ್ರಾಚ್ಯವಸ್ತುಗಳಿಗಿಂತ ಇನ್ನಾವುದೇ ರೀತಿಯಲ್ಲಿ ಭಿನ್ನವಾಗಿಲ್ಲ. ಖಚಿತ ಕಾಲನಿರ್ಣಯಕ್ಕೆ ಸಹಕಾರ ನೀಡುವ ನಾಣ್ಯ, ಶಾಸನಗಳ ಅಭಾವವಿದ್ದರೂ ಈ ಸಂಸ್ಕೃತಿಯು ರಾಚಮಾರನಹಳ್ಳಿ, ಯಲ್ಲಪ್ಪನಾಯಕನಹೊಸಕೋಟೆ, ಯಲ್ಲಪ್ಪನಾಯಕನಹಳ್ಳಿ ನೆಲೆಗಳಲ್ಲಿ. ಕ್ರಿ.ಶ. ಆರಂಭದ ಮೊದಲ ಮೂರು ಶತಮಾನಗಳಲ್ಲಿ ಪ್ರವರ್ಧಮಾನದಲ್ಲಿತ್ತೆಂದು ಹೇಳಬಹುದು. ಈ ಮೂರೂ ನಿವೇಶನಗಳಲ್ಲಿ ಪ್ರಾಚ್ಯವಸ್ತುಗಳ ಪ್ರಮಾಣ ಹೆಚ್ಚಾಗಿದ್ದು ಇವುಗಳಲ್ಲೊಂದರಲ್ಲಿ ಉತ್ಖನನ ಕೈಗೊಂಡರೆ ಹೆಚ್ಚಿನ ಮಾಹಿತಿ ದೊರೆಯಬಹುದು.

ಇದುವರೆಗೆ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಅಧ್ಯಯನ ಪ್ರದೇಶದಲ್ಲಿನ ಸಾಂಸ್ಕೃತಿಕ ಅನುಪೂರ್ವಿಯನ್ನು ಮತ್ತು ಅವುಗಳ ಕಾಲಾನುಕ್ರಮವನ್ನು ಕೆಳಗೆ ಕಾಣಿಸಿರುವಂತೆ ತಾತ್ಕಾಲಿಕವಾಗಿ ನಿರ್ಧರಿಸಬಹುದು.

| | |
|---|---|
| ಆದಿ ಹಳೆ ಶಿಲಾಯುಗ | ೪ ಲಕ್ಷದಿಂದ ೧ ಲಕ್ಷವರ್ಷಗಳು. |
| ಮಧ್ಯಹಳೆಶಿಲಾಯುಗ | ೧.೫ ಲಕ್ಷದಿಂದ ೧ ಲಕ್ಷವರ್ಷಗಳು. |
| ಅಂತ್ಯಹಳೆಶಿಲಾಯುಗ | ೨೫,೦೦೦ ದಿಂದ ೧೦,೦೦೦ ವರ್ಷಗಳಹಿಂದೆ. |
| ಸೂಕ್ಷ್ಮ ಶಿಲಾಯುಗ | (ಮೂರೂ ಹಂತಗಳು ಸೇರಿ) |
| | ಕ್ರಿ.ಪೂ. ೬೦೦೦- ೫೦೦೦ ದಿಂದ ೨೦೦೦- ೧೫೦೦. |
| ನೂತನ ಶಿಲಾಯುಗ. | |
| | ಮೊದಲನೆ ಹಂತ ಕ್ರಿ.ಪೂ. ೨೦೦೦-೧೭೦೦. |
| | ಎರಡನೆ ಹಂತ ಕ್ರಿ.ಪೂ. ೧೭೦೦-೧೪೦೦ |
| | ಮೂರನೆ ಹಂತ ಕ್ರಿ.ಪೂ. ೧೪೦೦- ೧೦೦೦ |
| ಬೃಹತ್ ಶಿಲಾಯುಗ | ಕ್ರಿ.ಪೂ. ೧.೨೦೦-೨೫೦ |
| ಇತಿಹಾಸ ಆರಂಭ ಕಾಲ. | ಕ್ರಿ.ಶ. ೧ ರಿಂದ ೩ನೇ ಶತಮಾನ. |

ಅಧ್ಯಾಯ ಹನ್ನೆರಡು

# ಸಮಾರೋಪ

೧೯೨೪ರಲ್ಲಿ ಸಂಪತ್ ಐಯ್ಯಂಗಾರ್ ರವರು ಶೋಧಿಸಿದ ಕಿಬ್ಬನಹಳ್ಳಿ ನಿಜವಾಗಿಯೂ ಒಂದು ಪ್ರಮುಖ ನೆಲೆ. ಇದು ಉತ್ತರದಲ್ಲಿ ಮಂಚಲ್ದೊರೆ, ದಕ್ಷಿಣದಲ್ಲಿ ಮಾರಶೆಟ್ಟಿಹಳ್ಳಿ, ಪೂರ್ವ ಪಶ್ಚಿಮದಲ್ಲಿ ಅನುಕ್ರಮವಾಗಿ ಮೂಗನಾಯಕನಕೋಟೆ ಮತ್ತು ಹೊನ್ನೇಮಾರನಹಳ್ಳಿಗಳನ್ನು ಒಳಗೊಂಡಂತೆ ಸುಮಾರು ೪೫೦ಚ.ಕಿ.ಮೀ. ನಷ್ಟು ವಿಸ್ತಾರವಾದ ಪ್ರದೇಶದಲ್ಲಿ ವ್ಯಾಪಕವಾಗಿ ಇದ್ದ ಆದಿ ಹಳೆಶಿಲಾಯುಗದ ಜನ ಸಮೂಹದ ಒಂದು ಅಂಶ ಮಾತ್ರವೇ. ಇದರಿಂದ ಸಾಕಷ್ಟು ವಿಸ್ತಾರವಾದ ಈ ಪ್ರದೇಶದಲ್ಲಿ ಅಲ್ಲಲ್ಲಿ ಆದಿ ಹಳೆ ಶಿಲಾಯುಗದ ಜನರು ಗಣನೀಯ ಸಾಂದ್ರತೆಯಲ್ಲಿ ವಾಸಿಸುತ್ತಿದ್ದರೆಂಬ ಅಂಶ ಪ್ರಸ್ತುತ ಕ್ಷೇತ್ರಕಾರ್ಯ ಹಾಗು ಅಧ್ಯಯನದಿಂದ ಹೆಚ್ಚು ಕಡಿಮೆ ಸ್ಪಷ್ಟವಾಗಿ ಕಂಡು ಬರುತ್ತದೆ. ಒಂದು ನಿಟ್ಟಿನಿಂದ ನೋಡಿದಾಗ ತುಂಗಾ ಮತ್ತು ಭದ್ರಾ ಮೇಲ್ದಂಡೆ ಹಾಗು ಹೇಮಾವತಿ ನದಿಗಳ ಪ್ರದೇಶದಲ್ಲಿ ಇದ್ದ ಈ ಸಂಸ್ಕೃತಿಯ ನೆಲೆಗಳ ಪೂರ್ವಭಾಗಕ್ಕೆ, ಇಲ್ಲಿ ಅಧ್ಯಯನ ಮಾಡಿದ ನೆಲೆಗಳಿರುವುದು ಸರಿಯಷ್ಟೆ. ಈ ನೆಲೆಗಳ ದಕ್ಷಿಣಕ್ಕೆ, ಪೂರ್ವಕ್ಕೆ ಮತ್ತು ಉತ್ತರಕ್ಕಿರುವ ಪ್ರದೇಶದಲ್ಲಿ ಗಣನೀಯ ಪ್ರಮಾಣದಲ್ಲಿ ಇವೆಯೋ ಇಲ್ಲವೋ ಎಂಬುದನ್ನು ಆಯಾ ಪ್ರದೇಶಗಳ ಕ್ಷೇತ್ರಕಾರ್ಯದಿಂದ ಮುಂದೆ ತಿಳಿಯಬೇಕಾಗಿದೆ. ಈ ಪ್ರದೇಶಕ್ಕೆ ಹೊಂದಿಕೊಂಡಂತೆ ಪೂರ್ವಕ್ಕಿರುವ ಕೋಲಾರ ಜಿಲ್ಲೆಯಲ್ಲಿ ಪ್ರಾದೇಶಿಕ ಅನ್ವೇಷಣೆಯಾಗಿದ್ದು ಇದುವರೆಗೆ ಆದಿ-ಮಧ್ಯ ಮತ್ತು ಅಂತ್ಯ ಹಳೆಶಿಲಾಯುಗದ ನೆಲೆಗಳು ತಿಳಿದುಬಂದಿಲ್ಲ. ಅಧ್ಯಯನ ಪ್ರದೇಶದ ಉತ್ತರ ಭಾಗದಲ್ಲಿನ ಯಲ್ಲಪ್ಪನಾಯಕನಹೊಸಕೋಟೆಯಿಂದ ನಿಟ್ಟೂರಿನ ತನಕ(ಬಳ್ಳಾರಿ ಜಿಲ್ಲೆ) ಅಂದರೆ ಸುಮಾರು ೨೫೦ ಕಿ.ಮೀ.ನಲ್ಲಿ ಯಾವುದೇ ಆದಿ ಹಳೆಶಿಲಾಯುಗದ ನೆಲೆಗಳು ಬೆಳಕಿಗೆ ಬಂದಿಲ್ಲ. ಮುಂದಿನ ಕ್ಷೇತ್ರಕಾರ್ಯದಿಂದ ಇದರ ಸತ್ಯಾಸತ್ಯತೆಯನ್ನು ತಿಳಿಯಬೇಕಾಗಿದೆ. ಆದ್ದರಿಂದ ಸದ್ಯಕ್ಕೆ ಮಂಚಲ್ದೊರೆ-ಮಾರಶೆಟ್ಟಿಹಳ್ಳಿ-ಮೂಗನಾಯಕನಕೋಟೆ-ಹೊನ್ನೇಮಾರನಹಳ್ಳಿ ಪ್ರದೇಶವನ್ನು ತುಂಗಾ, ಭದ್ರಾ ಹಾಗೂ ಹೇಮಾವತಿ ನದೀ ಪ್ರದೇಶದ ನೆಲೆಗಳ ಸಂಕೀರ್ಣದ ಪೂರ್ವಭಾಗವೆಂದು ತಿಳಿಯ ಬೇಕಾಗುತ್ತದೆ. ಈ ಪ್ರದೇಶಗಳ ಸಂಸ್ಕೃತಿಯಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ.

ಈ ಸಂಸ್ಕೃತಿಯ ಬಗ್ಗೆ ಎರಡು ಮಹತ್ವದ ಅಂಶಗಳೆಂದರೆ ಬಹಳಷ್ಟು ನೆಲೆಗಳಿರುವ ಪ್ರದೇಶದಲ್ಲಿ ಆ ಕಾಲದಿಂದಲೂ ಯಾವುದೇ ದೊಡ್ಡ ನದೀ ಇದ್ದ ಕುರುಹುಗಳಿಲ್ಲ. ಎರಡನೆಯದಾಗಿ ಬಹಳಷ್ಟು ನೆಲೆಗಳಲ್ಲಿ ಉಪಕರಣಗಳು ಅಲ್ಲಲ್ಲಿಯೇ ಸಿದ್ಧವಾಗಿದ್ದು ಅವುಗಳನ್ನು ಮೂಲ ಸ್ಥಳಗಳೆಂದು ಸ್ಪಷ್ಟವಾಗಿ ಹೇಳಬಹುದು. ಮಲಪ್ರಭಾ ಮತ್ತು ಘಟಪ್ರಭಾ

ನದೀ ಪ್ರದೇಶದಲ್ಲಿಯ ನೆಲೆಗಳಲ್ಲಿಯ ಉಪಕರಣಗಳು ನೀರಿನ ಸೆಳೆತಕ್ಕೆ ಸಿಕ್ಕು ತಮ್ಮ ಮೂಲ ನೆಲೆಗಳಿಂದ ಬಹು ದೂರದವರೆಗೆ ಉರುಳಿ ಬಂದಿದ್ದು ಹೆಚ್ಚು ಸವೆದಿವೆ. ಆದ್ದರಿಂದ ಈಗ ಇರುವ ನೆಲೆಗಳು ಮೂಲ ನೆಲೆಗಳಲ್ಲ. ಈ ಕಾರಣದಿಂದ ಮಂಚಲ್ದೊರೆ-ಮಾರಶೆಟ್ಟಿಹಳ್ಳಿ-ಮೂಗನಾಯಕನಕೋಟೆ-ಹೊನ್ನೇಮಾರನಹಳ್ಳಿ ಪ್ರದೇಶವನ್ನು ಹುಣಸಗಿ (ಪದ್ದಯ್ಯ:೧೯೮೨)ಮತ್ತು ಇಸಂಪೂರ್ ಪ್ರದೇಶದಲ್ಲಿ ನಡೆಸಿದಂತೆ ಅತ್ಯಂತ ವೈಜ್ಞಾನಿಕ ಮತ್ತು ಕೂಲಂಕಷ ಅಧ್ಯಯನಕ್ಕೆ ಒಳಪಡಿಸಲು ಯೋಗ್ಯವಾಗಿದೆ. ಈ ವಿಷಯಗಳಲ್ಲದೆ ಈ ಜನರ ಜೀವನ ಕ್ರಮದ ಬಗ್ಗೆ ಸಧ್ಯದ ಸಂಶೋಧನಾ ಹಂತದಿಂದ ಹೆಚ್ಚೇನೂ ತಿಳಿಯಲು ಸಾಧ್ಯವಾಗಿಲ್ಲ.

ಇನ್ನು ಮಧ್ಯ ಹಳೆಶಿಲಾಯುಗದ ಸಂಸ್ಕೃತಿಯನ್ನು ಪರಿಶೀಲಿಸೋಣ. ಈ ಅಧ್ಯಯನ ಪ್ರದೇಶದಲ್ಲಿ ಈ ಸಂಸ್ಕೃತಿಯ ಎರಡು ವಿಶಿಷ್ಟ ಅಂಶಗಳು ಬೆಳಕಿಗೆ ಬಂದಿರುವುದು ಗಮನಾರ್ಹ. ಮೊದಲನೆಯದಾಗಿ ಆದಿ ಹಳೆಶಿಲಾಯುಗದ ಉಪಕರಣಗಳನ್ನು ಮಾಡಲು ಉಪಯೋಗಿಸಿದ ಶಿಲೆಯನ್ನೇ ಮಧ್ಯ ಹಳೆಶಿಲಾಯುಗದ ಹಂತದಲ್ಲಿ ಉಪಯೋಗಿಸಿರುವುದು. ಎರಡನೆಯದಾಗಿ ಆದಿ ಹಳೆಶಿಲಾಯುಗ ಸಂಸ್ಕೃತಿಯ ಪ್ರಮುಖ ಉಪಕರಣಗಳಾದ ಕೈಗೊಡಲಿ ಮತ್ತು ಚಕ್ರಾಕಾರ ಇವುಗಳ ಉಪಯೋಗವು ಮುಂದುವರೆದಿರುವುದು. ಆದರೆ ಆ ಹಂತದ ಉಪಕರಣಗಳಂತೆ ಇವು ದೊಡ್ಡದಾಗಿರದೆ ಸಣ್ಣ ಪ್ರಮಾಣದಲ್ಲಿರುವುದು ಗಮನಾರ್ಹ. ಪ್ರಾಯಶಃ ಈ ಒಂದು ಬದಲಾವಣೆ ಬಹು ಮಟ್ಟಿಗೆ ಪರಿಸರದಲ್ಲಿ ನಿಧಾನವಾಗಿ ಪ್ರಾಣಿವರ್ಗ ಮತ್ತು ಸಸ್ಯವರ್ಗದಲ್ಲಿ ಉಂಟಾದ ಬದಲಾವಣೆಯನ್ನು ಅವಲಂಬಿಸಿರಬೇಕು. ಎರಡನೆಯ ಹಂತದಲ್ಲಿ ದೊಡ್ಡಗಾತ್ರದ ಉಪಕರಣದ ಅವಶ್ಯಕತೆ ಕಂಡುಬರಲಿಲ್ಲ. ಇನ್ನೊಂದು ಮಹತ್ವದ ಅಂಶವೆಂದರೆ ಆದಿ-ಮಧ್ಯ ಹಳೆಶಿಲಾಯುಗದ ನಡುವಣ ಕೊಂಡಿಯು ಭಾರತದಲ್ಲಿಯ ಬಹಳಷ್ಟು ನೆಲೆಗಳಲ್ಲಿ ಮಾತ್ರ, ಒಂದು ಹಂತದಿಂದ ಮತ್ತೊಂದು ಹಂತಕ್ಕೆ ಪ್ರಗತಿಯಾದುದನ್ನು ಅಸ್ಪಷ್ಟವಾಗಿ ಗುರುತಿಸಲಾಗಿದೆ. (೧) ನರ್ಮದಾ ನದೀ ಪ್ರದೇಶದ ಮಹದೇವ್ರೋ ಪಿಪರಿಯ (ಸಾಂಕಳಿಯಾ:೧೯೭೪;೧೧೪-೧೧೬) ಮತ್ತು (೨) ಆನಗವಾಡಿ(ಪಪ್ಪು: ೧೯೭೪;೩೩-೩೫) ನೆಲೆಗಳ ಉತ್ಖನನಗಳಲ್ಲಿ ಮಧ್ಯ ಹಳೆಶಿಲಾ ಹಂತದ ಆದಿ ಭಾಗದಲ್ಲಿ ಆದಿ ಹಳೆಶಿಲಾಯುಗದ ಉಪಕರಣಗಳ ಕಿರುಗಾತ್ರದ ಮಾದರಿಗಳು ಮೊದಲನೆಯ ಹಂತದಲ್ಲಿ ಉಪಯೋಗಿಸಿದ ಕಲ್ಲಿನಲ್ಲಿಯೇ ಮಾಡಿರುವುದನ್ನು ಗುರುತಿಸಲಾಗಿದೆ. ಮಂಚಲ್ದೊರೆ-ಮಾರಶೆಟ್ಟಿಹಳ್ಳಿ-ಮೂಗನಾಯಕನಕೋಟೆ-ಹೊನ್ನೇಮಾರನಹಳ್ಳಿ ಪ್ರದೇಶದಲ್ಲಿ ಅನ್ವೇಷಣೆಯಲ್ಲಿಯೇ ಈ ಅಂಶ ಕಂಡುಬಂದಿರುವುದು ಒಂದು ವಿಶೇಷ. ಆದ್ದರಿಂದ ಈ ಪ್ರದೇಶದಲ್ಲಿ ಆದಿ ಮತ್ತು ಮಧ್ಯ ಹಳೆಶಿಲಾಯುಗದ ನಡುವೆ ಅಂತರವಿರದೆ ಕ್ರಮೇಣ ಎರಡನೆಯ ಹಂತಕ್ಕೆ ಪ್ರಗತಿಯಾಗಿರುವುದನ್ನು ನೋಡಬಹುದು. ಬರ ಬರುತ್ತಾ ಪರಿಸರದಲ್ಲಿ ಬದಲಾವಣೆಯು ಒಂದು

ನಿರ್ದಿಷ್ಟ ಹಂತವನ್ನು ಮುಟ್ಟುವ ಹೊತ್ತಿಗೆ ಅದಕ್ಕನುಗುಣವಾಗಿ ಉಪಕರಣವನ್ನು ಮಾಡುವ ತಂತ್ರದಲ್ಲಿ ಮತ್ತು ಅವುಗಳನ್ನು ಮಾಡಿದ ಭಿನ್ನ ಶಿಲೆಯಲ್ಲಿ ವ್ಯಕ್ತವಾಗುತ್ತದೆ. ಆದ್ದರಿಂದ ಈ ಹಂತದಲ್ಲಿ ಪ್ರಗತಿ ಪರ ಎರಡೂ, ಒಂದಾದ ನಂತರ ಒಂದನ್ನು ಗುರುತಿಸಬಹುದು. ಮೊದಲನೆಯದು ಆದಿ ಹಳೆಶಿಲಾಯುಗದ ಪರಂಪರೆ ಮುಂದುವರಿದ ಹಂತ, ಕೊನೆಯದು ಹೊಸ ಪರಿಸರಕ್ಕೆ ಸರಿಯಾಗಿ ಹೊಂದಿಕೊಂಡ ಪ್ರಗತಿಪರ ಹಂತ. ಈ ಹಂತಕ್ಕೆ ಸಂಬಂಧಿಸಿದಂತೆ ಈ ಅಂಶಗಳ ಹೊರತಾಗಿ ಇವರ ಜೀವನ ಕ್ರಮದ ಬಗ್ಗೆ ಮತ್ತೇನೂ ಹೆಚ್ಚಿಗೆ ತಿಳಿದು ಬಂದಿಲ್ಲ.

ಅಂತ್ಯ ಹಳೆಶಿಲಾಯುಗ ಹಂತದಲ್ಲಿ ನೆಲೆಗಳ ಸಂಖ್ಯೆಯು ಹೆಚ್ಚಾಗಿದ್ದು (೫೦) ಜನಸಂಖ್ಯೆ ಗಣನೀಯ ಪ್ರಮಾಣವಾಗಿದೆ. ಅಂದರೆ ಕನಿಷ್ಠ ಎರಡು ಪಟ್ಟು ಪಶ್ಚಿಮ ಭಾಗದಲ್ಲಿ ಹೆಚ್ಚಾಗಿರುವುದು ಕುತೂಹಲಕಾರಿ ವಿಷಯ. ಪ್ರಾಯಶಃ ಈ ಭಾಗದ ಪರಿಸರ ಇದಕ್ಕೆ ಕಾರಣವಿರಬಹುದೇನೋ? ಮೂಲಪ್ರದೇಶದ ಪೂರ್ವ ಭಾಗವು ಹೆಚ್ಚಾಗಿ ದೊಡ್ಡದೊಡ್ಡ ಗ್ರಾನೈಟ್ ಶಿಲೆಯನ್ನು ಹೊಂದಿರುವ ಸಾಲುಗುಡ್ಡಗಳ ಪ್ರದೇಶ. ಮೂಲ ಪ್ರದೇಶದಂತೆ ಇದರ ಪಶ್ಚಿಮ ಭಾಗವು ಹೆಚ್ಚಾಗಿ ಬಯಲು ಪ್ರದೇಶ. ಆದಿ ಹಳೆಶಿಲಾಯುಗದ ಕಾಲದಿಂದಲೂ ಜನರು ಈ ಬಯಲು ಪ್ರದೇಶವನ್ನೇ ತಮ್ಮ ದೈನಂದಿನ ಚಟುವಟಿಕೆಗಳಿಗೆ ಆರಿಸಿಕೊಂಡಿದ್ದರೆಂದು ಈ ಪರಂಪರೆ ಮುಂದುವರೆದಿರುವುದನ್ನು ಇಲ್ಲಿ ನೋಡಬಹುದು. ಆದ್ದರಿಂದಲೇ ಈ ಸಂಸ್ಕೃತಿಯ ನೆಲೆಗಳು ಹೆಚ್ಚಾಗಿ ಪಶ್ಚಿಮದ ಭಾಗದಲ್ಲಿ ವಿಸ್ತರಿಸಿತ್ತೆಂದು ಹೇಳಬಹುದು. ಎರಡನೆಯ ಹಂತದಲ್ಲಿ ಉಪಯೋಗಿಸುತ್ತಿದ್ದ ಕ್ವಾರ್ಟ್ಸ್ ಕಲ್ಲನ್ನೇ ಮೂರನೇ ಹಂತದಲ್ಲಿಯೂ ದೊಡ್ಡ ಪ್ರಮಾಣದಲ್ಲಿ ಉಪಕರಣಗಳನ್ನು ಮಾಡಲು ಉಪಯೋಗಿಸಿರುವುದು ಈ ಎರಡೂ ಹಂತಗಳ ನಡುವಿನ ಕೊಂಡಿಯಂತಾಗಿದೆ. ಜೊತೆಗೆ ಫೆಲ್ಸಪರ್ ನಂತಹ ಹೊಸ ಶಿಲೆಯನ್ನು ತಮ್ಮ ಕೆಲಸಗಳಿಗೆ ಉಪಯೋಗ ಮಾಡಿಕೊಳ್ಳಲು ಪ್ರಯತ್ನಿಸಿರುವುದು ಒಂದು ಮುಖ್ಯ ಅಂಶ. ಪ್ರಾಯಶಃ ಫೆಲ್ಸಪರ್ ಕಲ್ಲನ್ನು ಉಪಯೋಗ ಮಾಡಲು ಕಾರಣ ಜಾಸ್ಪರ್‌ನಂತೆ ಉತ್ತಮ ಜಾತಿಯ ಕಲ್ಲಾಗಿರುವುದರಿಂದ. ಈ ಹಂತದಲ್ಲಿ ಈ ಪ್ರದೇಶವನ್ನೇ ಗಟ್ಟಿ ನೆಲೆಯನ್ನಾಗಿ ಮಾಡಿಕೊಂಡು ತಮ್ಮ ಪ್ರಗತಿಪರ ಸಾಧನೆಯನ್ನು ಮುಂದುವರೆಸಿರುವುದು ಸ್ಪಷ್ಟವಾಗಿ ಎದ್ದು ಕಾಣುತ್ತದೆ. ಇಷ್ಟು ವಿಸ್ತಾರವಾದ ಪ್ರದೇಶದಲ್ಲಿ ಎಲ್ಲಾ ಹಂತಗಳಲ್ಲಿಯೂ ಒಂದೇ ಪ್ರದೇಶವನ್ನೇ ಅವಲಂಬಿಸಿಕೊಂಡಿದ್ದುದು ಕಂಡು ಬರುವುದು ಅಪರೂಪ. ಈ ಮೂರೂ ಹಂತಗಳಲ್ಲಿ ಈ ಪ್ರದೇಶವು ನಿರಂತರವಾಗಿ ಜನ ವಾಸ್ತವ್ಯದ ನೆಲೆಯಾಗಿರುವುದು ಅಪರೂಪವಾಗಿದೆ. ಮತ್ತು ಪ್ರತಿಯೊಂದು ಹಂತದಲ್ಲಿಯೂ ಜನಜೀವನದಲ್ಲಿ ಪರಿಸರದ ಜ್ಞಾನದ ಬಗ್ಗೆ ತೀವ್ರತೆ, ಅದನ್ನು ಹೆಚ್ಚು ಹೆಚ್ಚು ತಮ್ಮ ಜೀವನಕ್ರಮದಲ್ಲಿ ಬಳಸಿಕೊಂಡಿರುವುದು ಮತ್ತು ಅದಕ್ಕನುಗುಣವಾಗಿ ತಂತ್ರವನ್ನು ರೂಪಿಸಿಕೊಂಡಿರುವುದನ್ನು ಈ ಒಂದೇ ಪ್ರದೇಶದಲ್ಲಿ ಕಾಣಬಹುದು.

ಹಿಂದಿನಂತೆ ಅಂತ್ಯ ಹಳೆಶಿಲಾಯುಗದ ನೆಲೆಗಳ ಅರ್ಧದಷ್ಟು ಆದಿ-ಮಧ್ಯ-ಅಂತ್ಯ ಹಳೆಶಿಲಾಯುಗದ ನೆಲೆಗಳ ಪ್ರದೇಶದಲ್ಲಿಯೇ ಇವೆ. ಇದುವರೆಗಿನ ಸಂಶೋಧನೆಯಲ್ಲಿ ತಿಳಿದ ಮಟ್ಟಿಗೆ ಹಿಮಯುಗ ಮುಗಿದು ಈಗಿನ ಯುಗದ ಆದಿಭಾಗದಲ್ಲಿ ಸೂಕ್ಷ್ಮ ಶಿಲಾಯುಗದ ಸಂಸ್ಕೃತಿಯ ಹಂತವು ನಮ್ಮದೇಶದ ಹಲವಾರು ಭಾಗಗಳಲ್ಲಿ ಕಾಣಿಸಿಕೊಂಡಿದೆಯಷ್ಟೆ. ಸಾಂಸ್ಕೃತಿಕವಾಗಿ ಮಾತ್ರವಲ್ಲ ಪರಿಸರ ಮತ್ತು ವಾಯುಗುಣ ದೃಷ್ಟಿಯಿಂದಲೂ ಬದಲಾವಣೆಗಳು ಕಂಡು ಬಂದಿವೆ. ಇವು ಜನಜೀವನದ ಮೇಲೆ ಹೇಗೆ ಪರಿಣಾಮ ಉಂಟುಮಾಡಿದೆ ಎಂಬುದು ಸದ್ಯದ ಅಧ್ಯಯನ ಪ್ರದೇಶದ ಸೂಕ್ಷ್ಮ ಶಿಲಾಯುಗದ ನೆಲೆಗಳ ಪ್ರಸರಣದ ರೀತಿಯಲ್ಲಿ ಸ್ಪಷ್ಟವಾಗಿದೆ. ಈ ಹಂತದಲ್ಲಿ ಜನರು ಹೆಚ್ಚು ಹೆಚ್ಚು ಪೂರ್ವ ಭಾಗದ ಗುಡ್ಡಗಾಡಿನ ಪ್ರದೇಶಕ್ಕೆ ಪ್ರಸರಿಸಿರುವುದನ್ನು ಈಗಾಗಲೇ ಗಮನಿಸಲಾಗಿದೆಯಷ್ಟೆ. ಇದರಿಂದ ವಿರಳ ಸಸ್ಯ ವರ್ಗದಿಂದ ಕೂಡಿದ ಬಯಲು ಪ್ರದೇಶದಿಂದ ಗುಡ್ಡಗಾಡು ಪ್ರದೇಶಕ್ಕೆ ಜನರು ಕ್ರಮೇಣ ಹೊಂದಿಕೊಳ್ಳುವ ಪ್ರಯತ್ನ ಮಾಡಿರುವುದನ್ನು ಪ್ರಪ್ರಥಮವಾಗಿ ಈ ಹಂತದಲ್ಲಿ ಕಾಣಬಹುದು. ಇದೊಂದು ಕೇವಲ ಭಿನ್ನ ಪರಿಸರಕ್ಕೆ ಜನರು ಹೊಂದಿಕೊಳ್ಳುವುದು ಅಷ್ಟೇಅಲ್ಲ ಈ ಹೊಸ ಪರಿಸರವು ಅವರ ಜೀವನ ಕ್ರಮದಲ್ಲಿ ಈ ಪ್ರದೇಶದಲ್ಲಿ ಅಲ್ಲದಿದ್ದರೂ ಇಂತಹ ಪರಿಸರವುಳ್ಳ ಬ್ರಹ್ಮ ಗಿರಿ ಮತ್ತು ಚಂದ್ರವಳ್ಳಿಯಲ್ಲಿ ಹೊಸ ಕಲಾಪರಂಪರೆಗೆ ನಾಂದಿಯಾದುದನ್ನು ಕಾಣಬಹುದು ಅಂದರೆ ಗವಿಗಳಲ್ಲಿ ಖನಿಜ ವರ್ಣಗಳಿಂದ ಚಿತ್ರಗಳನ್ನು ಹಾಗು ಗಟ್ಟಿ ಕಲ್ಲಿನಿಂದ ಗೀರು ಚಿತ್ರಗಳನ್ನು ಬಿಡಿಸುವ ಪ್ರಯತ್ನಕ್ಕೆ ಇಂತಹ ಪರಿಸರ ಹೆಚ್ಚು ಅನುಕೂಲವಾಗಿದೆ. ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಬಂಡೆ ಮತ್ತು ಗವಿಗಳ ಪರಿಶೀಲನೆಯಲ್ಲಿ ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿರುವಂತೆ ಇಲ್ಲಿ ಈ ಹಂತದ ಚಿತ್ರಗಳಿಲ್ಲದಿರುವುದು ಪ್ರಶ್ನಾರ್ಥಕವಾಗಿದೆ. ಆದಿ ಹಳೇಶಿಲಾಯುಗ ಹಂತದಿಂದ ಈ ಪ್ರದೇಶದ ಜನರ ಸಾಂಸ್ಕೃತಿಕ ಪ್ರಗತಿಯನ್ನು ನೋಡಿದರೆ ಬಹುಮಟ್ಟಿಗೆ ಇವರು ಈ ಪ್ರದೇಶದವರೇ ಆಗಿದ್ದು ಹೊರಗಿನ ಪ್ರಭಾವಕ್ಕೆ ಒಳಗಾಗಿಲ್ಲವೆಂದು ತೋರುತ್ತದೆ. ಎರಡನೆಯದಾಗಿ ಮಧ್ಯ ಹಳೆಶಿಲಾಯುಗದ ಹಂತದಿಂದ ಈ ಹಂತದವರೆಗೆ ಬಿಜಾಪುರ, ರಾಯಚೂರು, ಬಳ್ಳಾರಿ ಮೊದಲಾದ ಪ್ರದೇಶದಲ್ಲಿ ಕಂಡು ಬಂದಂತೆ ಉಪಕರಣಗಳನ್ನು ಹೆಚ್ಚು ಸುಂದರವಾಗಿ ಮಾಡಲು ಈ ಪ್ರದೇಶದಲ್ಲಿ ದೊರೆಯುವ ಕಲ್ಲುಗಳು ಅನುಕೂಲಕರವಾಗಿರಲಿಲ್ಲ. ಆದ್ದರಿಂದ ಕಸುಬಿನಲ್ಲಿ ಕಲಾವಂತಿಕೆಯನ್ನು- ಬೆಳೆಸಿಕೊಳ್ಳಲು ಸಾಧ್ಯವಾಗದಿದ್ದುದರಿಂದ ಈ ಪ್ರದೇಶದಲ್ಲಿ ನಂತರದ ಕಾಲದಲ್ಲಿ ಇತರ ಪ್ರದೇಶದಲ್ಲಿದ್ದಂತೆ ಸೃಜನಾತ್ಮಕ ಕಲಾಕೃತಿಗಳನ್ನು ಬಿಡಿಸಲು ಪ್ರಚೋದನೆ ಅಷ್ಟಾಗಿ ಇರಲಿಲ್ಲವೇನೋ? ಇವನ್ನೆಲ್ಲಾ ಪರಿಶೀಲಿಸಿ ಕೂಲಂಕಷ ಪ್ರಾಗೈತಿಹಾಸಿಕ ಅನ್ವೇಷಣೆ ಮಾಡಬೇಕಿದೆ.

ಅಧ್ಯಯನ ಪ್ರದೇಶದ ನೆಲೆಗಳನ್ನು ಕೇವಲ ಅನ್ವೇಷಣೆಯಿಂದ ಗುರುತಿಸಲಾಗಿದೆಯಷ್ಟೆ. ಆದರೂ ಕೂಡ ಭಿನ್ನ ಭಿನ್ನ ಆಕೃತಿಗಳ ಪ್ರಕಾರದಲ್ಲಿ ಕಾಣುವ ವೈವಿಧ್ಯ ಹಾಗೂ ಆಕೃತಿಗಳನ್ನು ಗಮನಿಸಿ ಈ ಹಂತದಲ್ಲಿ ಮೂರು ಉಪಹಂತಗಳನ್ನು ಗುರುತಿಸಲಾಗಿದೆ. ಈ ಹಂತಗಳು ಬಹುಮಟ್ಟಿಗೆ ಪಶುಪಾಲನೆ ಮತ್ತು ಧಾನ್ಯ ಸಂಗ್ರಹ ಹಂತದಿಂದ ಕ್ರಮೇಣ ತೋಟಗಾರಿಕೆ ಪ್ರಕಾರದ ಕಸುಬಿಗೆ ಹಾದಿ ಮಾಡಿ ಕೊಟ್ಟಿರುವುದನ್ನು ಅಸ್ಪಷ್ಟವಾಗಿ ಗುರುತಿಸಲಾಗಿದೆ. ಇದರಿಂದ ಅಲೆಮಾರಿ ಜೀವನದಿಂದ ಒಂದು ಕಡೆ ನೆಲೆಯಾಗಿ ನಿಂತು ತಮ್ಮ ಜೀವನ ಕ್ರಮವನ್ನು ನಡೆಸುವಂತಹ ಹಂತಕ್ಕೆ ಭಿನ್ನಭಿನ್ನ ಪ್ರಮಾಣದಲ್ಲಿ ತಲುಪಿರುವ ಸಾಧ್ಯತೆ ಇದೆ.

ನೂತನ ಶಿಲಾ-ತಾಮ್ರಸಂಸ್ಕೃತಿಯ ಸಂಬಂಧವಾಗಲೀ ಪ್ರಭಾವವಾಗಲೀ ಪಡೆಯದೆ ಇದ್ದ ಇಲ್ಲಿಯ ನೂತನ ಶಿಲಾಸಂಸ್ಕೃತಿಯು ಇದರ ಹಿಂದಿನ ಸೂಕ್ಷ್ಮ ಶಿಲಾಸಂಸ್ಕೃತಿಗಿಂತ ಹೆಚ್ಚು ವ್ಯಾಪಕವಾಗಿ ವೃದ್ಧಿಯಾಗಿರುವುದನ್ನು ಕಾಣಬಹುದು. ಮತ್ತು ಕೃಷ್ಣಾನದೀ ಹಾಗೂ ಕಾವೇರಿ ನದೀ ಬಯಲಿನ ಸಮಕಾಲೀನ ಸಂಸ್ಕೃತಿಗೆ ಹೋಲಿಕೆ ಇದ್ದರೂ ತನ್ನ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಬೆಳೆಸಿಕೊಂಡಂತೆ ಕಾಣುತ್ತದೆ. ಬೇರೆ ಪ್ರದೇಶಗಳಲ್ಲಿ ಕಂಡು ಬಂದ ಈ ಸಂಸ್ಕೃತಿಯ ಮೂರು ಉಪ ಹಂತಗಳಿಗೆ ಬದಲಾಗಿ, ಹೆಚ್ಚಾಗಿ ಮೊದಲನೆ ಎರಡು ಹಂತಗಳನ್ನು ಇಲ್ಲಿ ಕಾಣುತ್ತಿರುವುದು ಗಮನಾರ್ಹ. ಆದರೆ ಇವೆಲ್ಲವನ್ನು ವೈಜ್ಞಾನಿಕ ಉತ್ಖನನದಿಂದ ಸರಿಪಡಿಸಿಕೊಳ್ಳಬೇಕಾಗಿದೆ. ದೊರೆತ ಉಪಕರಣಗಳಲ್ಲಿ ಹೆಚ್ಚಿನವು ಡಾಲರೈಟ್, ಡೈಕ್ ಶಿಲೆಯಲ್ಲಿವೆ. ಕೆಲವು ಮಾತ್ರ ಈ ಪ್ರದೇಶದ ಪಶ್ಚಿಮದಲ್ಲಿ ದೊರೆಯುವ ಹಸಿರು ಸಿಸ್ಟ್ ಶಿಲೆಯಲ್ಲಿದೆ. ಆದ್ದರಿಂದ ಸ್ಥಳೀಯವಾಗಿ ಈ ಉಪಕರಣಗಳನ್ನು ಮಾಡಿರುವ ಸಾಧ್ಯತೆ ಇದೆ. ಇನ್ನೊಂದು ಗಮನಾರ್ಹ ಅಂಶವೆಂದರೆ ಪ್ರದೇಶದಲ್ಲಿ ಡಾಲರೈಟ್, ಡೈಕ್ ಮೊದಲಾದ ಶಿಲಾಮಾದರಿ ದೊರೆಯತ್ತಿದ್ದರೂ ಕೂಡ ಸ್ಥಳೀಯವಾಗಿ ಈ ಉಪಕರಣಗಳನ್ನು ಸಿದ್ಧಗೊಳಿಸಿರುವುದಕ್ಕೆ ಪುರಾವೆಗಳು ಸದ್ಯಕ್ಕಂತೂ ದೊರೆತಿಲ್ಲ. ಈ ನೆಲೆಗಳೊಂದರಲ್ಲಿ ವೈಜ್ಞಾನಿಕ ಉತ್ಖನನ ನಡೆಸಿದರೆ ಸಾಕಷ್ಟು ಮಾಹಿತಿ ದೊರಕುವ ಸಾಧ್ಯತೆ ಇದೆ.

ನೂತನ ಶಿಲಾಯುಗ ಸಂಸ್ಕೃತಿಯ ನೆಲೆಗಳಿರುವ ಭಾಗದಲ್ಲಿಯೇ ವಿಶೇಷವಾಗಿ ಬೃಹತ್ ಶಿಲಾಯುಗ ಸಂಸ್ಕೃತಿಯ ನೆಲೆಗಳಿವೆ. ಇದು ಸಹಜ. ಸಾಮಾನ್ಯವಾಗಿ ಬ್ರಹ್ಮಗಿರಿ(ವೀಲರ್:೧೯೪೮;೧೮೦-೩೧೦) ಸಂಗನ ಕಲ್ಲು (ಸುಬ್ಬಾರಾವ್.ಬಿ:೧೯೪೮) ಪಿಕ್ಲಿಹಾಳ್ (ಆಲ್ಚಿನ್.ಬಿ:೧೯೬೦) ಪಯಂಪಳ್ಳಿ (ಇಂ.ಆ.ರಿ.೧೯೬೪-೬೫:೨೨-೨೩) ಮೊದಲಾದ ಸ್ಥಳಗಳಲ್ಲಿಯ ಉತ್ಖನನಗಳಿಂದ ತಿಳಿದು ಬಂದಂತೆ ಜನರು ನೂತನ ಶಿಲಾಯುಗ ಸಂಸ್ಕೃತಿ ಹಂತದಲ್ಲಿರುವಾ-ಗಲೇ ವಿಶಿಷ್ಟ ಮೃತ್ ಪಾತ್ರೆಯಾದ ಕಪ್ಪು-ಕೆಂಪು ಬಣ್ಣದ ಪಾತ್ರೆ, ಕಬ್ಬಿಣದ ಸಾಮಾನು ಮತ್ತು ವಿಶಿಷ್ಟ ಶೈಲಿಯಲ್ಲಿ ಕಲ್ಗೋರಿ

ನಿರ್ಮಿಸಿರುವುದು ಕಂಡು ಬಂದಿದೆ. ಈ ನಿತ್ಯ ಜೀವನಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಬದಲಾವಣೆಗಳು ಪರಿಸರ ಹಾಗೂ ಇತರ ಪ್ರಭಾವಗಳಿಂದ ನೂತನ ಶಿಲಾಯುಗದ ಜನರಲ್ಲಿ ತಾವಾಗಿಯೇ ಉಂಟಾದವೋ ಅಥವಾ ಈ ಭಿನ್ನ ಸಂಪ್ರದಾಯ ಉಳ್ಳ ಬೇರೆ ಜನವರ್ಗದವರು ಈ ಪ್ರದೇಶಕ್ಕೆ ಬಂದು ಮೊದಲೇ ಇದ್ದ ಜನರೊಡನೆ ವಾಸಿಸತೊಡಗಿದರೋ ಎಂಬ ಪ್ರಶ್ನೆ ಇನ್ನೂ ಸ್ಪಷ್ಟವಾಗಿ ಬಿಡಿಸಲಾಗಿಲ್ಲ. ಆದರೂ ಕೂಡ ಇದ್ದಕ್ಕಿದ್ದಂತೆ ಬದಲಾವಣೆ ಕಾಣುವುದರಿಂದ ಬೇರೆ ಜನವರ್ಗದವರೇ ಈ ಪ್ರದೇಶಕ್ಕೆ ಬಂದು ನೆಲೆಸಿದಂತೆ ಕಾಣುತ್ತದೆ. ಅಲ್ಲದೆ ಈ ಜನರು ಬಹುಮಟ್ಟಿಗೆ ಕಬ್ಬಿಣ, ಲೋಹ ತಂತ್ರಗಾರಿಕೆಯನ್ನು ಬಲ್ಲವ-ರಾಗಿದ್ದು ತಾವು ಸಿದ್ಧಮಾಡುತ್ತಿದ್ದ ಕಬ್ಬಿಣದ ಸಾಮಾನುಗಳನ್ನು ಜನ ವಸತಿ ನೆಲೆಗಳಿಗೆ ಹೋಗಿ ಕೊಟ್ಟು ಕೊಳ್ಳುವವರಾಗಿದ್ದರು. ಈ ಸಂದರ್ಭದಲ್ಲಿ ಮತ್ತು ಇದಕ್ಕೆ ಪೂರ್ವದಲ್ಲಿ ಕೃಷ್ಣಾ ನದೀ ಸಂಗಮ ಪ್ರದೇಶದಲ್ಲಿ ಗೋದಾವರಿ ನದೀ ಪ್ರದೇಶದಿಂದ ಅಂತಿಮ ಭಾಗದ ಜೋರ್ವೆ ಶಿಲಾ-ತಾಮ್ರ ಸಂಸ್ಕೃತಿಯ ಜನರು ಭೀಮಾ ನದೀ ಪ್ರದೇಶದಿಂದ ಅಲ್ಪ ಪ್ರಮಾಣದಲ್ಲಿ ಬಂದಿದ್ದು ತಕ್ಕ ಮಟ್ಟಿಗೆ ತಿಳಿದಿದೆ(ಸುಂದರ:೧೯೭೧). ಇದರಿಂದ ಆ ಸಂಸ್ಕೃತಿಯ ವಿಶಿಷ್ಟ ತರಹದ ಕೆಂಪು ಬಣ್ಣದ ಮೃತ್ ಪಾತ್ರೆಗಳ ಅವಶೇಷಗಳ ಬಗ್ಗೆ ಸುಂದರ ಅವರ ಅಪ್ರಕಟಿತ ಲೇಖನವೊಂದು ತಿಳಿಸುತ್ತದೆ. ಭೀಮಾನದೀ ಉದ್ದಕ್ಕೂ ಮತ್ತು ಕೃಷ್ಣಾ ನದೀ ಇಲ್ಲಿಯ ನೂತನ ಶಿಲಾಯುಗದ ಕೊನೆಯ ಹಂತ ಹಾಗೂ ಈ ಹಂತದ ಕೊನೆಯ ಭಾಗದಲ್ಲಿ ಬೃಹತ್ ಶಿಲಾ-ಯುಗ ಸಂಸ್ಕೃತಿ ಭಾಗದ ಜನರು ಬಂದು ಸೇರಿಕೊಂಡ ಹಂತದಲ್ಲಿಯೂ ಕಾಣಸಿಗುತ್ತವೆ. ಉದಾಹರಣೆ ಬ್ರಹ್ಮಗಿರಿ ಬೂದಿ-ದಿಣ್ಣೆ, ಕಟ್ಟಡ ಅವಶೇಷಗಳೂ(ವೀಲರ್:೧೯೪೮; ೧೮೦-೩೧೦) ತೆಕ್ಕಲಕೋಟೆ (ನಾಗರಾಜರಾವ್ ಮತ್ತು ಮಲ್ಹೋತ್ರಾ: ೧೯೬೫). ಇವೆಲ್ಲವನ್ನೂ ಗಮನಿಸಿ ಈಗ ಅಧ್ಯಯನ ಪ್ರದೇಶದ ಯಲ್ಲಪ್ಪನಾಯಕನಹೊಸಕೋಟೆ ಮತ್ತು ನಿಡುಗಲ್ಲು(ಪಾವ-ಗಡ ತಾಲ್ಲೂಕು)ಗಳಲ್ಲಿ ಒಂದೆರಡು ಅಂತಿಮ ಜೋರ್ವೆ ಮೃತ್ ಪಾತ್ರೆಗಳು ದೊರೆತಿರುವುದು ಗಮನಾರ್ಹ. ಪ್ರಾಯಶಃ ಇದು ಹೆಚ್ಚಿನ ಮಟ್ಟಿಗೆ ಪ್ರಸರಣ ಕಾರಣದಿಂದ ಈ ನೆಲೆಗಳಲ್ಲಿ ಕಾಣಿಸಿಕೊಂಡಿವೆ ಎಂದು ಹೇಳಬಹುದು. ಈ ಪ್ರದೇಶದ ನೈಋತ್ಯಕ್ಕಿರುವ ತಿ.ನರಸೀಪುರ(ಶೇಷಾದ್ರಿ:೧೯೭೧) ದಕ್ಷಿಣಕ್ಕಿರುವ ಬನಹಳ್ಳಿ(೧೯೮೩-೮೪;೪೨-೪೬,೧೯೮೫-೮೬-೪೩-೪೪ ಮತ್ತು ೧೯೮೬-೮೭;೪೨-೪೫) ಗಳಲ್ಲಿ ಈ ಸಂಸ್ಕೃತಿಯ ಮೃತ್ ಪಾತ್ರೆ ಅವಶೇಷಗಳು ಉತ್ಖನನದಲ್ಲಿಯೂ ದೊರೆ-ತಿಲ್ಲ. ಈ ಸಂಸ್ಕೃತಿಯ ಪ್ರಸರಣದ ದಕ್ಷಿಣ ಮೇರೆಯು ಅಧ್ಯಯನ ಪ್ರದೇಶವೆಂದು ಕಾಣುತ್ತದೆ. ಇದು ಇನ್ನೊಂದು ಗಮ-ನಾರ್ಹ ಅಂಶ. ಆದ್ದರಿಂದಲೇ ಈ ಹೊಸ ಜನವರ್ಗದವರು ಕೂಡ ಹಿಂದೆ ಇದ್ದ ಜನವರ್ಗದೊಡನೆ ಸೇರಿ ಬಾಳುವೆ ಮಾಡಬೇಕಾಯಿತು. ಈ ಕಾರಣದಿಂದಲೇ ಈ ಎರಡೂ ಭಿನ್ನ ಸಂಸ್ಕೃತಿಗಳ ಅವಶೇಷಗಳನ್ನು ಒಂದೆಡೆಯಲ್ಲಿ ಕಾಣುತ್ತೇವೆ ಇದರಿಂದ ಜನ ಜೀವನದಲ್ಲಿ ಸಾಂಸ್ಕೃತಿಕ ವಿನಿಮಯ ಉಂಟಾಗಿ ಜೀವನ ಶೈಲಿಯಲ್ಲಿ ಹೊಸ ಹೊಸ ತಂತ್ರಗಳು, ವಿಧಾನ-ಗಳು ಬೆಳೆಯುವುದಕ್ಕೆ ಅವಕಾಶವಾಗಿದ್ದಿರಬೇಕು. ಕಬ್ಬಿಣದ ಉಪಕರಣವನ್ನು ಹೊಂದಿದ ಜನರು ಸಹಜವಾಗಿ ಹೆಚ್ಚು ಬಲ-

ಶಾಲಿಗಳಾಗಿದ್ದು ಆಯಾಯ ಪ್ರದೇಶದಲ್ಲಿ ತಮ್ಮತಮ್ಮ ಕಸುಬುಗಳಿಗೆ ಅನುಕೂಲವಾಗುವುದಕ್ಕೋಸ್ಕರ ಪ್ರದೇಶ ನಿಯಂತ್ರ-ಣವನ್ನು ಮಾಡುವುದು ಅವಶ್ಯವಾಯಿತು. ಇದೇ ಮುಂದೆ ಒಂದು ಪ್ರದೇಶದ ರಾಜಕೀಯ ವ್ಯವಸ್ಥೆಗೆ ಎಡೆ ಮಾಡಿ ಕೊಟ್ಟಿತು. ಆದ್ದರಿಂದ ಈ ಹಂತವು ಜನರ ಸಾಂಸ್ಕೃತಿಕ ಪ್ರಗತಿಯ ಇತಿಹಾಸದಲ್ಲಿ ಒಂದು ಮಹತ್ವದ ಘಟ್ಟವೆಂದೇ ಹೇಳಬಹುದು. ಅಷ್ಟೇಅಲ್ಲ ಈ ಬೃಹತ್ ಶಿಲಾಯುಗ ಸಂಸ್ಕೃತಿಯು ವಿದರ್ಭ ಪ್ರದೇಶದ ನಾಗಪುರದಿಂದ ಹಿಡಿದು ಕೇರಳದ ತಿರುವನಂತ-ಪುರದವರೆಗೂ ಮತ್ತು ಪೂರ್ವ-ಪಶ್ಚಿಮದ ಕಡಲತೀರ ಪ್ರದೇಶಗಳವರೆಗೂ ವ್ಯಾಪಕವಾಗಿ ಹರಡಿಕೊಂಡಿದ್ದು, ಅಧ್ಯಯನ ಪ್ರದೇಶವು ಇಂತಹ ವ್ಯಾಪಕ ಪ್ರದೇಶದ ಒಂದು ಹಂತವನ್ನು ಸೂಚಿಸುತ್ತದೆಂದು ಅಧ್ಯಯನವು ಸ್ಪಷ್ಟ ಪಡಿಸುತ್ತದೆ. ಸ್ಥಳೀಯ ಖನಿಜ ಸಂಪತ್ತನ್ನು ಹಾಗೂ ಸ್ಥಳೀಯ ಕಲ್ಕುಟಿಕ ಕಸುಬುಗಳನ್ನು ಬಳಸಿಕೊಳ್ಳುವುದರಲ್ಲಿ ಇವು ಆದಿಹಂತದ ಪ್ರಮುಖ ಘಟ್ಟ-ವನ್ನು ಸಂಕೇತಿಸುತ್ತದೆ.

ಇನ್ನೊಂದು ಗಮನಾರ್ಹ ಅಂಶವೆಂದರೆ ನೂತನ ಶಿಲಾಯುಗ ಮತ್ತು ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳುಳ್ಳ ಎರಡು ನೆಲೆಗಳಲ್ಲಿ ಬೂದಿ ದಿಣ್ಣೆಯ ಅವಶೇಷಗಳಿರುವುದು. ಇಂತಹ ಬೂದಿ ದಿಣ್ಣೆಗಳು ಕೃಷ್ಣಾ-ತುಂಗಭದ್ರಾ-ಭೀಮಾ ನದೀ ಸಂಗಮ ಪ್ರದೇಶದಲ್ಲಿ ಮತ್ತು ಬೆಳಗಾವಿ ಜಿಲ್ಲೆಯಲ್ಲಿ ಕೃಷ್ಣಾ ನದಿಯು ಪ್ರವೇಶ ಮಾಡುವ ಸ್ಥಳದಿಂದ ಸಂಗಮದವರೆಗೂ ಆ ನದಿಯ ಉದ್ದಕ್ಕೂ ಅಲ್ಲಲ್ಲಿ ಬೂದಿ ದಿಣ್ಣೆಗಳ ಅವಶೇಷಗಳಿವೆ. ಇವುಗಳಲ್ಲಿ ಉತ್ನೂರು(ಅಲ್ಚಿನ್.ಎಪ್.ಆರ್.:೧೯೬೧) (ಆಂಧ್ರ ಪ್ರದೇಶ) ಕುಪ್ಪಗಲ್ (ಮಜುಂದಾರ್ ಮತ್ತು ರಾಜಗುರು:೧೯೬೫)ಮತ್ತು ಬೂದಿಹಾಳ್ (ಪದ್ದಯ್ಯ.ಕೆ:೧೯೯೩:೫೬-೮೬) ಗಳಲ್ಲಿರುವ ಬೂದಿದಿಣ್ಣೆಗಳನ್ನು ಉತ್ಖನನ ಮಾಡಲಾಗಿದೆ. ಇವುಗಳ ವಿಶೇಷ ಅಧ್ಯಯನಗಳಿಂದ ಇವುಗಳ ಸೃಷ್ಟಿ, ಕಾಲಮಾನದ ಬಗ್ಗೆ ಭಿನ್ನ ಅಭಿಪ್ರಾಯಗಳಿವೆ. ಆದರೆ ಇಂತಹ ಬೂದಿದಿಣ್ಣೆಗಳು ಅತಿ ದೊಡ್ಡ ಪ್ರಮಾಣದಲ್ಲಿ ಪಶುಗಳ ಸಗಣಿಯು ನಿಧಾನವಾಗಿ ಅತಿ ಹೆಚ್ಚು ಉಷ್ಣತೆಯಲ್ಲಿ ಸುಟ್ಟಿದುದರಿಂದ ಇಂತಹ ಬೂದಿ ದಿಣ್ಣೆಗಳಾಗಿವೆ ಎಂದು ವೈಜ್ಞಾನಿಕವಾಗಿ ತಿಳಿದಿದೆ. ಇಷ್ಟುದೊಡ್ಡ ಪ್ರಮಾಣದಲ್ಲಿ ಸಗಣಿ ಸುಡುವ ಕಾರಣ ಇನ್ನೂ ಸ್ಪಷ್ಟವಾಗಿಲ್ಲ. ಇವುಗಳನ್ನು ಬಹುಮಟ್ಟಿಗೆ ನೂತನ ಶಿಲಾಯುಗದ ಹಂತದಿಂದ ಹಿಡಿದು ಬೃಹತ್ ಶಿಲಾಯುಗ ಸಂಸ್ಕೃತಿಯ ಮಧ್ಯದವರೆಗೂ ಸೃಷ್ಟಿಯಾಗಿರಬೇಕೆಂದು ತೋರುತ್ತದೆ. ಬಹು ಮಟ್ಟಿಗೆ ಪಶು ಸಂಗೋಪನೆ ನಡೆಸುತ್ತಿದ್ದ ಜನರು ಇವುಗಳಿಗೆ ಕಾರಣವೆಂದು ತಿಳಿಯುತ್ತದೆ. ಪ್ರಾಯಶಃ ಅತಿ ಹೆಚ್ಚು ಪ್ರಮಾಣದಲ್ಲಿ ಸಂಗ್ರಹವಾಗುತ್ತಿದ್ದ ಸಗಣಿಯನ್ನು ತಮ್ಮ ನಂಬುಗೆಗೆ ಸಂಬಂಧಿಸಿದ ಧಾರ್ಮಿಕ ಕಟ್ಟಳೆಯಂತೆ ಸುಡಲಾಗುತ್ತದೆಂದು ಬಲವಾದ ನಂಬಿಕೆ ಇತ್ತು. ಇಂತಹ ಪದ್ಧತಿ ಇಂದಿಗೂ ಹೋಳಿ ,ದೀಪಾವಳಿಗಳಲ್ಲಿ ಕಾಣಬಹುದೆಂದು ತಜ್ಞರ ಅಭಿಪ್ರಾಯವಾಗಿದೆ.

ಈ ಬೂದಿದಿಣ್ಣೆಗಳಿರುವ ಕೇಂದ್ರ ಪ್ರದೇಶದಿಂದ ಗಣನೀಯ ಪ್ರಮಾಣದ ದೂರದಲ್ಲಿಯ ತುಮಕೂರು ಜಿಲ್ಲಾ ಪ್ರದೇಶದಲ್ಲಿಯೂ ಇಂತಹ ಬೂದಿದಿಣ್ಣೆಗಳು ಇರುವುದು ಕುತೂಹಲಕಾರಿಯಾಗಿದೆ. ಎರಡನೆಯದಾಗಿ ದೊರೆತಿರುವ ೩ ಬೂದಿದಿಣ್ಣೆಯ ನೆಲೆಗಳಲ್ಲಿ ಒಂದನ್ನು ವಾಲಿದಿಬ್ಬ ಎಂದು ಕರೆಯುತ್ತಾರೆ. ಇಂತಹುದೇ ಒಂದು ದಿಬ್ಬವು ಹಂಪಿಯ ಸಮೀಪ ವೆಂಕಟಾಪುರದಲ್ಲಿದ್ದು ಆ ಬೂದಿದಿಬ್ಬವನ್ನು ವಾಲಿಕಾಷ್ಟ, ವಾಲಿದಿಬ್ಬವೆಂದು ಸ್ಥಳೀಯವಾಗಿ ಹೇಳಲಾಗುತ್ತದೆ. ಅದರಂತೆ ಕುಡುತಿಣಿ(ಬೆಳಗಾವಿ ಜಿಲ್ಲೆ)ಯ ಬೂದಿದಿಣ್ಣೆಯನ್ನು ಹಿಡಿಂಬಾಸುರನನ್ನು ದಹನ ಮಾಡಿದ ಸ್ಥಳವೆಂದು ಸ್ಥಳೀಯವಾಗಿ ಹೇಳುತ್ತಾರೆ. ಇವುಗಳ ಬಗ್ಗೆ ಸುಂದರ ಅವರು ಬೇರೆಡೆಯಲ್ಲಿ ವಿವರವಾಗಿ ಚರ್ಚಿಸಿದ್ದಾರೆ (ಷೇಕ್‌ಅಲಿ.ಬಿ(ಸಂ) ಸುಂದರ (ಸಂ.ಸಂ.) ೧೯೯೭). ಪ್ರಾಯಶಃ ಆಯಾಯ ಸಮಾಜದ ಅತ್ಯಂತ ಗಣ್ಯ ವ್ಯಕ್ತಿಗಳಾದ ಅಂದರೆ ವಾಲಿ, ಹಿಡಿಂಬಾಸುರ(ಸುಂದರ:೧೯೯೨) ಮೊದಲಾದವರ ದಹನ ಪ್ರಕ್ರಿಯೆಯನ್ನು ಆಗಾಗ್ಗೆ ದೊಡ್ಡ ಪ್ರಮಾಣದಲ್ಲಿ ಸಗಣಿ ರಾಶಿ ಮಾಡಿ ಸುಡುವುದರಿಂದ ಆಚರಿಸುತ್ತಿದ್ದ ಸಾಧ್ಯತೆ ಇದೆ ಎಂದು ಹೇಳಿದ್ದಾರೆ. ಇಂದಿಗೂ ಕೂಡ ಇಂತಹ ವಾರ್ಷಿಕ ಕಾಮದಹನವನ್ನು ಆಚರಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಅಧ್ಯಯನ ಪ್ರದೇಶದ ಒಂದು ಬೂದಿದಿಣ್ಣೆ(ನಾಗಲಾಪುರ)ಯನ್ನು ವಾಲಿದಿಬ್ಬವೆಂದು ಕರೆದಿರುವುದು ಅರ್ಥಗರ್ಭಿತವಾಗಿದೆಯೆಂದು ಕಾಣುತ್ತದೆ. ಆದ್ದರಿಂದ ಈ ನೆಲೆಯ ಬಗೆಗೆ ಇನ್ನೂ ಹೆಚ್ಚು ಕೂಲಂಕಷವಾಗಿ ಉತ್ಖನನದಿಂದ ತಿಳಿಯಬೇಕಿದೆ.

ನೂತನ ಶಿಲಾಯುಗ, ಬೃಹತ್ ಶಿಲಾಯುಗ ಸಂಸ್ಕೃತಿಯ ಅವಶೇಷಗಳುಳ್ಳ ನೆಲೆಗಳಲ್ಲಿಯೇ ಹೆಚ್ಚಾಗಿ ಇತಿಹಾಸ ಆರಂಭಕಾಲದ ಸಂಸ್ಕೃತಿಯ ಅವಶೇಷಗಳಿರುವುದನ್ನು ಗಮನಿಸಲಾಗಿದೆಯಷ್ಟೆ. ನೂತನ ಶಿಲಾಯುಗದೊಡನೆ ಹೋಲಿಸಿದಾಗ, ಬೃಹತ್ ಶಿಲಾಯುಗ ಸಂಸ್ಕೃತಿಯಲ್ಲಿ ಕೆಲವೊಂದು ವಿಶಿಷ್ಟ ಸಂಪ್ರದಾಯಗಳನ್ನೂ ಕಾಣುವುದಷ್ಟೇ ಅಲ್ಲದೇ ಕಬ್ಬಿಣದ ಉಪಯೋಗದಿಂದ ಜೀವನ ಶೈಲಿಯಲ್ಲಿ ಕೆಲವೊಂದು ಪ್ರಮುಖ ಬದಲಾವಣೆಗಳು ಕಾಣಿಸಿಕೊಂಡವು. ಆದರೆ ಅಧ್ಯಯನ ಪ್ರದೇಶದಲ್ಲಿ ದೊರೆತ ಇತಿಹಾಸ ಆರಂಭಕಾಲದ ಅವಶೇಷಗಳಲ್ಲಿ ಹೇಳಿಕೊಳ್ಳುವಂತಹ ಗಟ್ಟಿಮುಟ್ಟಾದ ಬದಲಾವಣೆಗಳು ಕಾಣುವುದಿಲ್ಲ. ಬೃಹತ್ ಶಿಲಾಸಂಸ್ಕೃತಿಯ ಹಂತದಲ್ಲಿ ಉಪಯೋಗದಲ್ಲಿದ್ದ ಮಣ್ಣಿನ ಪಾತ್ರೆಗಳ ಪ್ರಕಾರಗಳು ರಚನೆ ಮತ್ತು ಪ್ರಕಾರಗಳೇ ಮುಂದುವರೆದಿದ್ದು ಅವುಗಳನ್ನು ಕೆಂಪು ಲೇಪನದಡಿಯಲ್ಲಿ ಬಿಳಿ ರೇಖಾಚಿತ್ರಗಳಿಂದ ಅಲಂಕರಿಸಿರುವುದು ಮಾತ್ರ ವಿಶಿಷ್ಟವಾಗಿ ಕಾಣುತ್ತದೆ. ಆದ್ದರಿಂದ ಕೇವಲ ಜೀವನೋಪಾಯಕ್ಕೆ ಉಪಯೋಗಿಸುತ್ತಿದ್ದ ವಸ್ತುಗಳಲ್ಲಿ ಕೆಲವೊಂದು ಬದಲಾವಣೆ ಕಾಣುತ್ತದೆಯೇ ಹೊರತು ಶೈಲಿಯಲ್ಲಿ ಯಾವುದೇ ಪ್ರಗತಿ ಕಾಣುವುದಿಲ್ಲ. ಹೀಗೆಂದ ಮಾತ್ರಕ್ಕೆ ಈ ಹಂತದಲ್ಲಿ ಪ್ರಗತಿ ಆಗಲಿಲ್ಲವೆಂಬ ಅಭಿಪ್ರಾಯವಲ್ಲ.

ನೆರೆಹೊರೆಯ ಪ್ರದೇಶಗಳಲ್ಲಿಯ ಕೆಲವೊಂದು ನಗರ ಸಂಸ್ಕೃತಿ ನೆಲೆಗಳಲ್ಲಿ ಅವು ಒಂದು ರಾಜಕೀಯ ವ್ಯವಸ್ಥೆಗೊಳಪಟ್ಟಿದ್ದು ಜ್ಞಾನವೃದ್ಧಿಗೆ ಅತ್ಯಂತ ಬಲಶಾಲಿ ಸಾಧನವಾದ ಲಿಪಿಯ ಬಳಕೆ ಇರುವುದನ್ನು ನೋಡಬಹುದು. ಆದ್ದರಿಂದ ಈ ಪ್ರದೇಶದ ಈ ಸಂಸ್ಕೃತಿಯ ಹಂತದಲ್ಲಿ ಇಂತಹ ವೈಶಿಷ್ಟ್ಯವನ್ನು ಕಾಣದಿದ್ದರೂ ಪ್ರಗತಿ ಮಾತ್ರ ಖಂಡಿತವಾಗಿಯೂ ಆಗಿತ್ತು. ಆದ್ದರಿಂದ ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಕೂಲಂಕಷ ಅನ್ವೇಷಣೆ ಮತ್ತು ಅಧ್ಯಯನವನ್ನು ಮಾಡಬೇಕಾಗಿದೆ. ಹಾಗೆ ಮಾಡಿದಾಗ್ಯೂ ನಗರ ಸಂಸ್ಕೃತಿ ನೆಲೆಗಳು ಕಾಣದಿದ್ದಲ್ಲಿ, ಆಗ ಈಗಾಗಲೇ ಸೂಚಿಸಿದಂತೆ ನದಿಗಳ ಮೂಲಕ ದೊಡ್ಡ ಪ್ರಮಾಣದಲ್ಲಿ ನೀರಿನ ಅನುಕೂಲತೆ ಇಲ್ಲದಿರುವುದು ಹಾಗೂ ಇತರ ಕಾರಣಗಳೇನೆಂಬುದನ್ನು ಶೋಧಿಸಬೇಕಾಗಿದೆ. ಒಂದು ನೆಲೆಯಲ್ಲಿ ನಗರ ಸಂಸ್ಕೃತಿ ಅವಶೇಷಗಳಿದ್ದರೂ ಅನ್ವೇಷಣೆಯಲ್ಲಿ ದೊರಕದಿರಬಹುದು. ಉದಾಹರಣೆಗೆ ಬ್ರಹ್ಮಗಿರಿ. ಇದು ಚಕ್ರವರ್ತಿ ಅಶೋಕ ಮೌರ್ಯನು ಕಾಲದಲ್ಲಿ ಅವನ ಪ್ರಮುಖ ಅಧಿಕಾರಿಗಳಲ್ಲಿ ಒಂದು ವರ್ಗದವರಾದ ಮಹಾಮಾತ್ರರ ಕಾರ್ಯ ಕ್ಷೇತ್ರವಾಗಿತ್ತು. ಆದ್ದರಿಂದ ಆ ಕಾಲದಲ್ಲಿ ಇದೊಂದು ನಗರವೇ ಆಗಿದ್ದಿರಬೇಕು. ಆದರೆ ಆ ಕಾಲದಲ್ಲಿ ಬಳಕೆಯಲ್ಲಿದ್ದ ಮುದ್ರಾಂಕಿತ ನಾಣ್ಯಗಳಾಗಲೀ, ಕಟ್ಟಡ ಅವಶೇಷವಾಗಲೀ, ಅನ್ವೇಷಣೆಯಿಂದ ಮಾತ್ರವಲ್ಲ ಉತ್ಖನನದಿಂದಲೂ ದೊರೆತಿಲ್ಲ. ಇವೆಲ್ಲವನ್ನೂ ಗಮನಿಸಿ ಈ ಪ್ರದೇಶದಲ್ಲಿ ಇನ್ನೂ ಹೆಚ್ಚಿನ ಸೂಕ್ಷ್ಮ ತರದ ಅನ್ವೇಷಣೆ ಮಾಡಬೇಕಿದೆ.

ಒಟ್ಟಿನಲ್ಲಿ ಈ ಪ್ರದೇಶದಲ್ಲಿಯ ಅನ್ವೇಷಣೆ ಮತ್ತು ಅಧ್ಯಯನಗಳಿಂದ ಗಣನೀಯ ಪ್ರಮಾಣದಲ್ಲಿ ಆದಿ ಹಳೆಶಿಲಾಯುಗದ ಹಂತದಿಂದ ಹಿಡಿದು ಇತಿಹಾಸ ಆರಂಭ ಕಾಲದ ಅಂತ್ಯದವರೆಗಿನ ಏಳು ಘಟ್ಟಗಳ ಸಾಂಸ್ಕೃತಿಕ ನೆಲೆಗಳಿರುವುದು ಅತ್ಯಂತ ಪ್ರಖರವಾಗಿ ಸ್ಪಷ್ಟವಾಗಿದೆ ಮತ್ತು ನೈಸರ್ಗಿಕ ಸಂಪತ್ತು ಹಾಗು ಅದರ ಪ್ರಭಾವವನ್ನು ಸೂಚಿಸುವಂತಹ ಸಾಂಸ್ಕೃತಿಕ ಬೆಳವಣಿಗೆಯ ಸ್ಥೂಲ ಪರಿಚಯವನ್ನು ತಿಳಿದು ಕೊಳ್ಳಲು ಸಾಧ್ಯವಾಗಿದೆ. ಇನ್ನು ಈ ಪ್ರದೇಶದಲ್ಲಿ ಮೇಲೆ ಹೇಳಿದ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಅನ್ವೇಷಣೆ ಆಗಬೇಕಿದೆ. ಈ ಪ್ರದೇಶದಲ್ಲಿ ಯಾವುದೇ ಉತ್ಖನನವಾಗಿಲ್ಲ. ಉತ್ತರದ ಬ್ರಹ್ಮಗಿರಿ (ವೀಲರ್:೧೯೪೮;೧೮೦- ೩೧೦) ಪೂರ್ವದ ಕೋಲಾರ ಜಿಲ್ಲೆಯ ಬನಹಳ್ಳಿ (ಇಂ.ಆ.ರಿ:೧೯೮೩-೮೪;೪೨-೪೬, ೧೯೮೫-೮೬:೪೩-೪೪ ಮತ್ತು ೧೯೮೬-೮೭;೪೨-೪೬) ಇಂತಹ ನೆಲೆಗಳಲ್ಲಿ ಉತ್ಖನನ ಆಗಿದೆ. ಆದ್ದರಿಂದ ಈ ಪ್ರದೇಶದಲ್ಲಿ ಬೆಳಕಿಗೆ ಬಂದ ಸಾಂಸ್ಕೃತಿಕ ಘಟ್ಟಗಳ ಮಾಹಿತಿ, ಕಾಲಮಾನ ಮತ್ತು ಸಂಸ್ಕೃತಿಯ ಬೆಳವಣಿಗೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ಕೂಲಂಕಷವಾಗಿ ತಿಳಿಯಲು ವೈಜ್ಞಾನಿಕ ಉತ್ಖನನವು ಮತ್ತು ಉತ್ಖನನದಲ್ಲಿ ದೊರೆತ ವಸ್ತು ಅವಶೇಷಗಳ ವೈಜ್ಞಾನಿಕ ವಿಶ್ಲೇಷಣೆ ತುಂಬಾ ಅವಶ್ಯಕ.

# ಅನುಬಂಧ-೧

# ತುಮಕೂರು ಜಿಲ್ಲೆಯ ಭೂ ವಿಜ್ಞಾನ

೬೪೯೩ ಚ.ಕಿ.ಮೀ. ವ್ಯಾಪ್ತಿಯಲ್ಲಿ ಹಬ್ಬಿರುವ ತುಮಕೂರು ಜಿಲ್ಲೆಯ ಶಿಲಾ ಸ್ತರಗಳು ಬಾಬಾ ಬುಡನ್ ವರ್ಗದ ಧಾರವಾಡ ಶಿಲಾ ಸಮೂಹಕ್ಕೆ ಸೇರಿದುದಾಗಿದೆ. ಇಲ್ಲಿನ ಶಿಲೆಗಳು ಭೂ ವಿಜ್ಞಾನದ ಕಾಲಮಾನದಲ್ಲಿ ಆರ್ಕಿಯಿನ್(Archaeon) ಕಾಲಕ್ಕೆ ಸೇರಿದುದಾಗಿ ಮತ್ತು ೨.೫ ಬಿಲಿಯನ್ ವರ್ಷಗಳಿಗೂ ಅಧಿಕ ಕಾಲಮಾನದ ವ್ಯಾಪ್ತಿಯಲ್ಲಿ ಬರುವ ಶಿಲೆಗಳು ಎಂದು ಶಾಸ್ತ್ರಜ್ಞರು ತಿಳಿಸಿದ್ದಾರೆ. ಸ್ಥೂಲವಾಗಿ ಹೇಳುವುದಾದಲ್ಲಿ ಇಲ್ಲಿನ ನಿಮ್ನ ಸ್ತರದಲ್ಲಿ ಗುಂಡುಶಿಲೆಯ ಪದರವಿದ್ದು ಅವುಗಳ ಮೇಲೆ ಅಗ್ನಿ ಶಿಲೆಯ ರೂಪಗಳಾದ ಮ್ಯಾಗ್ನಟೈಟ್ ಮತ್ತು ಕ್ವಾರ್ಟ್ಸೈಟ್‌ಗಳ ಬೃಹತ್ ಪದರಗಳಿದ್ದು ತದನಂತರ ಅಲ್ಲಲ್ಲಿ ಅಡ್ಡ ಆಯ್ದ ಶಿಸ್ಟ್ ಶಿಲೆಯ ಪದರಗಳು ಮತ್ತು ಕಣಶಿಲೆಯ ಪದರಗಳನ್ನು ಕಾಣಬಹುದು. ತುಮಕೂರು ಜಿಲ್ಲೆಯಲ್ಲಿ ಇರುವ ಇಂತಹ ಬೃಹತ್ ಶಿಲಾ ರಚನೆಗಳು ವೈವಿಧ್ಯಮಯವಾದ ಕಣಿವೆ, ಬೆಟ್ಟಗುಡ್ಡಗಳು, ಮತ್ತು ನದೀ ಪಾತ್ರವನ್ನು ಸೃಷ್ಟಿಸಿ ತುಮಕೂರು ಜಿಲ್ಲೆಯ ಇಡೀ ಭೂ ದೃಶ್ಯಕ್ಕೆ ತನ್ನದೇ ಆದ ಅತಿಶಯತೆಯನ್ನು ಒದಗಿಸಿಕೊಟ್ಟಿವೆ.

ಈ ಜಿಲ್ಲೆಯಲ್ಲಿ ದೊರಕುವ ಶಿಲೆಗಳನ್ನು ನೀಸ್(Gneiss), ಗ್ರಾನೈಟ್(Granite), ಶಿಸ್ಟ್(Schist) ಮತ್ತು ಡೈಕ್(Dyke) ಎಂಬ ಪ್ರಬೇಧಗಳಾಗಿ ವಿಂಗಡಿಸಬಹುದು. ಜಿಲ್ಲೆಯ ಶೇ. ೫೦ ಭಾಗವನ್ನು ನೀಸ್ ಶಿಲೆಯು ಆವರಿಸಿದ್ದು ಮೂರು ಮಿಲಿಯನ್ ವರ್ಷಗಳು ಹಳೆಯದಾದವು ಜಿಲ್ಲೆಯ ಪಶ್ಚಿಮ ಭಾಗದಲ್ಲೂ, ೨.೬ ಮಿಲಿಯನ್ ವರ್ಷಗಳಷ್ಟು ಹಳೆ-ಯದಾದವು ಜಿಲ್ಲೆಯ ಪೂರ್ವ ಭಾಗದಲ್ಲಿಯೂ ಕಂಡು ಬರುತ್ತದೆ. ಇಲ್ಲಿನ ಗ್ರಾನೈಟ್ ಶಿಲೆಯು ಕ್ಲೋಸ್ ಪೇಟ್ ಗ್ರಾನೈಟ್ ಸಮೂಹದ ಮುಂದುವರಿದ ಭಾಗವಾಗಿದ್ದು ಉತ್ತರ ದಕ್ಷಿಣವಾಗಿ ೨೫ ಕಿ.ಮೀ. ಅಗಲದ ಉನ್ನತ ಭೂ ಭಾಗವಾಗಿ ಕಂಡು ಬರುವುದಲ್ಲದೆ ಪೂರ್ವ-ಪಶ್ಚಿಮ ನೀಸ್ ಶಿಲಾ ಸ್ತರವನ್ನು ಬೇರ್ಪಡಿಸುತ್ತವೆ. ಈ ರೀತಿ ಇರುವ ಗ್ರಾನೈಟ್ ಶಿಲಾಸ್ತರವು ಅಲ್ಲಲ್ಲಿ ಬಹುಮುಖ್ಯವಾದ ಬೆಟ್ಟದ ಶಿಖರಾಗ್ರಗಳನ್ನು ನಿರ್ಮಿಸಿದೆ. ಉದಾಹರಣೆಗಾಗಿ ಶಿವಗಂಗಾ(೪೪೫೦ ಅಡಿ), ಸಾವನದುರ್ಗ(೪೦೨೪ ಅಡಿ), ದೇವರಾಯನ ದುರ್ಗ(೩೮೯೬ ಅಡಿ), ಮಧುಗಿರಿ(೩೯೩೦ ಅಡಿ) ಮತ್ತು ಪಾವಗಡ(೩೦೧೨ ಅಡಿ). ಶಿಸ್ಟ್ ಸ್ತರವು ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಹೆಚ್ಚು ಕಂಡು ಬಂದಿದ್ದು ಉತ್ತರ ಮತ್ತು ವಾಯುವ್ಯ ದಿಕ್ಕಿನ ನಡುವೆ ಗಣನೀಯ ಪ್ರಮಾಣದಲ್ಲಿ ಬೆಟ್ಟದೇಣು(Ridge) ಗಳಂತೆ, ೧೬೫ ಕಿ.ಮೀ. ಉದ್ದವಾಗಿ ಹಾಗೂ ೧೨ ರಿಂದ ೨೫ ಕಿ.ಮೀ. ಅಗಲವಾಗಿ ಕಂಡು ಬರುತ್ತವೆ. ಇವುಗಳನ್ನು ಕುಣಿಗಲ್ ಪಟ್ಟಿಗೆ, ಕಿಬ್ಬನಹಳ್ಳಿ-ಕುದುರೆಕಣಿವೆ ಪಟ್ಟಿಗೆ ಮತ್ತು ಚಿಕ್ಕನಾಯಕನಹಳ್ಳಿ

ಪಟ್ಟಿಗೆ ಎಂದು ಗುರುತಿಸಿದ್ದಾರೆ. ಇದರಲ್ಲಿ ಕುಣಿಗಲ್ ಪಟ್ಟಿಗೆಯು ಇಲ್ಲಿನ ನೀಸ್ ಶಿಲಾಸ್ತರಗಳ ಸಮೂಹಕ್ಕಿಂತ (ಅಂದರೆ ೩ ಬಿಲಿಯನ್ ವರ್ಷಗಳಿಗೂ) ಹಿಂದಿನದೆಂದು ತಿಳಿಯಲಾಗಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಕಿಬ್ಬನಹಳ್ಳಿ-ಕುದುರೆಕಣಿವೆ ಮತ್ತು ಚಿಕ್ಕನಾಯಕನಹಳ್ಳಿ ಶಿಸ್ಟ್ ಶಿಲಾಸ್ತರಗಳು ಅಗ್ನಿ ಶಿಲಾ ಪ್ರದೇಶದ ಸಂಚಿತ ಶಿಲೆಗಳ(Sedementary) ಸ್ತರದಲ್ಲಿ ಬರುತ್ತಿದ್ದು ಅತ್ಯಂತ ಹಳೆಯದಾದ ನೀಸ್ ಶಿಲಾ ಸಮೂಹದ ಮೇಲಿನ ಸ್ತರವಾಗಿ ಕಂಡುಬರುತ್ತದೆ. ಹಾಗೂ ಇವುಗಳು ಸುಮಾರು ೩ ರಿಂದ ೨.೫ ಬಿಲಿಯನ್ ವರ್ಷಗಳ ಹಿಂದೆ ರೂಪಿತವಾದುದೆಂದು ತಿಳಿಯಲಾಗಿದೆ. ಡೈಕ್ ಸ್ತರಗಳು ಕಾಲಮಾನದಲ್ಲಿ ೨.೪ ಮಿಲಿಯನ್ ವರ್ಷಗಳಷ್ಟು ಹಳೆಯದಾಗಿದ್ದು ಮೇಲೆ ತಿಳಿಸಿದ ಬಹುಮುಖ್ಯ ಮೂರು ಶಿಲಾಸ್ತರಗಳ ನಡುವೆ ಕಂಡು ಬರುತ್ತದೆ.

ಮತ್ತೆ ಗ್ರಾನೈಟ್ ವಿವಿಧ ರೀತಿಯ ವರ್ಣಗಳಲ್ಲಿ ದೊರಕುವ ನೀಸ್ ಶಿಲೆಯು ಕಿಬ್ಬನಹಳ್ಳಿಯಲ್ಲಿ ದೊರಕುವ ಸ್ಟಿಯೊಲೈಟ್ ಮತ್ತು ಬಳಪದ ಕಲ್ಲು(Soap stone) ಗಳು ಮತ್ತು ದಟ್ಟ ಬಣ್ಣವನ್ನು ಹೊಂದಿರುವ ಡಾಲರೈಟ್ ಶಿಲೆಗಳು ಕಟ್ಟಡ ನಿರ್ಮಾಣ ಹಾಗು ಅಲಂಕಾರಿಕ ಕಲ್ಲುಗಳನ್ನಾಗಿ ಉಪಯೋಗಿಸುತ್ತಿದ್ದಾರೆ. ಇದೇ ರೀತಿ ಗ್ರಾನೈಟ್ ಶಿಲೆಯನ್ನು ಹೆಚ್ಚಿನ ರೀತಿಯಲ್ಲಿ ಕಟ್ಟಡಗಳಿಗೆ ಬಳಸುತ್ತಿದ್ದಾರೆ. ಬಾಣಸಂದ್ರದ ಬಳಿ ದೊರಕುವ ಸ್ಟಿಯೊಲೈಟ್ ಕಲ್ಲನ್ನು ವಿಶ್ವವಿಖ್ಯಾತವಾದ ಮೈಸೂರು ಅರಮನೆಯನ್ನು ಮತ್ತು ಟೀಪೂ ಸುಲ್ತಾನನ ಗೋರಿಯ ನಿರ್ಮಾಣಕ್ಕಾಗಿ ಉಪಯೋಗಿಸಲಾಗಿದೆ. ಇದೇ ಅಲ್ಲದೆ ಈ ಜಿಲ್ಲೆಯ ಚಿಕ್ಕನಾಯಕನಹಳ್ಳಿ ಡೋಲಮೈಟ್ ಶಿಲೆಯನ್ನು ಕುದುರೆ ಕಣಿವೆಯಲ್ಲಿ ಶಿಸ್ಟ್ ಕಲ್ಲುಗಳನ್ನು ಮತ್ತು ಸ್ವಲ್ಪ ಮಟ್ಟಿಗೆ ಕ್ವಾರ್ಟ್ಸ್, ಪೆಲ್ಸಪಾರ್ ಮತ್ತು ಕೊರಂಡಂ(Semi precious stone) ಇಲ್ಲಿನ ನೀಸ್ ಮತ್ತು ಗ್ರಾನೈಟ್ ಶಿಲೆಯಿಂದ ಹೊರ ತೆಗೆಯಲಾಗುತ್ತಿದೆ.

- ಪ್ರೊ.ಟಿ.ಸಿ.ದೇವರಾಜು

# ಅನುಬಂಧ-೨

## ಬೂದಿ ದಿಬ್ಬ

ದಕ್ಷಿಣ ಭಾರತದ ನೂತನ ಶಿಲಾಯುಗ ಸಂಸ್ಕೃತಿಯ ವಿಶಿಷ್ಟ ಪ್ರಾದೇಶಿಕ ಲಕ್ಷಣ ಬೂದಿ ದಿಬ್ಬಗಳು. ಅತ್ಯಂತ ಸುಸ್ಥಿತಿಯಲ್ಲಿದ್ದಾಗ ಈ ಬೂದಿ ದಿಬ್ಬಗಳು ಸುಮಾರು ೫ ಮೀ. ವ್ಯಾಸ ಮತ್ತು ೪ ಮೀ. ಎತ್ತರವಿದ್ದು ಬಹುತೇಕ ವರ್ತುಲಾ-ಕಾರದಲ್ಲಿರುತ್ತವೆ. ಬೂದಿ ದಿಬ್ಬಗಳು ಘನರೂಪ ಹೊಂದಿ ಗಟ್ಟಿಯಾದ ಕಲ್ಲಿನಹಾಗಿದ್ದರೂ ರಂಧ್ರಗಳಿಂದ ಕೂಡಿದ್ದು ಹೆಚ್ಚು ಭಾರವಿಲ್ಲದ ಬೂದಿಯ ದಪ್ಪ ಅನಿರ್ದಿಷ್ಟ ಆಕಾರದ ಗಟ್ಟಿಗಳಿಂದ ಕೂಡಿರುತ್ತವೆ. ಇಂತಹ ಬೂದಿ ದಿಬ್ಬಗಳು ಕೃಷ್ಣಾ ನದಿಯ ಹಾಗೂ ಅದರ ಉಪನದಿಗಳಾದ ಭೀಮಾ, ತುಂಗಭದ್ರಾ, ಘಟಪ್ರಭಾ, ಮಲಪ್ರಭಾ, ಪೆನ್ನಾರ್ ಹಾಗೂ ಹಗರಿ ನದೀ ಪಾತ್ರಗಳಲ್ಲಿನ ನೂತನ ಶಿಲಾಯುಗ ಸಂಸ್ಕೃತಿ ನೆಲೆಗಳಲ್ಲಿ ವಿಶೇಷವಾಗಿ ಕಂಡುಬರುತ್ತವೆ. ಇದುವರೆಗೆ ಕರ್ನಾಟಕದ ಗುಲ್ಬರ್ಗ, ಬಿಜಾಪುರ, ರಾಯಚೂರು, ಬೆಳಗಾಂ, ಜಿಲ್ಲೆಗಳಲ್ಲಿ ವಿಶೇಷವಾಗಿ ಹಾಗೂ ಚಿತ್ರದುರ್ಗ, ಬಳ್ಳಾರಿ, ಜಿಲ್ಲೆಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಮತ್ತು ಮುಖ್ಯವಾಗಿ ಆಂಧ್ರ ಪ್ರದೇಶದ ಅನಂತಪುರ, ಮಹಬೂಬ್‌ನಗರ ಮತ್ತು ಕರ್ನೂಲ್ ಜಿಲ್ಲೆಗಳಲ್ಲಿ ಬೆಳಕಿಗೆ ಬಂದಿವೆ. ಇದುವರೆಗೆ ಸಂಶೋಧಿಸಲಾದ ಒಟ್ಟಾರೆ ೧೫೦ ಕ್ಕೂ ಹೆಚ್ಚಿನ ಬೂದಿ ದಿಬ್ಬಗಳಲ್ಲಿ ಬಹುಪಾಲು ಕೃಷ್ಣಾ-ತುಂಗಭದ್ರಾ ನದಿಗಳ ನಡುವಣ ಪ್ರದೇಶದಲ್ಲಿ ಶೋಧಿಸಲಾಗಿದೆ.

ಈ ಘನರೂಪದ ಬೂದಿಗಟ್ಟಿಗಳ ಜೊತೆಯಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಕೆಲವು ನೆಲೆಗಳಲ್ಲಿ ನೂತನ ಶಿಲಾಯುಗದ ಮೃತ್ ಪಾತ್ರೆಗಳೂ, ಇನ್ನೂ ಕೆಲವುದರಲ್ಲಿ ಬೃಹತ್ ಶಿಲಾಯುಗದ ಹೆಚ್ಚಾಗಿ ಸುಟ್ಟು ಕರಕಾದ ಮಣ್ಣಿನ ಪಾತ್ರೆ-ಗಳ ಚೂರುಗಳೂ ದೊರೆತಿವೆ. ಈ ದಿಬ್ಬಗಳು ರೂಪುಗೊಂಡ ಬಗೆ, ಉದ್ದೇಶ, ಕಾಲಮಾನ ಮುಂತಾದವು ಇಂದಿಗೂ ನಿರ್ದಿ-ಷ್ಟವಾಗಿ ವಿವರಿಸಲಾಗದೆ. ವಿದ್ವಾಂಸರಲ್ಲಿ ಬಹಳಷ್ಟು ಭಿನ್ನಾಭಿಪ್ರಾಯಗಳಿವೆ. ಹಾಗಿದ್ದರೂ ಈ ದಿಬ್ಬಗಳು ದೀರ್ಘಕಾಲ ಒಟ್ಟುಗೂಡಿಸಿದ ದನಗಳ ಸಗಣಿಯನ್ನು ವಿಶೇಷ ಸಂದರ್ಭಗಳಲ್ಲಿ ಸುಮಾರು ೬೦೦ ರಿಂದ ೧೨೫೦° ಸೆಂಟಿಗ್ರೇಡ್‌ಗಳಷ್ಟು ಹೆಚ್ಚಿನ ತಾಪಮಾನದಲ್ಲಿ ನಿಧಾನವಾಗಿ ಉರಿದು ಒತ್ತಡದಿಂದ ಘನರೂಪ ತಳೆದು ಉಂಟಾಗಿರುವುದೆಂದು ಅಭಿಪ್ರಾಯ ಪಡಲಾಗಿದೆ. ಸಾಮಾನ್ಯ ಅಭಿಪ್ರಾಯದಂತೆ ಇವು ವಾಲಿ, ರಾವಣ, ಹಿಡಿಂಬಾಸುರ ಮುಂತಾದ ಪೌರಾಣಿಕ ನಾಯಕರ ಶವ ಸಂಸ್ಕಾರದಿಂದ ರೂಪುಗೊಂಡ ಬೂದಿದಿಬ್ಬಗಳು(ಸುಂದರ:೧೯೬೨).

ಸ್ಥಳ ಪರಿಶೋಧನೆಯಿಂದ ಮತ್ತು ಉತ್ಖನನಗಳಿಂದ ಬೆಳಕಿಗೆ ಬಂದಿರುವ ಮಾಹಿತಿಯನ್ನಾಧರಿಸಿ ಹೆಚ್ಚಿನ ವಿದ್ವಾಂಸರು ಈ ದಿಬ್ಬಗಳು ನೂತನ ಶಿಲಾಯುಗ ಸಂದರ್ಭದಲ್ಲಿ ರೂಪಿತವಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಪಾಲಪಾಯ್ ನಲ್ಲಿ ನಡೆದ ಉತ್ಖನನದಲ್ಲಿ ದೊರೆತ ಮಾಹಿತಿಯನ್ನಾಧರಿಸಿ, ರಾಮಿರೆಡ್ಡಿ (೧೯೭೬) ಯವರು ಈ ದಿಬ್ಬಗಳು ಬೃಹತ್ ಶಿಲಾಯುಗದ ಜನರು ಕಬ್ಬಿಣವನ್ನು ಉತ್ಪಾದಿಸುವ ಕಾಲದಲ್ಲಿ ಉಂಟಾಗಿರಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ. ಇತ್ತೀಚೆಗೆ ಸುಂದರ (೧೯೮೭:೩೧೩-೩೨೫) ಅವರು ಇದುವರೆಗೆ ಬೆಳಕಿಗೆ ಬಂದಿರುವ ಸುಮಾರು ಎಲ್ಲಾ ಬೂದಿ ದಿಬ್ಬ ನೆಲೆಗಳ ಸಮಗ್ರ ಹಾಗೂ ತುಲನಾತ್ಮಕ ಪರಿಶೀಲನೆ ನಡೆಸಿ ಇವು ನೂತನ ಶಿಲಾಯುಗದ ಅನಂತರ ತಾಮ್ರ ಶಿಲಾಯುಗದ ಕಾಲದಲ್ಲಿ ಆ ಸಂಸ್ಕೃತಿಯ ಕೆಲವು ವಿಶಿಷ್ಟ ಧಾರ್ಮಿಕ ಆಚರಣೆಗಳ ಫಲವಾಗಿ ಉಂಟಾಗಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ.

ಪ್ರಸ್ತುತ ಸ್ಥಳ ಪರಿಶೋಧನೆಯ ಕ್ಷೇತ್ರದಲ್ಲಿ ಒಟ್ಟು ಮೂರು ಬೂದಿ ದಿಬ್ಬಗಳಿವೆ. ಇವು ಪಾವಗಡ ತಾಲ್ಲೂಕಿನ ನಾಗಲಾಪುರ, ಯಲ್ಲಪ್ಪನಾಯಕನಹಳ್ಳಿ ಮತ್ತು ಯಲ್ಲಪ್ಪನಾಯಕನಹೊಸಕೋಟೆ ಗಳಲ್ಲಿದ್ದು, ಪೆನ್ನಾರ್ ನದೀ ಪಾತ್ರದಲ್ಲಿವೆ. ನಾಗಲಾಪುರದ ಬೂದಿದಿಬ್ಬವನ್ನು ರಾಮಿರೆಡ್ಡಿಯವರು (೧೯೭೮:೩೧) ಶೋಧಿಸಿರುವರು. ಉಳಿದೆರಡು ನಿವೇಶನಗಳು ಪ್ರಸ್ತುತ ಸ್ಥಳ ಪರಿಶೋಧನೆಯ ಸಮಯದಲ್ಲಿ ಬೆಳಕಿಗೆ ಬಂದಿವೆ.

ಯಲ್ಲಪ್ಪನಾಯಕನಹಳ್ಳಿಯಲ್ಲಿ ಬೂದಿ ದಿಬ್ಬದ ಅವಶೇಷ ದೊರೆತಿದ್ದು ಕೃಷಿ ಭೂಮಿಯನ್ನಾಗಿ ಪರಿವರ್ತಿಸು-ವಾಗ ಬೂದಿಯ ಅವಶೇಷವನ್ನು ಸಂಪೂರ್ಣ ತೆಗೆದು ಹಾಕಲಾಗಿದೆ. ಹಾಗಾಗಿ ಯಾವುದೇ ವಿವರ ದೊರಕುವುದಿಲ್ಲ. ತೆಗೆದು ಹಾಕಲಾಗಿರುವ ಮಧ್ಯಮ ಗಾತ್ರದ ಬೂದಿಯ ಗಟ್ಟಿಗಳು ಹೊಲದ ಬದುವಿನಲ್ಲಿ ದೊರಕುತ್ತವೆ.

ಯಲ್ಲಪ್ಪನಾಯಕನಹೊಸಕೋಟೆಯಲ್ಲಿಯೂ ಒಂದು ಬೂದಿ ದಿಬ್ಬವಿದ್ದ ಕುರುಹುಗಳನ್ನು ಗುರುತಿಸಬಹುದು. ಈ ನೆಲೆಯಲ್ಲಿಯೂ ಬೂದಿಯ ಗಟ್ಟಿಗಳು ಕಂಡು ಬರುತ್ತವೆ. ಈ ಬಗ್ಗೆ ಮತ್ತಾವುದೇ ಹೆಚ್ಚಿನ ಅವಶೇಷ ಲಭ್ಯವಿಲ್ಲ.

ಈ ಎರಡೂ ನೆಲೆಗಳಲ್ಲಿ ನೂತನ ಶಿಲಾಯುಗ ಸಂಸ್ಕೃತಿಯ ಅವಶೇಷಗಳೊಂದಿಗೆ ಬೃಹತ್ ಶಿಲಾಯುಗದ ಮತ್ತು ಇತಿಹಾಸ ಆರಂಭ ಕಾಲದ ಅವಶೇಷಗಳೂ ದೊರೆತಿವೆ.

# ಆಧಾರ ಗ್ರಂಥಗಳು


ಕೃಷ್ಣ.ಎಮ್.ಎಚ್. ೧೯೫೩, *ಕರ್ನಾಟಕದ ಪೂರ್ವ ಚರಿತ್ರೆ*, ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ.

ಕೃಷ್ಣರಾವ್.ಎಂ.ವಿ ಮತ್ತು ಕೇಶವ.ಭಟ್ಟ.ಎಂ ೧೯೭೦, *ಕರ್ನಾಟಕ ಇತಿಹಾಸ ದರ್ಶನ*, ಬೆಂಗಳೂರು.

ಗುರುರಾಜ ರಾವ್.ಬಿ.ಕೆ ೧೯೭೦, ಕರ್ನಾಟಕದ ಶಿಲಾಯುಗ ಸಂಸ್ಕೃತಿಗಳು, ಪ್ರಚಾರ ಪುಸ್ತಕ ಮಾಲೆ- ೧೭೨ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು,

೧೯೭೧ *ಕರ್ನಾಟಕದ ಲೋಹಯುಗ* ಸಂಸ್ಕೃತಿಗಳು ಪ್ರಚಾರ ಪುಸ್ತಕಮಾಲೆ - ೧೮೧ ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು.

೧೯೭೨, ಭಾರತದ *ಆದಿ ಶಿಲಾಯುಗ*, ಡಿ.ವಿ.ಕೆ. ಮೂರ್ತಿ, ಮೈಸೂರು, ವಿ.ವಿ. ಮೈಸೂರು.

ಗೋಪಾಲ್.ಬಾ.ರಾ. ೧೯೮೭, *ಕರ್ನಾಟಕದಲ್ಲಿ ನವ ಶಿಲಾಯುಗ*, ಉಪನ್ಯಾಸ ಗ್ರಂಥಮಾಲೆ-೧೨೩ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಚಿದಾನಂದಮೂರ್ತಿ.ಎಂ ೧೯೭೯, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕ್ರಿ.ಶ. ೪೫೦-ಕ್ರಿ.ಶ. ೧೧೫೦*, ಪ್ರಸಾರಾಂಗ, ಮೈಸೂರು ವಿ.ವಿ. ಮೈಸೂರು,

ಜಯರಾಮಯ್ಯ.ಜೆ.ಟಿ, ನಿರ್ಮಲ.ವೈ ಮತ್ತು ಸವಿತಾ.ಇ.ಆರ್ ೧೯೯೭, "ಅರೇಹಳ್ಳಿ ಮತ್ತು ಕೂನ ಮುದ್ದನಹಳ್ಳಿಯ ಕೇಂದ್ರ ಬೃಹತ್ ಶಿಲಾಯುಗದ ಶಿಲಾ ಗೋರಿಗಳು - ಹೊಸ ಶೋಧನೆ", *ಇತಿಹಾಸ ದರ್ಶನ - ೧೨* ಕರ್ನಾಟಕ ಇತಿಹಾಸ ಅಕಾದೆಮಿ (ರಿ) ಬೆಂಗಳೂರು, ೧೮-೧೯,

ನರಸಿಂಹಮೂರ್ತಿ.ಎ.ವಿ ೧೯೭೯, *ಕರ್ನಾಟಕದಲ್ಲಿ ಪುರಾತತ್ವ ಶೋಧನೆ.* ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು.

ಭಾಸ್ಕರಪ್ಪ.ಸಿ.ಎನ್.(ಸಂ) ೧೯೮೧, ತುಮಕೂರು *ಜಿಲ್ಲಾ ದರ್ಶನ ೧೯೮೧*, ಟೈಮ್ಸ್ ಪಬ್ಲಿಕೇಷನ್, ತುಮಕೂರು.

ಮುತ್ತುರಾಜು ೧೯೯೬, "ಕನಕಪುರ ತಾಲ್ಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾ ಗೋರಿಗಳು - ಹೊಸ ಶೋಧ", *ಇತಿಹಾಸ ದರ್ಶನ-೧೧*, ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಬೆಂಗಳೂರು. ೩೯-೪೩

ಲೋಕೇಶ್.ಎಂ, ಗೋಪಿ.ಪಿ ಮತ್ತು ಲೋಕೆಶ್.ಎಂ ೧೯೯೭ "ಗುತ್ತಲಹುಣಸೆ ಗ್ರಾಮದಲ್ಲಿ ಬೃಹತ್ ಶಿಲಾಯುಗದ ನೆಲೆ- ಒಂದು ಶೋಧ." *ಇತಿಹಾಸ ದರ್ಶನ-೧೧*, ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಬೆಂಗಳೂರು .೧೬-೧೭

ವಸಂತಕುಮಾರ ತಾಳ್ತಜೆ — ೧೯೮೮, ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ವಿಭಾಗದ ಪರವಾಗಿ, ವಿನಯ ಪ್ರಕಾಶನ, ಬೆಂಗಳೂರು.

ವಸಂತ ಶೆಟ್ಟಿ.ಬಿ — ೧೯೮೭, "ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೂತನ ಶಿಲಾಯುಗ", *ಇತಿಹಾಸ ದರ್ಶನ ಸಂ.೨ ಸಂಚಿಕೆ - ೧*, ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಬೆಂಗಳೂರು, ೩೪-೩೫

೧೯೯೧, "ದಕ್ಷಿಣ ಕನ್ನಡದ ಪ್ರಾಗಿತಿಹಾಸ", *ಸಂಶೋಧನ*, ಡಾ.ಎಂ.ಚಿದಾನಂದಮೂರ್ತಿ ಗೌರವ ಸಂಪುಟ. ಸಂ.ಲಕ್ಷ್ಮಣ ತೆಲಗಾವಿ, ಬೆಂಗಳೂರು. ೭೧೪-೭೧೯

ವಿರೂಪಾಕ್ಷಿ — ೧೯೯೭, "ಚಿನ್ನಹಗಿರಿ ನದಿ ಪರಿಸರದ ಪ್ರಾಚ್ಯಾವಶೇಷಗಳು; ಒಂದು ಶೋಧನೆ". *ಇತಿಹಾಸ ದರ್ಶನ - ೧೨* ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಬೆಂಗಳೂರು, ೨೦-೨೭

ಷೇಕ್ ಅಲಿ.ಬಿ (ಸಂ) — ೧೯೯೭, (ಸುಂದರ.ಅ.:ಸಂ.ಸಂ.) *ಚರಿತ್ರೆ ಮಾಲೆ-೧ ಕರ್ನಾಟಕ ಚರಿತ್ರೆ*, (ಆದಿ ಹಳೇ ಶಿಲಾಯುಗದಿಂದ - ಕ್ರಿ.ಶ. ೬೪೦), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಸ್ಮಿತಾರೆಡ್ಡಿ.ಡಿ — ೧೯೯೬, "ಆನೇಕಲ್ ತಾಲ್ಲೂಕಿನ ಮೇಲೂರು ದಿಣ್ಣೆ ಹಾಗೂ ಕಾಳನಾಯಕನ ಹಳ್ಳಿಯ ಶಿಲಾಯುಗದ ನಿವೇಶಗಳು". *ಇತಿಹಾಸ ದರ್ಶನ -೧೧*, ಕರ್ನಾಟಕದ ಇತಿಹಾಸ ಅಕಾದೆಮಿ(ರಿ) ಬೆಂಗಳೂರು, ೨೩-೨೫

ಸುಂದರ.ಅ — ೧೯೯೪, *ಕರ್ನಾಟಕ ಪ್ರಾಗಿತಿಹಾಸಕಾಲದ ಕಲೆ*. ಪ್ರಧಾನ ಸಂಪಾದಕರು, ಪಿ.ಆರ್. ತಿಪ್ಪೇಸ್ವಾಮಿ, ಕರ್ನಾಟಕ ಲಲಿತಕಲಾ ಅಕಾಡಮಿ ಬೆಂಗಳೂರು.

೧೯೭೩. *ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ*, ಐ.ಬಿ.ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು.

೧೯೭೧, *ಇತಿಹಾಸ ಪೂರ್ವ ಕರ್ನಾಟಕ ಅಥವಾ ಕರ್ನಾಟಕದ ಪ್ರಾಗೈತಿಹಾಸ*. ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೯೯೨ "ಹಿಡಿಂಬ ಪಟ್ಟಣ; ಒಂದು ವಿಮರ್ಶಾತ್ಮಕ ಟಿಪ್ಪಣಿ" , "*ಇತಿಹಾಸ ದರ್ಶನ ಸಂ-೭*, ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಬೆಂಗಳೂರು, ೮೧-೮೬

ಸೋಮಶೇಖರ.ಎಸ್.ವೈ — ೧೯೯೬ "ಚಿತ್ರದುರ್ಗ ತಾಲ್ಲೂಕು ಚಿಪ್ಪಿನಕೆರೆಯಲ್ಲಿ ಕಂಡು ಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು". *ಇತಿಹಾಸ ದರ್ಶನ - ೧೧*, ಕರ್ನಾಟಕ ಇತಿಹಾಸ ಅಕಾದೆಮಿ(ರಿ) ಬೆಂಗಳೂರು. ೩೨-೩೩

ಶ್ರೀನಿವಾಸ.ವಿ.ಪಾಡಿಗಾರ — ೧೯೯೭ *ಪುರಾತತ್ವ ಪರಿಚಯ* ರಾಮಾಶ್ರಮ ಪಬ್ಲಿಕೇಶನ್ಸ್, ಧಾರವಾಡ.

Abhishankar.K (Ed) 1969 Mysore State Gazetteer: Tumkur Dist. Government of Karnataka, Bangalore

Agarwal.D.P 1982 The Archaeology of India, London

Agarwal.D.P& Sheela Kusumgar 1974 Prehistoric Chronology and Radio Carbon Dating in India Munshiram Manoharlal, New Delhi.

Aiyyappan.A 1941 "Rude Stone Monuments of the Perumal Hills-Kodaikanal Q.J.M.S. Vol.XXXI, Bangalore 373-379.

Allchin.B.Mrs. 1952 "A study of Some Palaeolithic Artifacts from South India" Current Science-21, No.10, Oct.1952, Bangalore 268-271.

1960 Piklihal Excavations, Andhra Pradesh Government Archaeological Series No.1, Hyderabad.

Allchin B. & Allchin F.R 1968, The Birth of Indian Civilization, Harmonds Worth Middlesex, London.

1989 The Rise of Civilization in India and Pakistan, select book service Syndicate, New Delhi.

Allchin.B, K.T.M.Hegde & A.Goudie 1972, " Prehistory and environmental change in Western India; A note on Budha Pushkar, Rajastan", Man 7/4, Royal Anthropological Institute of Great Britan & Ireland, London, 541-564

Allchin.F.R., 1961, Utnur Excavations, The Government of Andhra Pradesh, Hyderabad.

Ansari.Z.D. 1970, "Pebble Tools from Nittur (Mysore State)" Indian Antiquary, Vol.4, Nos. 1-4, 1-7 Archaeology Vol.V, No.1, 92-110,

Ansari.Z.D. & Nagaraja Rao.M.S. 1969, Excavations at Sanganakal (1964-65) Deccan College Poona, Pune.

Babington 1823, "Discription of the Pandoo Coolies in Malbar" Transactions of the Literay Society of Bombay, Vol.III 324-30

Badam G.L. 1979 Pleistocene Fauna of India, Poona.

Balasubramanayam.K(Ed), 1970, "Geographical Feature (Tumkur Dist.) "Dist.Census Handbook Tumkur Dist.

Banerjee.K.D 1954-55, "Amrithamangalam, Dist.Chengleput" , I.A.R. , A.S.I. New Delhi, 20-21

1957, Middle Palaeolithic Industries of the Deccan, (unpublished Ph.D. Thesis, University of Poona, Pune.

Banerjee.K.D & Soundara Rajan.K.V 1950-53, "Sonur, 1950 and 52; A megalithic site in Distict Chingleput. Ancient India". No.15 A.S.I. New Delhi, 4-42

Basavaraja.K.R 1984, History and Culture of Karnataka

Bhattsuri 1990, "A Neolithic Axe from Anmod - A Note", Archaeology in Karnataka Seminar on Archaeology, 1985, (Ed.Sundara.A), Directorate of Archaeology and Museums in Karnataka, Mysore 81-84

Boswell 1872 "On the ancient Remains in the Krishna district" I.A. Vol.I. 150-51

Branfill 1881 "On the savandurga Rude stone Cementery - Central Mysore" I.A. Vol.X. 1-12, 97-100.

Breeks.J.W 1837, An Account of the primitive tribes and monuments of the Nilgiris. London.

Burgess.J 1874, "The Dolmens at Konur and Aihole" I.A Vol.III 306-38

Burkitt.M.C 1977, The Old Stone Age, 4th Edition, 1977, New Delhi.

Burkitt.M.C & Commiade.L.A 1930, "Fresh light on the stone ages in S.E.India" Antiquity, Vol.IV, London

Caldwell.R 1887, "Sepulchral urns in South India", I.A.Vol.VI 279-80

Carlleyle A.C.L. 1887, Report of the year 1871-72; R.A.S.I. Vol.IV Agra.

Carvinus-Karwe.G 1967, "An Acheulian Occupation floor at Chirki on Pravara, India" Current Science. 9, 216-218

1970 "A Report on the 1968-69 excavations at Chirki-on-Pravara India". Quaternaria XIII 169-176

1970, The Acheuiian Workshop at Chirki on the Pravara river, Maharashtra, Indian Antiquary Vol.IV. No.1-4 13-22

Chopra, P.N. (Ed) 1981, India. Pre-Historic and Proto Historic Period, Publications Division Ministry of Information and Broadcasting Govt. of India, New Delhi.

Cockburn.J 1894, "On Flint Implements from Kon Ravines of South Mirzapur", J.A.S.B. Vol.LXIII Pt.III 21.

Cole R.A 1868, "On the Cromlechs in Coorg", P.A.S.B. 151-75

1868, "On the Discovery of Cromlechs in Coorg" P.A.S.B. 243-45

1869, "Cromlechs in the vicinity of Veerarajendrapett", P.A.S.B.

1873, "Cromlechs in Mysore", I.A. Vol.X; 86-88

Cunningham.A 1873-74, "A Tour in the Central provinces in 1873-74 and 1874-75", R.A.S.I. Vol.IX. 140-41

Dalton.E.T 1873 "Rude stone monuments in Chutia Nagpur" P.A.S.B. 130-32

Dasgupta.P.C 1964, The Excavations at Pandurajardhibi. Calcutta

Deo S.B. & Dhavalikar M.K 1968, Paunar Excavations (1967), Nagpur University, Nagpur

Deo.S.B 1970, Excavation at Takkalghat and Khappa, Nagpur,

1973, Problem of South Indian Megaliths, K.R.I.K.U. Dharwad.

1973, Mahurijhari Excavations, 1970-2, Nagpur.

Deo.S.B. & Paddayya.K (Eds) 1985, Recent Advances in Indian Archaeology. (Proceedings of the Seminar held in Poona in 1983) pub. Deccan College P.G. & R.I. Pune.

Desai.P.B, Ritti.S.H & Gopal.B.R, 1970, A history of Karnataka, (From Pre-history to unification), K.R.I. Karnataka University, Dharwad.

Desikan,V.N.S 1957-58 to 1962-63 " Exploration in District Coimbatore" 38, 71, 18, 26, 31 respectively.

Deterra.H & Patterson.T.T 1939, Studies on the Ice Age in India and associated human cultures, Washington D.C.

Devaraj D.V,
Jim G.Shaffer, C.S.Patil
& Balasubamanya, 1995 " The Watgal excavations: an Interim Report", man and Environment Vol. No.2, 1995 (July Dec) I.S.P.Q.S Eds V.N.Mishra Statira Wadia, Pune 57-74

Devaraj.D.V. Patil.C.S.
Joshi N.V.
& Gangadhara T.S 1996, Heggadehalli: A Report on Megalithic Excavation:1995 D.A & M Mysore.

Devaraj D.V. &
Talvar H.T. 1996 Interim Report on the Excavations at Sannati, 1993-95. D.A.& M. Mysore.

Dikshit, M.G 1968, Excavations at Kaundinyapura, Bombay

Diwakar.R.R (Ed.) 1968, Karnataka Through the Ages, Government of Karnataka, Bangalore. Eds. V.N.Mishra, Statira Wadia, Pune 57-74.

Foote.R.B 1916, The Foote Collection of Indian Pre-historic and Protohistoric Antiquities, Notes on their ages and Distribution, Govt. Museum, Chennai (Madras)

Ghosh.A.K 1970 "A Palaeolathic Cultures of Singhbhum T.A.P.S New series Vol LX. Part I, Philadelphia.

Gopal.B.R 1985, Corpus of Kadamba Inscriptions Vol. I., Kadamba Institute of Cultural Studies, Sirsi.

Gorden Childe 1938, "The Microlithic Industries of India". Man 38 (19)

Gosh.A.(Ed) 1989, An Encyclopaedia of Indian Archaeology, 2 Vols. Pub. Munshiram Manoharlal, New Delhi.

Gupta.C.S 1982, "Megalithic cultures of Dakshina Kosala", Indian Archaeology-New Perspective. New Delhi, 264-67

Gurumurthy.S 1985, Ceramic Traditions in South India. University of Madras. Chennai.

Gururaja Rao.B.K
& Shivarudrappa T.V 1980, "Geo-archaeological exploration around Kibbana Halli". Project Report. University of Mysore, Mysore.

Gururaja Rao.B.K 1971, Megalithic Culture in South India, Prasaranga University of Mysore. Mysore.

Gururaja Rao.B.K 1990, " A Note on the Lower and Middle Palaeolithic Industries of Southern Karnataka" Archaeology in Karnataka (Ed: A.Sundra) D.A & M. in Karnataka, Mysore

Haimendorf.C 1943, "Megalithic ritual among the Gadabas and Bondos of Orissa", J.A.S.I. Vol.IX 149-87.

Hanumantha Rao.M & Nagaraju.S 1974, Excavations at Hemmige, 1964 D.A.& M. in Karnataka, Mysore

Hawell.J.R 1995, Excavations at Sannati (1986-1989) Memoris of the A.S.I. No.93, New Delhi.

Hayavadana Rao.C 1943-46, History of Mysore ( 3 Vols Bangalore)

Hunt 1916, "Hydrabad Cairns", Journal of the Hydrabad Archaeological Society, 180-223

Huntur 1935-37, "Excavation at Mahadeo Hills, pachmarhi", Nagpur University Journal Nos 1-2. 131 and 137

Hutton J.H 1923, "Carved Monoliths at Jamuguri in Assam" J.R.A.J. Vol.LIII, 150-59.

Issac.N 1960, The Stone Age Cultures of Karnool (Unpublished Ph.D. Thesis, Deccan College Library, Pune.

Jim.G.Shaffer 1992, Archaeological Research at Watgal, Raichur District, Karnataka, A report on the 1991-92 activities, Department of Anthropology case Western Reserve University, Cleveland Ohio. USA.

John K.J 1985, "The Megalithic culture of Kerala", Recent Advances in Indo-Pecific Prehistory, 485-89, New Delhi.

Joshi & Bopardikar 1972, "Stone Age Cultures of Konkan", Archaeological congress and Seminar Papers, Nagpur 47-51.

Joshi.J.P 1971-72, "Excavations at Surkotada", I.A.R. 1971-72, New Delhi 13-21.

Joshi.R.V — 1955, Pleistocene Studies in the Malaprabha Basin, Karnataka University, Publications No-1, Dharwad.

1978, Stone Age Cultures of Central India. Report on the Excavations of the Rock shelters of Adamgarh; Madhya Pradesh, poona.

1978, "Middle Stone Age in Karnataka" Archaeology of Karnataka (Ed; A.V.Narsimha Murthy) Prasaranga, University of Mysore, Mysore.

Kamath, Suryanath.U — 1982, Karnataka State Gazetteer Part I and II, Bangalore.

Kambale.H.S — 1996, Archaeology of the Upper-Krishna Region. (Belgaum District) Some Aspects. Un Published Thesis Karnataka University, Dharwad.

Korisettar.R. — 1979, Prehistory and Geomorphology of Middle Krishna, Karnataka Un Published Ph.D. Thesis, university of poona, Pune.

Korisehar.R, Kajale.H.D, Rajaguru.S.N, & Paddayya.K — 1979 " On the occurance of plant fossils along with middle palaeolithic tools at wajjal district. Gulbarga, Karnataka" BDCRI Vol 36, Pune.

Krishna M.H — 1931, Excavation at Chandravalli. Supplement to the annual Report of Mysore Archaeological Dept. for the year 1929. Directorate of Archaeology & Museums in Karnataka Mysore.

1943 "Cromlechs of Bettadapura" A.R.M.A.D Mysore.

Krishna Murthy.C — 1971, "The Neolithic Cultural Remains in the Kaveri Valley, Mysore Dist", Studeies in Indian History and Culture. Eds: Srinivasa Ritti, B.R.Gopal, Prof. P.B.Desai, Feciliatation Committee, Karnataka University Dharwad, 4-12

1978, "Recent Discovery in South Karnataka", Archaeology of Karnataka, (Ed. A.V.Narasimha Murthy), Prasaranga, University of Mysore, Mysore

Krishna Sastry.V.V — 1983 The Proto and early Historical Cultures of Andhra pradesh, Govt of Andhra pradesh Hyderabad

Krishna Swami.V.D 1947, "Stone Age in India", A.I Vol.No.3, A.S.I, New Delhi :11-57

1949, "Megalithic Types of south India", A.I. No.5, A.S.I. New Delhi.

1960, "The Neolithic Pattern of India" A.I No16 A.S.I.New Delhi.

Krishnaswamy.V.D & Soundararajan.K.V 1951, "The Lithic Tools Industries of the Cingrauli basin, Dist. Mirzapur", A.I.No.7, A.S.I New Delhi. 40-45

Krishnaswamy.V.D & Saran.B 1955-56 "Excavations at Kunnattur. Dist Chingleput", I.A.R. 1955-56, 23

Lal. B.B 1956, "Palaeoliths from Beas and Banaganga Valley", A.I. No.12, A.S.I. New Delhi. 58-92

1958, "Birbhanpur a Microlithic site in the Damodar Valley, West Bengal", A.I No.14 A.S.I. New Delhi. 4-48

1998 India 1947-1997; New Light on The Indus Civilization Aryan Books International, New Delhi.

Longhurst.A.I 1912-13, "The cinder Mound at Kudeithini in Bellary Dist", Annual Report of the A.S.I. 1912-13, New Delhi.

Mahalingam.T.V 1970 Report on the Excavations in the Lower Kaveri Valley (Tirukkampuliyur and Alagarai) (1962-1964) University of Madras (Madras) Chennai

1978, "Studies in south Indian Archaeology, Epigraphy, Architecture and Sculpture", Transactions of the Archaeological Society of south India. Madras.

Majumdar, G.G, Rajaguru, & Sharad Narahar 1966, Ash Mound Excavations at Kupgal. D.C.P.G & R.I. Pune-6

Malik.S.C 1959, Stone Age Industries of the Bombay and Satara Districts. M.S. University Archaeological Series, No.4., Baroda.

1966, "The Late Stone Age Industries from Excavated Site in Gujarath, India", Art As. Vol. XXVIII. ;162-64.

Mamatha Pawar 1998 Archaeology of the Satavahana sites in Karnataka M.Phil. Dissertation, Karnataka University, Dharwad.

Meckenzie.J.S.F 1973, "On the rude stone archaeology of Hassan District, Maisur", I.A11; 7-11

Mehta. R.N. &
George K.M 1978, Megaliths at Machad and Pazhyannur.Talppally Taluka Tirchur District, Kerala State. (A report of the excavations conducted from 18th April to 12th May 1974) Department of Archaeology & Ancient History,
M.S.University of Baroda, Vadodara.

Mishra.V.N 1973, "A Late Mesolithic settlement in North-west India", World

Murali.M., 1993 The Megalithic Culture of Andhra Pradesh - A study (with special reference to Ananthpur District) Ph.D.,
Thesis Sri Krishnadevaraya University, 77-201.

Murthy.M.L.K 1966, Stone Age Cultures of chittor District, Andhra Pradesh, (Unpublished Thesis), Deccan College Library, pune.

1970, "Blade and burin" and Late Stone Age industries around Renigunta, Chittoor district, Studies in Indian Archaeology: Sankalia Felicitation Volume. Eds; Deo S.B. and Dhavalikar M.K., Bombay 106-126

1974, "A Late Pleistocene cave site in southern India", Proceedings of the American Philosophical Society,
118 No.2 196-230.

1979, "Recent research on the upper Paleolithic Phase in India", Journal of field Archaeology, Vol.6. 302-20

Nagaraja Rao.M.S 1963, "Archaeological Remains of Dharwar District A Review", Journal of the Asiatic Society of Bombay, Vol38, 154-164.

1964, "Recent Explorations in the Tungabhadra Valley: The Chalcolithic phase", Bulletin of the
Deccan College Research Institute, Vol.XXIII Pune. 55-67

1966, Chalcolithic Culture of the Deccan with special reference to North karnataka. (Unpublished Ph.D. thesis),
Poona University, Pune.

1971, Proto historic cultures of Tungabhadra Valley (Report on Hallur Excavations) Dharwar.

Nagaraja Rao.M.S 1978, Progress of Archaeology in karnataka, 1956-72, D.A & M in Karnataka, Mysore.

1981, "Warliest Iron using people; in India and; Megaliths" Madhu-Recent Researches in Indian Archaeology and Art History (Ed. M.S.Nagaraja Rao) Agam Kala prakashan, New Delhi 25-32.

1990 "Graves of the Early using pespleat Komaranahalli : Recent Evidence". Archaeology in Karnataka Ed. Sundara.A, D.A. & M. Mysore 31-320

Nagaraja Rao M.S. & Malhotra K.C 1965, Stone Age Hill Dwellers of Tekkala Kota, Deccan College, P.G. and R.I. Poona.

Nagaraja Rao.M.S. & Ansari.Z.D. 1969, Excavation at Sanganakallu, 1964-65 Poona.

Nagaraja Rao.M.S & Ramesh.K.V 1985 Copper Plate Inscrerptions from Karnataka Recent Discoveries (centenary publication no-2) D.A. & M Mysore 70-78

Nagaraju.S. 1971, "Middle and Late Stone Age industries of the Amarja Valley, Gulbarga Dist. Mysore State", Prof. K.A.Nilakanta Sastry Felicitation volume, (Madras) Chennai.

Nanda.S.C 1985, "The Mesolithic cultures of the Indravati Valley, Dist. Koraput, Orissa," Recent Advances in Indo-Pacific Prehistory. New Delhi.

Narasimhaiah.B 1980, Neolithic and Megalithic cultures in Tamilnadu. Sundeep Prakashan, Delhi.

Narasimhamurthy.A.V 1977, " Excavations at Koppa", Archaeological Studies Vol.II 124 of Mysore.(Ed)

1978, Archaeology of Karnataka, University of Mysore, Mysore.

Nilakantasastri.K.A(Ed.), 1958, Epigraphia Carnataica vol XVI, supplementary inscriptions of Tumkur distirict. Mysore.

Paddayya.K — 1968, Pre and Proto historical investigations; in Shorapur doab. Unpublished Ph.D.Thesis Poona University and Deccan College Libraries Pune.

1970, "The Blade tool Industry of shorapur Doab. Peninsular India", I.A Vol.IV. 165-190

1973, "Investigations into the neolithic culture of Shorapur Doab, south India", Studies on South Asian Culture Vol.III (Eds.J.E.Van Lahulizen, E.J.Brill) Lieden.

1982 The Acheulian Culture of the Hunsgi Valley (Peninsular India), A Settlement system perspective, P.G. and R.I. Pune.

1993, "Ashmound Investigations at Budihal. Gulbarga district, Karnataka", Man and Environment, vol.XXVIII No.1 1993 (Jan-June) Eds. V.N.Misra, Statira Wadia Pune 57-87.

Panchamukhi.R.S — 1953, Archaeology of Karnataka, K.R.I. Karnataka University, Dharwar.

Pappu.R.S — 1974, Pleistocene Studies in the ;upper Krishna Basin, P.G. & R.I Pune

Pappu.R.S, Sushma.G & Deo.S.B — 1994 Man-Hand Relations During Paleolithic Times in Kaladgi Basin Karnataka, R.G & R.I Pune

Poonacha.K.P — 1990, Archaeology of Malnad Region, Comprising the districts of Hassan Chikmagalur and shimoga; with special reference to pre and proto History. (Un published thesis) Karnataka University, Dharwad.

Rajendran.P — 1983, " The Mesolithic; industries of South Kanara", B.D.C.R.I.-42 Pune 133-137

1985, "The Mesolithic Industries of North Kerala", Recent Advances in Indo Pacific Pre-History. (Eds. V.N.Mishra & Peter Bellwood) Oxford and IBH Publishing Co., New Delhi.

1989, The Pre Historic cultures and Environment. (A Case study of Kerala) Classical Publishing Company, New Delhi.

Raju.D.R — 1988, Stone Age Hunter Gatherers an ethno-Archaeology of Cuddappa region, South East India, Pune

Ramachandran.K.S — 1971, A Bibliography on indian megaliths, Department of Archaeology, Government of Tamil Nadu. Chennai.

1975. Radiocarhon Dates of Archaeological Sites in India. Govt. of Andhra Pradesh, Hydrabad.

1980, Neolithic Cultures of India (An Annotated Bibliography) Tamil Nadu State Department of Archaeology, (Madras) Chennai.

Raman.K.V — 1957-1969 "Megalithic sites discovered", I.A.R. 1957-58 to 1967-68, A.S.I. New Delhi.

1977, "Excavation at Appukallu, North Arcot District. Tamilnadu" Archaeological Studies vol.XI. Mysore. 119-121

Ramarao.B — 1961, A hand book of Geology of Mysore State. Bangalore

Ramesh K.V — 1984, Inscriptions of the Western Gangas, Delhi.

1988 "TheAsokan Inscriptions at Sannati" Biannual Journal of The Indian Council of Historical The Indian Historical Review vol XIV No 1-2, 36-42

Rami Reddy.V — 1976, Pre-historic and Proto historic cultures of palavoy South India; with special reference to the Ashmound probelm. Archaeology Series-43, Dept. of Archaeology & Museums. Govt. of Andhra Pradesh. Hydrabad.

1978, A study of the Neolithic Culture of South Western Andhra Pradesh. Archaeology series-51, Dept of Archaeology & Museums, govt of Andhra Pradesh, Hydrabad.

Rao.K.P — 1988, Deccan Megaliths. Sandeep Prakashan, Delhi.

Rea Alexander — 1902-1903, "Adichanallur Excavations",A.R.A.S.M.C 11-14 1915, Catalogue of the prehistoric Antiquities from Adichanallur and Perumbiar, Govt. Press Madras ,

Reddy.K.T — 1970, "Vemula Industry in Cuddapah basin", I.A Vol.IV, 227-234.

Rice.B.L (Ed) — 1903, Epigraphia Carnatica Vol. XII, Tumkur inscriptions, Bangalore.

Rivett-Carnac.J.H — 1879 "Prehistoric Remains in Central India", J.A.S.B Vol XLVIII (I) 1-16

Roy.S.C — 1915 "A note on some Remains of the Ancient Asurs in the Ranchi district" J.B.O.R.S.

Sahni & Mahapatra — 1964, "The First Record of Small Flake tools and polished stone celts in Kangra District, East Punjab" Current Science Vol.33 178-180

Sali.S.A — 1985, "The Upper Palaeolithic culture at Patne, District Jalgaon, Maharastra", Recent Advances in Indo - Pacific Prehistory, New Delhi. 137-145.

1989, The upper Palaeolithic and Mesolithic cultures of Maharashtra, Deccan college, P.G. and R.I. Pune.

1990, Stone Age india, Shankar Publishers, Aurangabad.

Sampat Iyengar.P — 1924, "A Palaeolithic settlement and factory in the Mysore State", (Indian science congress) Indian Science Congress Association, Calcutta.

Sankalia.H.D — 1956, "Animal fossils and palaeolithic Industries from the pravara Basin in nevasa, District Ahmednagar", A.I.N.12 A.S.I. New Delhi., 35-38

1964, Stone Age tools, their techniques names and probable functoions, Deccan College, P.G. & R.I. Pune.

1965, Excavations at Langhnaj 1944-63, Part I Archaeology , Pune.

1969, Mesolithic and pre-Mesolithic industries from the Excavations at Sanganakallu, Bellary (Poona) Pune.

1974, Prehistory and protohistory in India and Pakistan Deccan College, P.G & R.I. Pune.

1977, New Archaeology its scope and application to India. Lucknow.

Sankalia.H.D, Subba Rao.B & Deo S.B — 1958, Excavations at Maheshwar and Navadatoli, 1952-53, Baroda.

Sarkar.H. — 1966, "Kesarapalle 1962", A.I No.22, A.S.I. New Delhi 37-74

| | |
|---|---|
| Seshadri.M | 1954 "Microlithic Industry of Kibbanahalli Mysore State." Current Science-23 Oct 1954, Bangalore, 326-327 |
| | 1955, "On some hand-grasp designs in palaeoliths found in Mysore" (Indian Science Congress) Indian science congress Association, Culcutta, |
| | 1956, The Stone using cultures of prehistoric and proto historic Mysore, London |
| | 1960, Report on the Jadigenahalli Megalithic Excavations for the year 1957 D.A.&M (Mysore) Karnataka |
| | 1961, "Stone Age tools from Salvadgi, Bijapur district, Mysore State, half yearly Journal vol. 22, University of Mysore, Mysore 1-5 |
| | 1961, "Exploration of sites of Russet-Coated ware with Kaolin Designs in Mysore", The half yearlyJournal of the Mysore University, Vol.XX No.2, march 1962 |
| | 1971, Report on the Excavations at T.Narasipur, D.A.&M, Mysore |
| Shadakshraiah.R.M | 1995, Pre-Historic and Early historic cultures in the Manjra and the Karania Valleys. K.R.I Karnataka University, Dharwad. |
| Shama Shastry.R. | Annual Reports of the Mysore Archaeological Department 1922-1928, Mythic Society, Bangalore. |
| Sharma.A.K | 1979, "Excavations at Gufkral" Puratattva no.11, New Delhi. 19-25 |
| Sharma.G.R | 1965, "Comments on the Mesolithic phase in the prehistory of India", Indian Prehistory (Poona)Pune. |
| | 1973, "Mesolithic lake cultures in the Ganga Valley, India", proceedings of the prehistoric society - 39 129-146 |
| | 1980. History to Pre History, Allahabad. |
| | 1985, "Megalithic cultures of the Northern Vindhyas", R.A.I.PP New Delhi, 477-480 |

Sharma.I.K 1982, "pre- and protohistorical Assemblages in Tamil Nadu and Kerala, an Appraisal" Studies in Ancient Indian history New Delhi. 290 - 310

1992, Temples of the Gangas of Karnataka, Archaeological Survey of Temples No.6, A.S.I. New Delhi.

Sheik Ali.B 1976, Comprehensive History of Karnataka Vol.I. History of the Western Gangags, University of Mysore, Mysore.

Singh.O.K 1985, "A Live Megalithic culture in Manipur." R.A.I.P.P. 491-96

Soundararajan.K.V 1958 "Studies in the stone age of Nagarjunakonda and its neighbourhood", Ancient India no.14, A.S.I, New Delhi 49-113

1961, "Quarternary Pebble, Core and Flake Cultures of India an Appraisal of the Data", A.I No.17, A.S.I. New Delhi , 68-85

Srinivasan.K.R 1938-39, Archaeology Report of the Administration of the State Museum, Pudukottai (RASMP),. 2-12

1940-41 Archaeology, RASMP, 2-12

1944 Indian Megaliths with special reference to Pudukottai Proceedings of the Indian Science Congress Association, 97

1945-46, "Field Archaeology" RASMP, 5

1960 " Some Aspects of Religion as Recreated by Early Monuments and Literature of South India: The Megaliths Cult", Journal of Madras University, vo.XXXII No.1, (Madras) Chennai; 131-138

Sripada Rao.K 1930 & 1932. "Kibbanahalli Tools" some stone implements from South India, Journal of Mysore University, July 1930, 4 No.2, Jan 1932, 6 No. 1, University of Mysore, Mysore.

Subba Rao.B 1948, Stone Age cultures of Bellary, P.G.& R.I. Pune

1952, "Archaeological Explorations in the Mahi Valley, journal of Maharaja Sayyaji Rao university of Baroda, vol.I. 33-69

Subbayya.K.K 1978, Archealogy of Coorg with soecial reference to Megaliths. Geetha Book House, Mysore.

